ಶ್ರೀಮದ್ವಾದಿರಾಜಗುರುಸಾರ್ವಭೌಮ ವಿರಚಿತ

# ವೈಕುಂಠವರ್ಣನೆ

* ತತ್ವಸಾರ *



ವ್ಯಾಖ್ಯಾನ:

ಕೀರ್ತಿಶೇಷ ಮಾಧ್ವಭೂಷಣ ಬಿ. ಭೀಮರಾವ್

ಪ್ರಕಾಶಕರು: ಶ್ರೀಸರ್ವಜ್ಞಾಚಾರ್ಯ ಸೇವಾ ಸಂಘ, ದಾವಣಗೆರೆ.

# ಶ್ರೀಸರ್ವಜ್ಞಾಚಾರ್ಯ ಸೇವಾ ಸಂಘ, ದಾವಣಗೆರೆ.

ಸುಮಾರು 77 ವರ್ಷಗಳಿಂದ ಮಾಧ್ವಸಮಾಜದಲ್ಲಿ ತತ್ವಜ್ಞಾನ ಪ್ರಚಾರ ಮಾಡುತ್ತಿರುವ ಧಾರ್ಮಿಕ ಸಂಸ್ಥೆ

| | |
|---|---|
| **ಸಂಘದ ಸ್ಥಾಪನೆ** | **: 08 / 07 / 1934** |
| **ಶ್ರೀಶ್ರೀ1008 ಸತ್ಯಧ್ಯಾನತೀರ್ಥರವರಿಂದ ಅಡಿಗಲ್ಲನ್ನಿಡುವ ಮೂಲಕ ಅನುಗ್ರಹಿಸಲ್ಪಟ್ಟ ಸಂಘದ ಕಟ್ಟಡದ ಉದ್ಘಾಟನೆ** | **: 01 / 06 / 1945** |
| **ರಜತ ಮಹೋತ್ಸವ ಆಚರಣೆ** | **: 12 / 02 / 1959** |
| **ಸುವರ್ಣ ಮಹೋತ್ಸವ ಆಚರಣೆ** | **: 09 / 04 / 1984** |
| **ವಜ್ರ(ಅಮೃತ)ಮಹೋತ್ಸವ ಆಚರಣೆ** | **: 10 / 04 / 2012** |

॥ ಶ್ರೀಪತಿರ್ಮಾನದೋ ನಃ ॥

*ಶ್ರೀಮದ್ವಾದಿರಾಜಗುರುಸಾರ್ವಭೌಮರಿಂದ ವಿರಚಿತ*

# ವೈಕುಂಠವರ್ಣನೆ

## * ತತ್ವಸಾರ *

(ವ್ಯಾಖ್ಯಾನದೊಡನೆ)

ವ್ಯಾಖ್ಯಾನ ಮಾಡಿದವರು

**ಕೀರ್ತಿಶೇಷ ಶ್ರೀ ಬಿ. ಭೀಮರಾವ್**

ದಾವಣಗೆರೆ

ಪ್ರಕಾಶಕರು

ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ

ಕೆ. ಬಿ. ಬಡಾವಣೆ, ದಾವಣಗೆರೆ - 5770 02

ದೂರವಾಣಿ: 08192 - 230340

**ಶ್ರೀಮದ್ವಾದಿರಾಜಗುರುಸಾರ್ವಭೌಮರಿಂದ ವಿರಚಿತ**
**'ವೈಕುಂಠವರ್ಣನೆ'**

ವ್ಯಾಖ್ಯಾನ : **ಕೀರ್ತಿಶೇಷ ಮಾಧ್ವಭೂಷಣ ಭೀಮರಾವ್,** ದಾವಣಗೆರೆ

ಪ್ರಥಮ ಮುದ್ರಣ : ೧೯೭೨
(ಕೀರ್ತಿಶೇಷ ಹರಿದಾಸರತ್ನಂ ಗೋಪಾಲದಾಸರಿಂದ)

ಪ್ರಕಟಣೆ : **ಸರ್ವಜ್ಞಾಚಾರ್ಯ ಸೇವಾ ಸಂಘ (ರಿ.),** ದಾವಣಗೆರೆ
ಈ ಸಂಘದಿಂದ ಪ್ರಥಮ ಮುದ್ರಣ: ೨೦೧೨

ಪುಟಗಳು : xxiv + 376

ಪ್ರತಿಗಳು : 1000

ಬೆಲೆ : ರೂ. 170/-

ಪುಸ್ತಕಗಳು ದೊರೆಯುವ ಸ್ಥಳ:

1. **ಪ್ರಕಾಶಕರು,** ಕೆ. ಬಿ. ಬಡಾವಣೆ, ದಾವಣಗೆರೆ-2.
2. **ಬಿ. ವಿ. ಪ್ರಹ್ಲಾದ,** ರಾಜಾಜಿನಗರ, ಬೆಂಗಳೂರು. Mob: 9448171859
3. **ವಂದನಾ ಬುಕ್ ಹೌಸ್,** ಎನ್. ಆರ್. ಕಾಲೋನಿ, ಬೆಂಗಳೂರು.
4. **ವೇದಾಂತ ಬುಕ್ ಹೌಸ್,** ಚಾಮರಾಜಪೇಟೆ, ಬೆಂಗಳೂರು.
5. **ಪೂರ್ಣಪ್ರಜ್ಞ ವಿದ್ಯಾಪೀಠ — ಪುಸ್ತಕ ಮಳಿಗೆ,** ಬೆಂಗಳೂರು.
6. **ಉತ್ತರಾದಿಮಠ — ಪುಸ್ತಕ ಮಳಿಗೆ,** ಬೆಂಗಳೂರು.

ಅಕ್ಷರ ಜೋಡಣೆ ಮತ್ತು ಮುದ್ರಣ:
**ಶ್ರೀಚಾಮುಂಡೇಶ್ವರಿ ಪ್ರಿಂಟರ್ಸ್**
ಬೆಂಗಳೂರು - 560 050
ದೂರವಾಣಿ: **2669 6388, 2679 1827**

**ಪರ್ಯಾಯ ಶ್ರೀ ಸೋದೆ ವಾದಿರಾಜ ಮಠ**
ಶ್ರೀ ಕೃಷ್ಣ ಮಠ, ಉಡುಪಿ
Phone: 0820-2520598
E-mail: paryaya@sode-edu.in

paryaya shri sode vadiraja matha
Phone: 0820-2520598
E-mail: paryaya@sode-edu.in
Sri Krishna Matha, Upupi

---

**ಮಧ್ವಪ್ರತಿಷ್ಠಿತಂ ತ್ವಾಂ ವಿಧ್ವಸ್ತಾಶೇಷಕುಜನಕುಲಮ್।**
**ಮೂರ್ಧ್ನಾ ಪ್ರಣಮ್ಯ ಯಾಚೇ ತದ್ವಿರಚಯ ಯದ್ಧಿತಂ ಮಮಾದ್ಯಹರೇ॥**

ಸಾಹಿತ್ಯ ಕ್ಷೇತ್ರಕ್ಕೆ ಭಾವಿಸಮೀರ ವಾದಿರಾಜರ ಕೊಡುಗೆ ಅಪಾರ. ಅದರಲ್ಲಿಯೂ 'ವೈಕುಂಠವರ್ಣನೆ'ಯಂತಹ ಕೃತಿಯನ್ನು ನೀಡಿ ಮಾಧ್ವ ಸಮಾಜಕ್ಕೆ ಮಹದುಪಕಾರವನ್ನು ಮಾಡಿದ್ದಾರೆ. ಯುಕ್ತಿಮಲ್ಲಿಕಾದಿ ಪ್ರೌಢ ಗ್ರಂಥಗಳ ರಚನಾಕಾರರಾದ ಶ್ರೀ ವಾದಿರಾಜರು ಸರಳಶೈಲಿಯಲ್ಲಿ ಅನೇಕ ಗ್ರಂಥಗಳನ್ನು ನಮಗೆ ನೀಡಿದ್ದಾರೆ. ಅದರಲ್ಲೊಂದು 'ವೈಕುಂಠವರ್ಣನೆ' ಎನ್ನುವ ಕೃತಿ. ಕನ್ನಡ ಪದಗಳ ಈ ಕೃತಿಯು ನಾಲ್ಕು ಸಂಧಿಗಳನ್ನೊಳಗೊಂಡು ಚತುರ್ವ್ಯೂಹದ ಚಿಂತನೆಯನ್ನು ನಮಗೆ ನೀಡಿದೆ. ಈ ಕೃತಿಯಲ್ಲಿ ವಾದಿರಾಜ ಯತಿಗಳು ಭಗವಂತನ ಅಷ್ಟಕರ್ತೃತ್ವವನ್ನು ನಮಗೆ ಚೆನ್ನಾಗಿ ಮನದಟ್ಟು ಮಾಡಿಸಿದ್ದಾರೆ.

ಪ್ರಮಾಣ ಸಹಿತವಾದ ಪ್ರಮೇಯಗಳಿಂದ ಕೂಡದ ಈ ಗ್ರಂಥಕ್ಕೆ ಶ್ರೀ ಭೀಮರಾಯರು ವಿಸ್ತರವಾದ ವ್ಯಾಖ್ಯಾನವನ್ನು ನೀಡಿ ಮಾನನೀಯ-ರಾಗಿದ್ದಾರೆ. ಅಂತಹ ಸರಳ ಗ್ರಂಥದ ಪ್ರಕಟಣೆಯನ್ನು 'ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ'ದವರು ಮಾಡುತ್ತಿರುವುದು ನಮಗೆ ಬಹಳ ಸಂತೋಷ-ವನ್ನುಂಟುಮಾಡಿದೆ. ಸಮಿತಿಯ ಪ್ರಕಟಣೆಯ ಸಂಚಾಲಕರಾದ ಶ್ರೀ ಆರ್. ಜಗನ್ನಾಥ ರಾವ್ ಅವರಿಗೆ ಮತ್ತು ಸಂಘದ ಎಲ್ಲಾ ಪದಾಧಿಕಾರಿ-ಗಳಿಗೆ ಅಸ್ಮದುಪಾಸ್ಯ ಭಾವಿಸಮೀರ ವಾದಿರಾಜವರದ ಭೂವರಾಹ ಹಯಗ್ರೀವಾಭಿನ್ನ ವೇದವ್ಯಾಸ ದೇವರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇತ್ಯಾನೇಕ ನಾರಾಯಣ ಸ್ಮರಣೆಗಳು,

ದಿನಾಂಕ: 20.08.2012
ಸ್ಥಳ: ಉಡುಪಿ ಶ್ರೀ ಕೃಷ್ಣ ಮಠ

**(ಶ್ರೀ ಶ್ರೀ ವಿಶ್ವವಲ್ಲಭ ತೀರ್ಥರು)**

# ವೈಕುಂಠವರ್ಣನೆ

## * ತತ್ವಸಾರ *

## ಗ್ರಂಥ ಪ್ರಸ್ತಾವನೆ

ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ।
ಪ್ರಣತಕ್ಲೇಶನಾಶಾಯ ಗೋವಿಂದಾಯ ನಮೋ ನಮಃ।

ಶ್ರೀರಾಮಂ ಹನುಮತ್ಸೇವ್ಯಂ ಶ್ರೀಕೃಷ್ಣಂ ಭೀಮಸೇವಿತಮ್।
ಶ್ರೀವ್ಯಾಸಂ ಮಧ್ವ ಸಂಸೇವ್ಯಂ ಸಮಸ್ತಾಭೀಷ್ಟದಂ ಭಜೇ।

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಮ್।
ವಾದಿರಾಜಗುರೂನ್ವಂದೇ ಹಯಗ್ರೀವದಯಾಶ್ರಯಾನ್।।

ಶ್ರೀವಾದಿರಾಜಸ್ವಾಮಿಗಳು ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಶ್ರೀಸೋದೆಮಠದ ಪೀಳಿಗೆಯಲ್ಲಿ ಅತ್ಯಂತ ಪ್ರತಿಭಾಶಾಲಿಗಳಾಗಿ ಬೆಳಗಿದ ಮಹಾನುಭಾವರು. ವಿರಕ್ತ್ಯಾದಿ ಸದ್ಗುಣಗಳ ಪ್ರಭಾವವನ್ನು ನಿದರ್ಶನ ಮಾಡುತ್ತ, ಶತಮಾನಕ್ಕೂ ಮೀರಿದ ದೀರ್ಘಕಾಲ ದೃಢಕಾಯರಾಗಿ ಬಾಳಿ ಶ್ರೀಮದಾನಂದತೀರ್ಥರಿಂದ ಪ್ರತಿಷ್ಠಿತವಾದ ಶ್ರೀಮದುಡುಪಿಯ ಶ್ರೀಬಾಲಕೃಷ್ಣ ಮೂರ್ತಿಯ ಬಹು ಪರ್ಯಾಯೋತ್ಸವಗಳನ್ನು ವೈಭವದಿಂದ ನಡೆಸಿ, ಅರ್ಚಿಸಿದ ಮಹಾತ್ಮರು—ಪ್ರಸಿದ್ಧರಾದ ಯತಿಶ್ರೇಷ್ಠರು. ಸದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯರೆಂಬ ಬಿರುದನ್ನು ಸಾರ್ಥಕಗೊಳಿಸಿದ ಜ್ಞಾನಿವರ್ಯರು —ಉತ್ತಮ ದೇವಾಂಶರು. ಮುಂದಿನ ಕಲ್ಪದಲ್ಲಿ ವಾಯುಪದವನ್ನಲಂಕರಿಸುವ ಋಜುಗಣದ ದೇವಶ್ರೇಷ್ಠರೆಂಬ ದೃಢವಿಶ್ವಾಸವನ್ನು ಸಜ್ಜನರಲ್ಲಿ ಉತ್ಪಾದಿಸಿರುವ ಮಹಾ ಅವತಾರಪುರುಷರು. ಸೋದೆಯಲ್ಲಿ ವೃಂದಾವನಸ್ಥರಾಗಿ ಅದ್ಯಾಪಿ ಭಕ್ತರನ್ನು ಅನುಗ್ರಹಿಸುತ್ತ ವಿರಾಜಮಾನರಾಗಿದ್ದಾರೆ. ಈ ಮಹಾತ್ಮರ ಮಹಿಮೆಗಳನ್ನು ವರ್ಣಿಸುವುದು ಅಲ್ಪಮತಿಯಾದ ನನ್ನ ಯೋಗ್ಯತೆಯಲ್ಲ. ಪಂಡಿತಶ್ರೇಷ್ಠರು ಕಾವ್ಯರೂಪದಿಂದ ಅವರ ಚರಿತ್ರೆಯನ್ನು ನಿರೂಪಿಸಿದ್ದಾರೆ. ಅಪರೋಕ್ಷಜ್ಞಾನಿಗಳಾದ ಹರಿದಾಸರುಗಳು ಅವರ ಮಹಿಮೆಗಳನ್ನು ಪದ ಪದ್ಯಗಳಲ್ಲಿ ಕೊಂಡಾಡಿದ್ದಾರೆ.

ಶ್ರೀವಾದಿರಾಜಸ್ವಾಮಿಗಳು ಸಂಸ್ಕೃತದಲ್ಲಿ ಶಾಸ್ತ್ರಗ್ರಂಥಗಳನ್ನೂ ಕಾವ್ಯಗಳನ್ನೂ ರಚಿಸಿದ್ದಾರೆ. ಪ್ರಾಸಬದ್ಧವಾದ ಅವರ ನುಡಿಗಳು ಅಸದೃಶವಾದ ಮನೋಹರ

ಶೈಲಿಯಲ್ಲಿವೆ. ಅವರ ವ್ಯಾಖ್ಯಾನಗ್ರಂಥಗಳು ಅವರ ಅಗಾಧವಾದ ಶಾಸ್ತ್ರ-ಪಾಂಡಿತ್ಯವನ್ನು ಸಾರುತ್ತವೆ. ಅವರ 'ರುಕ್ಮಿಣೀಶವಿಜಯ' ಮೊದಲಾದ ಕಾವ್ಯ-ಗಳು ಮಹಾಕಾವ್ಯಲಕ್ಷಣಗಳಿಂದ ಶೋಭಿಸುತ್ತ, ಅವರನ್ನು ಕವಿಕುಲತಿಲಕರೆಂಬ ಅನ್ವರ್ಥ ಬಿರುದುಳ್ಳವರೆಂಬುದನ್ನು ಸಾಧಿಸುತ್ತವೆ. ಕನ್ನಡ ಸಾಹಿತ್ಯವೂ ಅವರಿಂದ ಉಪಕೃತವಾಗಿದೆ. ಸಂಸ್ಕೃತವನ್ನರಿಯದ ಸಜ್ಜನರು ಸಹ ಸದ್ವೈಷ್ಣವ-ಸಿದ್ಧಾಂತದ ತತ್ವಗಳನ್ನು ಗ್ರಹಿಸಲು ಅನುಕೂಲವಾಗುವ ಉತ್ತಮ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಪ್ರಕೃತ **'ವೈಕುಂಠವರ್ಣನೆ'**ಯೂ ಒಂದು. ಪ್ರಮೇಯ-ಪುಂಜವಾದ ಈ ಗ್ರಂಥವು ಅಗಾಧವಾದ ಮಧ್ವಸಿದ್ಧಾಂತ ತತ್ವರಹಸ್ಯಗಳನ್ನು ನಾಲ್ಕು ಸಂಧಿಗಳಲ್ಲಿ ಸಂಗ್ರಹಿಸಿ ನಿರೂಪಿಸುತ್ತದೆ. ಶಾಸ್ತ್ರಾನುಸಾರಿಗಳಾದ ಸದ್ಯುಕ್ತಿಗಳನ್ನೇ ಪ್ರಯೋಗಿಸಿ, ಸಾಮಾನ್ಯವಾದ ಲೌಕಿಕ ವಿವೇಕವುಳ್ಳವರು ಸಹ ಸುಲಭವಾಗಿ ಕ್ಲಿಷ್ಟಶಾಸ್ತ್ರಪ್ರಮೇಯಗಳನ್ನು ಗ್ರಹಿಸಲು ಅನುಕೂಲವಾಗುವಂತೆ ವಿಷಯಗಳನ್ನು ನಿರೂಪಿಸುವುದು ಶ್ರೀವಾದಿರಾಜರ ಎಲ್ಲ ಗ್ರಂಥಗಳ ವೈಶಿಷ್ಟ್ಯ-ವಾಗಿದೆ. ಈ ವೈಶಿಷ್ಟ್ಯವು ಪ್ರಸಕ್ತ **'ವೈಕುಂಠವರ್ಣನೆ'**ಯಲ್ಲಿಯೂ ಎದ್ದು ತೋರುತ್ತದೆ.

ನಿತ್ಯನಿರ್ದುಃಖಾನಂದಾನುಭವಸ್ಥಿತಿರೂಪದ 'ಮೋಕ್ಷವು' ಸರ್ವಾಪೇಕ್ಷಿತ-ವಾದುದು. ಅದು ಶ್ರೀವಿಷ್ಣುಪ್ರಸಾದಮಾತ್ರ ಲಭ್ಯವಾಗತಕ್ಕದ್ದು—ಅನ್ಯ ಸಾಧನ-ಗಳೆಲ್ಲವೂ ಶ್ರೀವಿಷ್ಣುವಿನ ಪ್ರಸಾದಕ್ಕೆ ಕಾರಣವಾಗಬಲ್ಲವು—ಮೋಕ್ಷಕ್ಕೆ ಸಾಕ್ಷಾತ್ಸಾಧನಗಳಲ್ಲ. 'ಏನಂ ಮೋಚಯಾಮಿ—'ಈ ಜೀವನನ್ನು ಸಂಸಾರ-ದಿಂದ (ಪ್ರಕೃತಿಬಂಧದಿಂದ) ಬಿಡುಗಡೆ ಮಾಡುತ್ತೇನೆ' ಎಂಬ ರೂಪದ ಆ ಪರಮ ಪ್ರಸಾದವು, ಶ್ರೀಮಹಾವಿಷ್ಣುವಿನಲ್ಲಿ ಮಾಡುವ ಶ್ರೇಷ್ಠವಾದ ಶುದ್ಧ ಭಕ್ತಿಯಿಂದ ಮಾತ್ರ ಲಭ್ಯ. ಈ ವಿಧವಾದ ಉತ್ತಮ ಭಕ್ತಿಯು, ತಾರತಮ್ಯ-ಸಹಿತವಾದ ಶ್ರೀವಿಷ್ಣುಸರ್ವೋತ್ತಮತ್ವಜ್ಞಾನದ ನಿಶ್ಚಯದಿಂದ ಮಾತ್ರ ಉದಯಿಸಬಲ್ಲದು. ಶ್ರೀವಿಷ್ಣುವೇ ಸರ್ವೋತ್ತಮನೆಂಬ ನಿಶ್ಚಯವು, ಆತನೇ ಚೇತನಾಚೇತನಾತ್ಮಕವಾದ ಈ ವಿಶ್ವದ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳೆಂಬ ಅಷ್ಟವಿಧ ಕರ್ತೃತ್ವವನ್ನು ನಿರ್ವಹಿಸುವ ಸ್ವತಂತ್ರ ಪ್ರಭುವೂ, ಅತ ಏವ ಸರ್ವಜ್ಞನೂ, ಸರ್ವಶಕ್ತಿ-ಯುತನೂ ಸರ್ವ ಗುಣಪೂರ್ಣನೂ, ಸಕಲದೋಷದೂರನೂ ಎಂಬ ಆತನ ಮಹಾಮಹಿಮೆಗಳ ಜ್ಞಾನದಿಂದಲೇ ದೊರಯಬೇಕಲ್ಲದೇ ಅನ್ಯಮಾರ್ಗವಿಲ್ಲ.

ಸಕಲ ಜಗತ್ಸಂಬಂಧವಾದ ಈ ಅಷ್ಟಕರ್ತೃತ್ವಗಳನ್ನು ಅನಂತರೂಪಿಯಾದ ಶ್ರೀಹರಿಯು ಇಚ್ಛಾಮಾತ್ರದಿಂದ ಯಾವುದಾದರೊಂದು ರೂಪದಿಂದ ನಿರ್ವಹಿಸಬಲ್ಲನು. ಹೀಗಿದ್ದರೂ, ಅಚಿಂತ್ಯಾದ್ಭುತಮಹಿಮೆಗಳಿಂದ ಕೂಡಿ ಒಂದೊಂದೂ ಸಮಾಧಿಕರಹಿತ ಸರ್ವೋತ್ಕೃಷ್ಟಗಳಾದ ಅತ್ಯಂತ ಅಭಿನ್ನಗಳಾದ ಅನಂತರೂಪಗಳನ್ನೊಳಗೊಂಡ, ನಾರಾಯಣನಾಮಕವಾದ ತನ್ನ ಮೂಲ-ರೂಪದಿಂದ, ಸೃಷ್ಟ್ಯಾದ್ಯಷ್ಟಕರ್ತೃತ್ವಗಳನ್ನು ನಿರ್ವಹಿಸಲಿಕ್ಕಾಗಿ, ಸ್ವೇಚ್ಛೆಯಿಂದ ವಾಸುದೇವಾದಿ ರೂಪಗಳನ್ನು ಪ್ರಕಟಗೊಳಿಸಿದನು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧಗಳೆಂಬವೇ ಆ ನಾಲ್ಕು ರೂಪಗಳು. ವಾಸು-ದೇವನು ಮುಕ್ತಿಪ್ರದನು, ಸಂಕರ್ಷಣನು ಲಯಕರ್ತನು, ಪ್ರದ್ಯುಮ್ನನು ಸೃಷ್ಟಿ-ಕರ್ತನು, ಅನಿರುದ್ಧನು ಸ್ಥಿತಿಕರ್ತನು. ಈ ನಾಲ್ಕು ಶ್ರೀಹರಿಯ ರೂಪಗಳ ವ್ಯಾಪಾರಗಳನ್ನು ರಹಸ್ಯಗಳೊಂದಿಗೆ ತಿಳಿಯುವಿಕೆಯು, ಶ್ರೀಹರಿಯೇ ಸರ್ವೋತ್ತಮನೆಂಬ ಜ್ಞಾನನಿಶ್ಚಯವನ್ನು ದೊರಕಿಸುತ್ತದೆ. ಇದನ್ನು ಸಜ್ಜನರಿಗೆ ಸುಲಭವಾಗಿ ಸಾಧಿಸಿಕೊಡುವುದು ಈ ಗ್ರಂಥದ ಗುರಿ. ಆದ್ದರಿಂದಲೇ **'ತತ್ತ್ವಸಾರ'**ವೆಂಬುದು ಅದರ ಅನ್ವರ್ಥವಾದ ಇನ್ನೊಂದು ನಾಮ.

'ವೈಕುಂಠವರ್ಣನೆ' ಎಂಬ ನಾಮವೂ ಈ ಅರ್ಥವನ್ನೇ ಸೂಚಿಸುತ್ತದೆ. 'ವೈಕುಂಠ' ಎಂಬುದು ನಿರ್ದೋಷನಾದ ಶ್ರೀಹರಿಯ ನಾಮ. ಉತ್ತಮ ಜೀವರು ಸಂಸಾರದಿಂದ ಮುಕ್ತರಾದ ಮೇಲೆ ನಿತ್ಯಸುಖಾನುಭವ ಮಾಡುತ್ತಾ ವಾಸಿಸುವ ನಿತ್ಯಲೋಕವೂ ವೈಕುಂಠವೆಂಬ ನಾಮವುಳ್ಳದ್ದು. ಆ ಲೋಕದ ಮಧ್ಯದಲ್ಲಿರುವ, ಲಕ್ಷ್ಮೀಸಮೇತನಾಗಿ ಶ್ರೀಹರಿಯು ವಾಸಿಸುವ, ಲಕ್ಷ್ಮ್ಯಾತ್ಮಕ-ವಾದ ದಿವ್ಯನಗರಿಯ ಹೆಸರೂ ಇದೇ. ಪ್ರಸಕ್ತ ವ್ಯಾಖ್ಯಾನಭಾಗದಲ್ಲಿ ಈ ವಿಷಯದ ವಿವರಣೆಯನ್ನು ಕಾಣಬಹುದು. ಆದುದರಿಂದ ವೈಕುಂಠವರ್ಣನೆ-ಯೆಂದರೆ ಶ್ರೀಹರಿಮಹಿಮೆಗಳ ನಿರೂಪಣೆ—ಅದೇ ತತ್ತ್ವಸಾರ: ಸ್ವತಂತ್ರನಾದ ಶ್ರೀಹರಿಯೇ ತತ್ತ್ವಶಬ್ದದಿಂದ ಮುಖ್ಯವಾಚ್ಯನು. ಮೂಲರೂಪದಿಂದ ವಾಸು-ದೇವಾದಿ ರೂಪಗಳು ಉತ್ಕ್ರಮದಿಂದಲೇ ಪ್ರಕಟವಾದುವು. ಆ ಕ್ರಮ-ದಿಂದಲೇ ಈ ಗ್ರಂಥದ ಸಂಧಿಗಳನ್ನು ವ್ಯವಸ್ಥೆಗೊಳಿಸಲಾಗಿದೆ. ಮೋಕ್ಷಸಂಧಿ, ಲಯಸಂಧಿ, ಸೃಷ್ಟಿಸಂಧಿ ಮತ್ತು ಸ್ಥಿತಿಸಂಧಿ ಎಂಬುವೇ ಆ ನಾಲ್ಕು ಸಂಧಿಗಳು. ಈ ನಾಲ್ಕು ಸಂಧಿಗಳಲ್ಲಿ, ಸೃಷ್ಟ್ಯಾದ್ಯಷ್ಟಕರ್ತೃತ್ವಮಹಿಮೆಗಳಿಗೆ ಸಂಬಂಧಿಸಿದ,

ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಪ್ರತಿಪಾದಿತವಾದ, ಸಕಲ ರಹಸ್ಯ-ಪ್ರಮೇಯಗಳೂ ಅಡಕಮಾಡಲ್ಪಟ್ಟಿವೆ. ವೇದಾದಿ ಸಕಲ ಸಚ್ಛಾಸ್ತ್ರಸಾರವೂ ಇಲ್ಲಿ ಸಜ್ಜನರಿಗೆ ದೊರೆಯುತ್ತದೆ. ಶ್ರೀಮದ್ವಸಿದ್ಧಾಂತಸಾರವನ್ನು ಸಂಶಯವಿಲ್ಲ-ದಂತೆ ಗ್ರಹಿಸಿ, ಯೋಗ್ಯ ರಾಗತಾಳಗಳಲ್ಲಿ ಹಾಡಿಕೊಂಡು ಮನನ ಮಾಡಲು, ಈ ಗ್ರಂಥವು ಉತ್ತಮ ಸಾಧನವಾಗಿದೆ. ಸದ್ಭಕ್ತರಿಗೆ ಇದಕ್ಕಿಂತ ಅಧಿಕವಾದ ಪರಮೋಪಕಾರವಿಲ್ಲ—ಶ್ರೀವಾದಿರಾಜರಿಗೆ ಸಜ್ಜನಲೋಕವು ನಿತ್ಯಋಣಿ-ಯಾಗಿದೆ.

ಈ ಗ್ರಂಥದಲ್ಲಿರುವ ಪದ್ಯಗಳು ಮತ್ತು ಶ್ಲೋಕಗಳು ಬಹುತರವಾಗಿ ಉಪಯೋಗಿಸಲ್ಪಟ್ಟಿರುವ ಶ್ರುತಿ, ಸೂತ್ರಾದಿಗಳಿಂದ, ಬಹು ಗಂಭೀರವಾದ ಅರ್ಥಗಳುಳ್ಳವಾಗಿವೆ. ಕನ್ನಡ ಶಬ್ದಗಳು ಸರಳವಾಗಿದ್ದರೂ, ತದ್ದೇಶೀಯ ಮತ್ತು ಹಳೆಗನ್ನಡ ಶಬ್ದಗಳೂ ಹೇರಳವಾಗಿ ಉಪಯೋಗಿಸಲ್ಪಟ್ಟಿವೆ. ಈ ಮುಂತಾದ ಕಾರಣಗಳಿಂದ, ಶ್ಲೋಕಾರ್ಥಗಳನ್ನೂ, ಪದ್ಯಗಳ ಪದಶಃ ಅರ್ಥ-ಗಳನ್ನೂ ಸಾಕಷ್ಟು ವಿವರವಾಗಿ ತಿಳಿಯಾದ ಭಾಷೆಯಲ್ಲಿ ಬರೆಯಲೆತ್ನಿಸಿದ್ದೇನೆ. ವಿಶೇಷಾಂಶವೆಂಬ ಭಾಗದಲ್ಲಿ ಪ್ರಸಕ್ತವಾದ ಪ್ರಮೇಯಗಳನ್ನು ಸಂಕ್ಷೇಪವಾಗಿ ವಿವರಿಸಿದ್ದೇನೆ. ಉದಾಹೃತ ಶ್ರುತಿಗಳನ್ನು ಪ್ರಸಂಗಸಂಗತಿಗಳ ವಿವರಣ-ಪೂರ್ವಕ, ಅರ್ಥಸಹಿತ ನಿರೂಪಿಸಿರುವೆನಲ್ಲದೇ ಪ್ರಸಕ್ತವಾದ ಯುಕ್ತಿಗಳನ್ನೂ ವಿವರಣ ಮಾಡಿದ್ದೇನೆ; ಗ್ರಂಥವನ್ನು ಅನುಸರಿಸಲು ಓದುಗರಿಗೆ ಸಹಾಯ-ವಾದೀತೆಂದು ನಂಬಿದ್ದೇನೆ. ಹಾಗಾದರೆ ನಾನು ಧನ್ಯ—ನನ್ನ ಸೇವೆಯು ಸಾರ್ಥಕ.

ವ್ಯಾಖ್ಯಾನರಚನೆಯಲ್ಲಿ ಶ್ರೀ ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದಂಗಳವರಿಂದ ದೊರೆತ ಸಹಾಯವನ್ನು ಸ್ಮರಿಸಿ ಅವರ ಅಡಿದಾವರೆಗಳಲ್ಲಿ ಕೃತಜ್ಞತಾಪೂರ್ವಕವಾಗಿ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಪ್ರೂಫ್ ತಿದ್ದುವುದೇ ಮೊದಲಾದ ಮುದ್ರಣಕಾರ್ಯಕ್ಕೆ ಸಂಬಂಧಿಸಿದ ಸರ್ವವನ್ನೂ ಇದರ ಪ್ರಕಾಶಕರಾದ ಹರಿದಾಸರತ್ನಂ ಗೋಪಾಲದಾಸರವರೇ ನಿರ್ವಹಿಸಿದ್ದಾರೆ. ಮುದ್ರಿತಪ್ರತಿಯನ್ನು ಓದಿನೋಡಿ ಒಪ್ಪೋಲೆಯನ್ನೂ,

ವಿಷಾಯಾನುಕ್ರಮಣಿಕೆಯನ್ನೂ ಸಿದ್ಧಗೊಳಿಸುವುದರಲ್ಲಿ ನನ್ನ ಮಾನ್ಯಮಿತ್ರ ಶ್ರೀ ಚೀಳಂಗಿ ಕೃಷ್ಣಮೂರ್ತಿರಾವ್, ಎಂ.ಎ., ಇವರಿಂದ ದೊರೆತ ಅಮೂಲ್ಯ ಸಹಾಯವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಇಂಥ ದಿವ್ಯವಾದ ಉದ್ಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸುವ ಈ ಮಹಾಸೇವೆಯಲ್ಲಿ ನನ್ನನ್ನು ತೊಡಗಿಸಿ, ಅದಕ್ಕೆ ಅವಶ್ಯಕವಾದ ಆಯುರಾರೋಗ್ಯಗಳನ್ನೂ ತಾವೇ ದೊರಕಿಸಿಕೊಟ್ಟು ನನ್ನಿಂದ ಬಹುದೊಡ್ಡ ಸಾಧನೆಯನ್ನು ಮಾಡಿಸಿ ಪುಣ್ಯಭಾಗಿಯನ್ನಾಗಿಸಿರುವ ಶ್ರೀಹರಿದಾಸರತ್ನರವರಿಗೆ ನನ್ನ ಅನಂತಸಾಷ್ಟಾಂಗಪ್ರಣಾಮಗಳನ್ನರ್ಪಿಸುತ್ತೇನೆ.

ಸಜ್ಜನರು ಈ ನನ್ನ ಕೃತಿಯನ್ನು ಹಂಸಕ್ಷೀರನ್ಯಾಯದಿಂದ ಸ್ವೀಕರಿಸಿ, ನನ್ನನ್ನು ಆಶೀರ್ವದಿಸಲು ಬೇಡುತ್ತೇನೆ. 'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ' ಎಂಬ ನನ್ನ ಪ್ರಾರ್ಥನೆಯನ್ನು ಶ್ರೀಹರಿವಾಯುಗಳು ಸಾರ್ಥಕಮಾಡಲೆಂಬುದೇ ನಾನು ಯಾಚಿಸುವ ಆಶೀರ್ವಾದ.

॥ ಓಂ ತತ್ಸತ್ ॥

**॥ ಶ್ರೀಕೃಷ್ಣಾರ್ಪಣಮಸ್ತು ॥**

ಪರೀಧಾವಿ, ಆಷಾಢ ಶು. ದಶಮೀ 1972 — ಹರಿಭಕ್ತ ಸೇವಕ
ದಾವಣಗೆರೆ — **ಬಿ. ಭೀಮರಾವ್**

# ವೈಕುಂಠವರ್ಣನೆ

## * ತತ್ವಸಾರ *

## ವಿಷಯಾನುಕ್ರಮಣಿಕೆ

## ೧. ಮೋಕ್ಷಸಂಧಿ

## ೨. ಲಯಸಂಧಿ

## ೩. ಸೃಷ್ಟಿಸಂಧಿ

## ೪. ಸ್ಥಿತಿಸಂಧಿ

## ಫಲಶ್ರುತಿ

॥ ಶ್ರೀಪತಿರ್ಮಾನದೋ ನಃ ॥

# ನನ್ನ ಮಾತು

"ಶಂಕರರವಿಶಶಿಮುಖ್ಯಾಃಕಿಂಕರಪದವೀಮುಪಾಶ್ರಿತಾ ಯಸ್ಯ
ವೇಂಕಟಗಿರಿನಾಥೋಽಸೌ ಪಂಕಜನಯನಃಪರಾತ್ಪರೋ ಜಯತಿ"

ಆನಂದನಂದನಶತಾನಂದನಂದನಧೃತಾನಂದದಂ ಯತಿಕುಲಂ
ಆನಂದಶಾಶ್ವತಕರಾನಂದವಾರಿನಿಧಿರಾನಂದತೀರ್ಥಯತಿರಾಟ್।
ಭೂನಂದಿನೀರಮಣಮಾನಂದಸುಂದರಪದಾನಂದತುಂದಿಲತಯಾ
ಆನಂದನಂದನವನಾನಂದಪೀಠಗತಮಾನಂದಿತುಂ ಗತ ಅಹೋ॥

"ವಾದೀಭವೈರಿಣೇ ಮಾಧ್ವರಾಧ್ಧಾಂತವನಚಾರಿಣೇ
ವಚೋನಖರಿಣೇ ವಾದಿರಾಜಕೇಸರಿಣೇ ನಮಃ"

ಸಂತತಂ ಸುಜನಾನಂದಕಾರಣಂ ಶರಣಂ ಮುದಾ।
*ಕಂಜಜನ್ಮಸುತಾಂಶಂ ಮದ್ವಿಜಯಾರ್ಯಗುರುಂ ಭಜೇ॥

ದೀಕ್ಷಾವತಾಂ ಸುಖದಮೀಕ್ಷಾವತಾಂ ವರದಮಾಕ್ಷೇಪಲಕ್ಷಣತುದಮ್।
ಶಿಕ್ಷಾದಿಶಾಸ್ತ್ರ ಚಣಮಕ್ಷೋಭ್ಯ ಪೂರ್ಣಮತಿಪಕ್ಷಾ ರಕ್ಷಕವರಮ್
ಅಕ್ಷೀಣಲಕ್ಷಣಸುಪಕ್ಷೀಶವಾಹವರಲಕ್ಷ್ಮೀಧರಾದಿಭಜಕಮ್
**ಪ್ರೇಕ್ಷಾನಿಧಿಂ** ಭಜತ ಭಿಕ್ಷಾಟನಂ ತ್ಯಜತ ಸುಕ್ಷೇಮದಾನನಿಪುಣಮ್॥

ನನ್ನ ಪರಮಮಿತ್ರರಾದ ಶ್ರೀ ಬಿ. ಭೀಮರಾಯರು, ದೇವನಗರಿ (ದಾವಣಗೆರೆ)ಯಲ್ಲಿ ಶ್ರೀಸರ್ವಜ್ಞರ ಗ್ರಂಥಗಳ ಪರಿಚಯ ಅಲ್ಲಿನ ಮಾಧ್ವರಿಗೇ ಇಲ್ಲವೇನೋ ಎಂಬಂತಿದ್ದ ಕಾಲದಲ್ಲಿ ಶ್ರೀಸರ್ವಜ್ಞಾಚಾರ್ಯರ ಸೇವೆಗೆ ಮೀಸಲಾದ ಸಂಘವನ್ನು ಸಂಸ್ಥಾಪಿಸಿ, ಅದರ ಉದ್ದೇಶಸಿದ್ಧಿಗಾಗಿ ಒಂದು ದಿವ್ಯಭವನ ನಿರ್ಮಾಣಮಾಡಿ 'ಶ್ರೀಮಧ್ವರಾಜಮಂದಿರ'ವೆಂದು ಕರೆದು ಶ್ರೀಮಧ್ವರಾಜರಿಗೇ (ಸಂಘಕ್ಕೆ) ದಾನ ಮಾಡಿದ ಪುಣ್ಯಾತ್ಮರು. ಶ್ರೀ ಶ್ರೀ ೧೦೮ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರಿಂದ ಕಟ್ಟಡಕ್ಕೆ ಅಡಿಗಲ್ಲು ಹಾಕಿಸಿದ ನಿಮಿಷದಿಂದ ಈ ನಿಮಿಷದವರೆಗೆ ಶ್ರೀಹರಿಗುರುಗಳ ಸೇವೆಗಳು ಅನೇಕ ರೂಪದಿಂದ ನಡೆಯುತ್ತ ಬಂದು, ಇಂದೂ ಆ ಮಧ್ವರಾಜಮಂದಿರವು ನಿಷ್ಕಳಂಕ ಅನುಷ್ಠಾನಪರರಾದ ಮಾಧ್ವರಿಗೆ ಸಿದ್ಧಿ ಕ್ಷೇತ್ರವಾಗಿದೆ. ಅಲ್ಲಿ ಸದಾ

---

ಕಂಜಜನ್ಮಸುತಾಂಶರೆಂದರೆ ಶ್ರೀಬ್ರಹ್ಮದೇವರ ಮಕ್ಕಳಾದ ಭೃಗುಋಷಿಗಳ ಅಂಶವೆಂದರ್ಥ.

ಸಿದ್ಧರಿದ್ದು, ತಮ್ಮ ಸಂಘದ ಸದಸ್ಯರಿಂದ ಕೂಡಿ ಶ್ರೀಮದಾನಂದತೀರ್ಥರ ಸೇವಾಕಾರ್ಯಗಳನ್ನು ಒಂದಲ್ಲ ಒಂದು ರೀತಿಯಿಂದ ಅಂದರೆ, ದೊಡ್ಡವರ ಆರಾಧನೆಗಳು, ನಿತ್ಯಪುರಾಣ, ಉಪನ್ಯಾಸ, ಪಾಠ, ಹರಿಕೀರ್ತನೆ, ವಿದ್ವಾಂಸ-ರೊಡನೆ ಶಾಸ್ತ್ರಾರ್ಥವಿಚಾರ ಇತ್ಯಾದಿಗಳಿಂದ ಸುಜನೋದ್ಧಾರಕ ಚಟುವಟಿಕೆ-ಗಳನ್ನು ನಿರಂತರ ನಡೆಸುತ್ತಿದ್ದಾರೆ ಶ್ರೀ ಭೀಮರಾಯರು; ಅಲ್ಲಿನ ಸದಸ್ಯರೂ ಅಷ್ಟೇ ಅನುವರ್ತಿಗಳಿದ್ದಾರೆ ಅವರಿಗೆ. ಈಗ ದಾವಣಗೆರೆ ಅನೇಕ ಪುಣ್ಯಕೆಲಸ-ಗಳನ್ನು ನಡೆಸುತ್ತಾ ಮಾಧ್ವರಿಗೆ ಅದೊಂದು ದರ್ಶನಯೋಗ್ಯವಾದ ಸ್ಥಾನ-ವೆನಿಸಿದೆಯಾದರೂ ಇವುಗಳೆಲ್ಲದರ ಜೀವನಾಡಿ ಆ ಕಠಿನಕಾಲದಲ್ಲಿ ಧೈರ್ಯ-ದಿಂದ ಮುನ್ನುಗಿ ಸಂಸ್ಥಾಪಿಸಿದ ಶ್ರೀ ಭೀಮರಾಯರ ಈ 'ಸರ್ವಜ್ಞಾಚಾರ್ಯ ಸೇವಾಸಂಘ'ವೆಂದು ಹೊಗಳುವ ನಿರ್ಮತ್ಸರರಿಗೇನೂ ಕಮ್ಮಿಯಿಲ್ಲ ಅಲ್ಲಿ.

ಹೀಗೆ ಅನೇಕ ರೀತಿಯ ಕಾರ್ಯತಂರಂಗಗಳೊಂದಿಗೆ ಶ್ರೀಮದಾನಂದತೀರ್ಥ ಭಗವತ್ಪಾದರ ಮತ್ತು ಅವರ ದಿವ್ಯಪಾದಪದ್ಮಾರಾಧಕರ ಗ್ರಂಥಗಳ ಅಂತರಂಗ ಅಭಿಪ್ರಾಯಗಳನ್ನು, ತಾವು ಸದ್ಗುರುಗಳಲ್ಲಿ ವ್ಯಾಸಂಗಮಾಡಿ ಸಂಪಾದಿಸಿದ ಮತ್ತು ಗುರುಗಳು ಕೊಟ್ಟ ಜ್ಞಾನದೊಡನೆ ತಾವು ಹೆಚ್ಚಿಸಿಕೊಂಡ ಜ್ಞಾನವನ್ನು, ಜ್ಞಾನಬೇಕೆನ್ನುವವರಲ್ಲಿ ಬೀರುವ ಮಹಾಸಾಧನೆಯ ಸಿದ್ಧಿಪ್ರಸಿದ್ಧಿಗಳು ನನ್ನ ಪರಮಮಿತ್ರರಾದ ಶ್ರೀಭೀಮರಾಯರ ಸಂಸಿದ್ಧಿ. ಅಂತೆಯೇ ಅವರ ಬರವಣಿಗೆ ಪಂಡಿತರಿಂದಲೂ ಮನ್ನಣೆ ಪಡೆದಿದೆ.

ಇವರು ಈಗಾಗಲೆ ನನ್ನ ಅಪೇಕ್ಷೆಯಂತೆ 'ಶ್ರೀಕೃಷ್ಣಾರ್ಜುನಸಂವಾದ', 'ತತ್ವಸುವ್ವಾಲಿಯ ವ್ಯಾಖ್ಯಾನ', 'ಶ್ರೀಲಕ್ಷ್ಮೀಶೋಭಾನೆಯ ವ್ಯಾಖ್ಯಾನ' ಇಂಥ ಅನರ್ಘರತ್ನಗಳನ್ನು ದಾನಮಾಡಿ ನಮ್ಮ **'ಶ್ರೀಹರಿದಾಸಭಾರತೀಗ್ರಂಥರತ್ನ ಮಾಲೆ'**ಗೆ ಹೆಚ್ಚಿನ ಬೆಳಕನ್ನು ಬೀರಿದ್ದಾರೆ. ಇದೀಗ ಈ 'ವೈಕುಂಠವರ್ಣನೆಯ ವ್ಯಾಖ್ಯಾನ'ರೂಪವಾದ ಅಪೂರ್ವರತ್ನದ ಪ್ರಧಾನದಿಂದ ಇನ್ನೂ ಹೆಚ್ಚಿತು ಮಾಲೆಯ ಕಳೆ.

ಇವರ ಸ್ವತಂತ್ರಗ್ರಂಥಗಳ ಮತ್ತು ವ್ಯಾಖ್ಯಾನಗಳ ಓದುಗರಿಗೇ ಗೊತ್ತು ಇವರ ಸಚ್ಛಾಸ್ತ್ರಪಾಂಡಿತ್ಯದ ಆಳ. ಈ ಗ್ರಂಥಮಾಲೆಗಾಗಿ ಇವರು ಬರೆದುಕೊಟ್ಟ ವ್ಯಾಖ್ಯಾನಗಳನ್ನು ನಾನು ನೋಡಿದಾಗ, ಕನ್ನಡದ ವ್ಯಾಸಂಗವಷ್ಟಾಗಿ ಇಲ್ಲದ ಇವರಿಗೆ ಆಯಾ ಗ್ರಂಥಕರ್ತೃಗಳೇ ತಮ್ಮ ಗ್ರಂಥಾಭಿಪ್ರಾಯಗಳನ್ನು ಏಕಾಂತ-ದಲ್ಲಿ ತಿಳಿಸಿಕೊಟ್ಟಿದ್ದಾರೋ ಇವರಿಗೆ ಎಂದು ಆಶ್ಚರ್ಯಭರಿತನಾಗಿದ್ದೇನೆ.

ಒಂದೇ ಮಾತಿನಲ್ಲಿ ನನ್ನ ಅಭಿಪ್ರಾಯ ಕೊಡುವುದಾದರೆ, ಹಿಂದಿನ ಬಹುಜನ್ಮಗಳಲ್ಲಿ ಪಡೆದ ಹಿರಿಯ ಗುರುಗಳ ಒಲಿಮೆ ಇವರಿಗೆ ಆಜನ್ಮಸಿದ್ಧವಿದೆಯೆನ್ನದಿರಲಾರೆ.

"ಈ 'ವೈಕುಂಠವರ್ಣನೆ' ತಮ್ಮ ವ್ಯಾಖ್ಯಾನದೊಡನೆ ಮುದ್ರಿಸುವ ಆಸೆ ನನ್ನದು; ವ್ಯಾಖ್ಯಾನಕ್ಕೆ ಲೆಕ್ಕಣಿಕೆ ಸಿದ್ಧವಾಗಲಿ" ಎಂದು ನಾನಂದಾಗ, "ಅಷ್ಟು ಸಾಮರ್ಥ್ಯ ನನಗಿಲ್ಲವೇ ಇಲ್ಲ; ನನ್ನನ್ನು ಒತ್ತಾಯಪಡಿಸಬೇಡಿ; ದೊಡ್ಡವರ ಗ್ರಂಥವದು" ಎಂದು ಅಂದುದೇನೋ ನಿಜ; ಆದರೆ ಈಗ ಈ ದಿವ್ಯವ್ಯಾಖ್ಯಾನ ರತ್ನವನ್ನು ಪಡೆದು ಓದಿನೋಡಿದಾಗ, ಇಂಥ ಪ್ರೌಢಗ್ರಂಥಗಳಿಗೆ ಇಷ್ಟು ಸರಸ-ಸರಳ-ಸುಂದರವಾದ ಭಾವಾಭಿವ್ಯಂಜಕಪದಪುಂಜಪ್ರಯೋಗರಂಜಕತೆ ಶ್ರೀವಾದಿರಾಜ ಪೂಜ್ಯಪಾದರೇ ಕರುಣಿಸಿದ್ದಾರೆನಿಸಿದ್ದೂ ನಿಜ; ಅದಕ್ಕೆ ತಕ್ಕ ಅಧಿಷ್ಠಾನರಿವರೆಂಬುದೂ ನಿಜ.

ಜ್ಞಾನಿಗಳ ಮಾತು ಕನ್ನಡವೇನು; ಸಂಸ್ಕೃತವೇನು! ತಿಳಿಯುವವರ ಸಂಸ್ಕಾರ ಉತ್ತಮವಿರಬೇಕು; ತಿಳಿಸುವವರು ಸುಕೃತಿಗಳಾಗಿರಬೇಕು.

ಇಂಥ ಗ್ರಂಥರಾಜಗಳಿಗೆ ಈ ರೀತಿಯಲ್ಲಿ ಟಿಪ್ಪಣಿ ಬರೆದುಕೊಡುತ್ತಾ ಹರಿಪಾದದಾಸರುಗಳಿಗೆ ಇನ್ನೂ ಆನಂದ ಹೆಚ್ಚಿಸುತ್ತಾ, ಶ್ರೀ ಭೀಮರಾಯರು ಆನಂದಭರಿತರಾಗಿ ಚಿರಕಾಲ ವಿರಾಜಿಸಲೆಂದು ನಮ್ಮ ಶ್ರೀಮದ್ವಿಜಯರಾಜ-ಗುರುವರರ ಅಂತರ್ಯಾಮಿ ಶ್ರೀಭಾರತೀಶರ ಹೃದಯಕಮಲಮಧ್ಯವರ್ತಿ ಶ್ರೀಮದ್ವಿಜಯವಿಟ್ಠಲನಲ್ಲಿ ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಈ ಗ್ರಂಥವನ್ನು ಮುದ್ರಿಸುವುದರಲ್ಲಿ ಹೆಚ್ಚು ಶ್ರದ್ಧೆವಹಿಸಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀಮಲ್ಲಿಕಾರ್ಜುನ ಮುದ್ರಣಾಲಯದವರಿಗೆ ಅಭಿನಂದನೆಗಳು.

ಸದ್ಗ್ರಂಥಜಾತಗುಪ್ತಾಂ ತತ್ತದಭಿಪ್ರಾಯಸತತಿಮ್
ಪ್ರಕಾಶಯನ್ ಚಿರಂ ಜೀಯಾತ್ ಭೀಮರಾಯಾಖ್ಯಸನ್ಮಣಿಃ ॥೧॥

ಪಾತು ಶ್ರೀಭೀಮರಾಯಾಖ್ಯಂ ಶ್ರೀಮದ್ವಿಜಯದಃ ಪ್ರಭುಃ।
ವಿಜಯಾರ್ಯಕರಾಂಭೋಜಸಂಪೂಜಿತಪದಾಂಬುಜಃ ॥೨॥

**॥ ಶ್ರೀಮದ್ವರಮಣಃಪ್ರೀಣಾತು ॥**

ಸಂಪಾದಕ ಮತ್ತು ಪ್ರಕಾಶಕ
**ಗೋಪಾಲದಾಸ**

## ವಿಶೇಷಾಂಶಗಳ ವಿವರಣೆಯಲ್ಲಿ ಉದಹರಿಸಲಾಗಿರುವ ಗ್ರಂಥಗಳು ಮತ್ತು ಉಪಯೋಗಿಸಲಾಗಿರುವ ಸಂಜ್ಞೆಗಳು:

| | | |
|---|---|---|
| ೧ | ಶ್ರೀಮದ್ಭಗವದ್ಗೀತೆ | ಗೀತೆ |
| ೨ | ಗೀತಾಭಾಷ್ಯ | .... |
| ೩ | ಗೀತಾತಾತ್ಪರ್ಯ | ಗೀ-ತಾ |
| ೪ | ಬ್ರಹ್ಮಸೂತ್ರಗಳು | .... |
| ೫ | ಬ್ರಹ್ಮಸೂತ್ರಭಾಷ್ಯ | ಭಾಷ್ಯ |
| ೬ | ತೈತ್ತಿರೀಯೋಪನಿಷತ್ತು | ತೈತ್ತಿ |
| ೭ | ಕಾಠಕೋಪನಿಷತ್ತು | ಕಾಠ |
| ೮ | ಮಂಡೂಕ | .... |
| ೯ | ಛಾಂದೋಗ್ಯೋಪನಿಷತ್ತು | .... |
| ೧೦ | ಶ್ರುತಿಗಳು: | |
| | (i) ಪರಮಶ್ರುತಿ | .... |
| | (ii) ಪೈಂಗಿಶ್ರುತಿ | .... |
| | (iii) ನಾರಾಯಣಶ್ರುತಿ | .... |
| ೧೧ | ಪುರಾಣಗಳು: | |
| | (i) ಪಾದ್ಮ | .... |
| | (ii) ಸ್ಕಾಂದ | .... |
| | (iii) ಗಾರುಡ | .... |
| | (iv) ಬ್ರಹ್ಮಕಾಂಡ | .... |
| ೧೨ | ದಾಸರ ವಾಕ್ಯಗಳು: | |
| | (i) ಗುರುಪುರಂದರದಾಸರು | .... |
| | (ii) ವಿಜಯದಾಸರು | .... |

| | | |
|---|---|---|
| ೧೩ | ಇತರ ಗ್ರಂಥಗಳು | |
| | (i) ಭಾಗವತ | .... |
| | (ii) ಭಾಗವತತಾತ್ಪರ್ಯ | ಭಾಗ-ತಾ |
| | (iii) ಭಾರತ | .... |
| | (iv) ಮಹಾಭಾರತತಾತ್ಪರ್ಯನಿರ್ಣಯ | ಭಾ-ತಾ |
| | (v) ಗೀತಾವಿವೃತ್ತಿ | ಗೀತಾ-ವಿ |
| | (vi) ತಾತ್ಪರ್ಯನಿರ್ಣಯ ಟೀಕಾ (ಭಾವಪ್ರಕಾಶಿಕಾ) | .... |
| | (vii) ಯುಕ್ತಿಮಲ್ಲಿಕಾ | .... |
| | (viii) ಮೋಕ್ಷಧರ್ಮ | .... |
| ೧೪ | ತತ್ವಪ್ರದೀಪ | .... |
| ೧೫ | ಸತ್ತತ್ವರತ್ನಮಾಲಾ | ಸ.ರ.ಮಾ |
| ೧೬ | ಬೃಹತ್ತಂತ್ರ | .... |
| ೧೭ | ಬ್ರಹ್ಮತರ್ಕ | .... |
| ೧೮ | ವಿಷ್ಣುರಹಸ್ಯ | ವಿ.ರ. |
| ೧೯ | ಬೃಹದಾರಣ್ಯಭಾಷ್ಯ | ಬೃ.ಭಾ. |
| ೨೦ | ಛಾಂದೋಗ್ಯಭಾಷ್ಯ | ಛಾ-ಭಾ |
| ೨೧ | ಋಗ್ಭಾಷ್ಯ | .... |
| ೨೨ | ಸರಸಭಾರತೀವಿಲಾಸ | .... |
| ೨೩ | ಶ್ಯಾಂಡಿಲ್ಯತತ್ತ್ವ | .... |
| ೨೪ | ವಿಷ್ಣುತತ್ವನಿರ್ಣಯ | ವಿಷ್ಣು-ನಿ |
| ೨೫ | ಸುಮಧ್ವವಿಜಯ | .... |

---

ಸೂಚನೆ: ಸಂಜ್ಞೆಗಳಿಂದ ಸೂಚಿಸದಿರುವ ಗ್ರಂಥಗಳ ನಾಮಗಳನ್ನು ಪೂರ್ಣವಾಗಿ ಕಂಸದಲ್ಲಿ ಬರೆಯಲಾಗಿದೆ.

# ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ, ದಾವಣಗೆರೆ

## ಪ್ರಕಾಶಕರ ಅರಿಕೆ

ನ ಮಾಧವ ಸಮೋ ದೇವೊ ನ ಚ ಮಧ್ವ ಸಮೋ ಗುರುಃ।
ನ ತದ್ವಾಕ್ಯ ಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್॥

ಸಂಘದ ಅಮೃತ ಮಹೋತ್ಸವವನ್ನು ಆಚರಿಸಿದ (ಏಪ್ರಿಲ್ ೨೦೧೨) ಮೂರು ತಿಂಗಳ ಅವಧಿಯೊಳಗೆ (೧) ಭಾಗವತ ಪ್ರದೀಪಿತ ಸೂತ್ರಾರ್ಥಸಾರ (ಮರು-ಪ್ರಕಟಣೆ) (೨) ಲಕ್ಷ್ಮೀ ಶೋಭನ ಹಾಡು, ಕೀಚಕ ವಧೆ ಮತ್ತು ಭಾರತೀ ಮಜ್ಜನನೀ — ಈ ಮೂರು ಕೃತಿಗಳುಳ್ಳ ಇನ್ನೊಂದು ಪುಸ್ತಕ ಮತ್ತು (೩) ತತ್ವಸುವ್ವಾಲಿ (ವಿಸ್ತೃತ ವ್ಯಾಖ್ಯಾನ ಉಳ್ಳದ್ದು)—ಈ ಮೂರು ಪುಸ್ತಕಗಳನ್ನು ಪ್ರಕಟಿಸಿ, ಓದುಗರ ಕೈಯಲ್ಲಿಟ್ಟಿದ್ದೆವು. ಈಗ ಮತ್ತೊಂದು ಅಮೂಲ್ಯ ಪುಸ್ತಕ 'ವೈಕುಂಠ ವರ್ಣನೆ' (ತತ್ವಸಾರ)—ಶ್ರೀವಾದಿರಾಜ ಗುರುಸಾರ್ವಭೌಮರ ಕೃತಿ ಪ್ರಕಟಿಸುತ್ತಿದ್ದೇವೆ ಎಂದು ತಿಳಿಸಲು ಹರ್ಷಿಸುತ್ತೇವೆ.

ಶ್ರೀ ಗುರುಸಾರ್ವಭೌಮರು 'ಉತ್ತಮ ಶ್ರೇಣಿಯ ಶ್ಶಾಸ್ತ್ರ ಗ್ರಂಥಗಳು, ಕೃತಿಗಳು, ಸ್ತೋತ್ರಗಳು—ಇವುಗಳನ್ನು ರಚಿಸಿ ಮಾಧ್ವವಾಙ್ಮಯವನ್ನು ಅತ್ಯಂತ ಶ್ರೀಮಂತಗೊಳಿಸಿದ್ದಾರೆ, ಅವುಗಳಲ್ಲಿ ಒಂದಾಗಿರುವ **'ವೈಕುಂಠವರ್ಣನೆ'** ಅನೇಕ ತತ್ವಗಳ ಬಗೆಗೆ ಬೆಳಕು ಚೆಲ್ಲುತ್ತದೆ. **ಈ ಗ್ರಂಥದ ಇನ್ನೊಂದು ಹೆಸರು 'ತತ್ವಸಾರ'.** ಸಂಘದ ಪದಾಧಿಕಾರಿಗಳು ಈ ಪುಸ್ತಕವನ್ನು ಸಂಘದ ವತಿಯಿಂದ ಪ್ರಪ್ರಥಮಬಾರಿಗೆ ಪ್ರಕಟಿಸಲು ನಿರ್ಧರಿಸಿದರು. ಹಾಗೆಯೇ ಶ್ರೀವಾದಿರಾಜ ಗುರುಗಳವರ ಪೀಠದ ಪರಂಪರೆಯಲ್ಲಿ ವಿರಾಜಮಾನರಾಗಿರುವ ಮತ್ತು ಪ್ರಸ್ತುತ ಪರ್ಯಾಯ ಪೀಠವನ್ನು ಅಲಂಕರಿಸಿರುವ ಶ್ರೀ ೧೦೮ ಶ್ರೀ ಶ್ರೀ ವಿಶ್ವವಲ್ಲಭತೀರ್ಥರಿಂದ ಅನುಗ್ರಹ ಸಂದೇಶ-ವನ್ನು ಪಡೆಯುವುದಕ್ಕೋಸ್ಕರ ಅವರನ್ನು ಪ್ರಾರ್ಥಿಸಬೇಕು ಎಂದೂ ಅಭಿಪ್ರಾಯ-ಪಟ್ಟರು. ಅದರಂತೆ ಉಡುಪಿಯಲ್ಲಿರುವ ಶ್ರೀ ಶ್ರೀಗಳವರನ್ನು ಭೇಟಿಮಾಡಿ, ಸಂಘ ಪ್ರಚಾರ ಮಾಡುತ್ತಿರುವ ಜ್ಞಾನಕಾರ್ಯ ಚಟುವಟಿಕೆಗಳನ್ನು ಅವರಲ್ಲಿ ಬಿನ್ನವಿಸಿ, ಅನುಗ್ರಹವಚನವನ್ನು ನೀಡಬೇಕೆಂದು ಪ್ರಾರ್ಥಿಸಲಾಯಿತು. 'ಶ್ರೀ ಯುಕ್ತಿಮಲ್ಲಿಕಾ' ಅನುವಾದದ ಪುಸ್ತಕ ಪ್ರಕಟಣೆಯ ಸಂದರ್ಭದಲ್ಲಿ ಅವರ ಗುರುಗಳು ನೀಡಿದ್ದ ಆಶೀರ್ವಚನದ ಬಗೆಗೆ ಅವರ ಗಮನಕ್ಕೆ ತಂದೆವು. ಈ ವರ್ಷ ಜನವರಿ ಮಾಸದಲ್ಲಿ ಅವರು ಸಂಚಾರ ಕ್ರಮೇಣ ದಾವಣಗೆರೆಗೆ ನೀಡಿದ್ದ ಒಂದು ದಿನದ ಭೇಟಿಯ

ಸಂದರ್ಭದಲ್ಲಿ ಸಂಘದ ಮಂದಿರದಲ್ಲಿ ಸಂಸ್ಥಾನದ ಪೂಜೆ ಮಾಡಿದುದನ್ನೂ ಶ್ರೀಗಳವರಿಗೆ ಅರಿಕೆ ಮಾಡಿಕೊಳ್ಳಲಾಯಿತು.

ಶ್ರೀ ಶ್ರೀಗಳವರು ಈ ಪ್ರಕಟಣ ಕಾರ್ಯ ಮಾಡುತ್ತಿರುವುದಕ್ಕೆ ಸಂತೋಷ ವನ್ನು ವ್ಯಕ್ತಪಡಿಸಿ, ಆಶೀರ್ವಾದ ಮಾಡಿ ಒಂದು ಮುನ್ನುಡಿಯನ್ನು ಬರೆದು ಕಳುಹಿಸು-ತ್ತೇವೆಂದು ಆಶ್ವಾಸನೆ ನೀಡಿದರು. ಅದರಂತೆ ಅವರು ಒಂದು ಅನುಗ್ರಹಪೂರ್ವಕ ಮುನ್ನುಡಿಯನ್ನು ಕೊಟ್ಟಿದ್ದಾರೆ. ಅವರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಈ ಮೂಲಕ ಅರ್ಪಿಸುತ್ತಿದ್ದೇವೆ.

ಸಂಘದ ಸಂಸ್ಥಾಪಕರಾದ ಕೀರ್ತಿಶೇಷ ಮಧ್ವಭೂಷಣ ಭೀಮರಾಯರು ಈ ಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಿ, ೪೦ ವರ್ಷಗಳ ಹಿಂದೆ ಶ್ರೀಹರಿದಾಸರತ್ನಂ ಗೋಪಾಲದಾಸರು ಆ ಕಾಲದಲ್ಲಿ 'ವಿಜಯಾಂಕ ರತ್ನಮಾಲೆ' ಎಂಬ ಶೀರ್ಷಿಕೆ-ಯೊಂದಿಗೆ ಪ್ರಕಾಶನವಾಗುತ್ತಿದ್ದ ಪುಸ್ತಕಗಳ ಸರಣಿಯಲ್ಲಿ ಹೊರಬರುವುದಕ್ಕೆ ನೀಡಿದ್ದರು. ಕಿರ್ತಿಶೇಷ ಭೀಮರಾಯರಿಗೂ ಮತ್ತು ಕೀರ್ತಿಶೇಷ ಹರಿದಾಸರತ್ನಂ ಗೋಪಾಲದಾಸರಿಗೂ ಪರಸ್ಪರವಾಗಿ ಬೆಸುಗೆಯಾಗಿದ್ದ ಸುಮಧುರ ಬಾಂಧವ್ಯದ ಫಲರೂಪವಾಗಿ ಜಿಜ್ಞಾಸುಗಳಿಗೆ ಅತ್ಯಂತ ಉಪಯುಕ್ತವಾಗಿರುವ ಮಾಧ್ವ ತತ್ವ ಪ್ರಮೇಯಗಳುಳ್ಳ ಪುಸ್ತಕಗಳು (ಆಧಾರ ಸಹಿತವಾಗಿ) ದೊರಕಿರುವ ಸೌಭಾಗ್ಯ-ವಾಗಿದೆ. ಕೀರ್ತಿಶೇಷ ಭೀಮರಾಯರು ಸಂಘದ ಧ್ಯೇಯೋದ್ದೇಶಗಳಿಗೆ ತಮ್ಮನ್ನು ತೊಡಗಿಸಿಕೊಂಡು ೨೫ಕ್ಕೂ ಮೀರಿದ ಉತ್ಕೃಷ್ಟವಾಗಿರುವ ವೈಷ್ಣವ ಸಿದ್ಧಾಂತವನ್ನು ಪ್ರತಿಪಾದಿಸುವ ಗ್ರಂಥಗಳಲ್ಲಿರುವ ಹಲವಾರು ಅಪೂರ್ವ ಪ್ರಮೇಯಗಳನ್ನು— 'ವೈಕುಂಠ ವರ್ಣನೆ'ಯಲ್ಲಿರುವ ಶ್ಲೋಕ-ನುಡಿಗಳಿಗೆ ಜೋಡನೆ ಮಾಡಿ, ಜಿಜ್ಞಾಸು-ಗಳಿಗೆ ಮೂಲಗ್ರಂಥವನ್ನು ಅಭ್ಯಾಸ ಮಾಡಬೇಕೆಂಬ ಅಭಿರುಚಿ ಹುಟ್ಟಿಸುವ ರೀತಿಯಲ್ಲಿ— ವಿಶಿಷ್ಟ ಶೈಲಿಯಲ್ಲಿ ರಚಿಸಿರುವ ವ್ಯಾಖ್ಯಾನವಾಗಿದೆ. ಸುಮಾರು ಒಂದು ತಲೆಮಾರಿನವರು ಇರುವಷ್ಟು ಅವಧಿ ಇಂದಿಗೆ ಕಳೆದುಹೋಗಿದೆ. ಇಂದಿನ ಯುವ-ಪೀಳಿಗೆಯಲ್ಲಿರುವ ಆಸ್ತಿಕರಿಗೆ ಮತ್ತು ಜ್ಞಾನಸಂಪಾದನೆಗೋಸ್ಕರ ಪ್ರಯತ್ನಿಸುವವರಿಗೆ ಇದು ಅತ್ಯಂತ ಉಪಯುಕ್ತವಾಗಿದೆ. ಸಾಧಕರಿಗೆ ಚಿಂತನೆ ಮಾಡಲು ಅನುಕೂಲ-ವಾಗಿದೆ. ಅನೇಕ ವಿದ್ವಾಂಸರುಗಳೂ ಸಹ ಅವರು ಬರೆದಿರುವ ಅನುವಾದ, ವ್ಯಾಖ್ಯಾನಗಳನ್ನು ಓದಿ ತಮ್ಮ ಸಂತಸವನ್ನು ವ್ಯಕ್ತಪಡಿಸಿದ್ದಾರೆ.

ಅಧ್ಯಾತ್ಮ ವೃತ್ತದಲ್ಲಿರುವ ವಿಷಯಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನು ಖರೀದಿ ಮಾಡಿ ಓದಬೇಕೆಂಬ ಹಂಬಲವುಳ್ಳವರು ಅಂದಿನ ಕಾಲದಲ್ಲಿ ಕಡಿಮೆ ಸಂಖ್ಯೆ-ಯಲ್ಲಿದ್ದರು. ಪರಸ್ಥಳಗಳಿಗೆ ಪುಸ್ತಕಗಳನ್ನು ರವಾನಿಸಲು ಅಷ್ಟು ಸೌಕರ್ಯವಿರಲಿಲ್ಲ.

ಅಂತಹ ಕ್ಲಿಷ್ಟ ಸನ್ನಿವೇಶದಲ್ಲಿ ಕೀರ್ತಿಶೇಷ ಶ್ರೀ ಹರಿದಾಸರತ್ನಂ ಗೋಪಾಲದಾಸರು ಕೇವಲ 'ಶ್ರೀಹರಿಕಥೆ'ಯನ್ನು ನಡೆಸಿಕೊಡುವುದರ ಮೂಲಕ ತಮಗೆ ಬರುತ್ತಿದ್ದ ಹಣದಲ್ಲಿ ಪುಸ್ತಕಗಳನ್ನು ಕಷ್ಟಪಟ್ಟು ಹೊರತರುತ್ತಿದ್ದರು. ಭಕ್ತವೃಂದದಲ್ಲಿ ಜ್ಞಾನಾಭಿವೃದ್ಧಿಯಾಗಬೇಕೆಂಬ ಅಭಿಲಾಷೆಯಿಂದ ಉತ್ತಮ ಕೃತಿಗಳನ್ನು ಆಯ್ದು, ಕೀರ್ತಿಶೇಷ ಭೀಮರಾಯರನ್ನು ವ್ಯಾಖ್ಯಾನ ಬರೆದುಕೊಡುವಂತೆ ತಿಳಿಸುತ್ತಿದ್ದರು. ಅವರೂ ಸಹ ಆಸಕ್ತಿವಹಿಸಿ, ಪೂರ್ವಕಾಲದಲ್ಲಿಯ ಸಂಸ್ಕೃತ ಗ್ರಂಥಗಳನ್ನು ಪರಾಮರ್ಶಿಸಿ, ಸಂಬಂಧಪಟ್ಟ ಮಾಹಿತಿ, ತತ್ತ್ವಾಂಶಗಳನ್ನು ಕ್ರೋಢೀಕರಿಸಿ— ಜನಸಾಮಾನ್ಯಕ್ಕೂ ಅಧಿಕವಾಗಿ ಉಪಯೋಗವಾಗುವಂತೆ ವಿಸ್ತೃತ ವ್ಯಾಖ್ಯಾನ ರಚಿಸಿಕೊಡುತ್ತಿದ್ದರು. ಮೊದಲ ಪ್ರಕಟನೆಯಲ್ಲಿ ಉಭಯರೂ ಬರೆದಿದ್ದುದನ್ನು ಈ ಪುಸ್ತಕದಲ್ಲಿಯೂ ಛಾಪಿಸಲಾಗಿದೆ. ಅವರ ಬರಹಗಳು ಇಂದಿನವರಿಗೆ ದಾರಿದೀಪ-ವಾಗಿವೆ. ಕೀರ್ತಿಶೇಷ ಶ್ರೀ ಗೋಪಾಲದಾಸರ ಕುಟುಂಬದವರು ಸಂಘಕ್ಕೆ ಈ ಪುಸ್ತಕವನ್ನು ಪ್ರಕಟಿಸುವುದಕ್ಕೆ ಅನುಮತಿ ನೀಡಿ ಉಪಕರಿಸಿದ್ದಾರೆ. ಅವರಿಗೆ ಕೃತಜ್ಞತೆಗಳು.

'ಗುರುವರ್ಥದೀಪಿಕಾ', 'ಯುಕ್ತಿಮಲ್ಲಿಕಾ' ಇತ್ಯಾದಿ ಶಾಸ್ತ್ರ ಗ್ರಂಥಗಳ ಕರ್ತೃ-ಗಳಾಗಿ, ಸಜ್ಜೀವರುಗಳ ಬಗೆಗೆ ಅಪಾರ ದಯತೋರುವ ಶ್ರೀವಾದಿರಾಜ ಗುರುಸಾರ್ವಭೌಮರು ಕನ್ನಡದಲ್ಲಿಯೂ ಗ್ರಂಥ ರಚಿಸಿಕೊಟ್ಟಿದ್ದಾರೆ. ಗ್ರಂಥಕಾರರು ಮತ್ತು ಗ್ರಂಥೋಕ್ತ ವಿಷಯ—ಇವು ಪುಸ್ತಕದ ಪ್ರಾರಂಭದ ಪುಟಗಳಲ್ಲಿ ದೊರಕುತ್ತವೆ.

ಪುಸ್ತಕದ ಹೆಸರು: 'ವೈಕುಂಠ ವರ್ಣನೆ'—ಈ ಹೆಸರನ್ನು ಓದಿದ ತಕ್ಷಣ ಸಾಮಾನ್ಯ ತಿಳಿವಳಿಕೆಯುಳ್ಳವರಿಗೆ 'ಶ್ವೇತದ್ವೀಪ', 'ಅನಂತಾಸನ', 'ವೈಕುಂಠ'— ಎಂದು ಮೂರು ಭಗವಂತನ ಧಾಮಗಳಲ್ಲಿ ಒಂದಾಗಿರುವ 'ವೈಕುಂಠ'ದ ಬಗ್ಗೆ ಪರಿಚಯಾತ್ಮಕ ವಿವರಗಳನ್ನೊಳಗೊಂಡ ಪುಸ್ತಕವಾಗಿದೆ ಎಂದೆನಿಸಬಹುದು. ಕೇವಲ ಆ ರೀತಿಯಾಗಿರುವ ಗ್ರಂಥವಾಗಿಲ್ಲ.

ಈ ಗ್ರಂಥವು ಮಧ್ವ ಸಿದ್ಧಾಂತದಲ್ಲಿರುವ ಅನೇಕ ಪ್ರಮೇಯ, ತತ್ತ್ವ ರಹಸ್ಯ-ಗಳನ್ನು ನಾಲ್ಕು ಸಂಧಿಗಳಲ್ಲಿ ಸಂಗ್ರಹಿಸಿ ಅಧ್ಯಾತ್ಮ ಜ್ಞಾನವನ್ನುಂಟುಮಾಡುವ ಉತ್ತಮ ಸಾಧನವಸ್ತುವಾಗಿದೆ. ವೈಕುಂಠನಾಥನ ಮಹಿಮೆಗಳ ನಿರೂಪಣೆ **'ತತ್ವಸಾರ'-**ವೆಂದೆನಿಸಿ ಬೋಧಕವಾಗಿದೆ. ಜೀವರುಗಳು 'ಜನನ-ಮರಣಾಖ್ಯ' ರೂಪವಾದ ಒಂದು ಬಂಧನದೊಳಗೆ ಇರುವವರಾಗಿದ್ದಾರೆ. ವೈಕುಂಠನಾಥನ ಪ್ರಿಯರ ಆದೇಶ-

ಗಳನ್ನು ಸಾತ್ವಿಕ ವರ್ಗದ ಜೀವರು ಆಲಿಸಿ, ಪರಿಪಾಲಿಸುತ್ತಾ ಬದುಕಿನ ಮಾರ್ಗದಲ್ಲಿ ಅವನ ಅನುಗ್ರಹವನ್ನೇ ಕೋರುತ್ತಾ, ಅವನ ಪ್ರೀತಿ ಸಂಪಾದನೆಗೋಸ್ಕರ ಸಾಧನೆ-ಗೈಯುತ್ತಾರೆ. (ಗ್ರಂಥೋಕ್ತವಾದ ಈ ವಾಕ್ಯವನ್ನು ಬರೆಯುತ್ತಿರುವಾಗ ಸಮಾಜ-ದಲ್ಲಿಯ ಪ್ರಸ್ತುತ ವಾತಾವರಣದ ಬಗೆಗೆ ಒಂದು ಚಿಂತನೆ: ಇಂದಿನ ಯುವಪೀಳಿಗೆ-ಯವರ ಬದುಕಿನ ಮಾರ್ಗದಲ್ಲಿ ಹಾಸುಹೊಕ್ಕಾಗಿರುವ ಮತ್ತು ಅಂತಹವರನ್ನು ಆವರಿಸಿರುವ 'ಎಲಕ್ಟ್ರಾನಿಕ್ ಮಾಧ್ಯಮಗಳ ಬಂಧನ'ದಿಂದ ಹೊರಬರುವ ಪ್ರಯತ್ನ ಆ ವ್ಯಕ್ತಿಗಳ ಸಾಹಸಕಾರ್ಯವೆಂದೆನಿಸುತ್ತದೆ. ಪ್ರತಿಯೊಬ್ಬರ ಮನೆಯೂ ಸಿನಿಮಾ ಮಂದಿರಗಳಾಗಿವೆ. ಸೀರಿಯಲ್, ಕ್ರಿಕೆಟ್, ವಾರ್ತಾ ಇತ್ಯಾದಿಗಳನ್ನು ನೋಡುವ ಅಭ್ಯಾಸ ಬಹಳವಾಗಿ ಬೆಳೆದಿದೆ. ಇದರ ಜೊತೆಗೆ ಇಂಟರ್‌ನೆಟ್‌ನಲ್ಲಿ ಹುಡುಕುವ ಹವ್ಯಾಸವೂ ಇದೆ. ಕೈಯಲ್ಲಿ ಸರ್ವದಾ ಟ್ಯಾಬ್ಲೆಟ್ ಅಥವಾ ಮೊಬೈಲ್ ಇದ್ದೇ ಇರುತ್ತದೆ. ೧೫-೨೦ ಪುಟಗಳಿರುವ ವಾರ್ತಾಪತ್ರಿಕೆ, ವಾರಪತ್ರಿಕೆ, ಇತ್ಯಾದಿಗಳು ಕಣ್ಮುಂದೆ ಇರುತ್ತವೆ. ವ್ಯಕ್ತಿಯನ್ನು ಆವರಿಸಿರುವ ಈ ಮಾಧ್ಯಮಗಳು, 'ಅತೀಂದ್ರಿಯ ವಸ್ತು'ವಿರುವುದರ ಬಗೆಗೆ ಏನನ್ನೂ ಅರಿವು ಮಾಡಿಕೊಡದೇ ಇರುವ ರೀತಿಯಲ್ಲಿ ಅವರುಗಳನ್ನು ಬಂಧನದಲ್ಲಿಟ್ಟಿರುವುದನ್ನು ಊಹಿಸಬಹುದಾಗಿದೆ. "ಅನಾದಿಯಾಗಿ-ರುವ 'ಜನನ-ಮರಣಾಖ್ಯ' ಬಂಧನದಿಂದ ಜೀವರುಗಳಿದ್ದಾರೆ" ಎನ್ನುವ ಶಾಸ್ತ್ರ-ವಾಕ್ಯವು ಮೇಲೆ ತಿಳಿಸಿರುವಂತಹ ಬಂಧನದೊಳಗಿರುವ ಮತ್ತು ಆರ್ಶೇಯ ಸಂಸ್ಕಾರರಾಹಿತ್ಯವುಳ್ಳ ವ್ಯಕ್ತಿಗಳ ಬುದ್ಧಿಯೊಳಗೆ ಪ್ರವೇಶಿಸುವುದಕ್ಕೆ ಅವಕಾಶವಾಗು-ವುದೇ ಇರುವ ವಾತಾವರಣ ಇಂದು ಎಲ್ಲ ಕಡೆ ಗೋಚರವಾಗುತ್ತಿದೆ!).

ಸರ್ವೋತ್ತಮನಾದ ಶ್ರೀಹರಿಯು ತನ್ನ ಮೂಲರೂಪ- ದಿಂದ ಇನ್ನಿತರ ರೂಪಗಳ ಆವಿರ್ಭಾವ ಮಾಡಿರುವ ಕ್ರಮ, ಬ್ರಹ್ಮಾಂಡ ಸೃಷ್ಟಿಯ ರೀತಿ, ತನ್ನ ಅನೇಕ ರೂಪಗಳಿಂದ ಶ್ರೀಹರಿಯು ಬ್ರಹ್ಮ-ವಾಯುದೇವರ, ದೇವತೆಗಳ ಮೂಲಕ ನಿಯಮನ ಮಾಡುತ್ತಿರುವ ಕ್ರಮದ ವ್ಯವಸ್ಥೆ ಇತ್ಯಾದಿ ತತ್ವಗಳು ಈ ಗ್ರಂಥದಲ್ಲಿಯ ನಾಲ್ಕು ಸಂಧಿಗಳಲ್ಲಿ (ಮೋಕ್ಷಸಂಧಿ, ಲಯಸಂಧಿ, ಸೃಷ್ಟಿಸಂಧಿ ಮತ್ತು ಸ್ಥಿತಿಸಂಧಿ) ತಿಳಿಸಲ್ಪಟ್ಟಿದೆ. ಸಜ್ಜನರನ್ನು ಸಾಧನೆಯ ಪಥದಲ್ಲಿ ಕರೆದೊಯ್ಯುವುದೇ ಈ ಗ್ರಂಥದ ಉದ್ದೇಶವಾಗಿದೆ.

ಈ ಲೇಖನದ ಪ್ರಾರಂಭದಲ್ಲಿ ತಿಳಿಸಿರುವಂತೆ ಕೀರ್ತಿಶೇಷ ಭೀಮರಾಯರು ಶ್ರಮವಹಿಸಿ ಶಾಸ್ತ್ರ ಗ್ರಂಥಗಳಲ್ಲಿರುವ ಸಮಾಖ್ಯ ವಾಕ್ಯಗಳನ್ನೂ ಆಯ್ದು ತಮ್ಮ ವ್ಯಾಖ್ಯಾನದಲ್ಲಿಟ್ಟು ಬೆಳಕಿಗೆ ತಂದುಕೊಟ್ಟಿದ್ದಾರೆ. ಉಪಯೋಗಿಸಿಕೊಳ್ಳುವುದು ನಮ್ಮ ಜವಾಬ್ದಾರಿಯಾಗಿದೆ.

ಸಂಘದ ಜ್ಞಾನ ಪ್ರಸಾರಕಾರ್ಯಗಳನ್ನು ನೋಡಿ, ಸಂತೋಷಪಟ್ಟು ಈ ಪುಸ್ತಕದ ಪ್ರಕಟನೆಗಾಗಿ ಧನಸಹಾಯವನ್ನು ಮಾಡಿರುವ ಮಹನೀಯರುಗಳು:

೧. ಶ್ರೀಯುತ ಎನ್. ಶೇಷಗಿರಿ ಮತ್ತು ಎನ್. ಜಯತೀರ್ಥ ಸಹೋದರರು, ಬೆಂಗಳೂರು (ತಮ್ಮ ತಾಯಿಯವರ ಸ್ಮರಣಾರ್ಥ).

೨. ಸಂಘದ ಸ್ಥಾಪನೆಯಾಗಿ ಪ್ರಾರಂಭದ ವರುಷಗಳಲ್ಲಿ ಎರಡು ವರ್ಷ ಅಧ್ಯಕ್ಷರಾಗಿದ್ದ ಕಣ್ಣಿನ ಪೊರೆ ಆಪರೇಷನ್‌ನಲ್ಲಿ ತಜ್ಞರಾಗಿದ್ದ ಡಾ|| ಮೀರ್ ಅಮೀರ್ ರಾಮರಾವ್‌ರವರ ಪುತ್ರರು, ಪುತ್ರಿ, ಬೆಂಗಳೂರು (ತಮ್ಮ ಮಾತಾಪಿತೃಗಳ ಸ್ಮರಣಾರ್ಥ).

೩. ಭದ್ರಾವತಿ ನಿವಾಸಿ ಶ್ರೀಯುತ ಕೆ. ಎಸ್. ವಾದಿರಾಜ್‌ರವರು ತಮ್ಮ ಮಾತಾಪಿತೃಗಳಾದ ಶ್ರೀಮತಿ ಶಾಂತಾಬಾಯಿ ಮತ್ತು ಶ್ರೀ ಕೆ. ಶ್ಯಾಮಾಚಾರ್— ಇವರ ಸ್ಮರಣಾರ್ಥ (ಸಂಘದಿಂದ ಮುಂದಿನ ಯಾವ ಪುಸ್ತಕವನ್ನು ಪ್ರಕಟಿಸುತ್ತೀರಿ ಎಂದು ಅವರು ತಾವಾಗಿಯೇ ವಿಚಾರಿಸಿ, ಪ್ರಕಾಶನದ ಸಹಾಯಕ್ಕೆ ತಮ್ಮ ದೇಣಿಗೆಯನ್ನು ಅನೇಕ ವರ್ಷಗಳಿಂದ ನೀಡುತ್ತಿದ್ದಾರೆ).

೪. ಶ್ರೀಮತಿ ಭವಾನಿ ಮತ್ತು ಶ್ರೀ ಶ್ರೀವತ್ಸರವರು, ಬೆಂಗಳೂರು.

ಈ ದಾನಿಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ತಿಳಿಸುತ್ತಿದ್ದೇವೆ.

ಹಿಂದಿನ ಎರಡು ಪ್ರಕಟಣೆಗಳ ಕರಡು ಪ್ರತಿಗಳನ್ನು ತಿದ್ದಿ ಶುದ್ಧ ಮಾಡಿಕೊಟ್ಟಿದ್ದ ಮಾನ್ಯ ಶ್ರೀ ಶ್ರೀಶಮೂರ್ತಿಗಳು ಈ ಪುಸ್ತಕದ ಪ್ರಕಟಣೆಗೂ ಸಹಕರಿಸಿದ್ದಾರೆ. ಅವರಿಗೆ ಧನ್ಯವಾದಗಳು. ಸಂಘದ ಬಗೆಗೆ ಮುಂಚಿನಿಂದಲೂ ವಿಶ್ವಾಸಹೊಂದಿರುವ ಶ್ರೀಯುತ ಕೆ. ಎಮ್. ಶೇಷಗಿರಿಯವರು ರಕ್ಷಾಕವಚವನ್ನು ತಯಾರು ಮಾಡಿ ಕೊಟ್ಟಿದ್ದಾರೆ. ಅವರಿಗೆ ಕೃತಜ್ಞತೆಗಳು. ಶ್ರೀ ಚಾಮುಂಡೇಶ್ವರಿ ಪ್ರಿಂಟರ್ಸ್, ಬನಶಂಕರಿ ೧ನೇ ಹಂತ, ಬೆಂಗಳೂರು ಇದರ ಮಾಲೀಕರಾಗಿರುವ ಶ್ರೀ ಆರ್. ಸುರೇಶ್‌ರವರು ಸಕಾಲಕ್ಕೆ ಮುದ್ರಣ ಮಾಡಿಕೊಟ್ಟಿದ್ದಾರೆ. ಅವರಿಗೂ ಮತ್ತು ಅಕ್ಷರ ಜೊಡನೆ ಮಾಡಿರುವ ಸಿಬ್ಬಂದಿ ವರ್ಗದವರಿಗೂ ಕೃತಜ್ಞತೆಗಳು.

ಸೆಪ್ಟೆಂಬರ್ ೨೦೧೨
ನಂದನ ಸಂವತ್ಸರ
ಭಾದ್ರಪದ ಮಾಸ

**ಆರ್. ಜಗನ್ನಾಥರಾವ್**
ಸಂಘದ ಕಾರ್ಯಕಾರಿ ಸಮಿತಿ ಪರವಾಗಿ

॥ ಶ್ರೀಃ ॥

॥ ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

*ಶ್ರೀಮದ್ವಾದಿರಾಜತೀರ್ಥಶ್ರೀಪಾದಂಗಳವರಿಂದ ವಿರಚಿತವಾದ*

# ವೈಕುಂಠವರ್ಣನೆ

## * ತತ್ವಸಾರ *

## ೧. ಮೋಕ್ಷ ಸಂಧಿ

**ಕಾಮಧೇನುರ್ಯಥಾ ಪೂರ್ವಂ ಸರ್ವಾಭೀಷ್ಟಫಲಪ್ರದಾ।**
**ತಥಾ ಕಲೌ ವಾದಿರಾಜಶ್ರೀಪಾದೋಽಭೀಷ್ಟದಃ ಸತಾಮ್॥**

**ಅರ್ಥ:** ಪೂರ್ವಂ—ಎಂದಿನಿಂದಲೂ, ಕಾಮಧೇನುಃ—ಕಾಮಧೇನುವು, ಯಥಾ—ಹೇಗೆ, ಸರ್ವಾಭೀಷ್ಟಫಲಪ್ರದಾ—(ತನ್ನನ್ನು ಸೇವಿಸುವ) ಸರ್ವರ ಸರ್ವಾಭೀಷ್ಟವನ್ನು ಸಲ್ಲಿಸುವ ಸ್ವಭಾವವುಳ್ಳದ್ದೋ, ತಥಾ—ಹಾಗೆ, ಕಲೌ—ಕಲಿಯುಗದಲ್ಲಿ, ವಾದಿರಾಜ ಶ್ರೀಪಾದಃ—ಶ್ರೀವಾದಿರಾಜತೀರ್ಥರೆಂಬ ಶ್ರೀಪಾದಂಗಳವರು (ಸ್ವಾಮಿಗಳವರು), ಸತಾಂ—ಸಜ್ಜನರಿಗೆ, ಅಭೀಷ್ಟದಃ—ಅಭೀಷ್ಟ(ಅಪೇಕ್ಷಿತಫಲ)ಗಳನ್ನು ಕೊಡುವ ಮಹಾನುಭಾವರು.

**'ವೈಕುಂಠ'** ಎಂಬುದು ಶ್ರೀವಿಷ್ಣುವಿನ ನಾಮ. ಅದು ಮುಕ್ತಲೋಕದ ಹಾಗೂ ಆ ಲೋಕದ **ರಾಜಧಾನಿಯಾದ ನಗರಿಯ** ಹೆಸರೂ ಆಗಿದೆ. ಅಲ್ಲಿ ಶ್ರೀಮಹಾಲಕ್ಷ್ಮೀದೇವಿಯ ಅದ್ಭುತ ವೈಭವಯುಕ್ತ ಸೇವೆಯನ್ನು ಸ್ವೀಕರಿಸುತ್ತ, ಬ್ರಹ್ಮಾದಿ ಮುಕ್ತರಿಂದ ಸಹ ಸೇವಿಸಲ್ಪಡುತ್ತ ಶ್ರೀವಿಷ್ಣುವು ನಿತ್ಯ ವಿರಾಜಮಾನನಾಗಿರುವನು. **'ವೈಕುಂಠವರ್ಣನೆ'** ಎಂದರೆ ಶ್ರೀವಿಷ್ಣುವಿನ ವರ್ಣನೆ. ಆತನು ತನ್ನ ಮಹಿಮೆಗಳಿಂದ ಅತ್ಯಂತ ಅಭಿನ್ನನು. ಆ ಮಹಿಮೆಗಳ ನಿರೂಪಣೆಯೇ **'ತತ್ವಸಾರವು'**. ವಿಷ್ಣುಮಹಿಮೆಗಳ ಜ್ಞಾನವೇ **ತತ್ವಜ್ಞಾನವು**. ಈ ಮೊದಲನೆಯ ಸಂಧಿಯಲ್ಲಿ ವೈಕುಂಠನೂ, ವೈಕುಂಠಲೋಕವೂ, ವೈಕುಂಠನಗರಿಯೂ ಪ್ರತಿಪಾದಿಸಲ್ಪಟ್ಟಿರುವ ವಿಷಯವಸ್ತುಗಳಾಗಿವೆ.

**ಗ್ರಂಥಸ್ವರೂಪ ಮತ್ತು ಉದ್ದೇಶ:**

**ಭಾಮಿನಿ ಷಟ್ಪದಿ**

*ತತ್ವಸಾರದ ಸೊಬಗ ಧರೆಯೊಳು*
*ವಿಸ್ತರಿಸಬೇಕೆಂದು ಮುನಿಕುಲ-*
*ರತ್ನ ಶ್ರೀಗುರುವಾದಿರಾಜನು ಶ್ರುತಿಪುರಾಣಗಳ*

*ಮೊತ್ತವನು ನೆರೆ ಮಥಿಸಿ ಮೇಲಣ*
*ಮುಕ್ತಿಸೃಷ್ಟಿಸ್ಥಿತಿಲಯಂಗಳ*
*ನರ್ತಿಯಲಿ ಬಣ್ಣಿಸಿದ ಕಥೆಯನು ಕೇಳಿ ಸಜ್ಜನರು।*

**ಅರ್ಥ:** ತತ್ವಸಾರದ— ಭಗವನ್ಮಹಿಮೆಗಳ (ಸತ್ಯಸ್ವರೂಪದ) ಸೊಬಗ— ಅಂದವನ್ನು (ಆನಂದಪ್ರದ ಸೌಂದರ್ಯವನ್ನು), ಧರೆಯೊಳು— ಜಗತ್ತಿನಲ್ಲಿ, ವಿಸ್ತರಿಸಬೇಕೆಂದು— ಹರಡಬೇಕೆಂದು, ಮುನಿಕುಲರತ್ನ— ಯತಿಕುಲತಿಲಕರಾದ, ಶ್ರೀಗುರು ವಾದಿರಾಜನು— ಶ್ರೀವಾದಿರಾಜಗುರುಗಳು, ಶ್ರುತಿಪುರಾಣಗಳ— ವೇದ ಮತ್ತು ಪುರಾಣಗಳ, ಮೊತ್ತವನು— ತಾತ್ಪರ್ಯವನ್ನೆಲ್ಲ, ನೆರೆ ಮಥಿಸಿ— ಚೆನ್ನಾಗಿ ವಿಮರ್ಶಿಸಿ (ಮಜ್ಜಿಗೆ ಕಡೆಯುವಂತೆ ಕಡೆದು), ಮೇಲಣ — ಮೇಲೆ ಬರುವ (ಬೆಣ್ಣೆಯಂತೆ ಸಾರಭೂತವಾದ), ಮುಕ್ತಿಸೃಷ್ಟಿಸ್ಥಿತಿಲಯಂಗಳನು— ಮೋಕ್ಷ, ಸೃಷ್ಟಿ, ಸ್ಥಿತಿ, ಲಯಗಳ ಸಂಬಂಧಿಯಾದ ನಿರ್ಣಯಗಳನ್ನು, ಅರ್ತಿಯಲಿ— ಆದರದಿಂದ, ಬಣ್ಣಿಸಿದ— ವರ್ಣಿಸಿದ, ಕಥೆಯನು— ಅನುವಾದವನ್ನು, ಸಜ್ಜನರು— ಸುಜೀವಿಗಳು (ಮುಕ್ತಿಯೋಗ್ಯರು), ಕೇಳಿ— ಕೇಳಿರಿ (ಮತ್ತು ಅದರಲ್ಲಿ ನಿಷ್ಠೆಯನ್ನು ಹೊಂದಿರಿ).

**ವಿಶೇಷಾಂಶ:** (೧) ***'ಓಂ ಜನ್ಮಾದ್ಯಸ್ಯ ಯತಃ ಓಂ'*** (ಬ್ರಹ್ಮಸೂತ್ರ) ಎಂಬಲ್ಲಿ ಶ್ರೀಮಹಾವಿಷ್ಣುವೇ ಚೇತನಾಚೇತನಾತ್ಮಕ ಸಕಲ ಜಗತ್ತಿನ ಉತ್ಪತ್ತಿ, ಸ್ಥಿತಿ, ನಾಶ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಲ್ಲಕ್ಕೂ ಸ್ವತಂತ್ರ ಕಾರಣನೆಂದು ನಿರ್ಣಯಿಸಲಾಗಿದೆ. ವಿಷ್ಣುಮಹಿಮೆಗಳ ಯಥಾರ್ಥಜ್ಞಾನವು ಸರ್ವಮಂಗಳಪ್ರದವೂ ಆನಂದಪ್ರದವೂ ಆದುದು. ಇದುವೇ **ತತ್ವಸಾರದ ಸೊಬಗು.**

(೨) ***'ಇತಿಹಾಸಪುರಾಣಾಭ್ಯಾಂ ವೇದಂ ಸಮುಮಪಬೃಂಹಯೇತ್'*** ಎಂಬ ಶ್ರುತಿಯು, ಇತಿಹಾಸ (ಭಾರತ-ರಾಮಾಯಣಗಳು) ಮತ್ತು ಪುರಾಣಗಳಿಂದ ವೇದಾರ್ಥಗಳನ್ನು ಪೂರ್ಣಮಾಡಿಕೊಳ್ಳಬೇಕೆಂದು ಹೇಳುತ್ತದೆ. **'ಶ್ರುತಿ ಪುರಾಣಗಳ ಮೊತ್ತವನು'** ಎಂದುದು, ಶ್ರುತಿಪುರಾಣಗಳ (ಮೇಲೆ ತೋರುವಷ್ಟು) ಅರ್ಥಗಳನ್ನು ಮಾತ್ರ ಹೇಳಲುದ್ಯುಕ್ತರಾಗಿಲ್ಲವೆಂದು ತಿಳಿಸಲಿಕ್ಕಾಗಿ.

(೩) **'ಅರ್ತಿಯಲಿ'** ಎಂಬ ಪದವನ್ನು **'ಬಣ್ಣಿಸಿದ'** ಎಂಬುದಕ್ಕೂ, **'ಕೇಳಿರಿ'** ಎಂಬುದಕ್ಕೂ ವಿಶೇಷಣವನ್ನಾಗಿ ಅನ್ವಯಿಸಬಹುದು. ಗುರುವು ಪ್ರಸನ್ನನಾಗಿ ಮಾಡಿದ ಉಪದೇಶವೇ ಫಲಪ್ರದವಾಗುತ್ತದೆ. ಹಾಗೆಯೇ ಆದರದಿಂದ ಮಾಡಿದ ಶ್ರವಣವೇ ಫಲಕಾರಿಯು.

(೪) **'ಕೇಳಿ ಸಜ್ಜನರು'** ಎಂಬುದು ಬಹ್ವರ್ಥಗರ್ಭಿತವಾಗಿದೆ. ಕೇಳುವ ಮಾತ್ರದಿಂದ ಫಲ ದೊರೆಯದು—ಅದರಲ್ಲಿ ನಿಷ್ಠೆಯನ್ನೂ ಹೊಂದಬೇಕು. **ನಿಷ್ಠೆಯೆಂದರೆ** ಶ್ರದ್ಧೆ.

*'ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ।*
*ಶ್ರದ್ಧಾಮಯೋಽಯಂ ಪುರುಷಃ ಯೋ ಯಚ್ಛ್ರದ್ಧಃ ಸ ಏವ ಸಃ॥ (ಗೀತಾ)*

ಎಂದರೆ, ಸಾತ್ವಿಕ, ರಾಜಸ, ತಾಮಸಗಳೆಂದು (ಅಲ್ಲಿ ವರ್ಣಿಸಲಾಗುವ) ತ್ರಿವಿಧ ಶ್ರದ್ಧೆಗಳಲ್ಲಿ ಯಾರು ಯಾವ ವಿಧವಾದ ಶ್ರದ್ಧೆಯುಳ್ಳವನೋ, ಅವನು ಆ ಸ್ವರೂಪದವನೇ—ಜೀವಸ್ವರೂಪವೇ ಶ್ರದ್ಧಾತ್ಮಕವು. ಹೀಗಿದ್ದರೂ ತಾತ್ಕಾಲಿಕ ಸತ್ಕರ್ಮದುಷ್ಕರ್ಮಗಳ ಅನುಷ್ಠಾನದಿಂದ ಜೀವಸ್ವರೂಪಯೋಗ್ಯತೆಯನ್ನು ನಿರ್ಧರಿಸಲು ಬರುವುದಿಲ್ಲ. ಪೂರ್ವವಾಸನಾ, ಸಹವಾಸ ಮುಂತಾದ ಕಾರಣಗಳಿಂದ, ಸ್ವರೂಪಶ್ರದ್ಧೆಯಿಂದ ಭಿನ್ನವಾದ ಶ್ರದ್ಧೆಯೂ ಉಂಟಾಗುತ್ತದೆ. ಈ ಬಾಹ್ಯಶ್ರದ್ಧೆಯು ಸತ್ವಾದಿ ಪ್ರಾಕೃತಗುಣನಿಮಿತ್ತಕವಾದುದು. ಈ ಬಾಹ್ಯ-ಶ್ರದ್ಧೆಯು ಸರ್ವದಾ ಸ್ವರೂಪಶ್ರದ್ಧೆಗೆ ಅನುಗುಣವಾಗಿಯೇ ಇರುವುದೆಂಬ ನಿಯಮವಿಲ್ಲ. ಆದರೆ ತದನುಗುಣವಾಗಿರುತ್ತದೆಂಬುದು ಸಾಮಾನ್ಯ ನಿಯಮ. ನೈತಿಕಜೀವನದಿಂದ ಮಾತ್ರ, ಶ್ರದ್ಧೆಯನ್ನು ಗುರ್ತಿಸಲು ಬಾರದು. ಕಾರ್ಯ-ಅಕಾರ್ಯಗಳನ್ನು ಶಾಸ್ತ್ರಾಧಾರದಿಂದ ನಿಶ್ಚಯಿಸಿಕೊಳ್ಳುವನೋ ಹೇಗೆಂಬುದನ್ನು ಮುಖ್ಯವಾಗಿ ಗಮನಿಸಬೇಕು. ***'ಓಂ ಸರ್ವಥಾಽಪಿ ತು ತ ಏವ ಉಭಯ ಲಿಂಗಾತ್ ಓಂ'*** (ಬ್ರಹ್ಮಸೂತ್ರ) ಎಂಬಲ್ಲಿ, ಯತ್ನ-ಗುರೂಪದೇಶ-ದೇಶ-ಕಾಲಗಳಿಂದ ಸಮರಾಗಿದ್ದರೂ ಮುಕ್ತಿಯೋಗ್ಯರಿಗೇ (ಸಾತ್ವಿಕಶ್ರದ್ಧೆಯವರಿಗೇ) ಪರಮಾರ್ಥಜ್ಞಾನವು ಲಭಿಸುವುದೆಂದು ನಿರ್ಣಯಿಸಲಾಗಿದೆ. ಸುಜೀವಿಗಳು ಮಾತ್ರ ಈ ಗ್ರಂಥಕ್ಕೆ ಅಧಿಕಾರಿಗಳೆಂದು ಸೂಚಿಸಲು 'ಕೇಳಿ ಸಜ್ಜನರು' ಎಂದಿರುವರು.

(೫) ತತ್ವಜ್ಞಾನಲಾಭವೇ ಉದ್ದೇಶವಾಗಿರುವ ಸಂಭಾಷಣೆ ಮತ್ತು ವಿಷಯ ನಿರೂಪಣೆಯು **'ಕಥಾ'** ಎಂದು ಕರೆಯಲ್ಪಡುತ್ತದೆ. ಜಲ್ಪ, ವಿತಂಡ ಮೊದ-ಲಾದ ಕಥಾ ವಿವಿಧ ಪ್ರಕಾರಗಳನ್ನು **'ಕಥಾಲಕ್ಷಣ'**ವೆಂಬ ಶ್ರೀಮದಾಚಾರ್ಯರ ಗ್ರಂಥದಿಂದ ತಿಳಿಯಬಹುದಾಗಿದೆ.

(೬) ಲಯ, ಸೃಷ್ಟಿ, ಸ್ಥಿತಿಗಳು, ಕ್ರಮದಿಂದ ೨, ೩, ೪ನೆಯ ಸಂಧಿಗಳ ವಿಷಯಗಳಾಗಿವೆ.

**ಇದು ಪುಣ್ಯಕಥೆ ಲೋಕಕ್ಕಿದು ಮುಕುತಿಯ ಪಥ**
**ಇದ ಕೇಳುವವನೆ ಕೃತಾರ್ಥ ||ಪಲ್ಲವಿ||**

**ಅರ್ಥ:** ಇದು—ಈ ಗ್ರಂಥದ ವಿಷಯವು, ಪುಣ್ಯಕಥೆ—ನಿತ್ಯಸುಖಸಾಧನದ ನಿರೂಪಣೆಯು, ಇದು—ಈ ಅನುವಾದವು, ಲೋಕಕ್ಕೆ—ಸಂಸಾರಿಗಳಿಗೆ (ಅಜ್ಞಾನಾವಸ್ಥೆಯಲ್ಲಿರುವ ಸಜ್ಜನರಿಗೆ), ಮುಕುತಿಯ ಪಥ—ಮೋಕ್ಷಮಾರ್ಗವು. ಇದ—ಇದನ್ನು, ಕೇಳುವವನೆ—ಕೇಳಿ ನಿಷ್ಠೆಯನ್ನು ಹೊಂದುವವನೇ, ಕೃತಾರ್ಥ —(ಪುರುಷಾರ್ಥಸಾಧನೆಗಾಗಿ) ಮಾಡಬೇಕಾದುದನ್ನು ಮಾಡಿ, ಫಲಪಡೆದವನು (ಜೀವನವನ್ನು ಸಫಲಗೊಳಿಸಿಕೊಂಡವನು). ||ಪ||

**ಮೇಲೆನಿಪ ನಾಟಿ ಮೊದಲಾದ ರಾಗಂಗಳ**
**ತಾಳಮೇಳದಿ ನಾಲ್ಕುಸಂಧಿ**
**ಶ್ರೀಲೋಲಚರಿತೆಯ ತತ್ವರಹಸ್ಯದ**
**ಮಾಲೆ* ಪೇಳ್ವರಿಗಲಂಕಾರ ||೧||**

**ಅರ್ಥ:** ಮೇಲೆನಿಪ—ಉತ್ತಮವಾದ, ನಾಟಿ ಮೊದಲಾದ ರಾಗಂಗಳ—ನಾಟಿ ಮೊದಲಾದ (ಪ್ರತಿಪದ್ಯಕ್ಕೂ ಸೂಚಿಸಿರುವ ರಾಗಗಳಲ್ಲಿ ಅಥವಾ ಯೋಗ್ಯವೆನಿಸುವ ಇತರ ರಾಗಗಳಲ್ಲಿ) ಸಂಗೀತಶಾಸ್ತ್ರಾನುಸಾರವಾದ ರಾಗವಿನ್ಯಾಸಗಳಿಂದ, ತಾಳ ಮೇಳದಿ—ತಾಳವಾದ್ಯ ಮೊದಲಾದ ವಾದ್ಯ ಗಳೊಂದಿಗೆ ಕೂಡಿಕೊಂಡು ಪೇಳ್ವರಿಗೆ—ಹಾಡುವವರಿಗೆ, ನಾಲ್ಕು ಸಂಧಿ—(ಈ ಗ್ರಂಥದ) ನಾಲ್ಕು ಸಂಧಿಗಳಲ್ಲಿ ಹೇಳಲಾಗುವ, ಶ್ರೀಲೋಲಚರಿತೆಯ—ಲಕ್ಷ್ಮೀಲೋಲನ ಮಹಿಮಾರೂಪದ, ತತ್ವರಹಸ್ಯದ ಮಾಲೆ—ಗೂಢಪ್ರಮೇಯದ ಮಾಲಿಕೆಯು, ಅಲಂಕಾರ—ಭೂಷಣವೆನಿಸುವುದು.

**ಕನ್ನಡಿಯೊಳು ತೋರ್ಪಂತೆ ಪೂರ್ಣಪ್ರಜ್ಞರ ಮತ-**
**ದುನ್ನತ ತತ್ವಸಾರವನು**
**ಕನ್ನಡಿಸಿ ಬಣ್ಣಿಸಿದ ವಾದಿರಾಜಮುನಿಯ**
**ಬಿನ್ನಪವನೆಲ್ಲ ಮನ್ನಿಪುದು ||೨||**

---

*ಅಸಾಧಾರಣ ವಿಷಯಗಳ ನಿರೂಪಣೆಯನ್ನೊಳಗೊಂಡಿರುವುದರಿಂದ ಪಂಡಿತಾದರಣೀಯವೂ ಹೌದೆಂಬುದು ಮೊದಲ ಪದ್ಯದಲ್ಲಿ 'ತತ್ವರಹಸ್ಯದ ಮಾಲೆ' ಎಂಬುದರಿಂದ ಸೂಚಿತ. -ಸಂ.

**ಅರ್ಥ:** ಪೂರ್ಣಪ್ರಜ್ಞರ ಮತದ—ಸರ್ವಜ್ಞರ (ಶ್ರೀಮಧ್ವಾಚಾರ್ಯರ) ಸಿದ್ಧಾಂತದ, ಉನ್ನತ ತತ್ವಸಾರವನು—ಉತ್ಕೃಷ್ಟವಾದ ತತ್ವಗಳ ಸಾರವನ್ನು, ಕನ್ನಡಿಯೊಳು ತೋರ್ಪಂತೆ—(ಸ್ವಚ್ಛವಾದ) ಕನ್ನಡಿಯಲ್ಲಿ (ಬಿಂಬವು-ಮುಖವು) ಸ್ಪಷ್ಟವಾಗಿ ತೋರುವಂತೆ, ಕನ್ನಡಿಸಿ—(ಸಂಸ್ಕೃತದಿಂದ) ಕನ್ನಡಭಾಷೆಗಿಳಿಸಿ (ಪರಿವರ್ತಿಸಿ) ಬಣ್ಣಿಸಿದ—ವರ್ಣಿಸಿದ, ವಾದಿರಾಜಮುನಿಯ—ವಾದಿರಾಜ-ಯತಿಗಳ, ಆ ಬಿನ್ನಪವನೆಲ್ಲ—(ನಾನು ಹೇಳುವುದೆಲ್ಲವನ್ನು) ಪ್ರಧಾನತತ್ವಗಳ ನಿರೂಪಣೆಯನ್ನು, ಮನ್ನಿಪುದು—ಬಿಡದಂತೆ ಲಾಲಿಸುವುದು (ಭಕ್ತಿಯಿಂದ ಶ್ರವಣಮಾಡಿರಿ.)

**ವಿಶೇಷಾಂಶ:** (೧) **ಶ್ರುತಿಪುರಾಣಗಳ ಸಾರವೇ ಮಧ್ವಸಿದ್ಧಾಂತತತ್ವ-ಗಳು.** ಇವುಗಳ ದೃಢಜ್ಞಾನದಿಂದಲೇ (ತತ್ವನಿಶ್ಚಯದಿಂದಲೇ) ಮೋಕ್ಷವು.

(೨) ಈ ಗ್ರಂಥದ ಪದ್ಯಗಳನ್ನು ತಾಳಮೇಳಗಳ ಸಹಿತ ರಾಗವಿನ್ಯಾಸ-ಗಳಿಂದ ಹಾಡಿದರೆ, ಹಾಡುವವನಿಗೆ ಭೂಷಣ ಕೇಳುವವರಿಗೆ ಆನಂದ. ಭಗವಂತನ ಹಾಗೂ ಭಗವದ್ಭಕ್ತರ ಗುಣಗಾನರಹಿತವಾದ ಅಪವಿತ್ರಗಾನ-ದಂತೆ ವ್ಯರ್ಥವಲ್ಲ; ಪುಣ್ಯವೂ ಲಭಿಸುತ್ತದೆ. ಹಾಡುವಿಕೆಯೂ ಶ್ರವಣವೂ ಭಕ್ತಿಪೂರ್ವಕವಾದರೆ ಕಿವಿಗೆ ಇಂಪು—ಮನಸ್ಸಿಗೆ ಆನಂದ ಮಾತ್ರವಲ್ಲ—ಆತ್ಮೋದ್ಧಾರಕ್ಕೇ ಕಾರಣವಾಗುತ್ತದೆ.

(೩) ಸಂಸ್ಕೃತವನ್ನರಿಯದ ಸುಜನರಿಗಾಗಿ ತತ್ವಸಾರವನ್ನು ಕನ್ನಡದಲ್ಲಿ ನಿರೂಪಿಸುವ ಈ ಗ್ರಂಥವು ಸರ್ವಾದರಣೀಯವಾದುದೆನ್ನುತ್ತಾರೆ. ಕನ್ನಡಿ-ಯೊಳಗಿನ ಪ್ರತಿಬಿಂಬದಂತೆ, (ಸಂಸ್ಕೃತಭಾಷೆಯಲ್ಲಿ ಉಪದಿಷ್ಟವಾದ ತತ್ವ-ಗಳ) ಯಥಾವತ್ತಾದ ಪ್ರತೀಕವಾದ್ದರಿಂದ, ಪ್ರಾಕೃತಭಾಷೆಯಲ್ಲಿರುವುದೆಂಬ ಕಾರಣದಿಂದ ತ್ಯಜಿಸಬೇಡಿರೆನ್ನುತ್ತಾರೆ.

***ಮಂಗಳಾಚರಣೆ-೧***

## ಶ್ಲೋಕ ೧

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್।**
**ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ॥**

**ಅರ್ಥ:** ಚತುರ್ಭುಜಂ—(ಆಭರಣ ಆಯುಧಗಳಿಂದ ಸಹಿತವಾದ) ನಾಲ್ಕು ಬಾಹುಗಳುಳ್ಳ, ಶುಕ್ಲಾಂಬರಧರಂ—ಶುಭ್ರವಸ್ತ್ರವನ್ನು ಧರಿಸಿದ, ಶಶಿ-ವರ್ಣಂ—ಪೂರ್ಣಚಂದ್ರರಂತೆ ಆಹ್ಲಾದಕರ ಕಾಂತಿಯುಳ್ಳ, ಪ್ರಸನ್ನವದನಂ—ಪ್ರಶಾಂತಮುಖವುಳ್ಳ (ಪೂರ್ಣಾನಂದಸೂಚಕಪ್ರಸನ್ನಮುಖವುಳ್ಳ), ವಿಷ್ಣುಂ

— ಶ್ರೀಮಹಾವಿಷ್ಣುವನ್ನು, ಸರ್ವವಿಘ್ನೋಪಶಾಂತಯೇ — (ಮೋಕ್ಷಪ್ರತಿಬಂಧಕ -ಗಳಾದ) ಎಲ್ಲ ವಿಘ್ನಗಳ ಪರಿಹಾರಕ್ಕಾಗಿ, ಧ್ಯಾಯೇತ್ — ಧ್ಯಾನಿಸಬೇಕು.

### ಪದ ೧

**ನಿಷ್ಕಳಂಕಚಂದ್ರವದನ, ಶುಕ್ಲವಸನ, ಲಕ್ಷಶಶಿವರ್ಣಪ್ರಸನ್ನ**
**ನಾಲ್ಕುತೋಳಿನ ವಿಷ್ಣು ನಮ್ಮ ವಿಘ್ನಂಗಳ ಘಕ್ಕನೆ ಒರಸಿ ರಕ್ಷಿಸಲಿ॥**

**ಅರ್ಥ:** ನಿಷ್ಕಳಂಕಚಂದ್ರವದನ — ಕಳಂಕರಹಿತಚಂದ್ರನಂತೆ ಮುಖವುಳ್ಳ, ಲಕ್ಷಶಶಿವರ್ಣಪ್ರಸನ್ನ — ಲಕ್ಷ (ಅಗಣಿತ) ಪೂರ್ಣಚಂದ್ರಾಧಿಕಕಾಂತಿಯುಳ್ಳ, ಶುಕ್ಲವಸನ — ಶುಭ್ರವಸ್ತ್ರವನ್ನು ಧರಿಸಿದ, ನಾಲ್ಕು ತೋಳಿನ ವಿಷ್ಣು — ನಾಲ್ಕು ಭುಜಗಳುಳ್ಳ ವಿಷ್ಣುವು, ನಮ್ಮ ವಿಘ್ನಂಗಳ — ನಮ್ಮ (ಇಷ್ಟಾರ್ಥಸಿದ್ಧಿಗೆ ಅಡ್ಡಿ-ಬರುವ) ವಿಘ್ನಗಳನ್ನು, ಘಕ್ಕನೆ — ತಡವಿಲ್ಲದೇ, ಒರಸಿ — ತೊಡೆದುಹಾಕಿ, ರಕ್ಷಿಸಲಿ — ಕಾಪಾಡಲಿ.

**ವಿಶೇಷಾಂಶ:** (೧) ವಿಘ್ನಪರಿಹಾರಕಾರ್ಯದಲ್ಲಿ ಗಣಪತಿಯು ಸ್ವತಂತ್ರನಲ್ಲ. ಗಣಪತ್ಯಂತರ್ಗತ ವಿಶ್ವಂಭರನಾಮಕ ವಿಷ್ಣುವೇ ಮುಖ್ಯವಿಘ್ನೇಶನು.

(೨) *'ಚಂದ್ರಕೋಟಿಸುಶೀತಲಂ'* ಎಂದೂ, *'ಶಶಿಕೋಟಿಲಾವಣ್ಯ'* ಎಂದೂ ಶ್ರೀವಿಷ್ಣುವಿನ ವದನಾರವಿಂದವು ವರ್ಣಿತವಾಗಿದೆ. ಅನಂತ ಪೂರ್ಣನಿಷ್ಕಳಂಕ-ಚಂದ್ರರಿಗಿಂತ ಅತಿಶಯವಾದ ಆಹ್ಲಾದಜನಕ ಲಾವಣ್ಯಮೂರ್ತಿಯು ವಿಷ್ಣುವು. ದಶ-ಸಹಸ್ರ-ಲಕ್ಷ ಮೊದಲಾದ ಸಂಖ್ಯಾವಾಚಕ ಶಬ್ದಗಳು ಅನಂತಸಂಖ್ಯಾ-ವಾಚಕವೂ ಹೌದು.

(೩) ಗ್ರಂಥಮಾಹಾತ್ಮ್ಯೆಯನ್ನು ಮೊದಲಿಗೆ ಪಠನಮಾಡಿ ನಂತರ ಗ್ರಂಥ-ವನ್ನು ಆರಂಭಿಸುವುದರಿಂದ ಫಲಾಧಿಕ್ಯವುಂಟು — ಗೀತಾಪಾರಾಯಣಕ್ಕೆ ಮೊದಲು ಗೀತಾಮಾಹಾತ್ಮ್ಯೆಯನ್ನು ಹೇಳಿಕೊಳ್ಳಬೇಕಾದಂತೆ. ಆದ್ದರಿಂದ ಮೊದಲು ಗ್ರಂಥಮಹಾತ್ಮ್ಯೆಯನ್ನು, ಎಂದರೆ ಪ್ರತಿಪಾದ್ಯ ವಿಷಯವನ್ನೂ ಫಲವನ್ನೂ ನಿರೂಪಿಸಿರುವರು.

***ಮಂಗಳಾಚರಣೆ-೨***

### ಶ್ಲೋಕ ೨

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಗ್ರಂಥಮುದೀರಯೇತ್॥**

ಗ್ರಂಥಾರಂಭದಲ್ಲಿ ಶಿಷ್ಟಾಚಾರವನ್ನನುಸರಿಸಿ ಮಂಗಳವನ್ನಾಚರಿಸುತ್ತಾರೆ.

**ಅರ್ಥ:** ನಾರಾಯಣಂ—ನಾರಾಯಣನನ್ನೂ, ದೇವೀಂ—ಲಕ್ಷ್ಮೀದೇವಿ-ಯನ್ನೂ, ನರೋತ್ತಮಂ—ಜೀವೋತ್ತಮನಾದ ವಾಯುದೇವನನ್ನೂ (ಬ್ರಹ್ಮ-ನನ್ನೂ) ಸರಸ್ವತೀಂ—ಭಾರತಿಯನ್ನೂ (ಸರಸ್ವತಿಯನ್ನೂ), ನರಂ—ಶೇಷದೇವ-ನನ್ನೂ, ವ್ಯಾಸಂ ಚೈವ—ವೇದವ್ಯಾಸರನ್ನೂ, ನಮಸ್ಕೃತ್ಯ—ನಮಸ್ಕರಿಸಿ, ಗ್ರಂಥಂ—ಗ್ರಂಥವನ್ನು, ಉದೀರಯೇತ್—ಹೇಳತಕ್ಕದ್ದು.

**ವಿಶೇಷಾಂಶ:** (೧) ವೇದವ್ಯಾಸರು ಸರ್ವಶಾಸ್ತ್ರ ಪ್ರವರ್ತಕರು. ನಾರಾಯಣನ ಅವತಾರರು—ನಾರಾಯಣನಿಂದ ಅತ್ಯಂತ ಅಭಿನ್ನರು. ಶಾಸ್ತ್ರಗ್ರಂಥವನ್ನು ಆರಂಭಿಸುವ ಮೊದಲು ಶ್ರೀವೇದವ್ಯಾಸರನ್ನು ನಮಸ್ಕರಿಸಿಯೇ ತೀರಬೇಕೆಂದು ವಿಧಿ. (ಅವರು ಶಾಸ್ತ್ರಪ್ರವರ್ತಕರು ಮಾತ್ರವಲ್ಲ-ಶಾಸ್ತ್ರಪ್ರತಿಪಾದ್ಯರೂ) ಆಗಿದ್ದಾರೆ.

(೨) ತಾರತಮ್ಯಜ್ಞಾನಪೂರ್ವಕವಾಗಿಯೇ ನಾರಾಯಣನನ್ನು ನಮಸ್ಕರಿಸ-ಬೇಕು. ಆತನ ಪರಿವಾರದವರಾದ ಬ್ರಹ್ಮಾದಿ ದೇವತೆಗಳನ್ನೂ ವಂದಿಸಬೇಕು. **'ನರ'** ಶಬ್ದದಿಂದ, ಶೇಷದೇವರ ಸಮರಾದ ರುದ್ರ-ಗರುಡರನ್ನೂ ಗ್ರಹಿಸ-ಬೇಕು. ಈ ಪ್ರಧಾನದೇವತೆಗಳ ನಾಮಗಳಿಂದ ಇತರ ತತ್ವಾಭಿಮಾನಿ ದೇವತೆಗಳೂ ಸಂಗ್ರಹೀತರೆಂದು ತಿಳಿಯಬೇಕು.

(೩) ವ್ಯಾಸರನ್ನು **'ಕಶ್ಚನ ಋಷಿಃ'** ಎಂದರೆ ಅನೇಕ ಇತರ ಋಷಿಗಳ ಮಧ್ಯದಲ್ಲಿ ಯಾವನೋ ಒಬ್ಬ ಋಷಿಯೆಂದು ತಿಳಿಯುವ ಅಜ್ಞಾನಿಗಳ ಮಿಥ್ಯಾ ಜ್ಞಾನವನ್ನು ದೃಢಪಡಿಸಲಿಕ್ಕಾಗಿಯೇ, 'ವ್ಯಾಸಂ' ಎಂದು ಕಡೆಯಲ್ಲಿ (ದೇವತೆ-ಗಳ ನಂತರ) ನಮಸ್ಕರಿಸಲಾಗಿದೆಯೆಂದು ಬ್ರಹ್ಮಕಾಂಡ ಗರುಡಪುರಾಣದಲ್ಲಿ ಹೇಳಿದೆ. ***'ವಿಷ್ಣೋರ್ವಾಯೋರನಂತಸ್ಯ ತ್ರಿಭಿರಂಶೈರ್ನರಃಸ್ಮೃತಃ'*** (ಏಕಾದಶ ತಾತ್ಪರ್ಯ) ಎಂಬ ನರಶಬ್ದದ ವೈಶಿಷ್ಟ್ಯ ಪ್ರಯುಕ್ತ, ನರನ ನಂತರ ನರೋತ್ತಮ-ನೆಂದು ಹೇಳಿರುವರೆಂದು ತಿಳಿಯಬಹುದಾಗಿದೆ. ವಿಷ್ಣು, ವಾಯು ಮತ್ತು ಶೇಷದೇವ, ಹೀಗೆ ಮೂರು ಅಂಶಗಳಿಂದ ಯುಕ್ತವಾದುದು **'ನರ'** ನಾಮಕ ಅವತಾರವು. **'ನರ'** ಎಂಬುದು ಶೇಷದೇವನ ನಾಮವೂ ಆಗಿದೆ.

## ಪದ ೨

ರಾಗ-ಶುದ್ಧಗೌಳ; ತಾಳ-ರೂಪಕ

**ನರನೆಂದು ಶೇಷನ ಪೆಸರು ನಾರಾಯಣನ**
**ಮೆರೆವ ಮೂಲರೂಪವೆನಿಪ**
**ಗುರುವ್ಯಾಸ ನರೋತ್ತಮ ವಾಯು ದೇವಿ ಲಕುಮಿ**
**ಸರಸ್ವತಿಗ್ವೊಂದಿಸಿ ಗ್ರಂಥ ಒರೆವುದು ಗಡ** ॥೧॥

**ಅರ್ಥ:** ನರನೆಂದು ಶೇಷನ ಪೆಸರು—**'ನರ'** ಎಂಬುದು ಶೇಷದೇವನ ಹೆಸರು; ಮೆರೆವ—ಲೋಕದಲ್ಲಿ ವಿರಾಜಿಸುವ, ಮೂಲರೂಪವೆನಿಪ—ಮೂಲರೂಪದಿಂದ (ನಾರಾಯಣನಿಂದ) ಅಭಿನ್ನವೆನಿಸುವ, ಗುರುವ್ಯಾಸ—ಜಗದ್ಗುರುಗಳಾದ ವೇದವ್ಯಾಸರಿಗೆ, ನರೋತ್ತಮ ವಾಯು—ಜೀವೋತ್ತಮನಾದ ವಾಯುದೇವನಿಗೆ, ದೇವಿ ಲಕುಮಿ—**ದೇವೀ** ಎಂದು ಕರೆಯಲ್ಪಡುವ ಲಕ್ಷ್ಮೀದೇವಿಗೆ, ಸರಸ್ವತಿಗೆ—ಭಾರತೀದೇವಿಗೆ ಸಹ, ವಂದಿಸಿ—ನಮಸ್ಕರಿಸಿ, ಗ್ರಂಥ ಒರೆವುದು ಗಡ—ಗ್ರಂಥವನ್ನು ಹೇಳಬೇಕಷ್ಟೆ (ಗಡ—ಪ್ರಸಿದ್ಧವಿಧಿ).

**ಗ್ರಂಥವ ಮಾಡಿದ ವೇದವ್ಯಾಸ ಎಂಬ ಮು-**
**ನೀಂದ್ರರು ವೃಂದಾರಕರ ಗುರುವೆಂದೂ**
**ಇಂದಿರೇಶನೆಂಬ ಮೂಲರೂಪವಾದ**
**ಚಂದದ ಪೆಸರುಳ್ಳವನೆಂದು ವರ್ಣಿಸಿತು** ॥೨॥

**ಅರ್ಥ:** ಗ್ರಂಥವ ಮಾಡಿದ—ಗ್ರಂಥಕರ್ತರಾದ, **ವೇದವ್ಯಾಸ** ಎಂಬ ಮುನೀಂದ್ರರು—ವೇದವ್ಯಾಸಮುನಿಶ್ರೇಷ್ಠರು, ವೃಂದಾರಕರ—ದೇವತೆಗಳ, ಗುರುವೆಂದೂ—ಗುರುಗಳೆಂದೂ, ಮೂಲರೂಪವಾದ—ಮೂಲರೂಪವೇ (ನಾರಾಯಣನೇ) ಆದ, ಇಂದಿರೇಶನೆಂಬ—ಲಕ್ಷ್ಮೀಪತಿ ಎನ್ನುವ, ಚಂದದ ಪೆಸರುಳ್ಳವನೆಂದು—ಶುಭನಾಮವುಳ್ಳವನೆಂದು, ವರ್ಣಿಸಿತು—(ಮಂಗಳ-ಶ್ಲೋಕವು) ಸ್ಪಷ್ಟಗೊಳಿಸಿತು.

**ವಾಣಿಯ ಬಲಗೊಂಬೆ ಪ್ರಾಣನಾಥನ ಪಾದ-**
**ಕಾನೆರಗುವೆ ರಮೆಯಡಿಗೆ**
**ಆನಮಿಸುವೆ ಹಯವದನದೇವೋತ್ತಮನ**
**ಮಾನಸದೊಳಗಿಟ್ಟು ನೆನೆವೇ** ॥೩॥

**ಅರ್ಥ:** ವಾಣಿಯ—ಸರಸ್ವತಿಯ(ಭಾರತಿಯ), ಬಲಗೊಂಬೆ—ಆಶ್ರಯ-ಬಲವನ್ನು ಪ್ರಾರ್ಥಿಸುತ್ತೇನೆ, ಪ್ರಾಣನಾಥನ ಪಾದಕೆ—ಮುಖ್ಯಪ್ರಾಣನ (ವಾಯುದೇವರ) ಪಾದಗಳಿಗೆ, ಆನು ಎರಗುವೆ—ನಾನು ನಮಸ್ಕರಿಸುತ್ತೇನೆ; ರಮೆಯಡಿಗೆ—ಲಕ್ಷ್ಮೀದೇವಿಯ ಪಾದಗಳಿಗೆ, ಆನಮಿಸುವೆ—ಭಕ್ತಿಯಿಂದ ನಮಸ್ಕರಿಸುತ್ತೇನೆ; ಹಯವದನ ದೇವೋತ್ತಮನ—ಹಯಗ್ರೀವರೂಪಿ (ನನ್ನ

ಉಪಾಸ್ಯ) ಸರ್ವದೇವೋತ್ತಮನನ್ನು, ಮಾನಸದೊಳಗಿಟ್ಟು—ಮನಸ್ಸಿನಲ್ಲಿ ನಿಲ್ಲಿಸಿ, ನೆನೆವೇ—ಧ್ಯಾನಿಸುತ್ತೇನೆ (ನಿರಂತರವಾಗಿ ಸ್ಮರಿಸುತ್ತೇನೆ).

**ವಿಶೇಷಾಂಶ:** (೧) **ನರನು ಶೇಷದೇವನೇ** ಆದರೂ, ನಾರಾಯಣನ ಹಾಗೂ ವಾಯುದೇವನ ಅಂಶಗಳಿಂದ ಯುಕ್ತನಾದವನು.

(೨) ಅರ್ಜುನನು ಇಂದ್ರಾಂಶನಾದರೂ ನರಾವೇಶವುಳ್ಳವನು: ಎಂದರೆ, ನಾರಾಯಣ, ವಾಯು, ಶೇಷಾಂಶಗಳಿಂದ ಯುಕ್ತನಾದವನು.

(೩) ಬಲರಾಮ-ಲಕ್ಷ್ಮಣರು ಶೇಷಾಂಶರಾದರೂ, ನಾರಾಯಣ ಮತ್ತು ವಾಯ್ವಂಶಗಳಿಂದ ಯುಕ್ತರಾದವರು.

**'ವಿಷ್ಣೋರ್ವಾಯೋರನಂತಸ್ಯ ತ್ರಿಭಿರಂಶೈರ್ನರಃ ಸ್ಮೃತಃ।**
**ಸೇಂದ್ರೈಶ್ಚತುರ್ಭಿಃ ಪಾರ್ಥಸ್ತು ದ್ವಾಭ್ಯಾಂ ತು ಬಲಲಕ್ಷ್ಮಣೌ॥**

(೧) ಇತ್ಯಂಶವಿವೇಕೇ. ಈ ಏಕಾದಶಸ್ಕಂದ ತಾತ್ಪರ್ಯವಾಕ್ಯವು ಉಕ್ತ-ಪ್ರಮೇಯವನ್ನು ಸಮರ್ಥಿಸುತ್ತದೆ.

(೨) ನಾರಾಯಣನು ವೃಂದಾರಕರ (ಬ್ರಹ್ಮಾದಿ ದೇವತೆಗಳ) ಗುರುವೆಂದು ಹೇಳಿ, ಜ್ಞಾನಪ್ರದನಾದ್ದರಿಂದ ಪರಮಪೂಜ್ಯನೆಂದೂ, ಆ ಇಂದಿರೇಶನ ಸ್ತುತಿನಮಸ್ಕಾರಗಳೇ ಮಂಗಳವೆಂದೂ ಹೇಳಿರುವರು. ಮಂಗಳವೆಂಬುದು ಬೇರೊಂದುಂಟೇ?

***ಮಂಗಳಾಚರಣೆ-೩***

### ಶ್ಲೋಕ ೩-೪

**ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಯಃ।**
**ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್॥೩॥**

**ಅರ್ಥ:** ಅಹಂ—ನಾನು, ಲಕ್ಷ್ಮೀನಾರಾಯಣಂ—ರಮಾಸಹಿತನಾದ ನಾರಾಯಣನನ್ನು, ವಂದೇ—ನಮಸ್ಕರಿಸುತ್ತೇನೆ; ಯಃ—ಯಾವ, ಶ್ರೀಮದಾ-ನಂದತೀರ್ಥಾಖ್ಯಃ—ಶ್ರೀಮದಾನಂದತೀರ್ಥರೆಂಬ ಹೆಸರುಳ್ಳ, ಗುರುಃ—ಗುರುಗಳಾದ, ಹಿ—ಯಾವ ಕಾರಣದಿಂದ, ತದ್ಭಕ್ತಪ್ರವರಃ—ಲಕ್ಷ್ಮೀ-ನಾರಾಯಣರ ಭಕ್ತವರ್ಗದಲ್ಲಿ ಶ್ರೇಷ್ಠರೋ (ಆದ್ದರಿಂದ), ತಂ ಚ—ಅವರನ್ನೂ ಸಹ, ನಮಾಮಿ—ನಮಸ್ಕರಿಸುತ್ತೇನೆ.

**ಏತಾವತಾಲಂ ನನು ಸೂಚಿತೇನ**
**ಗುಣೈರಸಾಮ್ಯೇಽನತಿಶಾಯನೇಽಸ್ಯ।**

**ಹಿತ್ವೇತರಾನ್ ಪ್ರಾರ್ಥಯತೋ ವಿಭೂತಿಃ**
**ಯಸ್ಯಾಂಘ್ರಿರೇಣುಂ ಜುಷತೇऽನಭೀಪ್ಸೋಃ॥ ॥೪॥**

**ಅರ್ಥ:** ವಿಭೂತಿಃ—ಮಹಾಲಕ್ಷ್ಮಿಯು, ಪ್ರಾರ್ಥಯತಃ—(ತನ್ನನ್ನು) ಪ್ರಾರ್ಥಿಸುತ್ತಿರುವ, ಇತರಾನ್—ಅನ್ಯರೆಲ್ಲರನ್ನು, ಹಿತ್ವಾ—ಬಿಟ್ಟು, ಅನಭೀಪ್ಸೋಃ—(ತನ್ನನ್ನು) ಅಪೇಕ್ಷಿಸದಿರುವೆ, ಯಸ್ಯ—ಯಾವ ಶ್ರೀಹರಿಯ, ಅಂಘ್ರಿರೇಣುಂ—ಪಾದಧೂಳಿಯನ್ನು, ಜುಷತೇ—ಕಾಮಿಸಿ ಸೇವಿಸುತ್ತಾಳೆಂದು, ಏತಾವತಾ ಸೂಚಿತೇನ—ಇಷ್ಟು ಹೇಳುವುದರಿಂದ, ಅಸ್ಯ—ಈ ಶ್ರೀಹರಿಗೆ, ಗುಣೈಃ—(ಜ್ಞಾನ, ಆನಂದ, ಸ್ವಾತಂತ್ರ್ಯಾದಿ) ಗುಣಗಳಿಂದ, ಅಸಾಮ್ಯೇ—ಸಮರಹಿತನೆಂಬ ವಿಷಯದಲ್ಲಿ, ಅನತಿಶಾಯನೇ—ಅಧಿಕರಹಿತನೆಂಬಲ್ಲಿ ಸಹ, ಅಲಂ—ಸಾಕು (ಸಾಕಷ್ಟು ಜ್ಞಾಪಕವಾಗುತ್ತದೆ—ಅನ್ಯ ಸಾಧಕಪ್ರಮಾಣಗಳ ಅವಶ್ಯಕತೆಯಿಲ್ಲ).

**ಪದ ೩**

**ಮಿಕ್ಕ ದೇವರ್ಕಗಳ ಲೆಕ್ಕಿಸದೆ ಲಕುಮಿ ಮನ**
**ಉಕ್ಕಿಯವಗೆ ಮಾಲೆಯಿಕ್ಕಿದಳು**
**ಅಕ್ಕರದಿ ಲಕುಮಿನಾರಾಯಣರ್ಗೆರಗಿ ತ-**
**ದ್ಭಕ್ತ ಮಧ್ವಮುನಿಗೆ ಶರಣೆಂಬೆ ॥೧॥**

**ಅರ್ಥ:** ಮಿಕ್ಕ—(ಅಜಿತನಾಮಕ ಶ್ರೀಹರಿಯನ್ನುಳಿದು) ಇತರ, ದೇವರ್ಕಳ — ದೇವತೆಗಳನ್ನು, ಲೆಕ್ಕಿಸದೆ—ಉಪೇಕ್ಷಿಸಿ (ತ್ಯಜಿಸಿ), ಲಕುಮಿ—(ಕ್ಷೀರಸಾಗರೋದ್ಭವಳಾದ) ಲಕ್ಷ್ಮೀದೇವಿಯು, ಮನ ಉಕ್ಕಿಯೇ—ಅತ್ಯುತ್ಸಾಹದಿಂದಲೇ, ಅವಗೆ—ಆ ಶ್ರೀಹರಿಗೆ, ಮಾಲೆಯಿಕ್ಕಿದಳು—ಪದ್ಮಮಾಲೆಯನ್ನು ಅರ್ಪಿಸಿ ವರಿಸಿದಳು, ಲಕುಮಿ ನಾರಾಯಣರ್ಗೆ—ಈ ಲಕ್ಷ್ಮೀನಾರಾಯಣರಿಗೂ, ತದ್ಭಕ್ತ ಮಧ್ವಮುನಿಗೆ—ಅವರೀರ್ವರ ಶ್ರೇಷ್ಠ ಭಕ್ತರಾದ ಆನಂದತೀರ್ಥಮುನಿಗಳಿಗೆ, ಅಕ್ಕರದಿ—ಭಕ್ತಿಯಿಂದ, ಶರಣೆಂಬೆ—ಶರಣುಹೊಂದಿ ನಮಸ್ಕರಿಸುತ್ತೇನೆ.

**ವಿಶೇಷಾಂಶ:** (೧) ದೇವದೈತ್ಯರು ಸೇರಿ ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಮಥನಮಾಡಿದರು. ಮಥನದಿಂದ ಕ್ರಮವಾಗಿ ನಾನಾ ವಸ್ತುಗಳು ಉದ್ಭವಿಸಿದವು. ತಂತಮ್ಮ ಸ್ವಭಾವಕ್ಕೆ ಹಿಡಿಸುವ ವಸ್ತುಗಳನ್ನು ತೆಗೆದುಕೊಳ್ಳುತ್ತಾ

ಹೋದರು. ಮಥನದಿಂದ ಲಕ್ಷ್ಮಿಯೂ ಉದಯಿಸಿದಳು. ಆಕೆಯು, ತನ್ನನ್ನು ಅಪೇಕ್ಷಿಸಿದ ಸರ್ವರನ್ನೂ ಬಿಟ್ಟು, ದೇವತೆಗಳ ಪಂಗಡದಲ್ಲಿದ್ದ ನಿರಪೇಕ್ಷನಾದ ಶ್ರೀಹರಿಯನ್ನೇ ವರಿಸಿದಳು. ಶ್ರೀಹರಿಯು ಲಕ್ಷ್ಮೀದೇವಿಯ ಅನಾದಿ ನಿತ್ಯ-ಪತಿಯು. ಅಮೃತಮಥನಕಾಲದಲ್ಲಿ ಈಕೆ ನೂತನವಾಗಿ ಪತಿಯನ್ನು ಆರಿಸಿ-ಕೊಂಡದ್ದಲ್ಲ. ಆಕೆಯು ಶ್ರೀಹರಿಯನ್ನು ಅಗಲಿ ಕ್ಷಣಕಾಲವೂ ಇರದ **'ನಿತ್ಯಾ-ವಿಯೋಗಿನಿಯು'** ನೂತನ ಕನ್ಯೆಯಂತೆ ವಿಡಂಬನೆಮಾಡಿ, ಶ್ರೀಹರಿಯ ಸರ್ವೋತ್ತಮತ್ವವನ್ನು ಪ್ರಕಾಶಗೊಳಿಸಲು, ಅನ್ಯದೇವತೆಗಳ ದೋಷಗಳನ್ನು ಎತ್ತಿತೋರಿಸುತ್ತಾಳೆಂಬಂತೆ ವರ್ತಿಸುತ್ತಾಳೆ. ಈ ಪ್ರಸಂಗವನ್ನು **ಶ್ರೀಮದ್ಭಾಗ-ವತವು** ಹೀಗೆ ವರ್ಣಿಸುತ್ತದೆ:

*ನೂನಂ ತಪೋ ಯಸ್ಯ ನ ಮನ್ಯುನಿರ್ಜಯೋ*
*ಜ್ಞಾನಂ ಕ್ವಚಿತ್ತಸ್ಯ ನ ಸಂಗವರ್ಜಿತಮ್।*
*ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ*
*ಸ ಈಶ್ವರಃ ಕಿಂ ಪರತೋ ವ್ಯಪಾಶ್ರಯಃ॥*
*ಧರ್ಮಃ ಕ್ವಚಿತ್ತಸ್ಯ ನ ಭೂತಸೌಹೃದಂ*
*ತ್ಯಾಗಃ ಕ್ವಚಿತ್ತಸ್ಯ ನ ಮುಕ್ತಿಕಾರಣಮ್।*
*ವೀರ್ಯಂ ಚ ಪುಂಸೋಽಸ್ತ್ಯಜವೇಗನಿಷ್ಕೃತಂ*
*ನ ಹಿ ದ್ವಿತೀಯೋ ಗುಣಸಂಗವರ್ಜಿತಃ॥*
*ಕ್ವಚಿಚ್ಚಿರಾಯುರ್ನ ಚ ಶೀಲಮಂಗಳಂ*
*ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ।*
*ಯತ್ರೋಭಯಂ ಕುತ್ರ ಚ ಸೋಽಪ್ಯಮಂಗಳಃ*
*ಸುಮಂಗಳಃ ಕಶ್ಚನ ಕಾಂಕ್ಷತೇ ಹಿ ಮಾಮ್॥*
*ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣಂ*
*ಪದಂ ನಿಜೈಕಾಶ್ರಯಿ ಸದ್ಗುಣಾಶ್ರಯಮ್।*
*ವವ್ರೇ ಪರಂ ಸರ್ವಗುಣೈರಪೇಕ್ಷಿತಂ*
*ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್॥*

**ಭಾವಾರ್ಥ:** ತಪೋನಿಧಿಗಳಿದ್ದಾರೆ—ಕೋಪವನ್ನು ಜಯಿಸಿಲ್ಲ (ಅಂಬರೀಷ-ನಲ್ಲಿ ದೂರ್ವಾಸರ ಕೋಪ ಪ್ರಸಿದ್ಧವಿದೆ); ಜ್ಞಾನಿಗಳಿದ್ದಾರೆ—ವಿಷಯಸಂಗ ತಪ್ಪಿಲ್ಲ (ಶುಕ್ರ-ಬೃಹಸ್ಪತಿಗಳಂತೆ); ಇನ್ನೊಬ್ಬ ಮಹಾತ್ಮನಿದ್ದಾನೆ—ಕಾಮವನ್ನು ಜಯಿಸಿಲ್ಲ (ಸೃಷ್ಟಿಕರ್ತನೆಂದು ಕರೆಯಲ್ಪಡುವ ಚತುರ್ಮುಖ ಬ್ರಹ್ಮ—

ತನ್ನಿಂದಲೇ ಸೃಷ್ಟಳಾದ ಸರಸ್ವತಿಯನ್ನೇ ಕೂಡಿದನು); ಈಶ್ವರನಿದ್ದಾನೆ— ಅನ್ಯನನ್ನು ಆಶ್ರಯಿಸದೆ ಬದುಕುವುದೇ ಕಷ್ಟವಾಯಿತು (ಭಸ್ಮಾಸುರನಿಂದ ವಿಷ್ಣುವೇ ಉಳಿಸಬೇಕಾಯಿತು); ಇಂಥವನಲ್ಲಿ 'ಈಶ್ವರ' ಶಬ್ದವು ಹೇಗೆ ಕೂಡಬಹುದು? ಒಬ್ಬನು ಧರ್ಮಮೂರ್ತಿಯು— ಆದರೆ ನಿಷ್ಕರುಣಿಯು (ಯಮಧರ್ಮರಾಜ); ಒಬ್ಬನು ಮಹಾತ್ಯಾಗಿ (ಬಲಿಚಕ್ರವರ್ತಿ)— ಮುಕ್ತಿಯನ್ನು ಕೊಡುವ ಸಾಮರ್ಥ್ಯವಿದೆಯೇ? ತೇಜೋವೀರ್ಯಗಳುಳ್ಳವರೂ ಇರುವರು —ಆದರೆ ಕಾಲವೇಗದಿಂದ ನಿರ್ಜಿತರಾಗಿರುವರು (ಸೂರ್ಯಚಂದ್ರರು); ದೀರ್ಘಾಯುವಿದ್ದಾನೆ— ಸಾಧುಸ್ವಭಾವವಿಲ್ಲ (ಶೇಷದೇವನಂತೆ); ಸಾಧುಸ್ವಭಾವವಿದ್ದವರು ಅಲ್ಪಾಯುಗಳಾಗಿರುವರು (ರೈವತ ಮೊದಲಾದ ರಾಜರಂತೆ); ಸಾಧುತ್ವ— ಆಯುಷ್ಯಗಳೆರಡೂ ಇರುವವರಲ್ಲಿ ಅಂಥ ಸೌಂದರ್ಯವಿಲ್ಲ (ಮಾರ್ಕಂಡೇಯ ಋಷಿಯಂತೆ); ಐಶ್ವರ್ಯಸೌಂದರ್ಯಾದಿಗಳೆಲ್ಲ ಇದ್ದವರು ಅತಿಶಯಸಂಪದಾದಿಗಳನ್ನು ಕಾಮಿಸುತ್ತಾರೆ (ಇಂದ್ರಾದಿಗಳಂತೆ); ಪರಮಮಂಗಳಸ್ವರೂಪನಾಗಿ (ಪ್ರಾಕೃತಗುಣಸಂಗರಹಿತನಾಗಿ), ನಿತ್ಯಾನಂದ, ಜ್ಞಾನ, ಶೌರ್ಯ, ಸೌಂದರ್ಯಾದಿ ಅನಂತಗುಣಪೂರ್ಣನಾಗಿದ್ದು ನನ್ನನ್ನೂ, ನನ್ನಿಂದ ಅಭಿಮನ್ಯಮಾನಗಳಾದ (ನನ್ನ ಪ್ರಸಾದಾಧೀನವಾದ) ಸಂಪದಾದಿಗಳನ್ನೂ ಎಂದೂ ಅಪೇಕ್ಷಿಸದವನು ಶ್ರೀಹರಿಯೊಬ್ಬನೇ. ಆತನೇ ನನ್ನ ಪೂರ್ಣಾನಂದಕ್ಕೆ ಕಾರಣನಾದವನೆಂದು, ವಿಮರ್ಶೆಯಿಂದ ನಿಶ್ಚಯಿಸಿ, ಶ್ರೀಲಕ್ಷ್ಮೀದೇವಿಯು, ಸದ್ಗುಣಪೂರ್ಣನೂ, ನಿರಪೇಕ್ಷನೂ, ಮುಕ್ತಿಪ್ರದನೂ, ಮುಕ್ತನಿಯಾಮಕನೂ ಆದ ಶ್ರೀಹರಿಯ ಕಂಠದಲ್ಲಿ ಮಾಲೆಯನ್ನರ್ಪಿಸಿ ಪಕ್ಕದಲ್ಲಿ ನಿಂತಳು. ***'ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ'*** ಎಂಬಲ್ಲಿ **'ಮಹಾನ್'** ಎಂಬ ಶಬ್ದವು ಮಹತ್ತತ್ವಕ್ಕೆ ಅಭಿಮಾನಿಯಾದ ಬ್ರಹ್ಮನನ್ನು, ನಿರ್ದೋಷಿಯಾದರೂ 'ಕಾಮ' ಶಬ್ದದಿಂದ ಉಪಲಕ್ಷಿತವಾದ ಪ್ರಾಕೃತದೇಹವು ದಗ್ಧಪಟದಂತಿದ್ದರೂ ಲಿಂಗದೇಹವುಳ್ಳವನಾದ್ದರಿಂದ ದೋಷಸ್ಪರ್ಶವುಳ್ಳವನೆಂಬರ್ಥವನ್ನೂ ಸೂಚಿಸುತ್ತದೆ. ತನ್ನ ನಿಯತಭಾರ್ಯಳಾದ ಸರಸ್ವತಿಯನ್ನೇ ಇಚ್ಛಿಸಿದುದೂ ಸತ್ಯವೇ. ಶ್ರೀಹರಿಯು ಹೀಗೆ ಸಹ ಲಕ್ಷ್ಮೀದೇವಿಯನ್ನು ಇಚ್ಛಿಸುವುದಿಲ್ಲವೆಂಬ ವೈಲಕ್ಷಣ್ಯವನ್ನು ತಿಳಿಯಬೇಕು.

### ಶ್ರುತಿ ೧

*ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ।*
*ಯದೀಮನುಪ್ರದಿವೋ ಮಧ್ವ ಆಧವೇ ಗುಹಾಸಂತಂ ಮಾತರಿಶ್ವಾ ಮಥಾಯತಿ॥*

ಈ ಶ್ರುತಿಯು ಬಳಿತ್ಥಾಸೂಕ್ತದ ಒಂದು ಭಾಗ. ಈ ಸೂಕ್ತದ ಇತರ ಭಾಗಗಳ ಅರ್ಥವೂ ಮುಂದಿನ ಪದಗಳಲ್ಲಿ ಪ್ರಸಕ್ತವಾಗುವುದರಿಂದ ಪೂರ್ತಿ ಸೂಕ್ತವನ್ನು ಉಲ್ಲೇಖಿಸಿ ಪದಶಃ ಅರ್ಥವನ್ನು, ವಾಚಕರ ಅವಗಾಹನೆಗಾಗಿ ಕೊಡಲಾಗಿದೆ.

## ಬಳಿತ್ಥಾಸೂಕ್ತದ ಋಕ್ಕುಗಳು

*ಬಳಿತ್ಥಾ ತದ್ವಪುಷೇಽಧಾಯಿ ದರ್ಶತಂ*
*ದೇವಸ್ಯ ಭರ್ಗಃ ಸಹಸೋ ಯತೋಽಜನಿ।*
*ಯದೀಮುಪಹ್ವರತೇ ಸಾಧತೇ ಮತಿ-*
*ರ್ಋತಸ್ಯ ಧೇನಾ ಅನಯಂತ ಸಸ್ರತಃ॥* (೧)

*ಪೃಕ್ಷೋ ವಪುಃ ಪಿತುಮಾನ್ನಿತ್ಯ ಆಶಯೇ*
*ದ್ವಿತೀಯಮಾ ಸಪ್ತ ಶಿವಾಸು ಮಾತೃಷು।*
*ತೃತೀಯಮಸ್ಯ ವೃಷಭಸ್ಯ ದೋಹಸೇ*
*ದಶಪ್ರಮತಿಂ ಜನಯಂತ ಯೋಷಣಃ॥* (೨)

*ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ*
*ಈಶಾನಾಸಃ ಶವಸಾಕ್ರಂತ ಸೂರಯಃ।*
*ಯದೀಮನುಪ್ರದಿವೋ ಮಧ್ವ ಆಧವೇ*
*ಗುಹಾಸಂತಂ ಮಾತರಿಶ್ವಾಮಥಾಯತಿ॥* (೩)

*ಪ್ರಯತ್ಪಿತುಃ ಪರಮಾನ್ನೀಯತೇ ಪರ್ಯಾ-*
*ಪೃಕ್ಷುಧೋ ವೀರುಧೋ ದಂಸು ರೋಹತಿ।*
*ಉಭಾ ಯದಸ್ಯ ಜನುಷಂ ಯದಿನ್ವತ*
*ಆದಿದ್ಯವಿಷ್ಠೋ ಅಭವದ್ಘೃಣಾ ಶುಚಿಃ॥* (೪)

*ಆದಿನ್ಮಾತ್ರೄರಾವಿಶದ್ಯಾಸ್ವಾಶುಚಿರ*
*ಹಿಂಸ್ಯಮಾನ ಉರ್ವಿಯಾ ವಿವಾವೃಧೇ।*
*ಅನುಯತ್ಪೂರ್ವಾ ಆರುಹತ್ಸನಾಜುವೋ*
*ನಿನವ್ಯಸೀಷ್ವರಾಸು ಧಾವತೇ॥* (೫)

**ಅರ್ಥ:** ಸಹಸಃ — ಶತ್ರುವೇಗಸಹನಸಮರ್ಥನಾದ, ದೇವಸ್ಯ — ವಾಯುದೇವರ, ತತ್ — ಆ ಮೂಲರೂಪವು, ಬಟ್ — ಬಲಾತ್ಮಕವಾದುದು; ದರ್ಶತಂ — ಜ್ಞಾನರೂಪವಾದುದು; ಯತಃ — ಯಾವ ಮೂಲರೂಪದಿಂದ,

ವಪುಷೇ—ಅವತಾರರೂಪಕ್ಕಾಗಿ, ಇತ್ಥಮೇವ—ಈ ಪ್ರಕಾರವಾಗಿಯೇ (ಜ್ಞಾನ-ಬಲಾತ್ಮಕವಾಗಿಯೇ), ಅಧಾಯಿ—ಧರಿಸಲ್ಪಟ್ಟಿತೋ (ಮೂಲರೂಪ-ದಂತೆಯೇ ಇರುವ ಅವತಾರರೂಪವು ಯಾರಿಂದ ಹೊಂದಲ್ಪಟ್ಟಿತೋ), ತಸ್ಯ—ಆ ವಾಯುದೇವರ, ಭರ್ಗಃ—ಭರಣ, ಗಮನಗಳನ್ನು ನಿರ್ವಹಿಸುವ, ಯತ್ ಈಂ-ಯಾವುದೇ ಆದ, ಮತಿಃ—ಹನುಮಂತನೆಂಬ ಪ್ರಥಮ-ರೂಪವು, ಋತಸ್ಯ—ಯಥಾರ್ಥಜ್ಞಾನರೂಪನಾದ, (ಹೀಗೆಂದು ಸದಾ ಏಕ-ಪ್ರಕಾರನಾಗಿ ತಿಳಿಯಲ್ಪಟ್ಟ) ಶ್ರೀರಾಮನ, ಉಪ—ಸಮೀಪದಲ್ಲಿ, ಹ್ವರತೇ—ಸರ್ವದಾ ಇರುವುದು; ಸಸ್ರತಃ—ಅಮೃತವನ್ನು ಸ್ರವಿಸುವ, ಧೇನಾಃ—ಆ ರಾಮನ ವಾಕ್ಯಗಳನ್ನು, ಸಾಧತೇ—ಸಾಧಿಸುತ್ತದೆ; (ಋತಸ್ಯ ಸಸ್ರತಃ ಧೇನಾಃ—ಋತರೂಪನಾದ—ಸತ್ಯರೂಪನಾದ ಶ್ರೀರಾಮನನ್ನು ಪ್ರತಿಪಾದಿ-ಸುವ ಅಮೃತಸದೃಶವಾದ ಮೂಲರಾಮಾಯಣದ ವಾಕ್ಯಗಳನ್ನು) ಅನಯಂತ —(ರಾಮಭಕ್ತರಿಗೆ) ಮುಟ್ಟಿಸಿತು (ಉಪದೇಶಿಸಿತು) ಅಥವಾ ಶ್ರೀರಾಮನ ಸಂದೇಶವೆಂಬ ಅಮೃತದಂತಿರುವ ವಾಕ್ಯಗಳನ್ನು ಸೀತೆಗೆ ಮುಟ್ಟಿಸಿತು. ॥೧॥

ಅಸ್ಯ—ಈ, ವೃಷಭಸ್ಯ—ಭಕ್ತಾಭೀಷ್ಟವನ್ನು ವರ್ಷಿಸುವ (ಮಳೆಗರೆಯುವ) ಅಥವಾ ಭಕ್ತರಲ್ಲಿ ಅನುರಾಗವುಳ್ಳ ಅಥವಾ ಭಕ್ತಪ್ರವರನಾದ ಅಥವಾ ಬಹು-ಶಕ್ತಿಸಂಪನ್ನನಾದ (ವೃಷ ಸೇಚನೇ—ವೃಷ ಸ್ನೇಹೇ—ವೃಷ ಶಕ್ತ್ಯತಿಶಯೇ ಎಂಬ ಧಾತ್ವರ್ಥಗಳಿದ್ದು, ಈ ಎಲ್ಲ ಅರ್ಥಗಳೂ ಕೂಡುತ್ತವೆ) ವಾಯುದೇವರ ದ್ವಿತೀಯಂ ವಪುಃ—ಎರಡನೆಯ ರೂಪವು, ಸಪ್ತ—ಏಳು, ಆಶಿವಾಸು—ಪರಮ ಮಂಗಳಪ್ರದಗಳಾದ, ಮಾತೃಷು-ಋಗಾದಿ ಪ್ರಮಾಣಗಳಲ್ಲಿ, ನಿತ್ಯಃ — ಸದಾ, ಶಯೇ—ಶಯನಮಾಡುತ್ತದೆ (ಚೆನ್ನಾಗಿ ಆಸಕ್ತವಾಗಿರುತ್ತದೆ). ಹೀಗೆ ಶಾಸ್ತ್ರ ಮನನದಲ್ಲಿ ನಿರತವಾದರೂ (ಶಾಸ್ತ್ರೋದಿತ ಶ್ರೀಹರಿಗುಣ-ಧ್ಯಾನದಲ್ಲಿ ಮಗ್ನವಾದರೂ), ಪೃಕ್ಷಃ—ಬಹುಸೈನ್ಯಗಳನ್ನು ನಾಶಗೊಳಿಸತಕ್ಕದ್ದು; ಪಿತುಮಾನ್-ಬಹ್ವನ್ನ ಭೋಗವುಳ್ಳದ್ದು; ಅಸ್ಯ ವೃಷಭಸ್ಯ—ಈ ದೇವಶ್ರೇಷ್ಠನ, ದಶಪ್ರಮತಿಂ—ಪೂರ್ಣಪ್ರಜ್ಞವೆಂಬ ನಾಮವುಳ್ಳ, ತೃತೀಯಂ ವಪುಃ—ಮೂರನೇ ರೂಪವನ್ನು, ದೋಹಸೇ—ಜ್ಞಾನದೋಹನಕ್ಕಾಗಿ (ಹಸುವು ಹಾಲು ಕರೆಯುವಂತೆ ಜ್ಞಾನವೆಂಬ ಅಮೃತವನ್ನು ಕರೆಯಲಿಕ್ಕಾಗಿ ಭಕ್ತರು ಕರೆದುಕೊಳ್ಳ-ಲಿಕ್ಕಾಗಿ), ಯೋಷಣಃ—ಸ್ತ್ರೀಯರು (ಗುರುವಿನ ತಾಯಿಯಾದ್ದರಿಂದ ಬಹು-ವಚನವು), ಜನಯಂತ—ಪ್ರಸವಿಸಿದರು—ಹಡೆದರು. (ಲೋಕಮಾತೆಯಾದ

ಶ್ರೀಭೂದುರ್ಗಾರೂಪಗಳುಳ್ಳ ಶ್ರೀಲಕ್ಷ್ಮೀದೇವಿಯೇ ಹುಟ್ಟಿಸಿದಳು—ಋಗಾದಿ ವೇದಾಭಿಮಾನಿ ಶ್ರೀಭೂದುರ್ಗೆಯರು ವೇದಗಳ ಅಪವ್ಯಾಖ್ಯಾನವನ್ನು ದೂರೀ-ಕರಿಸಿ ಸಜ್ಜನರಿಗೆ ಸರಿಯಾದ ಅರ್ಥವಿಶೇಷಗಳನ್ನು ತಿಳಿಸುವ ವ್ಯಾಖ್ಯಾನ ರಚನೆಗಾಗಿ ಮಧ್ಯಗೇಹರೆಂಬ ವಿಪ್ರರ ಪತ್ನಿಯ ಉದರದಲ್ಲಿ ಸನ್ನಿಹಿತರಾಗಿ ಹುಟ್ಟಿಸಿದರು—(ಶಿಶುದೇಹದಲ್ಲಿ ವಾಯುದೇವರನ್ನು ಪ್ರವೇಶಗೊಳಿಸಿದರೆಂಬ ಅರ್ಥವೂ ಇಲ್ಲಿ ಸೂಚಿತವಾಗಿದೆ). ॥೨॥

ಬುಧ್ನಾತ್—ಸರ್ವಜ್ಞರಾದ (ಭಕ್ತಾಗ್ರೇಸರರಾದ) ಈ ಪೂರ್ಣಪ್ರಜ್ಞಾ-ಚಾರ್ಯರಿಂದಲೇ, ಮಹಿಷಸ್ಯ—ಪರಮಪೂಜ್ಯನಾದ ಶ್ರೀಹರಿಯ, ವರ್ಪಸಃ—ವರಣೀಯ ಗುಣಗಳನ್ನು, ಈಶಾನಾಸಃ—ರುದ್ರಾದಿ ದೇವತೆಗಳು, ಸೂರಯಃ—ಇತರ ಎಲ್ಲ ಜ್ಞಾನಿಗಳೂ, ಶವಸಾ—ಸುಖದಿಂದ (ಸುಲಭ-ವಾಗಿ), ನಿಃ—ಅತಿಶಯವಾಗಿ, ಕ್ರಂತ—ತಿಳಿದವರಾದರು; ಯತ್ ಈಂ—ಯಾವ ಈ, ಪ್ರದಿವಃ—ಪ್ರಕಾಶಾದಿ ರೂಪರಾದ, ಮಧ್ವಃ—ಆನಂದತೀರ್ಥ ರೆಂಬ, ಮಾತರಿಶ್ವಾ—ವಾಯುದೇವರೇ (ಮಾತರಿ+ಶ್ವಯತಿ—ಋಗಾದಿ-ಪ್ರಮಾಣಗಳಲ್ಲಿ ಸದಾ ಗತಿಯುಳ್ಳವರು), ಗುಹಾಸಂತಂ—(ಕಲಿಯುಗದಲ್ಲಿ ದುರ್ವಾದಿಗಳಿಂದ) ಗೂಹನಮಾಡಲ್ಪಟ್ಟ ಶ್ರೀಹರಿಯನ್ನು, ಅನು—ಶಾಸ್ತ್ರಾನು-ಸಾರವಾಗಿ, ಆಧವೇ—ಸರ್ವಾಧಿಪತಿಯೆಂದು (ಆ-ಸಮಂತಾತ್—ಸಂಶಯ-ವಿಲ್ಲದಂತೆ, ಧವೇ—ಪತಿತ್ವವಿಷಯದಲ್ಲಿ), ಮಥಾಯತಿ—ವಿಚಾರದಿಂದ ನಿಶ್ಚಯಿಸುತ್ತಾರೆ (ಶಾಸ್ತ್ರಮಥನದಿಂದ ನಿರ್ಣಯಿಸುತ್ತಾರೆ). ॥೩॥

ಯತ್—ಯಾವ ರೂಪತ್ರಯವು, ಪರಮಾತ್—ಸರ್ವೋತ್ತಮನಾದ, ಪಿತುಃ—ತಂದೆಯಾದ ಶ್ರೀನಾರಾಯಣನಿಂದ, ನೀಯತೇ—ಚೆನ್ನಾಗಿ ಪ್ರೇರೇಪಿ-ಸಲ್ಪಡುವುದೋ, ಪೃಕ್ಷುಧಃ—ಪ್ರಶ್ನೆಗಳನ್ನು, ವೀರುಧಃ—(ಇವ)—ಚಿಗುರು ಬಳ್ಳಿಗಳಂತೆ, ದಂಸು—ಹಲ್ಲುಗಳಲ್ಲಿ, ಪರ್ಯಾರೋಹತಿ—ಅಗಿದು ಪುಡಿಮಾಡು-ವುದೋ (ತುಂಡುಮಾಡುತ್ತದೆ—ಖಂಡಿಸುತ್ತದೆ); ಅಸ್ಯ—ಈ ವಾಯುದೇವರ, ಯತ್ ಜನುಷಂ—ಯಾವ ಜನ್ಮವನ್ನು, ಉಭಾ—ಇಬ್ಬರೂ (ರಮಾ-ನಾರಾಯಣರು), ಯತ್—ಯಾವ ಕಾರಣದಿಂದ, ಇನ್ವತಃ—ಪ್ರೇರೇಪಿಸು-ವರೋ, ಆತ್ ಇತ್—ಈ ಕಾರಣದಿಂದ, (ಇವರಿಬ್ಬರ) ಘೃಣಾ—ದಯೆ-ಯಿಂದ, ಶುಚಿಃ-ಪವಿತ್ರರಾದ ವಾಯುದೇವರು, ಯವಿಷ್ಠಃ—ಶ್ರೇಷ್ಠರು, ಅಭವತ್—ಆದರು ॥೪॥

ಆತ್ ಇತ್—ಈ ರಮಾನಾರಾಯಣರ ಪ್ರಸಾದದಿಂದಲೇ, ಮಾತೄಃ—(ಅಂಜನಾ, ಕುಂತೀ, ವೇದವತೀ ನಾಮಕರಾದ ತಮ್ಮ ಅವತಾರತ್ರಯದ) ತಾಯಂದಿರನ್ನು, ಆವಿಶತ್—ಪ್ರವೇಶಿಸಿದರು; ಯಾಸು—ಯಾವ ತಾಯಂದಿರಲ್ಲಿ, ಆ—ಚೆನ್ನಾಗಿ, ಶುಚಿಃ—ಶುದ್ಧನಾಗಿಯೇ, ಅಹಿಂಸ್ಯಮಾನಃ—ಹಿಂಸೆಯಿಲ್ಲದೇ (ಗರ್ಭವಾಸದುಃಖರಹಿತನಾಗಿ), ಉರ್ವಿಯಾ—ಉತ್ಕೃಷ್ಟಪ್ರಕಾರದಿಂದ, ವಿವಾವೃಧೇ—ವೃದ್ಧಿ ಹೊಂದಿದರು; ಅಥವಾ, ಯಾಸು—ಯಾವ ವಿದ್ಯೆಗಳಲ್ಲಿ, ಆಶುಚಿಃ—ಶುದ್ಧವಾದ (ಸಂಶಯಾದಿರಹಿತ) ಜ್ಞಾನವುಳ್ಳವರಾಗಿ ಅಹಿಂಸ್ಯಮಾನಃ—ಪೂರ್ವ ಪಕ್ಷಗಳು ಆಶ್ರಯಿಸುವ ಪ್ರಮಾಣಾಭಾಸಗಳಿಂದ ಕಷ್ಟಕ್ಕೊಳಗಾಗದೆ (ಲೀಲೆಯಿಂದ ಖಂಡಿಸಿ), ವಿವಾವೃಧೇ—ಜಯಶಾಲಿಗಳಾದರು; ಸನಾಜುವಃ—ಸನಾತನಗಳಾದ (ಅನಾದಿ ನಿತ್ಯಗಳಾದ) ಅಥವಾ ಸನಾತನವಾದ ಭಗವಂತನನ್ನು ಪ್ರತಿಪಾದಿಸುವ ಋಗಾದಿ ಅಪೌರುಷೇಯ ವಾಕ್ಯಗಳನ್ನು, ಅನು—ಉಪಕ್ರಮಾದಿ ತಾತ್ಪರ್ಯಲಿಂಗಗಳನ್ನು ಅನುಸರಿಸಿ, ಆರುಹತ್—ತಮ್ಮ ವ್ಯಾಖ್ಯಾನಗಳಿಂದ (ಪದವಾಕ್ಯಗಳ ಅರ್ಥವಿಶೇಷಗಳನ್ನು ಸಾವಧಾನದಿಂದ) ಪ್ರತಿಪಾದಿಸಿದರು; ನಿ—ಸ್ಪಷ್ಟವಾದ, ನವ್ಯಸೀಷು—ನೂತನಗಳಾದ, ಅವರಾಸು—ಕೆಳಗಿನವುಗಳಾದ (ಪೌರುಷೇಯಗಳಾದ ಭಾರತಭಾಗವತಾದಿಗಳಲ್ಲಿ), ವಿಧಾವತೇ—ಧಾವಿಸುತ್ತಾರೆ (ಕೇವಲ ತಾತ್ಪರ್ಯಾರ್ಥಗಳನ್ನು ನಿರೂಪಿಸಿ ವ್ಯಾಖ್ಯಾನಮಾಡುತ್ತಾರೆ).

(ಸೂಚನೆ: ವಾಯುಪರವಾದ ಸ್ಪಷ್ಟಾರ್ಥಗಳನ್ನು, ಶ್ರೀವಾದಿರಾಜರಿಂದ ರಚಿತವಾದ **ಭಾವಪ್ರಕಾಶಿಕೆ** ಎಂಬ ತಾತ್ಪರ್ಯನಿರ್ಣಯವ್ಯಾಖ್ಯಾನಕ್ಕನುಸಾರವಾಗಿ, ಇಲ್ಲಿ ಬರೆಯಲಾಗಿದೆ. ಈ ಸೂಕ್ತಕ್ಕೆ, ಎಲ್ಲ ವೇದಗಳಿಗೂ ಇರುವಂತೆ, ಭಗವತ್ಪರವಾದ ಅರ್ಥವೂ ಇರುವುದೆಂಬುದನ್ನು ಮರೆಯಲಾಗದು).

**ಪದ ೪**

ರಾಗ-ಸೌರಾಷ್ಟ್ರ; ತಾಳ-ಅಟ

**ಸಿರಿಭೂಮಿದುರ್ಗೆಯರು ಜ್ಞಾನಾಮೃತವ ಕರೆವರೆ**
**ಗುರುಪೂರ್ಣಪ್ರಜ್ಞರ ಪುಟ್ಟಿಸಿದರು ಗಡ**
**ನರಲೋಕದ ನಾರಿಗೆ ಇವನ ಹೆರುವ ಭಾಗ್ಯ**
**ದೊರಕದೆಂದು ಶ್ರುತಿ ಯೋಷಣವೆಂದಿತು** ||೧||

**ಅರ್ಥ:** ಸಿರಿಭೂಮಿದುರ್ಗೆಯರು—ಶ್ರೀ-ಭೂ-ದುರ್ಗಾರೂಪವುಳ್ಳ ಲಕ್ಷ್ಮೀದೇವಿಯು (ಪ್ರಸಿದ್ಧ ತ್ರಿರೂಪಗಳಿಂದ ಬಹುವಚನ), ಜ್ಞಾನಾಮೃತವ—ಜ್ಞಾನರೂಪದ ಅಮೃತವನ್ನು ಕರೆವರೆ—ಕರೆಯಲಿಕ್ಕಾಗಿ, (ಹಿಂಡುವುದಕ್ಕಾಗಿ, ದೋಹಸೇ), ಗುರುಪೂರ್ಣಪ್ರಜ್ಞರ—ಗುರುಗಳಾದ ಪೂರ್ಣಪ್ರಜ್ಞರನ್ನು, ಪುಟ್ಟಿಸಿದರು ಗಡ—ಹುಟ್ಟಿಸಿದರೆಂಬುದು ಶ್ರುತಿಪ್ರಸಿದ್ಧವು; ನರಲೋಕದ ನಾರಿಗೆ—ಸಾಮಾನ್ಯ ಮನುಷ್ಯಸ್ತ್ರೀಗೆ (ಮಧ್ಯಗೇಹಭಟ್ಟರ ಹೆಂಡತಿಯಾದ ವೇದವತಿಗೆ), ಇವನ—ಶ್ರೀಮಧ್ವಾಚಾರ್ಯರನ್ನು, ಹೆರುವ ಭಾಗ್ಯ—ಪ್ರಸವಿಸುವುದರ ಮಹಾಪುಣ್ಯವು, ದೊರಕದೆಂದು—ದಕ್ಕದೆಂದು (ಪೂರ್ಣಪುಣ್ಯಕ್ಕೆ ಅಧಿಕಾರಿಣಿಯಲ್ಲವೆಂಬುದನ್ನು ಸೂಚಿಸಲಿಕ್ಕಾಗಿ), ಶ್ರುತಿಯು—ವೇದವು (ಬಳಿತ್ಥಾಸೂಕ್ತವು), **ಯೋಷಣ**ವೆಂದಿತು—ಸ್ತ್ರೀಯರೆಂದು (ಲಕ್ಷ್ಮೀರೂಪತ್ರಯಗಳೆಂದು) ಹೇಳಿತು.

**ದಶಮತಿಯೆಂಬ ಪೆಸರೆಮ್ಮ ಗುರುವರಗುಂಟು**
**ದೇಶದೇಶಂಗಳಲಿ ಪ್ರಸಿದ್ಧ ಕಾಣಿರೋ।**
**ಎಸೆವ ಈ ನಾಮ ಅನಿಮಿಷರೊಳೊಬ್ಬಗಿಲ್ಲ**
**ಋಷಿಗಿಲ್ಲ ಮಾನಸರೊಳಿಲ್ಲ ನಾಮಫಲಬಲದಿಂದೆಮ್ಮ**
**ಗುರುವಿಗಿದು ಧರ್ಮ ॥೨॥**

**ಅರ್ಥ:** ದಶಮತಿ ಎಂಬ ಪೆಸರು—'ದಶಮತಿ' (ಪೂರ್ಣಪ್ರಜ್ಞ) ಎಂಬ ಹೆಸರು, ಎಮ್ಮ ಗುರುವರಗೆ—ನಮ್ಮ ಗುರುಶ್ರೇಷ್ಠರಿಗೆ, ಉಂಟು—ಇದೆ; ದೇಶದೇಶಂಗಳಲಿ—ಸರ್ವತ್ರ, ಪ್ರಸಿದ್ಧ ಕಾಣಿರೋ—ಪ್ರಸಿದ್ಧವೆಂದು ನಿಮಗೆಲ್ಲ ತಿಳಿದಿದೆ; ಎಸೆವ—ಶುಭವಾದ (ರಾರಾಜಿಸುವ), ಈ ನಾಮ—ಈ ಹೆಸರು, ಅನಿಮಿಷರೊಳು—ದೇವತೆಗಳಲ್ಲಿ, ಒಬ್ಬಗಿಲ್ಲ—ಯಾರೊಬ್ಬನಿಗೂ ಇಲ್ಲ; ಋಷಿಗಿಲ್ಲ—ಯಾವ ಋಷಿಗೂ ಇಲ್ಲ, ಮಾನಸರೊಳಿಲ್ಲ—ಮನುಷ್ಯರಲ್ಲಿಲ್ಲ; ನಾಮಫಲಬಲದಿಂದ-ನಾಮದ ಅರ್ಥಬಲದಿಂದ (ಶಬ್ದದ ಶಕ್ತ್ಯರ್ಥದಿಂದ), ಎಮ್ಮ ಗುರುವಿಗೆ—ನಮ್ಮ ಗುರುಗಳಿಗೆ (ಶ್ರೀಪೂರ್ಣಪ್ರಜ್ಞರಿಗೆ), ಇದು ಧರ್ಮ —ಈ ಸರ್ವಜ್ಞತ್ವವು ಸ್ವಭಾವಲಕ್ಷಣವಾಗಿದೆ ('ದಶಮತಿ' ಎಂಬುದು ಅನ್ವರ್ಥನಾಮವಾಗಿದೆ).

**ಪೂರ್ಣಪ್ರಜ್ಞರೆಂಬ ನಾಮ ನಮ್ಮ ಗುರುವರಗುಂಟು**
**ಉನ್ನತೋಪನಿಷತ್ತು ಸರ್ವವೆಂಬ ಶಬ್ದಕ್ಕೆ।**

**ಪೂರ್ಣವೆಂಬರ್ಥವ ಪೇಳಿತಾಗಿ ದಶಮತಿಯೆಂಬ**
**ಧನ್ಯನಾಮ ಪೇಳ್ವದೆ ಮಧ್ವಮುನಿಗಲ್ಲದೆ**
**ಉತ್ತರೋತ್ತರನೊಲ್ಲದೆ ಪೂರ್ವೋಕ್ತಿಯ ಪೇಳ್ವದೆ** ॥೩॥

**ಅರ್ಥ**: ಪೂರ್ಣಪ್ರಜ್ಞರೆಂಬ, ನಾಮ—ಹೆಸರು, ನಮ್ಮ ಗುರುವರಗೆ, ಉಂಟು—ಇದೆ, ಉನ್ನತೋಪನಿಷತ್ತು—ಶ್ರೇಷ್ಠವಾದ ಐತರೇಯೋಪನಿಷತ್ತು, **ಸರ್ವ**-ವೆಂಬ ಶಬ್ದಕ್ಕೆ, ಪೂರ್ಣವೆಂಬರ್ಥವ—**'ಪೂರ್ಣ'** ಎಂಬ ಅರ್ಥವನ್ನು ಪೇಳಿ-ತಾಗಿ—ಹೇಳಿರುವುದರಿಂದ, ದಶಮತಿಯೆಂಬ—(**ದಶ** ಎಂದರೆ ಸರ್ವ, ಸರ್ವ ಎಂದರೆ ಪೂರ್ಣ, **ಮತಿ** ಎಂದರೆ ಪ್ರಜ್ಞೆ) **ದಶಮತಿ** ಎಂಬುವ, ಧನ್ಯನಾಮ—ಮಂಗಳಕರ ನಾಮವನ್ನು (ಕೃತಕೃತ್ಯರನ್ನಾಗಿ ಮಾಡುವ ನಾಮ-ವನ್ನು), ಮಧ್ವಮುನಿಗಲ್ಲದೆ—(ಪೂರ್ಣಪ್ರಜ್ಞರೆಂದು ಪ್ರಸಿದ್ಧರಾದ) ಮಧ್ವ-ಮುನಿಗಳಿಗಲ್ಲದೇ, ಪೇಳ್ವದೆ—ಇತರರಿಗೆ ಹೇಳುವುದೇ? (ಇಲ್ಲ); ಉತ್ತರೋ-ತ್ತರನ ಒಲ್ಲದೆ—ಮೇಲಿನ ಮಟ್ಟದವರನ್ನು ಬಿಟ್ಟು, ಪೂರ್ವೋಕ್ತಿಯ—ಮೊದಲಿನ **ದಶಪ್ರಮತಿ** ಎಂಬ ನಾಮವನ್ನು ಪೇಳ್ವದೆ—(ಇತರರಿಗೆ) ಹೇಳು-ವುದೇ)? (ಆದ್ದರಿಂದ ದಶಪ್ರಮತಿಗಳೇ ಜೀವೋತ್ತಮರು).

**ಇದು ದೇವರೊಳು ವೃಷಭನಾದ ವಾಯುದೇವರ**
**ಸದುಗುಣವುಳ್ಳ ತೃತೀಯ ರೂಪು ಗಡ**
**ಬುಧರಿಗೆ ಬೋಧವಿತ್ತು ತುದಿಯಲ್ಲಿ ಮುಕುತಿಸಂ-**
**ಪದವೀವ ಈ ಗುರುವಿಗಿದುರಾರು** ॥೪॥

**ಅರ್ಥ: 'ದಶಮತಿ'** ಎಂಬ ಈ ನಾಮವು, ದೇವರೊಳು—ದೇವತೆಗಳಲ್ಲಿ, ವೃಷಭನಾದ—ಶ್ರೇಷ್ಠನಾದ (ಸರ್ವಾಭೀಷ್ಟಗಳನ್ನು ಕರುಣಿಸಲು ಶಕ್ತರಾದ) ವಾಯುದೇವರ, ಸದುಗುಣವುಳ್ಳ—ಸದ್ಗುಣ(ಜ್ಞಾನಭಕ್ತ್ಯಾದಿ)ಗಳಿಂದ ಪೂರ್ಣ-ವಾದ, ತೃತೀಯರೂಪು ಗಡ—ಮೂರನೆಯ ರೂಪವಲ್ಲವೇ! ಬುಧರಿಗೆ—ಸಜ್ಜನರಿಗೆಲ್ಲ (ದೇವಾದಿ ಮುಕ್ತಿಯೋಗ್ಯಜೀವರಿಗೆಲ್ಲ), ಬೋಧವಿತ್ತು—ಸ್ವಯೋಗ್ಯಜ್ಞಾನಪೂರ್ತಿಯನ್ನು ಅನುಗ್ರಹಿಸಿ, ತುದಿಯಲ್ಲಿ—ಕೊನೆಗೆ (ಅಂತ್ಯಕ್ಕೆ), ಮುಕುತಿಸಂಪದವ—ಮೋಕ್ಷವೆಂಬ ಮಹಾಸಂಪತ್ತನ್ನು, ಈವ—ಕೊಡುವ, ಈ ಗುರುವಿಗೆ—ಈ ನಮ್ಮ ಗುರುಗಳಿಗೆ, ಇದಿರಾರು—ಸರಿ ಯಾರು? (ಸಮ-ರಿಲ್ಲ ಅಥವಾ ಅವರ ಎದುರು ನಿಲ್ಲುವರು—ಪ್ರತಿಭಟಿಸಿ ನಿಲ್ಲುವ ಶಕ್ತರಾದ-ವರು ಯಾರೂ ಇಲ್ಲ).

**ಮೊದಲದು ಮತಿಯೆಂಬ ಹನುಮಂತರೂಪು ಗಡ**
**ಇದಿರಾದ ಪೃತನಿಗೆ ಕ್ಷಯವಿತ್ತಾ-**
**ಕದನಕರ್ಕಶಭೀಮ ದ್ವಿತೀಯಾವತಾರ ಗಡ**
**ತುದಿಯರೂಪವಿದೆಂದು ಶ್ರುತಿ ಪೇಳಿತು ದುರ್ಮತವ**
**ತುಳಿಯಿತು ಕುಮತವನಳಿಯಿತು ॥೫॥**

**ಅರ್ಥ:** ಮೊದಲದು—ವಾಯುದೇವರ ಮೊದಲಿನ ಅವತಾರವು, ಮತಿಯೆಂಬ ಹನುಮಂತ ರೂಪು ಗಡ—ಜ್ಞಾನಿಯೆಂಬರ್ಥವುಳ್ಳ ಹನುಮಂತನೆಂಬ ರೂಪವಷ್ಟೆ; ಇದಿರಾದ—ಎದುರುಬಂದ (ಯುದ್ಧಕ್ಕೆ ಬಂದ), ಪೃತನಿಗೆ—ಸೈನ್ಯಕ್ಕೆ, ಕ್ಷಯವಿತ್ತ—ನಾಶವನ್ನುಂಟುಮಾಡಿದ, ಆ ಕದನಕರ್ಕಶಭೀಮ—ಪ್ರಸಿದ್ಧವಾದ ಭಾರತಯುದ್ಧದಲ್ಲಿ ಉಗ್ರಪರಾಕ್ರಮಿಯಾದ (ರಣಭಯಂಕರ) ಭೀಮಸೇನ ದೇವನು, ದ್ವಿತೀಯಾವತಾರ ಗಡ—ಎರಡನೆಯ ಅವತಾರವೆಂಬುದೂ ಪ್ರಸಿದ್ಧವೇ; ತುದಿಯ ರೂಪವಿದು—ಕೊನೆಯ (ಮೂರನೆಯ)-ದಾದ ಈ ಮಧ್ವರೂಪವು, ದುರ್ಮತವ—ದುಸ್ಸಿದ್ಧಾಂತಗಳನ್ನು, ತುಳಿಯಿತು ಖಂಡಿಸಿತು (ದುರ್ವಾದಿಗಳನ್ನು ಮೆಟ್ಟಿತು); ಕುಮತವ—(ಅವುಗಳಲ್ಲಿ ಅತಿ-ಹೇಯವಾದ) ಮಾಯಾವಾದ ಮತವನ್ನು, ಅಳಿಯಿತು—ಧ್ವಂಸಮಾಡಿತು; ಎಂದು ಶ್ರುತಿ ಪೇಳಿತು—ಎಂಬುದಾಗಿ (ವಾಯುದೇವರ ಪ್ರಸಿದ್ಧವಾದ ಮೂರು ಅವತಾರಗಳ ಮಹಿಮೆಯನ್ನು) ಶ್ರುತಿಯೇ ಹೇಳಿರುತ್ತದೆ.

**ಮಧ್ವನೆಂಬ ಆ ವಾಯುಹೃದಯದೊಳಿದ್ದ ಹರಿ ಎಲ್ಲ-**
**ರಾಳ್ದ ಸ್ವಾಮಿಯೆಂದು ಮಥಿಸುವುದು ಗಡ**
**ಹೊದ್ದಿ ಇವನ ಪಾದವ ಈಶ ಮೊದಲಾದ ದೇವರು**
**ಬುದ್ಧಿವಂತರಾದರೆಂದು ಶ್ರುತಿ ಕೀರ್ತಿಸಿತು**
**ಸುಮತವನ್ನಬ್ಬಿಸಿತು ಜ್ಞಾನದೀಪವ ಹೆಚ್ಚಿಸಿತು ॥೬॥**

**ಅರ್ಥ:** ಮಧ್ವನೆಂಬ—ಶ್ರೀಮಧ್ವಾಚಾರ್ಯರೆಂಬ, ಆ ವಾಯುಹೃದಯದೊಳಿದ್ದ—ಆ ವಾಯುದೇವರ ಹೃದಯದಲ್ಲಿ ಸದಾ ಇರುವ, ಹರಿ—ಶ್ರೀಹರಿಯೇ, ಎಲ್ಲರ—ಜಗತ್ತನ್ನೇ, ಆಳ್ದ—ಆಳುವ, ಸ್ವಾಮಿಯೆಂದು—ಪ್ರಭುವೆಂದು, ಮಥಿಸುವುದು ಗಡ—ಶಾಸ್ತ್ರ ವಿಮರ್ಶೆಯಿಂದ ನಿಶ್ಚಯಿಸಬೇಕು; (ಏಕೆಂದರೆ), ಇವನ ಪಾದವ—ಈ ಶ್ರೀಮಧ್ವರ ಪಾದವನ್ನು, ಹೊದ್ದಿ—ಶರಣುಹೊಂದಿ, ಈಶ ಮೊದಲಾದ ದೇವರು—ರುದ್ರಾದಿ ದೇವತೆಗಳು,

**ಪೂರ್ಣವೆಂಬರ್ಥವ ಪೇಳಿತಾಗಿ ದಶಮತಿಯೆಂಬ**
**ಧನ್ಯನಾಮ ಪೇಳ್ವದೆ ಮಧ್ವಮುನಿಗಲ್ಲದೆ**
**ಉತ್ತರೋತ್ತರನೊಲ್ಲದೆ ಪೂರ್ವೋಕ್ತಿಯ ಪೇಳ್ವದೆ ॥೩॥**

**ಅರ್ಥ**: ಪೂರ್ಣಪ್ರಜ್ಞರೆಂಬ, ನಾಮ—ಹೆಸರು, ನಮ್ಮ ಗುರುವರಗೆ, ಉಂಟು—ಇದೆ, ಉನ್ನತೋಪನಿಷತ್ತು—ಶ್ರೇಷ್ಠವಾದ ಐತರೇಯೋಪನಿಷತ್ತು, **ಸರ್ವ**-ವೆಂಬ ಶಬ್ದಕ್ಕೆ, ಪೂರ್ಣವೆಂಬರ್ಥವ—**'ಪೂರ್ಣ'** ಎಂಬ ಅರ್ಥವನ್ನು ಪೇಳಿ-ತಾಗಿ—ಹೇಳಿರುವುದರಿಂದ, ದಶಮತಿಯೆಂಬ—(**ದಶ** ಎಂದರೆ ಸರ್ವ, ಸರ್ವ ಎಂದರೆ ಪೂರ್ಣ, **ಮತಿ** ಎಂದರೆ ಪ್ರಜ್ಞೆ) **ದಶಮತಿ** ಎಂಬುವ, ಧನ್ಯನಾಮ—ಮಂಗಳಕರ ನಾಮವನ್ನು (ಕೃತಕೃತ್ಯರನ್ನಾಗಿ ಮಾಡುವ ನಾಮ-ವನ್ನು), ಮಧ್ವಮುನಿಗಲ್ಲದೆ—(ಪೂರ್ಣಪ್ರಜ್ಞರೆಂದು ಪ್ರಸಿದ್ಧರಾದ) ಮಧ್ವ-ಮುನಿಗಳಿಗಲ್ಲದೇ, ಪೇಳ್ವದೆ—ಇತರರಿಗೆ ಹೇಳುವುದೇ? (ಇಲ್ಲ); ಉತ್ತರೋ-ತ್ತರನ ಒಲ್ಲದೆ—ಮೇಲಿನ ಮಟ್ಟದವರನ್ನು ಬಿಟ್ಟು, ಪೂರ್ವೋಕ್ತಿಯ—ಮೊದಲಿನ **ದಶಪ್ರಮತಿ** ಎಂಬ ನಾಮವನ್ನು ಪೇಳ್ವದೆ—(ಇತರರಿಗೆ) ಹೇಳು-ವುದೇ)? (ಆದ್ದರಿಂದ ದಶಪ್ರಮತಿಗಳೇ ಜೀವೋತ್ತಮರು).

**ಇದು ದೇವರೊಳು ವೃಷಭನಾದ ವಾಯುದೇವರ**
**ಸದುಗುಣವುಳ್ಳ ತೃತೀಯ ರೂಪು ಗಡ**
**ಬುಧರಿಗೆ ಬೋಧವಿತ್ತು ತುದಿಯಲ್ಲಿ ಮುಕುತಿಸಂ-**
**ಪದವೀವ ಈ ಗುರುವಿಗಿದುರಾರು ॥೪॥**

**ಅರ್ಥ: 'ದಶಮತಿ'** ಎಂಬ ಈ ನಾಮವು, ದೇವರೊಳು—ದೇವತೆಗಳಲ್ಲಿ, ವೃಷಭನಾದ—ಶ್ರೇಷ್ಠನಾದ (ಸರ್ವಾಭೀಷ್ಟಗಳನ್ನು ಕರುಣಿಸಲು ಶಕ್ತರಾದ) ವಾಯುದೇವರ, ಸದುಗುಣವುಳ್ಳ—ಸದ್ಗುಣ(ಜ್ಞಾನಭಕ್ತ್ಯಾದಿ)ಗಳಿಂದ ಪೂರ್ಣ-ವಾದ, ತೃತೀಯರೂಪು ಗಡ—ಮೂರನೆಯ ರೂಪವಲ್ಲವೇ! ಬುಧರಿಗೆ—ಸಜ್ಜನರಿಗೆಲ್ಲ (ದೇವಾದಿ ಮುಕ್ತಿಯೋಗ್ಯಜೀವರಿಗೆಲ್ಲ), ಬೋಧವಿತ್ತು—ಸ್ವಯೋಗ್ಯಜ್ಞಾನಪೂರ್ತಿಯನ್ನು ಅನುಗ್ರಹಿಸಿ, ತುದಿಯಲ್ಲಿ—ಕೊನೆಗೆ (ಅಂತ್ಯಕ್ಕೆ), ಮುಕುತಿಸಂಪದವ—ಮೋಕ್ಷವೆಂಬ ಮಹಾಸಂಪತ್ತನ್ನು, ಈವ—ಕೊಡುವ, ಈ ಗುರುವಿಗೆ—ಈ ನಮ್ಮ ಗುರುಗಳಿಗೆ, ಇದಿರಾರು—ಸರಿ ಯಾರು? (ಸಮ-ರಿಲ್ಲ ಅಥವಾ ಅವರ ಎದುರು ನಿಲ್ಲುವರು—ಪ್ರತಿಭಟಿಸಿ ನಿಲ್ಲುವ ಶಕ್ತರಾದ-ವರು ಯಾರೂ ಇಲ್ಲ).

**ಮೊದಲದು ಮತಿಯೆಂಬ ಹನುಮಂತರೂಪು ಗಡ**
**ಇದಿರಾದ ಪೃತನಿಗೆ ಕ್ಷಯವಿತ್ತಾ-**
**ಕದನಕರ್ಕಶಭೀಮ ದ್ವಿತೀಯಾವತಾರ ಗಡ**
**ತುದಿಯರೂಪವಿದೆಂದು ಶ್ರುತಿ ಪೇಳಿತು ದುರ್ಮತವ**
**ತುಳಿಯಿತು ಕುಮತವನಳಿಯಿತು ॥೫॥**

**ಅರ್ಥ:** ಮೊದಲದು—ವಾಯುದೇವರ ಮೊದಲಿನ ಅವತಾರವು, ಮತಿಯೆಂಬ ಹನುಮಂತ ರೂಪು ಗಡ—ಜ್ಞಾನಿಯೆಂಬರ್ಥವುಳ್ಳ ಹನುಮಂತನೆಂಬ ರೂಪವಷ್ಟೆ; ಇದಿರಾದ—ಎದುರುಬಂದ (ಯುದ್ಧಕ್ಕೆ ಬಂದ), ಪೃತನಿಗೆ—ಸೈನ್ಯಕ್ಕೆ, ಕ್ಷಯವಿತ್ತ—ನಾಶವನ್ನುಂಟುಮಾಡಿದ, ಆ ಕದನಕರ್ಕಶಭೀಮ—ಪ್ರಸಿದ್ಧವಾದ ಭಾರತಯುದ್ಧದಲ್ಲಿ ಉಗ್ರಪರಾಕ್ರಮಿಯಾದ (ರಣಭಯಂಕರ) ಭೀಮಸೇನ ದೇವನು, ದ್ವಿತೀಯಾವತಾರ ಗಡ—ಎರಡನೆಯ ಅವತಾರವೆಂಬುದೂ ಪ್ರಸಿದ್ಧವೇ; ತುದಿಯ ರೂಪವಿದು—ಕೊನೆಯ (ಮೂರನೆಯ)-ದಾದ ಈ ಮಧ್ವರೂಪವು, ದುರ್ಮತವ—ದುಸ್ಸಿದ್ಧಾಂತಗಳನ್ನು, ತುಳಿಯಿತು ಖಂಡಿಸಿತು (ದುರ್ವಾದಿಗಳನ್ನು ಮೆಟ್ಟಿತು); ಕುಮತವ—(ಅವುಗಳಲ್ಲಿ ಅತಿ-ಹೇಯವಾದ) ಮಾಯಾವಾದ ಮತವನ್ನು, ಅಳಿಯಿತು—ಧ್ವಂಸಮಾಡಿತು; ಎಂದು ಶ್ರುತಿ ಪೇಳಿತು—ಎಂಬುದಾಗಿ (ವಾಯುದೇವರ ಪ್ರಸಿದ್ಧವಾದ ಮೂರು ಅವತಾರಗಳ ಮಹಿಮೆಯನ್ನು) ಶ್ರುತಿಯೇ ಹೇಳಿರುತ್ತದೆ.

**ಮಧ್ವನೆಂಬ ಆ ವಾಯುಹೃದಯದೊಳಿದ್ದ ಹರಿ ಎಲ್ಲ-**
**ರಾಳ್ದ ಸ್ವಾಮಿಯೆಂದು ಮಥಿಸುವುದು ಗಡ**
**ಹೊದ್ದಿ ಇವನ ಪಾದವ ಈಶ ಮೊದಲಾದ ದೇವರು**
**ಬುದ್ಧಿವಂತರಾದರೆಂದು ಶ್ರುತಿ ಕೀರ್ತಿಸಿತು**
**ಸುಮತವನ್ನಬ್ಬಿಸಿತು ಜ್ಞಾನದೀಪವ ಹೆಚ್ಚಿಸಿತು ॥೬॥**

**ಅರ್ಥ:** ಮಧ್ವನೆಂಬ—ಶ್ರೀಮಧ್ವಾಚಾರ್ಯರೆಂಬ, ಆ ವಾಯುಹೃದಯದೊಳಿದ್ದ—ಆ ವಾಯುದೇವರ ಹೃದಯದಲ್ಲಿ ಸದಾ ಇರುವ, ಹರಿ—ಶ್ರೀಹರಿಯೇ, ಎಲ್ಲರ—ಜಗತ್ತನ್ನೇ, ಆಳ್ದ—ಆಳುವ, ಸ್ವಾಮಿಯೆಂದು—ಪ್ರಭುವೆಂದು, ಮಥಿಸುವುದು ಗಡ—ಶಾಸ್ತ್ರ ವಿಮರ್ಶೆಯಿಂದ ನಿಶ್ಚಯಿಸಬೇಕು; (ಏಕೆಂದರೆ), ಇವನ ಪಾದವ—ಈ ಶ್ರೀಮಧ್ವರ ಪಾದವನ್ನು, ಹೊದ್ದಿ—ಶರಣುಹೊಂದಿ, ಈಶ ಮೊದಲಾದ ದೇವರು—ರುದ್ರಾದಿ ದೇವತೆಗಳು,

ಬುದ್ಧಿವಂತರಾದರೆಂದು—ಜ್ಞಾನಪೂರ್ತಿಯನ್ನು ಪಡೆದರೆಂದು, ಶ್ರುತಿ ಕೀರ್ತಿಸಿತು—ಶ್ರುತಿಯು (ಬಳಿತ್ಥಾಸೂಕ್ತವು) ವರ್ಣಿಸುತ್ತದೆ; ಸುಮತವನ್ನು—ಸನ್ಮತವನ್ನು, ಹಬ್ಬಿಸಿತು—ವೃದ್ಧಿಗೊಳಿಸಿತು, ಜ್ಞಾನದೀಪವ—ಜ್ಞಾನಪ್ರಕಾಶವನ್ನು, ಹೆಚ್ಚಿಸಿತು—ವಿಸ್ತಾರವಾಗಿ ಬೀರಿತು, (ಎಂದು ಈ ಮೂರನೆಯ ರೂಪದ ಮಹಿಮೆಯನ್ನೂ ಆ ಶ್ರುತಿಯೇ ವರ್ಣಿಸುತ್ತದೆ).

**ಸಂತರ್ಮೆಚ್ಚಿ ವಿದ್ವಾನ್ ಮಧ್ವ ಉಜ್ಜಭಾರವೆಂಬ ವೇದ**
**ಸಂತೋಷದಿ ನಮ್ಮ ಗುರುವ ಕೊಂಡಾಡಿತು।**
**ಇಂತು ಸುಪ್ರಸಿದ್ಧ ಶ್ರುತಿ ತುತಿಸಿದ ಮಧ್ವಮುನಿ**
**ಎಂಥ ಗುರುವರನು ನೀವೆ ನೋಡಿರೋ ಮುಕ್ತಿಯ ಬೇಡಿರೋ ಈ**
**ಮತವ ಪಾಡಿರೋ ಇವನುಕ್ತಿಯ ಒಡಂಬಡಿರೋ ॥೭॥**

**ಅರ್ಥ:** ಸಂತರು ಸಜ್ಜನರು, ಮೆಚ್ಚಿ—(ಹೀಗೆಂದು) ಒಪ್ಪಿ ಆನಂದಿಸಿರಿ; ವಿದ್ವಾನ್ ಮಧ್ವ ಉಜ್ಜಭಾರವೆಂಬ—'ವಿದ್ವಾನ್ ಮಧ್ವ ಉಜ್ಜಭಾರ' ಎಂಬ, ವೇದ—ಶೃತಿಯು (ವೇದಾಭಿಮಾನಿನಿಯಾದ ಲಕ್ಷ್ಮೀದೇವಿಯು), ಸಂತೋಷದಿ—ಸಂತೋಷದಿಂದ, ನಮ್ಮ ಗುರುವ—ನಮ್ಮ ಗುರುಗಳಾದ ಶ್ರೀಮಧ್ವರನ್ನು, ಕೊಂಡಾಡಿತು—ಸ್ತುತಿಸಿದೆ (ಹೊಗಳಿರುತ್ತಾರೆ); ಇಂತು—ಹೀಗೆ, ಸುಪ್ರಸಿದ್ಧ ಶ್ರುತಿ—ಪ್ರಸಿದ್ಧವಾದ ವೇದವು, ತುತಿಸಿದ, ಮಧ್ವಮುನಿ—ಶ್ರೀಮಧ್ವಾಚಾರ್ಯರು, ಎಂಥ ಗುರುವರನು—ಎಷ್ಟು ಮಹಿಮೆಯುಳ್ಳ ಶ್ರೇಷ್ಠ ಗುರುಗಳೆಂಬುದನ್ನು ನೀವೇ (ಈ ವಿಚಾರ ವಿಮರ್ಶೆಯಿಂದ) ನೋಡಿರೋ—ತಿಳಿಯಿರಿ; ಮುಕ್ತಿಯ—ಮೋಕ್ಷವನ್ನು, ಬೇಡಿರೋ—(ಅವರಲ್ಲಿ) ಬೇಡಿಕೊಳ್ಳಿರಿ; ಈ ಮತವ—ಇವರ ಅಭಿಪ್ರಾಯವನ್ನು, ಪಾಡಿರೋ—ಕೊಂಡಾಡಿರಿ. ಇವನುಕ್ತಿಯ—ಇವರ ಸಿದ್ಧಾಂತಗಳನ್ನು, ಒಡಂಬಡಿರೋ—ಅಂಗೀಕರಿಸಿ ಉದ್ಧೃತರಾಗಿರಿ.

**ಶ್ರುತಿಸ್ಮೃತಿಗಳರ್ಥವ ಮಥಿಸಿ ಮಾಡಿದ ನಮ್ಮ**
**ಕೃತಿಯನೆ ನಂಬಿರೋ ನಾವೆಂದುದೆ ತತ್ವ।**
**ಮತದ ಅಹಮ್ಮಾನವ ಮಾಡದೆ ಮೇಲಣ ಸ-**
**ದ್ಗತಿ ಬೇಕೆಂಬುವರೆಲ್ಲ ಇದ ಕೇಳಿರೋ,**
**ಎಂದೆಂದು ಪೇಳಿರೋ, ಕುಮತವ ಕೀಳಿರೋ**
**ಅಮಂಗಲಘಂಗಳ ಸೀಳಿರೋ ॥೮॥**

**ಅರ್ಥ:** ಶ್ರುತಿ ಸ್ಮೃತಿಗಳರ್ಥವ—ಶ್ರುತಿಸ್ಮೃತಿಗಳ ಅರ್ಥವನ್ನು (ಅಲ್ಲಿ ನಿರೂಪಿತವಾದ ವಿಷಯಗಳನ್ನು), ಮಥಿಸಿ—ಚೆನ್ನಾಗಿ ವಿಮರ್ಶಿಸಿ, ಮಾಡಿದ — ರಚಿಸಿದ, ನಮ್ಮ ಕೃತಿಯನೆ—ನಮ್ಮ (ಶ್ರೀವಾದಿರಾಜರ) ಈ ಗ್ರಂಥದಲ್ಲಿ ಹೇಳಲಾಗುವ ನಿರ್ಣಯಗಳನ್ನು, ನಂಬಿರೋ—ನಂಬಿಕೊಳ್ಳಿರಿ; ನಾವೆಂದುದೆ —ನಾವು ಹೇಳುವುದೇ, ತತ್ವ—ಸತ್ಯ; ಮತದ—('ನಮ್ಮ ಹಿರಿಯರಿಂದ ಬಂದ ಮತವೇ ಸತ್ಯ') ಎಂಬ ಸ್ವಮತದ, ಅಹಮ್ಮಾನವ ಮಾಡದೆ— ದುರಭಿಮಾನ ಬಿಟ್ಟು, ಮೇಲಣ ಸದ್ಗತಿ—ಉತ್ಕೃಷ್ಟವಾದ ಮೋಕ್ಷವನ್ನು, ಬೇಕೆಂಬುವರೆಲ್ಲ—ಅಪೇಕ್ಷಿಸುವವರೆಲ್ಲರೂ, ಇದ ಕೇಳಿರೋ—**ಮಧ್ವಶಾಸ್ತ್ರವನ್ನೇ** ಶ್ರವಣ ಮಾಡಿರಿ, ಎಂದೆಂದು ಪೇಳಿರೋ—ಸದಾ ಅದನ್ನೇ ಪಠನ-ಮಾಡುತ್ತಿರಿ (ಅನ್ಯರಿಗೂ ಅದನ್ನೇ ಹೇಳುತ್ತಿರಿ), ಕುಮತವ—ದುರ್ಮತವನ್ನು, ಕೀಳಿರೋ—(ನಿಮ್ಮ ಮನಸ್ಸಿನಿಂದ) ಕಿತ್ತೊಗೆಯಿರಿ; ಅಮಂಗಲಘಂಗಳ— (ಹೀಗೆ ಮಾಡುವುದರಿಂದ) ದುಃಖಹೇತುಗಳಾದ ಪಾಪಗಳನ್ನು, ಸೀಳಿರೋ— ಸೀಳಿ ಒಗೆಯಿರಿ.

**ವಿಶೇಷಾಂಶ:** (೧) ***'ಜನಯಂತ ಯೋಷಣಃ'*** ಎಂಬಲ್ಲಿ **ಯೋಷಣಃ** ಎಂಬುದು ಬಹುವಚನ; ಸ್ತ್ರೀಯರೆಂದರ್ಥ. ಮಧ್ಯಗೇಹಭಟ್ಟರ ಪತ್ನಿಯಲ್ಲಿ ಗೌರವಾರ್ಥದಿಂದ ಬಹುವಚನವೆಂದು ಭಾವಿಸುವುದು ಒಂದು ವಿವಕ್ಷೆ. ***'ಶ್ರೀಭೂದುರ್ಗಾಖ್ಯಾಃ ಋಗಾದಿವೇದಾಭಿಮಾನಿನ್ಯಃ ದೇವ್ಯಃ ಸ್ವಾಭಿಮನ್ಯಮಾನವೇದಾನಾಮನ್ಯೈರನ್ಯಥಾ ವ್ಯಾಖ್ಯಾತತ್ವಾತ್ ಯಥಾವದ್ವ್ಯಾಖ್ಯಾನಾಯ ಮಧ್ಯಗೇಹಾಖ್ಯವಿಪ್ರಪತ್ನ್ಯಾಃ ಉದರೇ ಸ್ಥಿತ್ವಾ ಅಜನಯಂತ ಇತಿ ಭಾವಃ'*** ಎಂಬ ತಮ್ಮ ಭಾವಪ್ರಕಾಶಿಕಾ ವ್ಯಾಖ್ಯಾನವನ್ನು ಶ್ರೀವಾದಿರಾಜರು ಇಲ್ಲಿ ಯುಕ್ತಿಯಿಂದ ಪುಷ್ಟೀಕರಿಸುತ್ತಾರೆ. ವೇದಗಳ ಅಪವ್ಯಾಖ್ಯಾನಗಳನ್ನು ನಿರಾಕರಿಸಿ, ಅವುಗಳ ನಿಜವಾದ ಅರ್ಥಗಳನ್ನು ನಿರ್ಣಯಾತ್ಮಕವಾಗಿ ಪ್ರತಿ-ಪಾದಿಸಲು ಅವತರಿಸುವ ವಾಯುದೇವರನ್ನು ಪ್ರಸವಿಸುವ ಮಹಾಪುಣ್ಯಕ್ಕೆ ಮಧ್ಯಗೇಹರ ಪತ್ನಿಯಂಥ ಸಾಮಾನ್ಯ ಸ್ತ್ರೀಯು ಭಾಗಿನಿಯಾಗಲಾರಳೆಂಬ ಯುಕ್ತಿಯನ್ನು **'ನರಲೋಕದ ನಾರಿಗೆ ಹೆರುವ ಭಾಗ್ಯ ದೊರೆಯದು'** ಎಂಬುದರಿಂದ ಸೂಚಿಸಿದ್ದಾರೆ. ಲಕ್ಷ್ಮೀದೇವಿಯ ಸನ್ನಿಧಾನವಿಶೇಷವಿಲ್ಲದ ಯಾವ ಸ್ತ್ರೀಯ ಉದರದಿಂದಲೂ ವಾಯುದೇವರು ಎಂದೂ ಅವತರಿಸರು. ವೇದವತಿಯು ದೇವಾಂಶಳೇ ಆಗಿದ್ದರೂ ಈ ಯುಕ್ತಿಗೆ ಬಾಧಕವಿಲ್ಲವೆಂಬುದನ್ನು ಗಮನಿಸಬೇಕು—ದೇವಾಂಶಳೆಂಬಲ್ಲಿ ಸಂಶಯವಿಲ್ಲ.

(೨) ಶ್ರೀಹರಿವಾಯುಗಳ ಮಹಿಮೆಗಳನ್ನು ರಹಸ್ಯವಿಶೇಷಗಳೊಡನೆ ಪ್ರತಿಪಾದಿಸುವ **'ಐತರೇಯೋಪನಿಷತ್ತು'** ಶ್ರೀಮಧ್ವಾಚಾರ್ಯರಿಗೆ ಅತಿಪ್ರಿಯವಾದುದು, ಅದನ್ನೇ **'ಉನ್ನತೋಪನಿಷತ್ತು'** ಎಂದಿರುವರು. ಅಲ್ಲಿ **'ದಶೇತಿ ವೈ ಸರ್ವಂ ಏತಾವತೀ ಹಿ ಸಂಖ್ಯಾ ದಶದಶತಸ್ತಚ್ಛತಂ ದಶಶತಾನಿ ತತ್ಸಹಸ್ರಂ ತತ್ಸರ್ವಂ'** ಎಂದೂ (ಆ. ೨, ಅ. ೩, ಖಂ. ೪) ಇದರ ಭಾಷ್ಯಭಾಗದಲ್ಲಿ 'ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ'.

*ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ*
*ಆ ಸಮಂತಾತ್ ಪತಿತ್ವೇ ತು ಗೂಢಂ ಕಲಿಯುಗೇ ಹರಿಮ್।*
*ಅಸತ್ಯಮಪ್ರತಿಷ್ಠಂ ಚ ಜಗದೇತದನೀಶ್ವರಂ*
*ವದದ್ಭಿರ್ಗೂಹಿತಂ ಸಂತಂ ತೃತೀಯೋಽಸುರ್ಮಥಾಯತಿ॥*

ಎಂದೂ ಹೇಳಲಾಗಿದೆ. ಈ ವಾಕ್ಯಗಳ ಅರ್ಥವು ಹೀಗಿದೆ: **'ದಶ'** ಎಂದರೆ ಸರ್ವವೆಂದರ್ಥ—ಎಲ್ಲ ಸಂಖ್ಯೆಗಳೂ ಇದರಲ್ಲಿ ಅಡಕವಾಗಿವೆ. ದಶದಶಗಳು ಶತ-ದಶಶತಗಳು ಸಹಸ್ರ-ಸಹಸ್ರವೇ ಸರ್ವವು. ಹೀಗೆ ದಶವೆಂದರೆ 'ಸರ್ವ'-ವೆಂದಾಯಿತು. ಸರ್ವವೆಂದರೆ ಪೂರ್ಣವೇ. 'ಪ್ರಜ್ಞಾ' ಎಂದರೆ ಪ್ರಮತಿಯು; ಆದ್ದರಿಂದ ದಶ(ಪ್ರ)ಮತಿ ಎಂದರೆ ಪೂರ್ಣಪ್ರಜ್ಞರೆಂದು ಜ್ಞಾನಿಗಳು ತಿಳಿಯುತ್ತಾರೆ. ಕಲಿಯುಗದಲ್ಲಿ ಶ್ರೀಹರಿಯು ಗೂಢನಾಗುವನು—ಈ ಜಗತ್ತು ಮಿಥ್ಯೆಯು, ಅಪ್ರತಿಷ್ಠವಾದುದು (ಜ್ಞಾನಬಾಧ್ಯವು—ಬ್ರಹ್ಮೈಕ್ಯವಾದೊಡನೆ ಇಲ್ಲವಾಗುವುದು); ಈಶ್ವರರಹಿತವಾದುದು—ಹೀಗೆ ಹೇಳುವವರಿಂದ ಗೂಹನ ಮಾಡಲ್ಪಡುವನು (ಮುಚ್ಚಲ್ಪಟ್ಟ ಸ್ವರೂಪವುಳ್ಳವನಾಗುವನು). ಆಗ ಮುಖ್ಯಪ್ರಾಣನ ಮೂರನೇ ಅವತಾರವು (ಅಸು—ಪ್ರಾಣದೇವ) ಆಚ್ಛಾದಿತನಾದ ಶ್ರೀಹರಿಯನ್ನು ಶಾಸ್ತ್ರಮಥನದಿಂದ ಸತ್ಯವಾದ ಜಗತ್ತಿನ ಪರಮಸ್ವಾಮಿಯೆಂದು ಸ್ಥಾಪಿಸುತ್ತದೆ.

(೩) 'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ'. ಎಂದರೆ, ವಿಷ್ಣುವೇ ಸ್ವತಂತ್ರನಾಗಿ ಮೋಕ್ಷಪ್ರದನು—ಆತನ ಅನುಜ್ಞೆಯಿಂದ ವಾಯುದೇವನೂ ಮೋಕ್ಷದಾತನು ಎಂಬ ಪ್ರಮಾಣಾನುಸಾರವಾಗಿ, 'ಮುಕ್ತಿಯನ್ನು ಬೇಡಿರೋ' ಎಂದಿರುವರು. ರುದ್ರೇಂದ್ರಾದಿ ದೇವತೆಗಳಾಗಲಿ, ಅನ್ಯರ್ಯಾರೇ ಆಗಲಿ ಮೋಕ್ಷದಾನದಲ್ಲಿ ಅಧಿಕಾರವುಳ್ಳವರಲ್ಲ.

(೪) *'ಸ್ಪಷ್ಟಂ ಮಧ್ವಾಭಿಧಾನಾಂಕಾಸ್ಸಪ್ತರ್ಚೋऽತ್ರ ವಿಚಾರಿತಾಃ'* (ಯುಕ್ತಿ-ಮಲ್ಲಿಕಾ—ಫಲಸೌರಭ) ಎಂಬಲ್ಲಿ ಶ್ರೀವಾದಿರಾಜರು, ಸ್ಪಷ್ಟವಾಗಿ **'ಮಧ್ವ'** ಎಂಬ ಹೆಸರಿನಿಂದ ಅಂಕಿತಗಳಾದ ಏಳು ವೇದಋಕ್ಕುಗಳನ್ನು, ವಿಚಾರಮಾಡಿ, ಶ್ರೀಮಧ್ವಾಚಾರ್ಯರಿಗೆ ವೇದಪ್ರತಿಪಾದ್ಯತ್ವವನ್ನು ಸ್ಥಾಪಿಸಿದ್ದಾರೆ. ಪ್ರಧಾನ-ಭೂತ ಎಂಟು ಋಕ್ಕುಗಳನ್ನು, ಅಂಗಭೂತ ಆರು ಋಕ್ಕುಗಳನ್ನೂ ಇವು-ಗಳೊಂದಿಗೆ, ಶ್ರೀಮಧ್ವರ ಚರಿತ್ರಾವರ್ಣನಪರಗಳೆಂದು ಸಾಧಿಸಿರುತ್ತಾರೆ. ***'ಸ ಮಧ್ವ ಆಯುವತೇ', 'ಉನ್ಮಧ್ವ ಊರ್ಮಿಃ', 'ವಿದ್ವಾನ್ ಮಧ್ವಃ', 'ಮಧ್ವೋ ಅಂಶುಃ', 'ಸಿಂಹನ್ನಸಂತಂ ಮಧ್ವೋ ಅಯಾಸಂ', 'ಪ್ರಧಾರಾ ಮಧ್ವಃ', 'ಅಸ್ಮಭ್ಯಮಿಂದವಿಂದ್ರಯುರ್ಮಧ್ವಃ'*** ಎಂಬಿವೇ ಪ್ರಸಕ್ತ ಏಳು ಋಕ್ಕುಗಳು. ಇವುಗಳಲ್ಲಿ ಮೂರನೆಯದಾದ **'ವಿದ್ವಾನ್ ಮಧ್ವಃ'** ಎಂಬ ಪೂರ್ಣಋಕ್ಕು ಹೀಗಿದೆ: ***'ಸಪ್ತಸ್ವಸ್ರೂಃ ಋಷಿರ್ವಾವಶಾನೋ ವಿದ್ವಾನ್ ಮಧ್ವ ಉಜ್ಜಭಾರಾ-ದೃಶೇಕಂ.'*** ಈ ಶ್ರುತಿಯಲ್ಲಿ **'ವಿದ್ವಾನ್ ಮಧ್ವಃ'** ಎಂದರೆ ಜ್ಞಾನಿಗಳಾದ ಮಧ್ವಾಚಾರ್ಯರು ಸಮೀಚೀನ ಜ್ಞಾನಾರ್ಥವಾಗಿ ಚತುರ್ವೇದಗಳು, ಮೂಲ ರಾಮಾಯಣ, ಪುರಾಣೇತಿಹಾಸಗಳು, ಪಂಚರಾತ್ರಾಗಮಗಳೆಂಬ ಸಪ್ತಪ್ರಕಾರದ ಶಾಸ್ತ್ರಗಳನ್ನು, ಉದ್ಧರಿಸುತ್ತಾರೆ, ಎಂದರೆ ಅವುಗಳ ಮಥಿತಾರ್ಥವನ್ನು ನಿರ್ಣಯಿಸಿ ನಿರೂಪಿಸುತ್ತಾರೆಂದು ಹೇಳಲಾಗಿದೆ. ಇದರಲ್ಲಿ ಉಕ್ತವಾದ ಕೃತಿ-ಗಳೂ **'ವಿದ್ವಾನ್ ಮಧ್ವಃ'** ಎಂಬ ನಿರ್ದೇಶವೂ ಮತ್ತೊಬ್ಬರಿಗೆ ಸಲ್ಲುವುದಿಲ್ಲ.

**ಪದ ೫**

ರಾಗ-ವಸಂತಭೈರವಿ; ತಾಳ-ಅಟ

**ಎಲ್ಲವಿಲ್ಲೆಂಬುವನ ನಾಲಿಗೆಯೆ ಇಲ್ಲವಾಯಿ-**
**ತಲ್ಲ ಇನ್ನೆಂತು ನಮ್ಮ ಕೂಡೆ ನುಡಿವ**
**ಬಲ್ಲವರಿಗಿಂತು ಬೋಧಿಸಿ ಜಗತ್ತು ಸತ್ಯವೆಂದೂ**
**ನಿಲ್ಲಿಸಿದ ಮಧ್ವ ಮುನಿಗೆಣೆಗಾಣೆ ಇಂತಲ್ಲದೆ ಮಾಣೆ**
**ಶ್ರೀಹರಿಯಾಣೆ ॥೧॥**

**ಅರ್ಥ:** ಎಲ್ಲವಿಲ್ಲೆಂಬುವನ—ಎಲ್ಲವೂ ಸುಳ್ಳೆಂಬುವನ, ನಾಲಿಗೆಯೆ—ನಾಲಿಗೆಯು ಸಹ, ಇಲ್ಲವಾಯಿತಲ್ಲ—ಇಲ್ಲವೆಂದಾಯಿತಷ್ಟೆ! ಇನ್ನೆಂತು—ಇನ್ನು, (ಹೀಗಾದ ಮೇಲೆ) ಹೇಗೆ, ನಮ್ಮ ಕೂಡೆ—ನಮ್ಮೊಂದಿಗೆ, ನುಡಿವ—ವಾದಿಸುವನು? (ಬಾಯಿಬಿಡಲು ಅವಕಾಶವೇ ಇಲ್ಲ); ಬಲ್ಲವರಿಗೆ—ಜ್ಞಾನ-

ಯೋಗ್ಯರಿಗೆ, ಇಂತು— ಹೀಗೆ (ಮುಂದೆ ಹೇಳುವಂತೆ), ಬೋಧಿಸಿ— ಉಪದೇಶಿಸಿ, ಜಗತ್ತು— ಪ್ರಪಂಚವು, ಸತ್ಯವೆಂದೂ— ಸತ್ಯವೂ ಆದುದೆಂದು (ಅಸ್ವತಂತ್ರವೆಂದು ಮುಂತಾಗಿ ಸಹ), ನಿಲ್ಲಿಸಿದ— ಸ್ಥಾಪಿಸಿದ, ಮಧ್ವಮುನಿಗೆ — ಶ್ರೀಮಧ್ವಾಚಾರ್ಯರಿಗೆ, ಎಣೆಗಾಣೆ— ಸಮರನ್ನು ಕಾಣೆನು; ಇಂತಲ್ಲದೆ ಮಾಣೆ— ಹೀಗೆಂದು ಸಾಧಿಸದೇ ಸುಮ್ಮನಿರಲಾರೆನು, ಶ್ರೀಹರಿಯಾಣೆ— ಇದಕ್ಕೆ ಶ್ರೀಹರಿಯ ಹೆಸರನ್ನು ಹಿಡಿದು ಪ್ರತಿಜ್ಞೆ ಮಾಡುತ್ತೇನೆ.

**ಈಗಲುಂಟು ಮೇಲೀಜಗವಿಲ್ಲವೆಂಬ ಮಾತು ನಿನ-**
**ಗಾಗದಲ್ಲ ತ್ರಿಕಾಲನಿಷೇಧವೆಂಬುವಗೆ**
**ಕಾಗೆಯಂತೆ ಒಂದು ಭಾಗದರ್ಥವ ಕಂಡು ಮತ್ತೊಂದು-**
**ಭಾಗದರ್ಥವ ಕಾಣದಿರೆ ನಿನ್ನ ಕಾಣನೆನ್ನರೇ ನಿನ್ನಂತವನ ತೋರೆ**
**ನೋಡು ನೋಡು ಕಣ್ಣಾರೆ ॥೨॥**

**ಅರ್ಥ:** ಈ ಜಗವು— ಈ ಜಗತ್ತು, ಈಗಲುಂಟು— ಈಗ ಇದೆ, ಮೇಲೆ ಇಲ್ಲವೆಂಬ ಮಾತು— ಮುಂದಿಲ್ಲವೆಂಬ ನುಡಿ, ತ್ರಿಕಾಲನಿಷೇಧವೆಂಬುವಗೆ— ಹಿಂದೆ, ಈಗ, ಮುಂದೆ ಇಲ್ಲವೆಂಬುವನಾದ, ನಿನಗಾಗದಲ್ಲ— ನಿನಗೆ ಹಿಡಿಸದಲ್ಲ (ಕೂಡುವುದಿಲ್ಲವಲ್ಲ!) ಕಾಗೆಯಂತೆ— ಕಾಗೆಯ ಹಾಗೆ, ಒಂದು ಭಾಗದರ್ಥವ— ಒಂದು ಪಾರ್ಶ್ವದಲ್ಲಿರುವ ವಸ್ತುವನ್ನು ಮಾತ್ರ, ಕಂಡು— ಕಾಣುತ್ತ, ಮತ್ತೊಂದು ಭಾಗದರ್ಥವ— ಇನ್ನೊಂದು ಪಾರ್ಶ್ವದ ವಸ್ತುವನ್ನು, ಕಾಣದಿರೆ — (ನಿನಗೆ) ತೋರದಿದ್ದರೆ, ನಿನ್ನಂತವನ— ನಿನ್ನಂತೆ ವಾದಿಸುವವನನ್ನು, ತೋರೆ — (ಯಾರೊಬ್ಬರಿಗೆ) ತೋರಿಸಿದರೆ, ನಿನ್ನ— ನಿನ್ನನ್ನು, ಕಾಣನೆನ್ನರೇ— (ತಿಳಿದವರು) ಒಕ್ಕಣ್ಣನೆಂದು ಕರೆಯದಿರುವರೇ? ನೋಡು ನೋಡು ಕಣ್ಣಾರೆ— ಕಣ್ಣುಬಿಟ್ಟು ಚೆನ್ನಾಗಿ ನೋಡು (ವಿಚಾರಮಾಡಿ ತಿಳಿ).

**ವಿಶೇಷಾಂಶ:** (೧) ಬಳಿತ್ಥಾಸೂಕ್ತದ ೪ನೇ ಋಕ್ಕಿನಲ್ಲಿ ಸಂಕ್ಷೇಪವಾಗಿ ನಿರೂಪಿಸಲಾಗಿರುವ ವಾಯುದೇವರ ***'ಪೃಕ್ಷುಧಃ ವೀರುಧಃ ದಂಸುರೋಹತಿ'*** ಎಂಬ ಪರಮತಖಂಡನ ವ್ಯಾಪಾರವನ್ನು ವಿಸ್ತರಿಸುತ್ತ ತೃತೀಯಾವತಾರದಿಂದಾದ ಮಾಯಾವಾದಖಂಡನಪ್ರಕಾರದ ಮಹಿಮೆಯನ್ನು ವರ್ಣಿಸುತ್ತಾರೆ.

(೨) ***'ನಾಸ್ತಿ ನಾಸೀನ್ನ ಭವಿಷ್ಯತಿ ಇತ್ಯಾಕಾರಕಜ್ಞಾನವಿಷಯ ತ್ವಂ ಮಿಥ್ಯಾತ್ವಂ'*** ಎಂದರೆ, ಇಲ್ಲ-ಇರಲಿಲ್ಲ-ಮುಂದೆ ಇರುವುದಿಲ್ಲ ಎಂಬ ವಿಧದ ಜ್ಞಾನಕ್ಕೆ ಗೋಚರಿಸುವುದು **'ಮಿಥ್ಯೆ'**ಯು. ಇದು ಮಾಯಾವಾದಿಗಳ

**'ಮಿಥ್ಯಾತ್ವ'**ದ ಪರಿಷ್ಕಾರವು. ಈ ವಿಧ ಮಿಥ್ಯಾವಸ್ತುವನ್ನು ವ್ಯಾವಹಾರಿಕ ಸತ್ಯವೆಂದು ಕರೆಯುವುದು ಅವರ **'ಪರಿಭಾಷೆಯು'**. ಇದು ಜನರನ್ನು ವಂಚಿಸುವ ಮಾತಲ್ಲವೇ? ಅಸತ್ಯವನ್ನೇ ಸತ್ಯವೆಂದು ಕರೆದರೆ ಅದು ಸತ್ಯವಾದೀತೇ? 'ಈಗ ಇದೆ—ಮುಂದಿಲ್ಲ'ವೆಂದರೆ, ಅದು ಮಿಥ್ಯೆಯಾಗುವುದಿಲ್ಲ. ತ್ರಿಕಾಲದಲ್ಲಿಯೂ ಇಲ್ಲವೆಂಬ ಜ್ಞಾನಕ್ಕೆ ವಿಷಯವಾಗಲಿಲ್ಲ. ಮಿಥ್ಯಾತ್ವದಲ್ಲಿ ಒಂದಂಶಕ್ಕೆ (ಈಗಲೂ ಇಲ್ಲವೆಂಬುದಕ್ಕೆ), 'ಈಗಲುಂಟು' ಎಂಬುದರಿಂದ, ಲೋಪವುಂಟಾಯಿತು. ಈಗ ಉಂಟೆಂದು ಒಪ್ಪಿಯೂ, ಜಗತ್ತು ಮಿಥ್ಯೆಯೆಂದು ವಾದಿಸಿದರೆ, ಜ್ಞಾನಿಗಳು ನಿನ್ನನ್ನು ಕಾಗೆಯಂತೆ ಒಕ್ಕಣ್ಣನೆಂದು ಜರಿಯುವುದಿಲ್ಲವೇ? ವಿಚಾರಮಾಡಿ ನೋಡೆನ್ನುತ್ತಾರೆ.

**ಇಲ್ಲಿ ಇಲ್ಲವೆನೆ ಇನ್ನೊಂದು ದೇಶದೊಳಕ್ಕು ಈಗ**
**ಅಲ್ಲಿಲ್ಲವೆನೆ ಇನ್ನೊಂದು ಕಾಲದೊಳಿಪ್ಪುದು**
**ಎಲ್ಲ ಕಾಲವೆಲ್ಲ ದೇಶ ಎಲ್ಲ ಜಗವಿಲ್ಲೆನೆ**
**ಮೊಲ್ಲನ ಕೊಂಬಿನಂತೆ ಜಗವಿಲ್ಲದೆ ಪೊಕ್ಕು ಸಲ್ಲದಲ್ಲ ಈ ವಾಕು**
**ಇನ್ನು ಕಲಹ ಸಾಕು ॥೩॥**

**ಅರ್ಥ:** ಇಲ್ಲಿ—ಈ ದೇಶ(ಸ್ಥಳ)ದಲ್ಲಿ, ಇಲ್ಲವೆನೆ—(ಒಂದು ವಸ್ತು) ಇಲ್ಲವೆಂದರೆ, ಇನ್ನೊಂದು—ಬೇರೆ ಒಂದು, ದೇಶದೊಳಕ್ಕು—ದೇಶದಲ್ಲಿರಬಹುದು; ಈಗ—ಈ ಕಾಲದಲ್ಲಿ, ಅಲ್ಲಿಲ್ಲವೆನೆ—ಅಲ್ಲಿಲ್ಲವೆಂದರೆ, ಇನ್ನೊಂದು ಕಾಲದೊಳಿಪ್ಪುದು—ಬೇರೆ ಕಾಲದಲ್ಲಿರಬಹುದು; ಎಲ್ಲ ಕಾಲವೆಲ್ಲ ದೇಶ ಎಲ್ಲ ಜಗವಿಲ್ಲವೆನೆ—ಎಲ್ಲ ಕಾಲ, ದೇಶ, ಜಗತ್ತುಗಳೇ ಇಲ್ಲವೆಂದರೆ (ಅಥವಾ ಎಲ್ಲ ಕಾಲ ದೇಶಗಳಲ್ಲಿ ಜಗತ್ತಿನ ಯಾವ ಭಾಗವೂ ಇಲ್ಲವೆಂದರೆ), ಮೊಲ್ಲನ ಕೊಂಬಿನಂತೆ—ಮೊಲದ ಕೊಂಬಿನಂತೆ, ಜಗವು—ಜಗತ್ತು, ಇಲ್ಲದೆ ಪೊಕ್ಕು—ಇಲ್ಲದೇ ಹೋಗುವುದು (ಅತ್ಯಂತ ಅಸತ್ಯವಾಗುವುದು); ಸಲ್ಲದಲ್ಲ—ಕೂಡುವುದಿಲ್ಲವಲ್ಲ, ಈ ವಾಕು—ಈ ಮಾತು (ಸದಸದ್ವಿಲಕ್ಷಣವೆಂಬ ನಿನ್ನ ಸಿದ್ಧಾಂತಕ್ಕೆ ಅಸತ್ತೆಂಬುದು ಕೂಡುವುದಿಲ್ಲ); ಇನ್ನು ಕಲಹ ಸಾಕು—ಈ ವಾದವನ್ನು (**ಜಗತ್ತು ಮಿಥ್ಯೆ**ಯೆಂಬ ವಾದವನ್ನು) ನಿಲ್ಲಿಸು.

**ಬಲ್ಲವರೆ ಸತ್ಯವಾಗಿ ಈ ಜಗವಿಲ್ಲೆಂಬರ್ಥವ-**
**ನೊಲ್ಲರೊಲ್ಲರು ಶ್ರುತಿಯ ಸತ್ಯವೆಂಬ ಪದವ**

**ಇಲ್ಲವಾಗಿ ಇನ್ನೊಂದು ಕಡೆಯಿಂದ ತಂದರೆ ಬಾಯೊಳು**
**ಕಲ್ಲು ಬೀಳುವುದಲ್ಲ 'ಮಿಥ್ಯಾ' ಎಂಬ ಪದವ ತತ್ವಾಲಿಯಾೂಳಿಗವ**
**ಉನ್ಮತ್ತನಾಗಿ ನೀನೋದುವ ॥೪॥**

**ಅರ್ಥ:** ಬಲ್ಲವರೆ—ವಿವೇಕಿಗಳು (ಜ್ಞಾನಿಗಳು), ಸತ್ಯವಾಗಿ—ನಿಶ್ಚಯವಾಗಿ, ಈ ಜಗವಿಲ್ಲೆಂಬರ್ಥವನು—ಈ (ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ) ಜಗತ್ತು ಸುಳ್ಳೆಂಬ ವಾದವನ್ನು, ಒಲ್ಲರೊಲ್ಲರು—ಸರ್ವಥಾ ಒಪ್ಪುವುದಿಲ್ಲ (ಬೇಡ, ಕಿವಿಯಿಂದ ಕೇಳಲಾರೆವು ಎನ್ನುತ್ತಾರೆ); ಶ್ರುತಿಯ—ವೇದದಲ್ಲಿರುವ, ಸತ್ಯವೆಂಬ—(ಜಗತ್ತು) ಸತ್ಯವು ಎಂದು ಹೇಳುವ, ಪದವ—ಪದವನ್ನು, ಇಲ್ಲವಾಗಿ—ಇಲ್ಲದಂತೆ ಮಾಡಿ, 'ಮಿಥ್ಯಾ' ಎಂಬ ಪದವ—'ಮಿಥ್ಯೆ' ಎಂಬ ಪದವನ್ನು, ತಂದರೆ—(ಅನ್ಯಾರ್ಥವನ್ನು ಹೇಳಿ) ಸಾಧಿಸಿದರೆ, ಬಾಯೊಳು—(ಹಾಗೆ ಹೇಳುವವನ) ಬಾಯಲ್ಲಿ, ಕಲ್ಲು ಬೀಳುವುದಲ್ಲ—ಕಲ್ಲು ಬೀಳುವುದಿಲ್ಲವೇ? (ಬಾಯಿ ಮುಚ್ಚಿಕೊಳ್ಳಬೇಕಾಗುವುದಿಲ್ಲವೇ); ತತ್ವಾಲಿಯಾೂಳಿಗವ—ತತ್ವಸಮೂಹಗಳ ಪರಿವಾರಗಳನ್ನು (ತತ್ವಪ್ರತಿಪಾದಕ ವಾಕ್ಯಗಳನ್ನೂ, ತದರ್ಥಸಾಧಕ ಇತರ ವಾಕ್ಯಗಳ ಸಮೂಹಗಳನ್ನು), ಉನ್ಮತ್ತನಾಗಿ—ಹುಚ್ಚನಂತೆ (ದುರಾಗ್ರಹಿಯಾಗಿ), ನೀನೋದುವವ—ಓದುವವನು ನೀನು (ದುಷ್ಟವಾದ ಪೂರ್ವಾಗ್ರಹದಿಂದ ಅಲ್ಲಿ ದುರರ್ಥಗಳನ್ನು ಕಾಣುವವನೇ ಸರಿ).

**'ದ್ವಾಸುಪರ್ಣಾ' ಎಂಬ ವೇದ ಭೇದವನ್ನೇ ಪೇಳಲು ಸ-**
**ರ್ವೇಶ ನಾನೆಂಬ ಮತದಾಶೆಯೆ ಸಲ್ಲ**
**ಈಶತನ ಪೋದಮೇಲೆ ಅರ್ಥಿಯೆಂಬ ಮಾತು ವಿಚಾ-**
**ರಿಸಲು ಕೂಡದು ನಿನಗೋಸುಗವಮ್ಮಾ ಈಶತ್ವವನು ಚನ್ನಕೇಶವ**
**ಬಿಡನು ನಿನ್ನ ॥೫॥**

**ಅರ್ಥ:** 'ದ್ವಾಸುಪರ್ಣಾ' ಎಂಬ—**'ದ್ವಾಸುಪರ್ಣಾ'** ಎಂಬ, ವೇದ—ಶ್ರುತಿಯು, ಭೇದವನ್ನೇ ಪೇಳಲು—(ಜೀವೇಶ್ವರರ) ಭೇದವನ್ನೇ ಹೇಳುತ್ತಿರಲು, ಸರ್ವೇಶ ನಾನೆಂಬ—ನಾನೇ ಈಶ್ವರನೆಂಬ, ಮತದಾಶೆ—ಮತದ ಆಶೆಯು (ಹಂಬಲವು), ಸಲ್ಲ—ವ್ಯರ್ಥವು (ಯುಕ್ತವಲ್ಲ); ಈಶತನ—(ಈಶನ) ಈಶತ್ವವು, ಪೋದ ಮೇಲೆ—ಹೋದಮೇಲೆ (ಇಲ್ಲದಿದ್ದರೆ), ಅರ್ಥಿಯೆಂಬ ಮಾತು—(ಈಶನು ಪರಮಪುರುಷಾರ್ಥರೂಪನೆಂಬ ಮಾತು) **ಅಥವಾ**

(ಜೀವನು ಪುರುಷಾರ್ಥಿಎಂಬ ಮಾತು) **ಅಥವಾ** ಜೀವನಿಗೆ ಈಶತ್ವವೆಂಬುದಿಲ್ಲದಿದ್ದರೆ ಈಶತ್ವವನ್ನು ಪಡೆಯುವುದೆಂಬ ಫಲಾಪೇಕ್ಷೆಯು; ವಿಚಾರಿಸಲು ಕೂಡದು—ವಿಚಾರಾರ್ಹವಲ್ಲ (ಚಿಂತಿಸಲೂ ಯೋಗ್ಯವಲ್ಲ); ನಿನಗೋಸುಗವೆ—ನಿನಗಾಗಿಯೇ (ನಿನ್ನ ವಾದವನ್ನು ಸತ್ಯಗೊಳಿಸಲಿಕ್ಕಾಗಿಯೇ), ಅಮ್ಮಾ—ಅಯ್ಯೋ ಮೂರ್ಖ! ಚನ್ನಕೇಶವನು—ಶ್ರೀಹರಿಯು, ಈಶತ್ವವನ್ನು—ಸ್ವಭಾವಸಿದ್ಧವಾದ ತನ್ನ ಗುಣವನ್ನು (ಈಶತ್ವವನ್ನು) ಬಿಡನು—ಬಿಟ್ಟುಕೊಡುವುದಿಲ್ಲ; ನಿನ್ನ—ನಿನ್ನನ್ನು, ಬಿಡನು—ಶಿಕ್ಷಿಸದೆ ಬಿಡುವುದಿಲ್ಲ.

**ವಿಶೇಷಾಂಶ:** ***'ದ್ವಾಸುಪರ್ಣಾ ಸಯುಜಾ ಸಖಾಯಾ*** *ಸಮಾ ನಂ ವೃಕ್ಷಂ ಪರಿಷಸ್ವಜಾತೇ, ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ಯನ್ಯೋ ಅಭಿಚಾಕಸೀತಿ'* (ಶ್ರುತಿ)

ಎಂದರೆ, ಸದಾ ಕೂಡಿಕೊಂಡೇ ಇರುವ, ಪರಸ್ಪರ ಸಖರಾದ, ಜೀವ-ಈಶರೆಂಬ ಎರಡು ಪಕ್ಷಿಗಳು, ದೇಹವೆಂಬ ವೃಕ್ಷವನ್ನು ಆಲಿಂಗಿಸಿಕೊಂಡಿರುವರು. ಇವರಲ್ಲಿ ಜೀವನು ವೃಕ್ಷದ (ದೇಹದ) ಕರ್ಮಫಲವನ್ನು, ಕಹಿಯಾದುದನ್ನು ರುಚಿಕರವೆಂದು ತಿಳಿದು ತಿನ್ನುತ್ತಾನೆ; ಕರ್ಮಫಲವನ್ನು (ಪಾಪಫಲವಾದ ದುಃಖವನ್ನು) ಸ್ಪರ್ಶಿಸದೇ ಈಶನು ಸದಾ ವಿರಾಜಮಾನನಾಗಿರುತ್ತಾನೆ. ಜೀವೇಶರ ಭೇದವನ್ನು ನಿರವಕಾಶವಾದ ಶಬ್ದಗಳಿಂದ ನಿರೂಪಿಸಿದ ಈ ಶ್ರುತ್ಯರ್ಥವನ್ನು ವಿವರಿಸಿ ನಿರ್ಣಯವನ್ನು ಮಹೋಪನಿಷತ್ತು ಹೀಗೆ ಘೋಷಿಸುತ್ತದೆ: ***'ಸರ್ವೋತ್ತಮಂ ಸರ್ವದೋಷವ್ಯಪೇತಂ ಗುಣೈರಶೇಷೈಃ ಪೂರ್ಣಮನ್ಯಂ ಸಮಸ್ತಾತ್। ವೈಲಕ್ಷಣ್ಯಾತ್ ಜ್ಞಾಪಯಂತಿ ಪ್ರವೃತ್ತಾಃ ಸರ್ವೇ ವೇದಾ ಮುಖ್ಯತೋ ನೈವ ಚಾನ್ಯತ್॥'***—ಎಂದರೆ, ಸರ್ವೋತ್ತಮನಾದ ವಿಷ್ಣುವನ್ನು ಸರ್ವದೋಷದೂರನೆಂದೂ, ಸಮಸ್ತ ಶುಭಗುಣಪೂರ್ಣನೆಂದೂ, ಚೇತನಾಚೇತನ ಸಮಸ್ತ ವಸ್ತು ಸಮೂಹದಿಂದ ಅತ್ಯಂತ ಭಿನ್ನನೆಂದೂ, ವಿಲಕ್ಷಣನೆಂದೂ, ತಿಳಿಸಲಿಕ್ಕಾಗಿಯೇ ಸರ್ವವೇದಗಳೂ ಮುಖ್ಯವಾಗಿ ಪ್ರವೃತ್ತವಾಗಿವೆ—ಬೇರೇನನ್ನೂ (ಅಭೇದವನ್ನಾಗಲಿ ಭೇದಾಭೇದವನ್ನಾಗಲಿ) ಹೇಳಲಿಕ್ಕೆ ಅಲ್ಲವೇ ಅಲ್ಲ. ಜೀವನಿಗೆ ಈಶತ್ವವಿಲ್ಲೆಂದು ಶ್ರುತಿಸಿದ್ಧವಾದ ಮೇಲೆ, ಈಶತ್ವವನ್ನು ಚಿಂತಿಸುವುದು ಸಹ ಹುಚ್ಚುತನವೆಂದೂ, ಸ್ವರೂಪದಲ್ಲಿಯೇ ಇಲ್ಲದ ಈಶತ್ವವು ಪುರುಷಾರ್ಥವಾಗಲಾರದೆಂದೂ ಯುಕ್ತಿ ಸಹಿತ ನಿರೂಪಿಸಲಾಗಿದೆ. ತನ್ನ ಈಶತ್ವವನ್ನು ಕಾಂಕ್ಷಿಸುವ ಜೀವನನ್ನು ಈಶನು ಯೋಗ್ಯ-

ದಂಡನೆಗೆ ಗುರಿಮಾಡದೇ ಬಿಡನು. ***'ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ'***—ಅರ್ಹತೆಯಿಲ್ಲದ್ದನ್ನು ಇಚ್ಛಿಸುವವನು ಅಧಃಪಾತವನ್ನೇ ಹೊಂದುತ್ತಾನೆ.

**ಈ ಶ್ರುತಿಬಲದಿಂದ ಈಶತೆಯ ಪೋಕಳಿಸುವ**
**ಆಶೆ ಬೇಡ ಈಶತ್ವ ಪೋದಮೇಲೆ**
**ಈ ಶ್ರುತಿ ಈಶನೈಕ್ಯ ಪೇಳ್ವದೈಸೆಯವಾಗೀಶತ್ವವ**
**ಪುಸಿಮಾಡದದರಿಂದಲೆ ಹೇಸಿ ಇಂತಕ್ಕು ಅನ್ಯೋನ್ಯಾಶ್ರಯ ಸಿಕ್ಕು**
**ಸಾಕು ಸಾಕು ನಿನ್ನಯ ಸೊಕ್ಕು ॥೬॥**

**ಅರ್ಥ:** ಈ ಶ್ರುತಿಬಲದಿಂದ—**'ದ್ವಾಸುಪರ್ಣಾ'** ಎಂಬ ಶ್ರುತಿಬಲ-ವಿರುವುದರಿಂದ, ಈಶತೆಯ—ಈಶತ್ವವನ್ನು, ಪೋಕಳಿಸುವ—ಸುಳ್ಳುಮಾಡುವ (ಶ್ರೀಹರಿಗೆ ಈಶತ್ವವನ್ನು ಇಲ್ಲದಂತೆ ಮಾಡುವ), ಆಶೆ ಬೇಡ-ಆಶೆಯನ್ನು ಬಿಡು; ಈಶತ್ವ ಪೋದಮೇಲೆ—(ಜೀವನಿಗೆ) ಈಶತ್ವವಿಲ್ಲದಿದ್ದಮೇಲೆ, ಈ ಶ್ರುತಿ—ಈ ಶ್ರುತಿಯು, ಈಶನೈಕ್ಯ—ಜೀವನಿಗೆ ಈಶನಿಂದ ಐಕ್ಯವನ್ನು, ಪೇಳ್ವದೇ—ಹೇಳುವುದುಂಟೇ? ಐಸೆಯ ವಾಕ್—(ಹೀಗಿರಲು) ಈ ಪ್ರಕಾರ-ದಿಂದ ಹೇಳುವ ನಿನ್ನ ಮಾತು, ಈಶತ್ವವ—ಶ್ರೀಹರಿಯ ಈಶತ್ವವನ್ನು, ಪುಸಿಮಾಡಿದದರಿಂದಲೆ—ಸುಳ್ಳು ಮಾಡುವುದರಿಂದಲೇ, ಹೇಸಿ—ಹೊಲಸು ಮಾನವನೆ! ಇಂತಕ್ಕು—(ಜೀವೇಶರ ಐಕ್ಯವಾದವು) ಇಷ್ಟು ಹೊಲಸಾದುದು, ದೋಷಯುಕ್ತವಾದುದು; ಅನ್ಯೋನ್ಯಾಶ್ರಯ ಸಿಕ್ಕು—(ಒಂದೇ ದೇಹದಲ್ಲಿರುವ ಜೀವ—ಈಶರು) ಪರಸ್ಪರ ಆಶ್ರಿತರೆಂಬ ದೋಷಕ್ಕೂ (ನಿನ್ನ ವಾದವು) ಸಿಕ್ಕಿಬೀಳುತ್ತದೆ (ಜೀವನು ಕರ್ಮಲೇಪವುಳ್ಳವನು, ಅಸ್ವತಂತ್ರ ಮತ್ತು ದುಃಖಿ-ಯೆಂದೂ, ಈಶನು ನಿರ್ಲಿಪ್ತ, ನಿತ್ಯ ಸುಖಿ ಮತ್ತು ಸ್ವತಂತ್ರನೆಂದೂ ಈ ಶ್ರುತಿಯು ಹೇಳುತ್ತಿರಲು ಈಶನು ಜೀವನನ್ನಾಶ್ರಯಿಸುವವನು ಹೇಗಾದನು?), ನಿನ್ನಯ ಸೊಕ್ಕು—ನಿನ್ನ ಸೊಕ್ಕು (ನಿನ್ನ ಮತದಲ್ಲಿನ ದುರಭಿಮಾನವು ಅಥವಾ ಮೂರ್ಖತೆಯಿಂದಾದ ಉನ್ಮತ್ತತನವು), ಸಾಕು ಸಾಕು—ಬಿಡು (ಅರ್ಥ-ಶೂನ್ಯವಾದ್ದರಿಂದ ನಿಲ್ಲಲಿ).

**ಅಂದು ಭೃಗುಮುನಿ ಬಂದು ಚಂದದ ವಕ್ಷವ ಕಾಲಿ-**
**ನಿಂದಲೊದೆಯಲವನ ಕುಂದು ನೋಡದೆ**

**ಇಂದಿರೇಶ ತನ್ನ ಸರ್ವೇಶ್ವರತ್ವ ರಕ್ಷಿಸಿದ-**
**ನೆಂದು ಕೊಂಡಾಡಿಸಿದ ಶ್ರುತಿಯಿಂದ ಹರಿಯ ತನ್ನಂತುಪಕಾರಿಯ**
**ಕುಂದೆಣಿಸದೆಂದರಿಯ ॥೭॥**

**ಅರ್ಥ:** ಅಂದು — ಹಿಂದೆ ಒಂದು ದಿನ, ಭೃಗುಮುನಿ — ಭೃಗುಋಷಿಗಳು, ಬಂದು — (ವೈಕುಂಠಕ್ಕೆ) ಬಂದು, ಚಂದದ ವಕ್ಷವ — ಮಂಗಳಸ್ವರೂಪದ ವಕ್ಷ-ಸ್ಥಳವನ್ನು (ಅಪ್ರಾಕೃತ ದೇಹದ ಎದೆಯ ಮೇಲೆ), ಕಾಲಿನಿಂದಲಿ — ಕಾಲಿಂದ, ಒದೆಯಲು — ಹೊಡೆಯಲು, ಅವನ ಕುಂದು ನೋಡದೆ — ಆ ಭೃಗುಋಷಿಗಳ ದೋಷವನ್ನು (ಅಪರಾಧವನ್ನು) ಎಣಿಸದೆ, ಇಂದಿರೇಶ — ಲಕ್ಷ್ಮೀಪತಿಯು, ತನ್ನ ಸರ್ವೇಶ್ವರತ್ವ — ಸರ್ವೋತ್ತಮತ್ವವನ್ನು, ರಕ್ಷಿಸಿದನು — ಉಳಿಸಿಕೊಂಡನು. ಎಂದು ಕೊಂಡಾಡಿಸಿದ — ಎಂದು (ಭೃಗುಋಷಿಗಳಿಂದ ಋಷಿಮಂಡಲದಲ್ಲಿ) ಹೊಗಳಿಸಿದನು. ಆ ಶ್ರುತಿಯಿಂದ — (ಸರ್ವೋತ್ತಮನೆಂದು ಘೋಷಿಸುವ ಪ್ರಸಿದ್ಧ ಮಹೋಪನಿಷತ್ತಿನ) ಸ್ಪಷ್ಟವಾದ ವೇದವಾಕ್ಯದಿಂದ, ಹರಿಯ — ಶ್ರೀಹರಿಯನ್ನು, ತನ್ನಂತುಪಕಾರಿಯ — ಅವನಂಥ ಉಪಕಾರಿಯನ್ನು, ಕುಂದೆಣಿಸ-ದೆಂದು — ನಿರ್ದೋಷಿಯೆಂದು, ಅರಿಯ — ತಿಳಿಯೆಯ? (ಎಷ್ಟು ಮಂದ-ಮತಿಯೋ ನೀನು!)

**ವಿಶೇಷಾಂಶ:** (೧) ಮಹೋಪನಿಷತ್ತಿನ ವಾಕ್ಯವನ್ನು ಅರ್ಥಸಹಿತವಾಗಿ ಇದೇ ಪದದ ೫ನೇ ನುಡಿಯ ವಿಶೇಷಾಂಶದಲ್ಲಿ ಕೊಡಲಾಗಿದೆ.

(೨) ಅಧೀಶ್ವರರೆಂದು ಲೋಕದಲ್ಲಿ ಪ್ರಸಿದ್ಧರಾದ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂವರಲ್ಲಿ ಯಾರು ಶ್ರೇಷ್ಠರೆಂದು ನಿರ್ಣಯಿಸಿಕೊಳ್ಳಲಿಕ್ಕಾಗಿ, ಋಷಿ-ಸಮೂಹವು ಭೃಗುಋಷಿಗಳನ್ನು, ಆ ಮೂವರಲ್ಲಿ ಹೋಗಿ ಬಂದು ತಮ್ಮ ಅನುಭವಗಳನ್ನು ತಿಳಿಸಬೇಕಾಗಿ, ಕಳುಹಿಸಿಕೊಟ್ಟಿತು. ಆ ನಿಯೋಗವನ್ನು ಹೊತ್ತು, ಹೊರಟ ಭೃಗುಋಷಿಗಳು ಕೊನೆಗೆ ವೈಕುಂಠಕ್ಕೆ ಬಂದರು. ಲಕ್ಷ್ಮೀ-ದೇವಿಯ ತೊಡೆಯಲ್ಲಿ ತಲೆಯಿಟ್ಟು ಮಲಗಿದ್ದ ವಿಷ್ಣುವನ್ನು ಕಂಡು, ಭೃಗು-ಋಷಿಗಳು ಕಾಲಿನಿಂದ ಆತನ ಎದೆಗೆ ಒದ್ದರು. ವಿಷ್ಣುವು ದಿಗ್ಗನೆದ್ದು ಮಂಚ-ದಿಂದ ಕೆಳಗಿಳಿದು, ಲಕ್ಷ್ಮೀಸಮೇತನಾಗಿ, ಭೃಗುಋಷಿಗಳಿಗೆ ನಮಸ್ಕರಿಸಿ ಉಪಚರಿಸಿದನು. ಭೃಗುಋಷಿಗಳು ಮತ್ತೆ ಯಜ್ಞಶಾಲೆಗೆ ಬಂದು ಋಷಿಸಭೆ-ಯಲ್ಲಿ ತಮ್ಮ ಅನುಭವಗಳನ್ನು ವಿವರಿಸಿದರು. ಬ್ರಹ್ಮನು, ಭೃಗುಋಷಿಗಳು ಬಂದಾಗ ಉದಾಸೀನನಾಗಿ ವರ್ತಿಸಿದುದನ್ನೂ, ಕೈಲಾಸಪತಿಯು ಸಿಟ್ಟಿಗೆದ್ದು

ಹೊಡೆಯಲು ಬಂದದ್ದನ್ನೂ ಕೇಳಿದ ಆ ಸಭೆಯು, ವೈಕುಂಠದಲ್ಲಿ ಭೃಗುಋಷಿ-ಗಳಿಗೆ ಶ್ರೀವಿಷ್ಣುವಿನಿಂದ ದೊರೆತ ಸತ್ಕಾರವನ್ನು ಕೇಳಿ ಆಶ್ಚರ್ಯಗೊಂಡು ತಮ್ಮ ಸಂಶಯ ಪರಿಹಾರವಾಯಿತೆಂದರು. **ವಿಷ್ಣುವೇ ಸರ್ವೋತ್ತಮನೆಂದೂ,** ಸಂಸಾರದ ಬಿಡುಗಡೆ ಮತ್ತು ಮೋಕ್ಷದ ಪ್ರಾಪ್ತಿಯು ಆತನಿಂದಲೇ ಎಂಬ ದೃಢನಿಶ್ಚಯವನ್ನು ಹೊಂದಿದರು. ಹೀಗೆಂಬ ಕಥಾ ತಾತ್ಪರ್ಯವನ್ನು ನಿರೂಪಿಸುವ ಶ್ರೀಮದ್ಭಾಗವತ ವಾಕ್ಯಗಳು ಹೀಗಿವೆ:

*'ಅಥೋ ಜಗಾಮ ವೈಕುಂಠಂ ಯತ್ರ ದೇವೋ ಜನಾರ್ದನಃ।*
*ಶಯಾನಂ ಶ್ರಿಯ ಉತ್ಸಂಗೇ ಪದಾ ವಕ್ಷಸ್ಯ ತಾಡಯತ್॥*
*ತತ ಉತ್ಥಾಯ ಭಗವಾನ್ ಸಹ ಲಕ್ಷ್ಮ್ಯಾ ಸತಾಂ ಗತಿಃ।*
*ಸ್ವತಲ್ಪಾದವರುಹ್ಯಾಥ ನನಾಮ ಶಿರಸಾ ಮುನಿಮ್॥*
*ಪುನಶ್ಚ ಸತ್ರಮಾವ್ರಜ್ಯ ಮುನೀನಾಂ ಬ್ರಹ್ಮವಾದಿನಾಮ್।*
*ಸ್ವಾನುಭೂತಮಶೇಷೇಣ ರಾಜನ್ ಭೃಗುರವರ್ಣಯತ್॥*
*ತನ್ನಿಶಮ್ಯಾಥ ಮುನಯೋ ವಿಸ್ಮಿತಾ ಮುಕ್ತ ಸಂಶಯಾಃ।*
*ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮ್॥*

**ಪದ ೬**

ರಾಗ-ಮೆಚಬಾಳಿ; ತಾಳ-ಅಟ

**ಕಾಲಿಲ್ಲ ಕರವಿಲ್ಲ ಕರ್ಣಂಗಳಿಲ್ಲ**
**ನಾಲಿಗೆಯಿಲ್ಲವೆನಲು ಓರ್ವ ಮಾನವ**
**ಈ ಲೋಕದಿ ಚೆಲುವ ಕಾಮನ ಗೆಲುವಾಕಾರವ**
**ಶ್ರೀಲೋಲನ ನಿರಾಕಾರನೆಂದು ಪೇಳ್ವರೇ**
**ಸಂತರಿದ ಕೇಳ್ವರೇ ಇಂತೆನಲು ಬಾಳ್ವರೇ** ॥೧॥

**ಅರ್ಥ:** ಓರ್ವ ಮಾನವ—ಯಾವನೊಬ್ಬ ಮನುಷ್ಯನು (ಅಜ್ಞಮಾನ-ವನು), ಕಾಲಿಲ್ಲ ಕರವಿಲ್ಲ—(ಶ್ರೀಹರಿಯ ರೂಪಗಳಿಗೆ) ಕಾಲುಕೈಗಳಿಲ್ಲ, ಕರ್ಣಂಗಳಿಲ್ಲ—ಕಿವಿಗಳಿಲ್ಲ, ನಾಲಿಗೆಯಿಲ್ಲವು—ನಾಲಿಗೆಯೂ ಇಲ್ಲ, ಎನಲು —ಎಂದು ಹೇಳಿದರೆ, ಈ ಲೋಕದಿ—ಈ ಜಗತ್ತಿನಲ್ಲೆಲ್ಲ, ಚೆಲುವ—ಸುಂದರನೆಂಬ, ಕಾಮನ ಗೆಲುವಾಕಾರವ—ಮನ್ಮಥನನ್ನು ಜಯಿಸುವ ರೂಪ-ವುಳ್ಳ, ಶ್ರೀಲೋಲನ—ಶ್ರೀಲೋಲನನ್ನು (ಸೌಂದರ್ಯನಿಧಿಯಾದ ಲಕ್ಷ್ಮೀ-ದೇವಿಯನ್ನೂ ಆಕರ್ಷಿಸಿ ಸುಖಪಡಿಸುವ ಶ್ರೀಹರಿಯನ್ನು), ಸಂತರು—

ಸಜ್ಜನರು (ಜ್ಞಾನಿಗಳು), ನಿರಾಕಾರನೆಂದು—(ಶ್ರೀಹರಿಯು) ಆಕಾರಶೂನ್ಯನೆಂದು (ರೂಪವಿಲ್ಲದವನೆಂದು), ಹೇಳುವರೇ, ಇದ ಕೇಳ್ವರೇ—(ನಿರಾಕಾರನೆಂಬುದನ್ನು) ಕೇಳುವರೇ (ಕಿವಿ ಮುಚ್ಚಿಕೊಳ್ಳದಿರುವರೇ), ಇಂತೆನಲು—ನಿರಾಕಾರನೆಂದೇ ತಿಳಿದು ಹೇಳಿದರೆ, ಬಾಳ್ವರೇ—(ಹಾಗೆ ಹೇಳುವವರು) ಬಾಳುವರೇ? (ಜೀವಿತವನ್ನು ಸಾರ್ಥಕಪಡಿಸಿಕೊಳ್ಳುವರೇ?)

**ಗುಣೆಯಲ್ಲವೆಂಬ ಮಾತು ನಿನಗೆ ಹೀನವಾದರೆ**
**ಅನಂತನನೀಮಾತ ನೀನೆನಬಹುದೇ।**
**ಜನ್ಮಮಾಯಾವಿದೆಂದು ನಿನ್ನನೆ ಮುನಿವ ಮಾನವ**
**ಸನಕಾದಿ ಮುನಿಮಾನ್ಯನ ಮಾಯಾವಿಯೆಂಬರೇ, ಬುಧರಿದ**
**ಕೈಗೊಂಬರೇ, ಬಾಯೊಳು ಮಣ್ಣತುಂಬರೇ ॥೨॥**

**ಅರ್ಥ:** ಗುಣೆಯಲ್ಲವೆಂಬ ಮಾತು—ಗುಣವಿಲ್ಲದವನೆಂಬ ಮಾತು, ನಿನಗೆ—ನಿನ್ನ ವಿಷಯಕ್ಕೆ (ನಿನ್ನನ್ನು ಅನ್ಯರು ಹೀಗೆಂದರೆ), ಹೀನವಾದರೆ—ಅಪಮಾನಕರವಾದರೆ (ಕೀಳೆಂದೆನಿಸಿದರೆ), ಅನಂತನನು—ಅನಂತ ಸದ್ಗುಣಿಯಾದ ಶ್ರೀಹರಿಯನ್ನು, ಈ ಮಾತ—ಗುಣಶೂನ್ಯನೆಂದು, ನೀನೆನಬಹುದೆ—ನೀನು ಹೇಳುವುದು ಸರಿಯೆ? ಮಾನವ—ಹೇ ಮೂರ್ಖಮಾನವಾ! ಜನ್ಮಮಾಯಾವಿಯೆಂದು—ಸ್ವರೂಪದಿಂದಲೇ (ಹುಟ್ಟಿನಿಂದಲೇ—ಸ್ವಭಾವದಿಂದಲೇ) ಮಿಥ್ಯಾಜ್ಞಾನಿಯೆಂದು, ನಿನ್ನನೆ—ನಿನ್ನ ವಿಷಯದಲ್ಲೇ, ಮುನಿವ—ಕುಪಿತನಾಗುವನು (ಶ್ರೀಹರಿಯ ಕೋಪಕ್ಕೆ ಗುರಿಯಾಗಿ ನಾಶಹೊಂದುವಿ); ಸನಕಾದಿ ಮುನಿಮಾನ್ಯನ—ಸನಕಾದಿ ಮುನಿವಂದ್ಯನಾದ ಶ್ರೀಹರಿಯನ್ನು, ಮಾಯಾವಿಯೆಂಬರೇ—ಕಪಟಿ ಎಂಬುವರೇ (ನಿರಸ್ತ ಕುಹಕನನ್ನು, ಮಿಥ್ಯಾಜಗತ್ತನ್ನು ತೋರಿಸುವನೆನ್ನುವರೇ) ಅಥವಾ (ಮಾಯಾವಿ—ಪ್ರಾಕೃತದೇಹವುಳ್ಳ ಜೀವನೆಂದೆನ್ನುವರೇ) ಬುಧರು—ಜ್ಞಾನಿಗಳು (ವಿವೇಕಿಗಳು), ಇದ—ಈ ನಿನ್ನ ಮಾತನ್ನು, ಕೈಗೊಂಬರೇ—ಒಪ್ಪುವರೇ; ಬಾಯೊಳು—(ಹೀಗೆ ನುಡಿಯುವ) ನಿನ್ನ ಬಾಯಲ್ಲಿ, ಮಣ್ಣ ತುಂಬರೇ—ಮಣ್ಣು ತುಂಬಲಿಕ್ಕಿಲ್ಲವೇ? (ಈ ಹೊಲಸು ನುಡಿವ ಬಾಯಿಂದ ಮಣ್ಣು ಮುಕ್ಕಿಸುತ್ತಾರೆ.)

**ಇಂತು ಪರಮತವೆಂಬ ಕಂಥೆಯ ಪರಿದು ಬಲು**
**ಭ್ರಾಂತುಗೊಳಿಸಿದ ಗುರುಚಿಂತಾಮಣೆಯ।**

**ಸಂತತ ನೆನೆವುದು ಅಂತ್ಯವಿಲ್ಲದ ಪದವ**
**ಸಂತೋಷತೀರ್ಥರ ಕೃಪೆಯಿಂದೈದುವೆನು, ಅಲ್ಲಿ ಶ್ರೀಮಾಧವನು,**
**ಈವ ಮೋದವನು॥೩॥**

**ಅರ್ಥ:** ಇಂತು ಪರಮತವೆಂಬ—ಹೀಗೆ, ಮಾಯಾವಾದ ಮತವೆಂಬ, ಕಂಥೆಯ—ಚಿಂದಿಬಟ್ಟೆಯನ್ನು, ಪರಿದು—ಹರಿದು, (ಆ ಮಾಯಾವಾದವನ್ನು ಖಂಡಿಸಿ), ಬಲು—ಅತಿಶಯವಾಗಿ, ಭ್ರಾಂತುಗೊಳಿಸಿದ—ದಿಗ್ಭ್ರಮೆಗೊಳಿಸಿದ, ಗುರುಚಿಂತಾಮಣಿಯ—ಗುರುಶ್ರೇಷ್ಠರಾದ ಶ್ರೀಮಧ್ವಾಚಾರ್ಯರನ್ನು, ಸಂತತ—ಎಲ್ಲ ಕಾಲದಲ್ಲಿ, ನೆನೆವುದು—ಸ್ಮರಿಸತಕ್ಕದ್ದು; ಅಂತ್ಯವಿಲ್ಲದ—ನಿತ್ಯವಾದ, ಪದವ ಸ್ಥಾನವನ್ನು (ಮೋಕ್ಷವನ್ನು), ಸಂತೋಷತೀರ್ಥರ—ಶ್ರೀ ಆನಂದತೀರ್ಥರ, ಕೃಪೆಯಿಂದ—ದಯದಿಂದ, ಐದುವೆನು—ಹೊಂದುವೆನು; ಅಲ್ಲಿ—ಆ ಮೋಕ್ಷಸ್ಥಾನದಲ್ಲಿ, ಶ್ರೀಮಾಧವನು—ಶ್ರೀನಾರಾಯಣನು, ಮೋದವನು—ನಿತ್ಯಾನಂದವನ್ನು, ಈವ—ಕರುಣಿಸುತ್ತಾನೆ (ಹೀಗೆ ತಿಳಿಯಬೇಕೆಂಬುದು ನನ್ನ ದೃಢನಿಶ್ಚಯ).

*ಮಂಗಳಾಚರಣ-೪*

**ಹತ್ತು ಮತ್ತೆ ನಾಲ್ಕು ಲೋಕದ ಜೀವರ ಮೊತ್ತವ ತನ್ನ**
**ಯುಕ್ತಿಯಿಂದ ಮಾಡಿ ತತ್ತತ್ಸ್ಥಾನದೊಳಿಟ್ಟ**
**ಸತ್ಯಲೋಕದೊಡೆಯನಡಿಗೆ ಪೊಡವಡುವೆನು ಹರಿ-**
**ತತ್ವದ ಬಿತ್ತರದರ್ಥಿಯ ತೋರುತಿರಲಿ**
**ಅತ್ತಿತ್ತ ಪೋಗದಂತೆ ಚಿತ್ತವೃತ್ತಿಯಲಿರಲಿ, ಮು-**
**ಕುತಿಪಥದತ್ತಲೆ, ಮನವ ನುಡಿಸುತಿರಲಿ, ತನ್ನ**
**ಅರ್ಥಿಯಿಂದ ಭೃತ್ಯನ ಭಾರವ ನಿತ್ಯದಿ ಪೊತ್ತಿರಲಿ ॥೪॥**

**ಅರ್ಥ:** ಹತ್ತು ಮತ್ತೆ ನಾಲ್ಕು—ಹದಿನಾಲ್ಕು, ಲೋಕದ—ಲೋಕಗಳ, ಜೀವರ ಮೊತ್ತವ ಮಾಡಿ—ಎಲ್ಲ ಜೀವರನ್ನು ಒಟ್ಟುಗೂಡಿಸಿ, ತನ್ನ ಯುಕ್ತಿಯಿಂದ—ತನ್ನ ಯೋಗಬಲದಿಂದ (ಹರಿಸ್ಮರಣಯುಕ್ತನಾಗಿ), ತತ್ತತ್ ಸ್ಥಾನದೊಳಿಟ್ಟ—ಅವರವರ ಯೋಗ್ಯಸ್ಥಾನಗಳಲ್ಲಿಡುವ, ಸತ್ಯಲೋಕದೊಡೆಯನಡಿಗೆ—ಸತ್ಯಲೋಕಾಧಿಪತಿಯ (ಬ್ರಹ್ಮದೇವನ) ಪಾದಗಳಿಗೆ, ಪೊಡವಡುವೆನು—ನಮಸ್ಕರಿಸುತ್ತೇನೆ; ಹರಿತತ್ವದ—ಶ್ರೀಹರಿಮಹಿಮೆಗಳ (ವಿಷ್ಣುಸ್ವರೂಪದ), ಬಿತ್ತರದರ್ಥಿಯ—ವಿಸ್ತಾರದ ಉತ್ಸಾಹವನ್ನು (ಯಥಾ-

ಯೋಗ್ಯವಾಗಿ ಪೂರ್ಣತಿಳಿಯಬೇಕೆಂಬ ಆಶೆಯನ್ನು), ತೋರುತಿರಲಿ— ಅನುಗ್ರಹಿಸುತ್ತಿರಲಿ (ಮನಸ್ಸಿಗೆ ಉಂಟುಮಾಡುತ್ತಿರಲಿ); ಅತ್ತಿತ್ತ ಪೋಗದಂತೆ —ಅನ್ಯತ್ರ (ಭಗವದಿತರ ವಸ್ತುಗಳ ಕಡೆಗೆ) ಹೋಗದಂತೆ, ಚಿತ್ತವೃತ್ತಿ-ಯಿರಲಿ—ಮನಸ್ಸಿನ ಗತಿಯು (ಏಕತ್ರ) ಇರಲಿ; ಮುಕುತಿಪಥದತ್ತಲೆ— ಮೋಕ್ಷಮಾರ್ಗದ ಕಡೆಯೇ, ಮನವ—ಮನಸ್ಸನ್ನು, ನಡೆಸುತಿರಲಿ— ಪ್ರೇರಿಸುತ್ತಿರಲಿ; ತನ್ನ ಅರ್ಥಿಯಿಂದ—(ಸಹಜವಾಗಿ ಭಕ್ತರಲ್ಲಿರುವ) ತನ್ನ ವಾತ್ಸಲ್ಯದಿಂದ, ಭೃತ್ಯನ ಭಾರವ—ಭಕ್ತರನ್ನುದ್ಧರಿಸುವ ಹೊರೆಯನ್ನು, ನಿತ್ಯದಿ ಪೊತ್ತಿರಲಿ—ಸದಾ ವಹಿಸಿರಲಿ.

**ರಕ್ಕಸರಕ್ಕಸರುಕ್ಕ ತಗ್ಗಿಸಿದವಗೆ ದಕ್ಷನ ಶಿಕ್ಷಿಸಿದವನಿಗೆ**
**ಯಕ್ಷಪತಿಯ ಸಖನೆನಿಪ ಕೈಲಾಸದ**
**ಮುಕ್ಕಣ್ಣಗಾನು ಕೈಯ ಮುಗಿವೆನು**
**ಮುಖ್ಯಮಾನಸತತ್ವಕಭಿಮಾನಿಯಾಗುವನು**
**ದುಷ್ಕರ್ಮಮತಿಯ ನಿನ್ನ ಕೃಪೆಯಿಂದ ನೀಗುವೆನು**
**ಶುಷ್ಕವಾದಿಗಳ ಕಂಡಕಂಡಲ್ಲಿ ನಗುವೆನು,**
**ಭಕ್ತಿಪಥವನೆ ಹಿತವೆಂದು ಬಾಗುವೆನು,**
**ನೀನಿತ್ತ ಜ್ಞಾನದಿ ಮುಕುತಿಗೆ ಪೋಗುವೆನು ॥೫॥**

**ಅರ್ಥ:** ಕಕ್ಕಸ—ಕರ್ಕಶರಾದ (ಉಗ್ರರಾದ), ರಕ್ಕಸರ—ರಾಕ್ಷಸರ, ಉಕ್ಕ —ಏಳಿಗೆಯನ್ನು, ತಗ್ಗಿಸಿದವಗೆ—ಕುಗ್ಗಿಸಿದವನೂ, ದಕ್ಷನ—ದಕ್ಷಪ್ರಜಾಪತಿ-ಯನ್ನು, ಶಿಕ್ಷಿಸಿದವಗೆ—ಶಿಕ್ಷೆಮಾಡಿದವನೂ, ಯಕ್ಷಪತಿಯ—ಕುಬೇರನ, ಸಖನೆನಿಪ—ಸಖನೂ ಆದ, ಕೈಲಾಸದ ಮುಕ್ಕಣ್ಣನಿಗೆ—ಕೈಲಾಸಾಧಿಪತಿ-ಯಾದ ತ್ರಿನೇತ್ರವುಳ್ಳ ಮಹದೇವನಿಗೆ, ಆನು—ನಾನು, ಕೈಯ ಮುಗಿವೆನು —ಕೈಜೋಡಿಸಿ ಬೇಡುತ್ತೇನೆ; ಮುಖ್ಯಮಾನಸತತ್ವಕಭಿಮಾನಿಯಾಗುವನು —(ನೀನು) ಮನಸ್ಸಿನ ಮುಖ್ಯಾಭಿಮಾನಿಯಾಗಿರುವಿ; ದುಷ್ಕರ್ಮಮತಿಯ— ದುಷ್ಕರ್ಮದಲ್ಲಿ (ತೊಡಗುವ) ಬುದ್ಧಿಯನ್ನು, ನಿನ್ನ ಕೃಪೆಯಿಂದ—ನಿನ್ನ ದಯ-ದಿಂದ, ನೀಗುವೆನು—ತ್ಯಜಿಸುವೆನು; ಶುಷ್ಕವಾದಿಗಳ—ವ್ಯರ್ಥವಾದಿಗಳನ್ನು (ಕುತರ್ಕಗಳಿಂದ ಸಿದ್ಧಾಂತ ತತ್ವಗಳನ್ನು ಅಪಲಾಪಮಾಡುವವರನ್ನು), ಕಂಡ-ಕಂಡಲ್ಲಿ—ಎಲ್ಲಿ ಕಂಡರೂ, ನಗುವೆನು—(ಅವರ ಅಜ್ಞಾನಕ್ಕಾಗಿ) ನಗುತ್ತೇನೆ; ಭಕ್ತಿಪಥವನೆ—ಭಕ್ತಿ ಮಾರ್ಗವನ್ನೇ, ಹಿತವೆಂದು—ಶ್ರೇಯಃಸಾಧನವೆಂದು

(ತಿಳಿದು), ಬಾಗುವೆನು—ತಗ್ಗಿ ನಡೆಯುವೆನು (ಮನಸ್ಸನ್ನು ಭಕ್ತಿಮಾರ್ಗದತ್ತ ಒಲಿಸಿಕೊಳ್ಳುವೆನು); ನೀನಿತ್ತ ಜ್ಞಾನದಿ—ನೀನು ಅನುಗ್ರಹಿಸುವ ಜ್ಞಾನದಿಂದ, ಮುಕುತಿಗೆ—ಮೋಕ್ಷಕ್ಕೆ, ಪೋಗುವೆನು—ಹೋಗುತ್ತೇನೆ.

**ಸಕಲಸುರರಂಘ್ರಿಗೆರಗುವೆನು ವಿಕಸಿತ ಪಾದಪದುಮವ ನೆನೆದು**
**ನಿಖಿಲಜಗ ಕಾವ ನರೆಯಣನ ಕಥೆಯ ಭಕುತಿಯಿಂದದನು ಬಣ್ಣಿಸುವೆನು।**
**ಯುಕುತಿಕೋವಿದರನು ಕುಣಿಸುವೆನು**
**ಅಖಿಲ ಕುಜನರನ್ನು ದಣಿಸುವೆನು, ಈ ಖಳರ ಮತವನು ಮಾಣಿಸುವೆನು**
**ಮುಕುತಿಯ ಸುಖವನುಣಿಸುವೆನು ॥೬॥**

**ಅರ್ಥ:** ಸಕಲಸುರರಂಘ್ರಿಗೆ—ಎಲ್ಲ ದೇವತೆಗಳ ಪಾದಗಳಿಗೆ ಎರಗುವೆನು ನಮಸ್ಕರಿಸುತ್ತೇನೆ; ವಿಕಸಿತ ಪಾದಪದುಮವ—(ಅವರ)ವಿರಾಜಿಸುವ ಪಾದ-ಪದ್ಮಗಳನ್ನು, ನೆನೆದು—ಸ್ಮರಿಸಿ, ನಿಕಿಲಜಗ ಕಾವ—ಸಕಲ ಜಗತ್ತನ್ನು ರಕ್ಷಿಸುವ, ನರೆಯಣನ—ನಾರಾಯಣನ, ಕಥೆಯ—ಮಹಿಮೆಗಳನ್ನು, ಭಕುತಿಯಿಂದ—ಭಕ್ತಿಯಿಂದ, ಅದನು—ಅದನ್ನೇ (ಇನ್ನಿತರ ವಿಷಯಗಳನ್ನು ತೊರೆದು), ಬಣ್ಣಿಸುವೆನು—ವರ್ಣಿಸುತ್ತೇನೆ; ಯುಕುತಿಕೋವಿದರನು—ಯುಕ್ತಿಶಾಸ್ತ್ರದಲ್ಲಿ ಪರಿಣತರಾದವರನ್ನು (ಸತ್ತರ್ಕಪಂಡಿತರನ್ನು) ಕುಣಿಸುವೆನು—ಆನಂದದಿಂದ ನರ್ತಿಸುವಂತೆ ಮಾಡುತ್ತೇನೆ; ಅಖಿಲ ಕುಜನರನ್ನು—ಸಮಸ್ತ ದುರ್ವಾದಿ-ಗಳನ್ನು, ದಣಿಸುವೆನು—(ಆಯಾಸಪಡಿಸಿ) ಸೋಲಿಸುವೆನು (ನನ್ನ ಯುಕ್ತಿ-ಗಳನ್ನು ಎದುರಿಸಲಾಗದೆ ಸೋತು ಸುಮ್ಮನಾಗುವಂತೆ ಮಾಡುತ್ತೇನೆ); ಈ ಖಳರ—ಈ ದುಷ್ಟರ, ಮತವನು—ದುರ್ಮತವನ್ನು, ಮಾಣಿಸುವೆನು—ಸುಜನರಿಂದ ನಿರಾಕರಣೆ ಮಾಡಿಸುತ್ತೇನೆ. ಮುಕುತಿಯ—ಮೋಕ್ಷದ, ಸುಖ-ವನುಣಿಸುವೆನು (ಆ ಸುಜನರಿಗೆ) ಆನಂದವನ್ನು ಭೋಗಿಸುವಂತೆ ಮಾಡುವೆನು (ಉಣಬಡಿಸುತ್ತೇನೆ).

**ವಿಶೇಷಾಂಶ:** (೧) ಸಚ್ಚಿದಾನಂದವಿಗ್ರಹನಾದ ಶ್ರೀಹರಿಯು ಸರ್ವದಾ ಸರ್ವತ್ರ ಪ್ರಾಕೃತೇಂದ್ರಿಯರಹಿತನು—ಪ್ರಾಕೃತೇಂದ್ರಿಯಗಳಿಗೆ ಗೋಚರನಾಗು ವವನೂ ಅಲ್ಲ. ಅವತಾರರೂಪಗಳನ್ನು ತನ್ನ ಇಚ್ಛೆಯಿಂದಲೇ ಪ್ರಾಕೃತದೇಹಾ-ಕಾರದಿಂದ ತೋರಗೊಡುತ್ತಾನೆ. ***'ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮ-ವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಮ್। ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ॥***

ಎಂಬ (ಅಥರ್ವಣ) ಉಪನಿಷದ್ವಾಕ್ಯವು, ಅಕ್ಷರನಾಮಕ ಪರಮಾತ್ಮನು, ಪ್ರತ್ಯಕ್ಷದಿಂದ ತಿಳಿಯಲಾಗದವನೂ, ಗ್ರಹಿಸಲಾಗದವನೂ, ಜಾತಿಗೋತ್ರ-ಗಳಿಲ್ಲದವನೂ, ಕಣ್ಣುಕಿವಿಗಳಿಲ್ಲದವನೂ, ಕೈಕಾಲುಗಳಿಲ್ಲದವನೂ ಆಗಿರು-ವನು; ಹೀಗೆ ಪ್ರಾಕೃತ ದೇಹೇಂದ್ರಿಯಗಳಿಲ್ಲದವನಾದ್ದರಿಂದ, ಜ್ಞಾನಿಗಳು ಶಾಶ್ವತನೂ, ಸರ್ವೇಶ್ವರನೂ, ಸರ್ವಾಂತರ್ಯಾಮಿಯೂ, ಅತ್ಯಂತ ಸೂಕ್ಷ್ಮನೂ, ಜಗಜ್ಜನ್ಮಾದಿಕಾರಣನೂ ಆದ ಈ ಅಕ್ಷರನ ನಿತ್ಯವೂ, ವಿಕಾರವಿಲ್ಲದುದೂ (ಅಪ್ರಾಕೃತವೂ) ಆದ ರೂಪವನ್ನು ಚೆನ್ನಾಗಿ ನೋಡುತ್ತಾರೆ (ಯಥಾಯೋಗ್ಯ-ವಾಗಿ ಮನಸ್ಸಿನಿಂದಲೂ ಗ್ರಹಿಸುತ್ತಾರೆ) ಎಂದು ಹೇಳುತ್ತದೆ. ಅನಂತರೂಪಿ-ಯಾದ ಶ್ರೀಹರಿಯ ಒಂದೊಂದು ರೂಪವೂ ಅಖಂಡ ಸೌಂದರ್ಯರಾಶಿಯೇ ಆಗಿದೆ. ಈ ರೂಪಗಳಿಗೆ ಕರಚರಣಾದಿ ಅವಯವಗಳೇ ಇಲ್ಲವೆಂದು ತಿಳಿ-ಯುವುದು ಮಹಾಅನರ್ಥಗಳಿಗೆ ಕಾರಣವಾಗುವ ಮಿಥ್ಯಾಜ್ಞಾನವು. ನಿರ್ಗುಣ-ನಿರಾಕಾರನೆಂದು ಪರಮಾತ್ಮನನ್ನು ಪ್ರತಿಪಾದಿಸುವುದು, ಭಗವನ್ನಿಂದೆಯೇ ಸರಿ ಎಂಬುದನ್ನು ಲೌಕಿಕಯುಕ್ತಿಗಳಿಂದಲೂ, ಈ ಪದದ ೧-೨ನೇ ನುಡಿಗಳಲ್ಲಿ, ಸಾಧಿಸುತ್ತಾರೆ. ಕಾಲು-ಕಣ್ಣು-ಕಿವಿಗಳುಳ್ಳ ಒಬ್ಬ ಮನುಷ್ಯನನ್ನು, ಹೆಳವ-ಕುರುಡ-ಕಿವುಡ ಎಂದು ಕರೆದರೆ, ತನ್ನನ್ನು ನಿಂದಿಸುತ್ತಿರುವರೆಂದು ಆತನು ತಿಳಿಯುವುದಿಲ್ಲವೇ? ಸದ್ಗುಣಗಳುಳ್ಳವನನ್ನು ಗುಣಶೂನ್ಯನೆಂದರೆ ಅದು ಅವನ ನಿಂದೆಯಲ್ಲವೇ? ಪರಮಾತ್ಮನು ಕರಚರಣಾದಿ ಅವಯವಗಳಿಲ್ಲದವನೆಂದು ತಿಳಿದು, ಧ್ಯಾನಿಸುವುದೆಂಬುದು ಅಂಧಕಾರವನ್ನು ಉಪಾಸಿಸಿದಂತೆಯೇ ಸರಿ. ಅದರಿಂದ ಪ್ರಾಪ್ಯವಾಗುವ ಫಲವೂ ತಮಸ್ಸಲ್ಲದೇ ಬೇರೆಯಲ್ಲ. ಆದ್ದರಿಂದ ಶ್ರೀಹರಿಯನ್ನು ನಿರಾಕಾರ—ಅವಯವ ಸಹಿತವಾದ ರೂಪವಿಲ್ಲದವನು—ಎಂದು ತಿಳಿಯುವುದು ಅಂಧತಮಸ್ಸಿಗೆ ಕಾರಣವಾಗುವ ಮಿಥ್ಯಾಜ್ಞಾನವೇ ಸರಿ. ಈ ಪ್ರಮೇಯವನ್ನು ಶ್ರೀಸುಮಧ್ವವಿಜಯವು ಹೀಗೆ ನಿರೂಪಿಸುತ್ತದೆ:

**ವಿತತಃಸುಖಸಚ್ಚಿದದ್ವಯಾತ್ಮಾ**
**ಸಮುಪಾಸ್ಯೋ ವಿಹಿತೋ ಹಿ ತತ್ವವಿದ್ಭಿಃ।**
**ಸ ಚ ನಾವಯವೀ ನಿರೂಪ್ಯತೇ ಚೇತ್**
**ದ್ಯುತಿಮಾತ್ರಂ ಚ ನ ಹೀತ್ಯದೋ ರಹಸ್ಯಮ್॥**
**ಯದಿ ಚೇದೃಗುಪಾಸ್ಯತೇಽಸ್ಯ ರೂಪಂ**
**ತಿಮಿರತ್ವೇನ ವಿಭಾತಿ ಪಾರಿಶೇಷ್ಯಾತ್।**

**ಫಲಮಪ್ಯಥ ಮುಕ್ತಿರೀದೃಶೀ ಸ್ಯಾ-**
**ದಿತಿನೋ ನೈವ ಧಿನೋತ್ಯುಪಾಸ್ತಿ ರೇಷಾ॥**

**ಅರ್ಥ:** ತತ್ತ್ವವಿದ್ಭಿಃ—ಭಗವತ್ತತ್ತ್ವನಿರ್ಣಯ ಜ್ಞಾನವುಳ್ಳವರಿಂದ, ವ್ಯಾಪ್ತನೂ, ಸುಖಸಚ್ಚಿತ್—ಸುಖಸ್ವರೂಪನೂ ನಿರ್ದೋಷಜ್ಞಾನರೂಪನೂ, ಅದ್ವಯಾತ್ಮಾ—ಸಮಾಧಿಕರಹಿತಸ್ವರೂಪನೂ (ಎಂದು), ಸಮುಪಾಸ್ಯಃ—ಧ್ಯಾನಿಸಲ್ಪಡತಕ್ಕವನು; ವಿಹಿತೋ ಹಿ—ಹೀಗೆ ವೇದಾದಿ ಶಾಸ್ತ್ರವು ವಿಧಿಸುತ್ತದೆ. ಸ ಚ—ಹೀಗೆ ಉಪಾಸನಾವಿಷಯನೆಂದು ಹೇಳಲಾಗಿರುವ ಭಗವಂತನು, ಅವಯವೀ—ಜ್ಞಾನಾನಂದಾದ್ಯಾತ್ಮಕ ಕರಚರಣಾದಿ ಸುಂದರಸಕಲಾವಯವಗಳುಳ್ಳವನು, ನ ನಿರೂಪ್ಯತೇ ಚೇತ್—ಅಲ್ಲವೆಂದು ಪ್ರತಿಪಾದಿಸಿದರೆ (ಹೇಳಿದರೆ), ಆಗ ಆ ಬ್ರಹ್ಮವಸ್ತುವು, ದ್ಯುತಿಮಾತ್ರಂ ಚ—ಕೇವಲ ಪ್ರಕಾಶರೂಪವೂ, ನ ಹಿ—ಅಲ್ಲವೇ ಅಲ್ಲವೆಂದಾಗುತ್ತದೆ, ಇತ್ಯದಃ—ಹೀಗೆಂಬ ಈ ಪ್ರಮೇಯವು, ರಹಸ್ಯಂ—ಶಾಸ್ತ್ರಫಲಿತಾರ್ಥವೇ ಆಗಬೇಕಾಗುವುದು (ನಿರವಯತ್ವ-ನಿರ್ಗುಣತ್ವ-ನಿರ್ವಿಶೇಷತ್ವಗಳನ್ನು ಹೇಳುವ ಮಾಯಾವಾದದಂತೆ, ನಿರವಯವನೆಂಬ ಹೇತುವಿನಿಂದಲೇ, ಪ್ರಕಾಶರೂಪನೂ ಅಲ್ಲವೆಂದು ಫಲಿತಾರ್ಥವಾಗುತ್ತದೆ). ಹಾಗೂ ಆಗಲಿ, ಅದರಿಂದೇನು ಹಾನಿಯೆಂದರೆ: ಅಸ್ಯ—ಈ ಬ್ರಹ್ಮನ, ರೂಪಂ—ರೂಪವು, ಯದಿ ಈದೃಕ್—(ಪ್ರಕಾಶರೂಪವೂ ಅಲ್ಲವೆಂದರೂ) ಅಪ್ರಕಾಶರೂಪವೆಂದು, ಉಪಾಸ್ಯತೇ—ಧ್ಯಾನಿಸಲ್ಪಟ್ಟರೆ, ಪಾರಿಶೇಷ್ಯಾತ್—(ಆಗ) ಪರಿಶೇಷದಿಂದ (ಪ್ರಕಾಶವನ್ನು ಬಿಟ್ಟರೆ ಉಳಿಯುವುದು), ತಿಮಿರತ್ವೇನ—ತಮೋರೂಪದಿಂದಲೇ, ವಿಭಾತಿ—ತೋರುತ್ತದೆ; ಅಥ—ಈ ವಿಧ ಉಪಾಸನೆಯ ನಂತರ, ಉಪಾಸಕನಿಗೆ, ಫಲ—ಫಲರೂಪವಾದ, ಮುಕ್ತಿರಪಿ—ಮುಕ್ತಿಯೂ ಸಹ, ಈದೃಶೀ ಸ್ಯಾತ್—ತಮೋರೂಪವೇ ಆಗಬೇಕಾಗುವುದು, ಇತಿ—ಹೀಗಿರುವುದರಿಂದ, ಏಷಾ ಉಪಾಸ್ತಿಃ—ಈ ನಿರ್ಗುಣೋಪಾಸನೆಯು, ನಃ—ನಮ್ಮನ್ನು, ನೈವ ಧಿನೋತಿ—ಪುಷ್ಟಿಗೊಳಿಸುವುದಿಲ್ಲ (ನಮಗೆ ಮನಃಶಾಂತಿಯನ್ನು ದೊರಕಿಸುವುದಿಲ್ಲ).

(೨) ೩-೪ನೇ ನುಡಿಗಳಿಂದ ವಾಯು-ಬ್ರಹ್ಮರನ್ನು ಜ್ಞಾನಸಿದ್ಧಿಗಾಗಿ ಸಂತತ ಸ್ಮರಿಸಬೇಕೆಂದಿರುವರು. ಮಧ್ವಶಾಸ್ತ್ರದಿಂದ ಮಾತ್ರ ಯಥಾರ್ಥಜ್ಞಾನವು ಲಭಿಸುವುದು. ಆ ಶಾಸ್ತ್ರದ ನಿರಂತರ ಶ್ರವಣಮನನಗಳಿಗಾಗಿ ಚಿತ್ತಾಭಿಮಾನಿಗಳಾದ ಬ್ರಹ್ಮದೇವರ ಅನುಗ್ರಹವು ಅತ್ಯವಶ್ಯಕ. ಚಿತ್ತವೃತ್ತಿಯು ಸ್ಥಿರವಾಗಿ ಮುಕುತಿ-

ಪಥವನ್ನೇ ಅನುಸರಿಸುತ್ತಿರಲೆಂದು ಮೂರನೇ ನುಡಿಯಲ್ಲಿ ಪ್ರಾರ್ಥಿಸಲಾಗಿದೆ. ಚಿತ್ತವೆಂಬುದು ಮನಸ್ಸಿನ ಪಂಚವಿಧ ವೃತ್ತಿಗಳಲ್ಲೊಂದು. ಮನೋಭಿಮಾನಿಗಳು ರುದ್ರದೇವರಾದರೂ, ಅವರು ವಾಯು-ಬ್ರಹ್ಮರ ಅಧೀನರಾದ್ದರಿಂದ, ಈ ಪ್ರಾರ್ಥನೆಯು ಯುಕ್ತವೇ ಆಗಿದೆ. ಮೇಲುಮೇಲಿನ ದೇವತೆಗಳೆಲ್ಲರೂ, ಕೆಳಗಿನವರಿಂದ ಅಭಿಮನ್ಯಮಾನತತ್ವಗಳಿಗೂ ನಿಯಾಮಕರೇ ಆಗಿರುವರು. ಆದ್ದರಿಂದ ಬ್ರಹ್ಮ-ವಾಯುಗಳೂ ಪ್ರಧಾನ ಮನೋನಿಯಾಮಕರು. **ಪರಮಮುಖ್ಯನಿಯಾಮಕನು ಶ್ರೀಹರಿಯೇ.**

(೩) ಕುಬೇರನು ಯಕ್ಷಪತಿಯು—ಮಹದೇವರ ಸಖನು. ಸಖರೆಂದುದರಿಂದ ಸಮರೆಂದು ಮಾತ್ರ ತಿಳಿಯಬಾರದು. ನಾರಾಯಣ-ಲಕ್ಷ್ಮೀ-ಬ್ರಹ್ಮ ವಾಯು-ಸರಸ್ವತೀ ಭಾರತಿಯರು, ಇವರುಗಳ ನಂತರದ ೫ನೇ ಕಕ್ಷೆಯಲ್ಲಿ ಶೇಷಗರುಡರೊಂದಿಗೆ ಮಹದೇವರಿದ್ದಾರೆ. ಕುಬೇರನು ಅಶ್ವಿನೀದೇವತೆಗಳು—ಗಣಪತಿ ಮೊದಲಾದವರೊಂದಿಗೆ ೧೮ನೇ ಕಕ್ಷೆಯಲ್ಲಿದ್ದಾನೆ.

(೪) ೫ನೇ ನುಡಿಯಲ್ಲಿ ಕೈಲಾಸಪತಿ ಮಹದೇವನು ಮನಸ್ತತ್ವದ ಮುಖ್ಯಾಭಿಮಾನಿಯೆಂದು ಹೇಳುವುದರಿಂದ, ಚಂದ್ರನೇ ಮೊದಲಾದ ಅಮುಖ್ಯ (ಅವಾಂತರ) ಮನೋಭಿಮಾನಿಗಳೂ ಇರುವರೆಂಬುದನ್ನು ಮರೆಯಬಾರದು. ***'ಚಂದ್ರಮಾ ಮನಸೋ ಜಾತಃ'*** (ಪುರುಷಸೂಕ್ತ) ಮತ್ತು ***'ಮನಸಸ್ತ್ವನಿರುದ್ಧಶ್ಚ ಚಂದ್ರಶ್ಚಾನ್ಯೇ ಯಥೋದಿತಂ'*** (ಭಾಗ—ತೃತೀಯ ತಾತ್ಪರ್ಯ), ಇತ್ಯಾದಿ ಪ್ರಮಾಣಗಳು, ಚಂದ್ರನೂ ಮನೋಭಿಮಾನಿಯೆಂಬುದನ್ನು ತಿಳಿಸುತ್ತವೆ.

(೫) ***'ಈಶ್ವರಾತ್ ಜ್ಞಾನಮನ್ವಿಚ್ಛೇತ್ ಮೋಕ್ಷಮಿಚ್ಛೇತ್ ಜನಾರ್ದನಾತ್'*** ಎಂದು (ಭಾಗವತ) ಹೇಳುವಂತೆ, ಮುಕ್ತಿದಾತನಾದ ಶ್ರೀವಿಷ್ಣುವಿನ ಪ್ರಸಾದಕ್ಕೆ ಅವಶ್ಯಕವಾದ ಜ್ಞಾನವನ್ನು ರುದ್ರದೇವರಿಂದ ಪ್ರಾರ್ಥಿಸಿ ದೊರಕಿಸಿಕೊಳ್ಳಬೇಕು. ಇದರಿಂದ, ವಿಷ್ಣುಸರ್ವೋತ್ತಮತ್ವ ಜ್ಞಾನಕ್ಕೆ ರುದ್ರದೇವರ ಅನುಗ್ರಹವು ಬೇಕೇಬೇಕೆಂದು ಅರ್ಥವಲ್ಲದೇ ಬ್ರಹ್ಮವಾಯುಗಳ ಅನುಗ್ರಹವು ಬೇಕಿಲ್ಲವೆಂದು ಸರ್ವಥಾ ಅಲ್ಲ. ರುದ್ರದೇವರಕಿಂತ ಉತ್ತಮರಾದ ಸರ್ವರ ಅನುಗ್ರಹವೂ ಅತಿಶಯವಾಗಿ ಅವಶ್ಯಕ.

(೬) **'ಯುಕ್ತಿಕೋವಿದರ ಕುಣಿಸುವೆನು'** ಇತ್ಯಾದಿ ೬ನೇ ನುಡಿಯಲ್ಲಿ ಶ್ರೀವಾದಿರಾಜರು ಮಾಡಿರುವ ಪ್ರತಿಜ್ಞೆಯನ್ನು ತಮ್ಮ **'ಯುಕ್ತಿಮಲ್ಲಿಕಾ'**

ಗ್ರಂಥದಿಂದ ಅದ್ಭುತ ರೀತಿಯಲ್ಲಿ ಸಾಧಿಸಿದ್ದಾರೆ. ಈ ಗ್ರಂಥದಲ್ಲಿಯೂ ಆ ಪ್ರತಿಜ್ಞಾಪಾಲನೆಯನ್ನು ಯಥೋಚಿತವಾಗಿ ಕಾಣುತ್ತೇವೆ.

***ಮಂಗಳಾಚರಣೆ-೫***

**ಪದ ೭**

ರಾಗ-ಸೌರಾಷ್ಟ್ರ; ತಾಳ-ರೂಪಕ

**ಇಂದ್ರನ್ನ ರಾಜ್ಯವ ತಂದನ್ನ ಶುಭಗುಣ-**
**ಸಾಂದ್ರನ್ನ ಸುರಸಭಾಚಂದ್ರನ್ನ**
**ನಂದನ ಕಂದನ ವಂದ್ಯನ ನಿತ್ಯಾನಂದನ ತುತಿಪೆ ಮುಕ್ಕುಂದನ್ನ ॥೧॥**

**ಅರ್ಥ:** ಇಂದ್ರನ್ನ ರಾಜ್ಯವ ತಂದನ್ನ—(ಬಲಿಯನ್ನು ನಿಗ್ರಹಿಸಿ) ಇಂದ್ರನ ಸ್ವರ್ಗಾಧಿಪತ್ಯವನ್ನು ತಿರುಗಿ ತಂದುಕೊಟ್ಟವನೂ, ಶುಭಗುಣ ಸಾಂದ್ರನ್ನ—ನಿಬಿಡವಾದ ಕಲ್ಯಾಣ ಗುಣಗಳೇ ದೇಹವಾಗಿವುಳ್ಳವನೂ, ಸುರಸಭಾಚಂದ್ರನ್ನ—ದೇವಸಭೆಯಲ್ಲಿ ಚಂದ್ರನಂತೆ ಆಹ್ಲಾದಕರನಾಗಿ ವಿರಾಜಿಸುವವನೂ, ನಂದನ ಕಂದನ—ನಂದಗೋಪನ ಮುದ್ದಿನ ಮಗನೂ, ನಿತ್ಯಾನಂದನ—ಸರ್ವದಾ ಪೂರ್ಣಾನಂದಸ್ವರೂಪನೂ, ಆಗಿರುವ, ಮುಕುಂದನ—ಮೋಕ್ಷಪ್ರದನಾದ ಶ್ರೀಹರಿಯನ್ನು, ತುತಿಪೆ—ಸ್ತುತಿಸುತ್ತೇನೆ.

**ವಿಶೇಷಾಂಶ:** ಹಿಂದಿನ ಪದದ ೭ನೇ ನುಡಿಯಲ್ಲಿ, **'ನರೆಯಣನ ಕಥೆಯ ಭಕುತಿಯಿಂದ ಬಣ್ಣಿಸುವೆನು'** ಎಂದು ಮಾಡಿದ ಸಂಕಲ್ಪವನ್ನು ಈ ಪದದಿಂದ ಸಾಧಿಸುತ್ತಾರೆ.

**ಶೌರಿಯ ನೆನೆವೆನುದಾರಿಯ ಕುಜನರ**
**ವೈರಿಯ ಮಂದರೋದ್ಧಾರಿಯ**
**ಹರಿಯ ದುರಿತನಿವಾರಿಯ ಸುಜನೋಪ-**
**ಕಾರಿಯ ಮುಕುತಿಗೆ ದಾರಿಯ ॥೨॥**

**ಅರ್ಥ:** ಶೌರಿಯ—ಶೂರನೆಂಬ (ಯಾದವನ) ವಂಶದಲ್ಲಿ ಅವತರಿಸಿದ ಶ್ರೀಕೃಷ್ಣನನ್ನು, ಉದಾರಿಯ—ಉದಾರಿಯನ್ನು (ಭಕ್ತಾಪರಾಧಗಳನ್ನು ಸಹಿಸುವ ಉದಾರ ಮನಸ್ಸುಳ್ಳ), ಕುಜನರ ವೈರಿಯ—ದುಷ್ಟ ದೈತ್ಯರನ್ನು ದ್ವೇಷಿಸುವ, ಮಂದರೋದ್ಧಾರಿಯ—ಮಂದರಪರ್ವತವನ್ನು ಎತ್ತಿಹಿಡಿದ ಕೂರ್ಮಾವತಾರಿ-ಯನ್ನು, ಸುಜನೋಪಕಾರಿಯ—ಸಜ್ಜನರನ್ನು (ಯೋಗ್ಯಸಾಧನೆಗಳನ್ನು ಮಾಡಿಸಿ) ರಕ್ಷಿಸುವ, ಮುಕುತಿಗೆ ದಾರಿಯ—ಮೋಕ್ಷಕ್ಕೆ (ಮಾರ್ಗ) ದಾರಿಯಾಗಿರುವ-ವನನ್ನು, ನೆನೆವೆನು—ಸ್ಮರಿಸುವೆನು.

**ವಿಶೇಷಾಂಶ:** ಪರಮಾತ್ಮನು ತನ್ನ ಪ್ರಾಪ್ತಿಗೆ ತಾನೇ ಮಾರ್ಗರೂಪನೂ ಆಗಿದ್ದಾನೆ. ***'ಏಷಃ ಪಂಥಾಃ'*** ಎಂಬ (ಐತರೇಯ) ಉಪನಿಷದ್ವಾಕ್ಯವು, ಸಂಕರ್ಷಣರೂಪಿಯಾದ ಶ್ರೀಹರಿಯೇ **'ಮಾರ್ಗ'**ನೆಂದು ಹೇಳುವುದನ್ನು ಭಾಷ್ಯದಲ್ಲಿ ಶ್ರೀಮದಾಚಾರ್ಯರು, ***'ಏಷ ಏವ ಸದಾ ಪಂಥಾ ಭಗವಾನ್ ಪುರುಷೋತ್ತಮಃ। ನಿತ್ಯಂ ಸ್ವಪ್ರಾಪ್ತಹೇತುತ್ವಾತ್'***—'ತನ್ನ ಪ್ರಾಪ್ತಿಗೆ (ಸಾಯುಜ್ಯಾದಿ ಮೋಕ್ಷಪ್ರಾಪ್ತಿಗೆ) ನಿಯಮೇನ ತಾನೇ ಕಾರಣನಾದ್ದರಿಂದ, **'ಪಂಥಾಃ'** (ಮಾರ್ಗ—ದಾರಿ) ಎನಿಸುತ್ತಾನೆ' ಎಂದು ಸಕಾರಣವಾಗಿ ವಿವರಿಸಿದ್ದಾರೆ.

**ಇಷ್ಟನ್ನ ದುರಿತಾಘರಟ್ಟನ್ನ ಜಗಕತಿ**
**ದಿಟ್ಟನ್ನ ಸತತ ಸಂತುಷ್ಟನ್ನ**
**ಶಿಷ್ಟನ್ನ ಶುಭಗುಣಪುಷ್ಟನ್ನ ತುತಿಪೆನು**
**ಕೃಷ್ಣನ್ನ ಶ್ರುತಿಗಿಂಬು ಕೊಟ್ಟನ್ನ ॥೩॥**

**ಅರ್ಥ:** ಇಷ್ಟನ್ನ—ಪ್ರಿಯನಾದ (ನನ್ನ ಇಷ್ಟದೇವತೆಯಾದ), ದುರಿತಾಘರಟ್ಟನ್ನ—ಪಾಪಿಯಾದ ಅಘಾಸುರನನ್ನು ಕೊಂದ, (ಪಾಪರಾಶಿಗಳನ್ನು ದಹಿಸುವ), ಜಗಕೆ—ಜಗತ್ತಿನಲ್ಲಿ, ಅತಿದಿಟ್ಟನ್ನ—ಅತ್ಯಂತ ದಿಟ್ಟನಾದ (ದಿಟ್ಟ—ಜಾಣ; ಧೈರ್ಯಶಾಲಿ), ಸತತ ಸಂತುಷ್ಟನ್ನ—ನಿತ್ಯತೃಪ್ತನಾದ, ಶಿಷ್ಟನ್ನ—ಸಂಪನ್ನನಾದ (ಜ್ಞಾನಿಶ್ರೇಷ್ಠ—ಸರ್ವಜ್ಞನಾದ), ಶುಭಗುಣಪುಷ್ಟನ್ನ—ಕಲ್ಯಾಣಗುಣಪೂರ್ಣನಾದ, ಶ್ರುತಿಗೆ—ವೇದಗಳಿಗೆ (ವೇದಾಭಿಮಾನಿನಿಯಾದ ಲಕ್ಷ್ಮೀದೇವಿಗೆ), ಇಂಬುಗೊಟ್ಟನ್ನ—ಆಶ್ರಯನಾದ (ಶ್ರುತಿಪ್ರತಿಪಾದ್ಯನಾದ) ಶ್ರೀಕೃಷ್ಣನನ್ನು, ತುತಿಪೆನು—ಸ್ತುತಿಸುತ್ತೇನೆ.

**ವಿಶೇಷಾಂಶ:** ***'ಸರ್ವೇ ವೇದಾ ಯತ್ಪದಮಾಮನಂತಿ'***—'ಎಲ್ಲ ವೇದಗಳೂ ಯಾರ ಸ್ವರೂಪವನ್ನೇ ಪ್ರತಿಪಾದಿಸುತ್ತವೆಯೋ,' ***'ನಾಮಾನಿ ಸರ್ವಾಣಿ ಯಮಾವಿಶಂತಿ'***—'ಸರ್ವ ಶಬ್ದಗಳೂ ಯಾವನನ್ನೇ ಪ್ರವೇಶಿಸುತ್ತವೆಯೋ —ಪರಮ ಮುಖ್ಯವೃತ್ತಿಯಿಂದ ಯಾರ ಮಹಿಮೆಗಳನ್ನೇ ಹೇಳುತ್ತವೆಯೋ,' ಇತ್ಯಾದಿ ಶ್ರುತಿತಾತ್ಪರ್ಯವನ್ನು, **'ಶ್ರುತಿಗೆ ಇಂಬುಕೊಟ್ಟನ್ನ'** ಎಂಬ ಎರಡು ಪುಟ್ಟಶಬ್ದಗಳಿಂದ ನಿರೂಪಿಸಿದ್ದಾರೆ.

**ನೀಲನ ನಿಜಜನಪಾಲನ ನಿರ್ಮಲಶೀಲನ ಸುಚರಿತ್ರಜಾಲನ**
**ಬಾಲನ ಸಂಗೀತಲೋಲನ ತುತಿಪೆನು**
**ಕಾಲನವರಿಗೆ ಅನಲನ ॥೪॥**

**ಅರ್ಥ:** ನೀಲನ—ನೀಲವರ್ಣದ ದೇಹಕಾಂತಿಯುಳ್ಳ, ನಿಜಜನಪಾಲನ —ತನ್ನ ಭಕ್ತರನ್ನು ರಕ್ಷಿಸುವ, ನಿರ್ಮಲಶೀಲನ—ಶುದ್ಧಸ್ವಭಾವದವನಾದ (ದೋಷದೂರನಾದ), ಸುಚರಿತ್ರಜಾಲನ—ತನ್ನ ಮಂಗಳಕರಲೀಲೆಗಳಿಂದ ಭಕ್ತರನ್ನು ಬಂಧಿಸುವ ಬಲೆಯುಳ್ಳ ಅಥವಾ ಶುಭಚರಿತ್ರೆಗಳ ಸಮೂಹವುಳ್ಳ (ಜಾಲ—ಬಲೆ ಅಥವಾ ಸಮೂಹ), ಬಾಲನ—ಬಾಲರೂಪಿಯಾದ, ಸಂಗೀತಲೋಲನ—ಗಾನಲೋಲನಾದ (ವೇಣುಗಾನದಲ್ಲಿ ಆಸಕ್ತನಾದ ಅಥವಾ ತನ್ನ ಮಹಿಮೆಗಳನ್ನು ಗಾನಮಾಡುವವರಲ್ಲಿ ಆಸಕ್ತನಾಗುವ), ಕಾಲನವರಿಗೆ—ಯಮದೂತರಿಗೆ, ಅನಲನ—ಅಗ್ನಿಯಂತಿರುವ (ತನ್ನ ಭಕ್ತರ ಸಮೀಪಕ್ಕೆ ಬರಗೊಡದ), (ಶ್ರೀಕೃಷ್ಣನನ್ನು) ತುತಿಪೆನು—ಸ್ತುತಿಸುವೆನು.

**ರಂಗನ ಕರುಣಾಂತರಂಗನ ಖಲಕುಲ**
**ಭಂಗನ ಮುನಿಜನ ಸಂಗನ**
**ಅಂಗನಾಜನಕೆ ಆಲಿಂಗನವೀವ ಶು-**
**ಭಾಂಗನ ತುತಿಪೆನುತ್ತುಂಗನ** ॥೫॥

**ಅರ್ಥ:** ರಂಗನ—ಸದಾ ಆನಂದದಿಂದ ನರ್ತಿಸುವ ಅಥವಾ ಲೋಕದಲ್ಲಿದ್ದು ಲೋಕವನ್ನು ರಂಜಿಸುವುದರಿಂದ **ರಂಗ**ನಾಮಕನಾದ, ಕರುಣಾಂತರಂಗನ—ಕೃಪಾಸಮುದ್ರನಾದ, (ದಯಾಪೂರ್ಣ ಅಂತಃಕರಣವುಳ್ಳ), ಖಲಕುಲ ಭಂಗನ—ದುಷ್ಟಕುಲಮರ್ದನನಾದ, ಮುನಿಜನಸಂಗನ—ಜ್ಞಾನಿಗಳೊಡನೆ ಬೆರೆತು ತಿರುಗುವನಾದ (ಮುನಿಜನಪ್ರೇಮಿಯಾದ), ಅಂಗನಾಜನಕೆ—ಸ್ತ್ರೀಜನರಿಗೆ, ಆಲಿಂಗನವನ್ನು (ಅಂಗಸಂಗವನ್ನು) ಕೊಡುವ, ಶುಭಾಂಗನ—ಚಿದಾನಂದದೇಹಿಯಾದ, ಉತ್ತುಂಗನ—ಸರ್ವೋತ್ತಮನಾದ ಶ್ರೀಕೃಷ್ಣನನ್ನು, ತುತಿಪೆನು —ಸ್ತುತಿಸುತ್ತೇನೆ.

**ವಿಶೇಷಾಂಶ:** ಅಧಿಕಾರವುಳ್ಳ ಕೆಲವು ಅಪ್ಸರಾದಿ ಸ್ತ್ರೀಯರಿಗೆ, ಶ್ರೀಹರಿಯು, ಅವರಲ್ಲಿ ತತ್ಕಾಲದಲ್ಲಿ ಲಕ್ಷ್ಮೀಸನ್ನಿಧಾನವನ್ನಿಟ್ಟು, ಅಂಗಸಂಗವನ್ನು—ತನ್ನೊಡನೆ ಕ್ರೀಡಿಸುವ ಭಾಗ್ಯವನ್ನು ಕರುಣಿಸುತ್ತಾನೆ. ಈ ವಿಧ ಭಾಗ್ಯ ಸ್ತ್ರೀಸಾಮಾನ್ಯರಿಗಿಲ್ಲ. ಅವರಿಗೆ ಪತಿಯ ಅಂಗಸಂಗದಿಂದ ದೊರೆಯುವ ಆನಂದವನ್ನು ಪತ್ಯಂತರ್ಗತನಾಗಿದ್ದು ಶ್ರೀಹರಿಯೇ ಕೊಡುವನೆಂಬುದನ್ನು ಮರೆಯಲಾಗದು. ಹೀಗಿದ್ದರೂ ಸ್ತ್ರೀಯರೆಲ್ಲರೂ ಪರಮಾತ್ಮನನ್ನು ತಮ್ಮ ಪತಿಯೆಂದು ತಿಳಿಯಬಾರದು— ತಮಗೆ ಪತಿಯಾಗಬೇಕೆಂದು ಇಚ್ಛಿಸಲೂ ಕೂಡದು. ಪತಿತ್ವೇನ ಭಗವಂತ-

ನನ್ನು ಉಪಾಸಿಸುವುದು ಸ್ತ್ರೀಯರಿಗೆ ಮಹಾದೋಷವು. ಈ ಪ್ರಮೇಯಗಳು ಈ ಮುಂದಿನ ಪ್ರಮಾಣವಾಕ್ಯಗಳಿಂದ ಸಿದ್ಧವಾಗುತ್ತವೆ:

*ಭಗವದ್ಭಾರ್ಯತಾ ಯೋಗ್ಯಾಃ ಕಾಶ್ಚಿದಪ್ಸರಸಃ ಸ್ತ್ರಿಯಃ।*
*ರಮಾವೇಶಾತ್ ಕದಾಚಿತ್ ಸ್ಯುಃ ತಾಸ್ವೇಕಾ ಪಿಂಗಲಾಽಭವತ್॥*
*ತದನ್ಯಾಸಾಂ ಮಹಾನ್ ದೋಷೋ ಭಗವದ್ಭರ್ತೃತಾ ಸ್ಮೃತೌ॥*

(ಭಾಗ. ಏಕಾದಶ ತಾತ್ಪರ್ಯ)

*ಪತಿತ್ವೇನ ಶ್ರಿಯೋಪಾಸ್ಯೋ ಬ್ರಹ್ಮಣಾ ಮೇ ಪಿತೇತಿ ಚ।*
*ಪಿತಾಮಹತಯಾಽನ್ಯೇಷಾಂ ತ್ರಿದಶಾನಾಂ ಜನಾರ್ದನಃ॥*
*ಪ್ರಪಿತಾಮಹೋ ಮೇ ಭಗವಾನಿತಿ ಸರ್ವಜನಸ್ಯ ತು।*
*ಉಪಾಸ್ಯಃ ಶ್ವಶುರತ್ವೇನ ದೇವಸ್ತ್ರೀಣಾಂ ಜನಾರ್ದನಃ।*
*ಕಾಮಭಕ್ತ್ಯಾ ಅಪ್ಸರಸ್ತ್ರೀಣಾಂ ಅನ್ಯೇಷಾಂ ನೈವ ಕಾಮತಃ॥*

(ಭಾಗ. ದಶಮ ತಾತ್ಪರ್ಯ)

**ತಾತ್ಪರ್ಯ:** ಭಗವಂತನ ಭಾರ್ಯತ್ವವನ್ನು (ಅಂಗಸಂಗವನ್ನು) ಹೊಂದಲು ಯೋಗ್ಯರಾದ ಕೆಲವು ಅಪ್ಸರಾಸ್ತ್ರೀಯರಿದ್ದಾರೆ; ಅದೂ ರಮಾವೇಶವಿರುವ ಕೆಲವು ಕಾಲವಿಶೇಷಗಳಲ್ಲಿ ಮಾತ್ರ. ಪಿಂಗಲಾ ಎಂಬುವಳು ಅಂಥ ಅಪ್ಸರೆಯರಲ್ಲಿ ಒಬ್ಬಳು.

ಭಗವಂತನನ್ನು ಲಕ್ಷ್ಮೀದೇವಿಯು **'ಪತಿ'** ಎಂಬುದಾಗಿ, ಬ್ರಹ್ಮದೇವನು **'ಪಿತಾ'** ಎಂಬುದಾಗಿ, ಇತರ ದೇವತೆಗಳು **'ಪಿತಾಮಹ'** ಎಂದೂ ಉಪಾಸಿಸಬೇಕು. ಇತರ ಸರ್ವರೂ **'ಪ್ರಪಿತಾಮಹ'**ನೆಂದು ಚಿಂತಿಸಬೇಕು. ದೇವ ಸ್ತ್ರೀಯರು ಭಗವಂತನನ್ನು **'ಶ್ವಶುರ'**(ಮಾವ)ನೆಂದೂ, ಅಪ್ಸರೆಯರು ಕಾಮಯುಕ್ತ ಭಕ್ತಿಯಿಂದಲೂ (ಮೇಲೆ ಹೇಳಿದಂತೆ ಕೆಲವು ವಿಶಿಷ್ಟ ಅಪ್ಸರೆಯರು ಮಾತ್ರ) ಉಪಾಸಿಸಬೇಕು. ಇತರ ಸ್ತ್ರೀಯರು ಕಾಮದಿಂದ ಚಿಂತಿಸಲೇ ಕೂಡದು.

### ಶ್ಲೋಕ ೫-೬-೭

**ತರವಃ ಕಿಂ ನ ಜೀವಂತಿ ಭಸ್ತ್ರಾಃ ಕಿಂ ನ ಶ್ವ ಸಂತ್ಯುತ।**
**ನ ಖಾದಂತಿ ನ ಮೇಹಂತಿ ಕಿಂ ಗ್ರಾಮ್ಯಾಃ ಪಶವೋಽಪರೇ ॥೫॥**
**ಬಿಲೇ ಬತೋರುಕ್ರಮವಿಕ್ರಮಾನ್ಯೇ ನ ಶೃಣ್ವತಃ ಕರ್ಣಪುಟೇ ನರಸ್ಯ**
**ಜಿಹ್ವಾಽಸತೀ ದಾರ್ದುರಿಕೇವ ಸೂತ**
**ನ ಚೋಪಗಾಯತ್ಯುರುಗಾಯಗಾಥಾಮ್ ॥೬॥**

**ಬರ್ಹಾಯಿತೇ ತೇ ನಯನೇ ನರಾಣಾಂ**
**ಲಿಂಗಾನಿ ವಿಷ್ಣೋರ್ನ ನಿರೀಕ್ಷತೋ ಯೇ।**
**ಪಾದೌ ನೃಣಾಂ ತೌ ದ್ರುಮಜನ್ಮಭಾಜೌ**
**ಕ್ಷೇತ್ರಾಣಿ ನಾನುವ್ರಜತೋ ಹರೇರ್ಯೌ ॥೭॥**

(ಭಾಗ. ತೃ. ಅ ೧೮-ಶ್ಲೋ ೨೦-೨೧-೨೨)

**ಅರ್ಥ:** ತರವಃ— ವೃಕ್ಷಗಳು, ಕಿಂ ನ ಜೀವಂತಿ— ಬದುಕಿರುವುದಿಲ್ಲವೇ? ಉತ— ಹಾಗೂ (ವೃಕ್ಷಗಳು ಉಸಿರಾಡುವುದಿಲ್ಲವಲ್ಲ ಎಂದರೆ), ಭಸ್ತ್ರಾಃ— ತಿದಿಗಳು (ಕಮ್ಮಾರಕುಲಿಮೆಯಲ್ಲಿ ಬೆಂಕಿಯನ್ನು ಪ್ರಜ್ವಲಿಸಲು ಉಪಯೋಗಿಸುವುವು), ಕಿಂ ನ ಶ್ವ ಸಂತಿ— ಶ್ವಾಸಬಿಡುವುದಿಲ್ಲವೇ? (ಅವುಗಳು ನಿರ್ಜೀವವಸ್ತುಗಳೆಂದರೆ) ಗ್ರಾಮ್ಯಾಃ ಪಶವಃ— ಗ್ರಾಮ್ಯಪಶುಗಳು, ನ ಖಾದಂತಿ— ಆಹಾರವನ್ನು ತಿನ್ನುವುದಿಲ್ಲವೇ, ನ ಮೇಹಂತಿ (ಕಿಂ)— ಮೂತ್ರವಿಸರ್ಜನಾದಿಗಳನ್ನು ಮಾಡುವುದಿಲ್ಲವೇ? ಅಪರೇ— ಇನ್ನಿತರ ಪ್ರಾಣಿಗಳು (ಅರಣ್ಯ ಮೃಗಗಳು, ಪಕ್ಷಿಗಳು ಇತ್ಯಾದಿಗಳು), (ನ ಖಾದಂತಿ, ನ ಮೇಹಂತಿ ಕಿಂ — ಇವೆಲ್ಲವನ್ನೂ ಮಾಡುವುದಿಲ್ಲವೇ! ಮಾಡಿಯೇ ಮಾಡುತ್ತವೆ), (ಇದರಂತೆ, ಕಣ್ಣು ಕಿವಿ ಮೊದಲಾದ ಇತರ ಇಂದ್ರಿಯಗಳ ವ್ಯಾಪಾರಗಳೂ ಸಹ ಮನುಷ್ಯನಿಗೂ ಇತರ ಪ್ರಾಣಿಗಳಿಗೂ ಸಮಾನವೇ ಆಗಿವೆ). ॥೫॥

ನರಸ್ಯ— ಮನುಷ್ಯನ, ಯೇ ಕರ್ಣಪುಟೇ— ಕಿವಿಯ ರಂಧ್ರಗಳು (ಕಿವಿಗಳು), ಉರುಕ್ರಮ ವಿಕ್ರಮಾನ್ ನ ಶೃಣ್ವತಃ— ಶ್ರೀಹರಿಯ ಮಹಿಮೆಗಳನ್ನು ಕೇಳದಿದ್ದರೆ (ಕೇಳುವುದರಲ್ಲಿ ಉಪಯೋಗವಾಗದಿದ್ದರೆ), ಬಿಲೇ ಬತ— ಬಿಲಗಳೇ ಸರಿ (ಭೂಮಿಯಲ್ಲಿರುವ ಹೋರು— ಹೊದರುಗಳಿದ್ದಂತೆ); ಸೂತ— ಹೇ ಸೂತರೇ! ಉರುಗಾಯಗಾಥಾಂ— ಶ್ರೀಹರಿಚರಿತ್ರೆಗಳನ್ನು, ನ ಪ್ರಗಾಯತಿ ಚೇತ್— ಗಾನ ಮಾಡದಿದ್ದರೆ, ಅಸತೀ ಜಿಹ್ವಾ— ಆ ದುಷ್ಟವಾದ ನಾಲಿಗೆಯು, ದಾರ್ದುರಿಕೇವ— ಕಪ್ಪೆಯ ನಾಲಿಗೆಯಂತೆಯೇ ಸರಿ; (ವ್ಯರ್ಥವಟಗುಟ್ಟುವ ಕಪ್ಪೆಯ ನಾಲಿಗೆಯಂತೆ). ॥೬॥

ನರಾಣಾಂ ಯೇ ನಯನೇ— ಮನುಷ್ಯರ ಯಾವ ಕಣ್ಣುಗಳು, ವಿಷ್ಣೋಃ— ವಿಷ್ಣುವಿನ, ಲಿಂಗಾನಿ— ಮೂರ್ತಿಗಳನ್ನು, ನ ನಿರೀಕ್ಷತಃ— ನೋಡುವುದಿಲ್ಲವೋ, ತೇ-ಅವು, ಬರ್ಹಾಯಿತೇ— ನವಿಲುಗರಿಯಲ್ಲಿನ ಕಣ್ಣುಗಳೇ ಸರಿ; ನೃಣಾಂ— ಮನುಷ್ಯರ, ಯೌ ಪಾದೌ— ಯಾವ ಕಾಲುಗಳು, ಹರೇಃ— ಶ್ರೀಹರಿಯ,

ಕ್ಷೇತ್ರಾಣಿ—ಕ್ಷೇತ್ರಗಳನ್ನು ಕುರಿತು, ನ ಅನುವ್ರಜತಃ— ಹೋಗುವುದಿಲ್ಲವೋ, ತೌ—ಆ ಪಾದಗಳು, ದ್ರುಮಜನ್ಮಭಾಜೌ—ವೃಕ್ಷಜನ್ಮವನ್ನು ಹೊಂದಿದಂತೆಯೇ, (ವೃಕ್ಷದ ಕೊಂಬೆಗಳಿದ್ದಂತೆಯೇ ಸರಿ). ॥೭॥

**ವಿಶೇಷಾಂಶ:** (೧) ಮನುಷ್ಯದೇಹದಲ್ಲಿರುವ ಜ್ಞಾನ, ಕರ್ಮೇಂದ್ರಿಯ-ಗಳನ್ನು ಶ್ರೀಹರಿಮಹಿಮೆಗಳ ಜ್ಞಾನಸಂಪಾದನೆಗೂ ಶ್ರೀಹರಿಸೇವೆಗಾಗಿಯೂ ಉಪಯೋಗಿಸದಿದ್ದರೆ ಅವು ವ್ಯರ್ಥವೆಂಬುದನ್ನು ಅರಿಯಬೇಕು.

(೨) ಉರುಕ್ರಮ—ಅಚಿಂತ್ಯ ಸಾಮರ್ಥ್ಯವುಳ್ಳವನು ಅಥವಾ ಉತ್ಕೃಷ್ಟ-ವಾದ (ಪದಕ್ರಮ) ಹೆಜ್ಜೆಗಳನ್ನಿಟ್ಟ **ವಾಮನರೂಪೀ ಶ್ರೀಹರಿ.** ಉರುಗಾಯ ಗಾಥಾ—ಶ್ರೀಹರಿಮಹಿಮೆಗಳ ಕಥೆ. ದೇವೋತ್ತಮರಾದ ಬ್ರಹ್ಮಾದಿಗಳಿಂದ ಸ್ತುತ್ಯನಾದ ಶ್ರೀಹರಿಯು **'ಉರುಗಾಯ'**ನು.

## ಪದ ೮

ರಾಗ-ಭೈರವಿ; ತಾಳ-ರೂಪಕ

**ಹರಿಕಥೆಗಳ ಕೇಳದವ ಬಹುಕಾಲ ಬಾಳಿ-**
**ದರೆ ಫಲವೇನು ಕಾನನದ**
**ಮರ ಸಾಸಿರಕಾಲವಿರದೇ ಕಾಗೆಯ ಪೆಸರು**
**ಸ್ಥಿರಜೀವಿಯೆನರೆ ಸಜ್ಜನರು** ॥೧॥

**ಅರ್ಥ:** ಹರಿಕಥೆಗಳ—ಶ್ರೀಹರಿಮಹಿಮೆಗಳನ್ನು, ಕೇಳದವ—ಕೇಳದಿರು-ವವನು, ಬಹುಕಾಲ ಬಾಳಿದರೆ—ಬಹುಕಾಲ ಬದುಕಿದರೆ (ಚಿರಂಜೀವಿ-ಯಾದರೆ), ಫಲವೇನು—ಏನು ಪ್ರಯೋಜನ? ಕಾನನದ ಮರ—ಅಡವಿ-ಯಲ್ಲಿರುವ ಕೆಲವು ವೃಕ್ಷಗಳು, ಸಾಸಿರಕಾಲವಿರದೇ—ಸಹಸ್ರಾರು ವರ್ಷ ಇರುವುದಿಲ್ಲವೇ? ಸಜ್ಜನರು—ಸರಿಯಾದ ತಿಳಿವು ಉಳ್ಳವರೂ, ಕಾಗೆಯ ಪೆಸರು—ಕಾಗೆಯ ಹೆಸರನ್ನು, ಸ್ಥಿರಜೀವಿಯೆನರೆ—ಸ್ಥಿರವಾಗಿ ಉಳ್ಳ ಪಕ್ಷಿ-ಯೆನ್ನುವುದಿಲ್ಲವೇ? (ಕಾಗೆಯಂತೆ ಚಿರಕಾಲ ಬದುಕಿದರೇನು? ವ್ಯರ್ಥಜೀವನ-ವೆಂದರ್ಥ).

**ಕಾರುಕನ ತಿದಿ ಶ್ವಾಸವ ಬಿಡದೆ**
**ಊರ ಹಂದಿ ನಾಯಿ ನರಿಗಳೂ,**
**ಪೂರೈಸಿಕೊಳ್ಳವೆ ತಮ್ಮ ತಮ್ಮಾಹಾರಗಳ**
**ಮಾರಗೊಳಗಾಗಿ ರಮಿಸವೆ** ॥೨॥

**ಅರ್ಥ:** ಕಾರುಕನ ತಿದಿ—ಕಮ್ಮಾರನ ತಿದಿಯು, ಶ್ವಾಸವ ಬಿಡದೆ—ಉಸಿರಾಡುವುದಿಲ್ಲವೇ? ಊರ ಹಂದಿ ನಾಯಿ ನರಿಗಳೂ—ಊರ ಹಂದಿ, ನಾಯಿ, ನರಿ ಮೊದಲಾದ ಪ್ರಾಣಿಗಳೂ, ತಮ್ಮ ತಮ್ಮ ಆಹಾರಗಳ—ತಮತಮಗೆ ಬೇಕಾದ ಆಹಾರ ವಸ್ತುಗಳನ್ನು, ಪೂರೈಸಿಕೊಳ್ಳವೆ—ದೊರಕಿಸಿ-ಕೊಳ್ಳುವುದಿಲ್ಲವೇ? ಮತ್ತು ಮಾರಗೊಳಗಾಗಿ—ಕಾಮವಶಗಳಾಗಿ, ರಮಿಸವೆ—ಕ್ರೀಡಿಸಿ ಸುಖಿಸುವುದಿಲ್ಲವೇ?

**ಮೂಷಿಕನ ಬಿಲದಂತೆ ಹರಿಕಥೆ ಕೇಳಿ ಸಂ-**
**ತೋಷಿಸದವನ ಕರ್ಣಗಳು**
**ಶ್ರೀಶನ ಕ್ಷೇತ್ರಕ್ಕೆ ಪೋಗದ ಕಾಲ್ಗಳು**
**ಪಾಷಾಣಪ್ರತಿಮೆಯಂಘ್ರಿಗಳು** ॥೩॥

**ಅರ್ಥ:** ಹರಿಕಥೆ ಕೇಳಿ—ಶ್ರೀಹರಿಮಹಿಮೆಗಳನ್ನು ಕೇಳಿ, ಸಂತೋಷಿಸ-ದವನ—ಆನಂದಪಡದಿರುವವನ, ಕರ್ಣಗಳು—ಕಿವಿಗಳು, ಮೂಷಿಕನ ಬಿಲದಂತೆ—ಹೆಗ್ಗಣದ ಹೋರಿನಂತೆ, ಶ್ರೀಶನ ಕ್ಷೇತ್ರಕ್ಕೆ—ಶ್ರೀಹರಿಸನ್ನಿಧಾನ-ದಿಂದ ಪವಿತ್ರವಾದ ಕ್ಷೇತ್ರಗಳಿಗೆ (ಪುಣ್ಯಕ್ಷೇತ್ರಗಳಿಗೆ), ಪೋಗದ ಕಾಲ್ಗಳು—ಹೋಗದಿರುವ ಕಾಲುಗಳು, ಪಾಷಾಣ ಪ್ರತಿಮೆಯ—ಕಲ್ಲಿನಿಂದ ಮಾಡಿದ ಮೂರ್ತಿಯ, ಅಂಘ್ರಿಗಳು—ಪಾದಗಳಿದ್ದಂತೆ.

**ಹರಿಯ ನೋಡದ ಕಣ್ಣು ಹೀಲಿಯ ಕಣ್ಣು**
**ನರಹರಿಯ ಪಾಡದವನ ಜಿಹ್ವೆ**
**ವರಲಿ ಬಳಲುವ ಜಿಹ್ವೆ ಮಂಡೂಕನ ಜಿಹ್ವೆ**
**ಹರಿಚರಣಕೆರಗದ ಶಿರವು ಹೆಡತಲೆ ಶಿರವು** ॥೪॥

**ಅರ್ಥ:** ಹರಿಯ ನೋಡದ ಕಣ್ಣು—ಶ್ರೀಹರಿಯನ್ನು ಕಾಣದಿರುವ ಕಣ್ಣು, ಹೀಲಿಯ ಕಣ್ಣು—ನವಿಲುಗರಿಯ ಕಣ್ಣು, (ನವಿಲ ರೆಕ್ಕೆಗಳಲ್ಲಿ ತೋರುವ ಕಣ್ಣಿನಾಕಾರದ ಚಿತ್ರದಂತೆ); ನರಹರಿಯ ಪಾಡದವನ ಜಿಹ್ವೆ—ನರಹರಿಯನ್ನು ಕೊಂಡಾಡದವನ ನಾಲಿಗೆಯು, ವರಲಿ ಬಳಲುವ—ಒದರಿ ದಣಿಯುವ (ವ್ಯರ್ಥಾಲಾಪದಿಂದ ದಣಿಯುವ), ಜಿಹ್ವೆ—ನಾಲಿಗೆಯು, ಮಂಡೂಕನ ಜಿಹ್ವೆ—ಕಪ್ಪೆಯ ನಾಲಿಗೆಯಂತೆ; ಹರಿಚರಣಕೆರಗದ—ಶ್ರೀಹರಿಪಾದಗಳಿಗೆ ನಮಸ್ಕರಿಸದ, ಶಿರವು—ತಲೆಯು, ಹೆಡತಲೆ ಶಿರವು—ಮೃತ್ಯುಗ್ರಸ್ತ ತಲೆಯು (ಶವದ ತಲೆಯಿದ್ದಂತೆ).

## ಶ್ಲೋಕ ೮-೯

**ತವಾಪ್ಯೇತರ್ಹಿ ಕೌರವ್ಯ ಸಪ್ತಾಹಂ ಜೀವಿತಾವಧಿಃ।**
**ಉಪಕಲ್ಪಯ ತತ್ಸರ್ವಂ ಯತ್ತಾವತ್ಸಾಂಪರಾಯಿಕಮ್॥**

**ಖಟ್ವಾಂಗೋ ನಾಮ ರಾಜರ್ಷಿರ್ಜ್ಞಾತ್ವೇಯತ್ತಾಮಿಹಾಯುಷಃ।**
**ಮುಹುರ್ತಾತ್ಸರ್ವಮುತ್ಸೃಜ್ಯ ಗತವಾನಭಯಂ ಹರಿಮ್॥**

**ಅರ್ಥ:** ಶ್ರೀಶುಕರು ಪರೀಕ್ಷಿದ್ರಾಜನಿಗೆ ಹೇಳುತ್ತಾರೆ: ಕೌರವ್ಯ—ಕುರು-ವಂಶೀಯನಾದ ಹೇ ಪರೀಕ್ಷಿದ್ರಾಜನೇ! ತವಾಪಿ—ನಿನಗಾದರೋ, ಏತರ್ಹಿ—ಈಗ (ಈಗಿನಿಂದ), ಜೀವಿತಾವಧಿಃ—ಜೀವಿತಕಾಲವು, ಸಪ್ತಾಹಂ—ಏಳು ದಿನಗಳಿವೆ; ಸಾಂಪರಾಯಿಕಂ ಯತ್—ಪರಲೋಕಸಂಬಂಧವಾದುದು ಯಾವುದೋ (ಮರಣಕಾಲದಲ್ಲಿ ಉತ್ತಮಗತಿಗಾಗಿ ಮಾಡಬೇಕಾದ), ತತ್ಸರ್ವಂ—ಆ ಎಲ್ಲವನ್ನೂ, ಉಪಕಲ್ಪಯ—ಮಾಡಿಕೋ.

ಖಟ್ವಾಂಗೋ ನಾಮ ರಾಜರ್ಷಿಃ—ಖಟ್ವಾಂಗನೆಂಬ ರಾಜರ್ಷಿಯು, ಆಯುಷಃ—ತನ್ನ ಆಯುಷ್ಯದ, ಇಯತ್ತಾಂ—ಅವಧಿಯನ್ನು, ಜ್ಞಾತ್ವಾ—ತಿಳಿದು, ಮುಹೂರ್ತಾತ್—(ಉಳಿದಿದ್ದ) ಒಂದು ಮುಹೂರ್ತದಲ್ಲಿ (೨ ಘಳಿಗೆಯ ಕಾಲದಲ್ಲಿ) ಸರ್ವಂ ಉತ್ಸೃಜ್ಯ—ಸರ್ವಸಂಗವನ್ನು ತೊರೆದು, ಅಭಯಂ ಹರಿಂ—ನಿತ್ಯಮುಕ್ತನಾದ (ಮುಕ್ತಿಪ್ರದನಾದ) ಶ್ರೀಹರಿಯನ್ನು, ಗತವಾನ್—ಹೊಂದಿದವನಾದನು.

## ಪದ ೯

ರಾಗ-ಸೌರಾಷ್ಟ್ರ; ತಾಳ-ಅಟ

**ಏಳುದಿನ ಹರಿಕಥೆಯ ಕೇಳಿಯೊಬ್ಬ-**
**ದಾಳಿಯಿಡನೆ ಹರಿಪುರಕೆ**
**ಶ್ರೀಲೋಲನ ನೆನೆದೆರಡು ಘಳಿಗೆಯೊಳೊಬ್ಬ**
**ಮೇಲೆನಿಪ ಮುಕ್ತಿಗೇರನೇ ॥೧॥**

**ಅರ್ಥ:** ಒಬ್ಬ—ಒಬ್ಬ ಭಕ್ತನು (ಪರೀಕ್ಷಿತನು), ಏಳುದಿನ—ಏಳು ದಿನ-ಗಳು, ಹರಿಕಥೆಯ—ಹರಿಮಹಿಮೆಗಳನ್ನು, ಕೇಳಿಯೆ—ಶ್ರವಣಮಾಡಿಯೇ, ಹರಿಪುರಕೆ—ವೈಕುಂಠಕ್ಕೆ, ದಾಳಿಯಿಡನೆ—ನಡೆಯಲಿಲ್ಲವೇ? ಎರಡು ಘಳಿಗೆ-ಯೊಳು—ಎರಡೇ ಘಳಿಗೆಗಳಲ್ಲಿ (ಒಂದು ಮುಹೂರ್ತಮಾತ್ರದಲ್ಲಿ), ಒಬ್ಬ

—ಒಬ್ಬನು, ಶ್ರೀಲೋಲನ—ನಾರಾಯಣನನ್ನು, ನೆನೆದು—ಧ್ಯಾನಿಸಿ, ಮೇಲೆನಿಪ—ಉತ್ತಮಗತಿಯಾದ, ಮುಕ್ತಿಗೆ—ಮೋಕ್ಷಸ್ಥಾನಕ್ಕೆ, ಏರನೇ—ಹತ್ತಲಿಲ್ಲವೇ?

**ಅದರಿಂದ ನಾರಾಯಣನ ಕೊಂಡಾಡುವ**
**ಬುಧರು ಸಂಸಾರವ ತೊರೆದು**
**ಮುದದಿಂದ ವೈಕುಂಠಕೈದಿ ಶ್ರೀಕೃಷ್ಣನ**
**ಪದಸನ್ನಿಧಿಯಲ್ಲಿ ಸುಖಿಸುವರು** ॥೨॥

**ಅರ್ಥ:** ಅದರಿಂದ—ಆದ್ದರಿಂದ (ಈ ಎರಡು ನಿದರ್ಶನಗಳಿಂದ), ನಾರಾಯಣನ ಕೊಂಡಾಡುವ—ನಾರಾಯಣನನ್ನು ಸ್ತುತಿಸುವ, ಬುಧರು—ಜ್ಞಾನಿಗಳು, ಸಂಸಾರವನು—ಸಂಸಾರವನ್ನು, ತೊರೆದು—ಬಿಟ್ಟು, ಮುದದಿಂದ—ಸಂತೋಷದಿಂದ, ವೈಕುಂಠಕೆ—ವೈಕುಂಠಕ್ಕೆ, ಐದಿ—ಸೇರಿ (ವೈಕುಂಠವನ್ನು ಹೊಂದಿ), ಶ್ರೀಕೃಷ್ಣನ ಪದಸನ್ನಿಧಿಯಲ್ಲಿ—ಶ್ರೀಕೃಷ್ಣನ ಪಾದಮೂಲದಲ್ಲಿ, ಸುಖಿಸುವರು—ಆನಂದವನ್ನು ಭೋಗಿಸುವರು.

**ವಿಶೇಷಾಂಶ:** (೧) ***'ಭೇಜೇ ಖಗೇಂದ್ರಧ್ವಜಪಾದಮೂಲಂ'*** ಎಂದಿರುವಂತೆ, ಪರೀಕ್ಷಿದ್ರಾಜನು ಶ್ರೀಶುಕರಿಂದ ಏಳು ದಿನಗಳ ಭಾಗವತ ಶ್ರವಣದಿಂದ ಗರುಡಧ್ವಜನ ಪಾದಾಶ್ರಯವನ್ನು ಪಡೆದನು.

(೨) ಖಟ್ವಾಂಗನು ಸೂರ್ಯವಂಶದ ಪ್ರಸಿದ್ಧ ಚಕ್ರವರ್ತಿಯು. ಈತನಿಗೆ ದಿಲೀಪನೆಂಬುದು ಇನ್ನೊಂದು ನಾಮ. ಈ ದಿಲೀಪನ ಮಗನೇ ರಘು. ಈತನ ವಂಶದಲ್ಲಿಯೇ ಶ್ರೀರಾಮನು ಅವತರಿಸಿದುದು. ಖಟ್ವಾಂಗನು ಒಮ್ಮೆ ದೇವದೈತ್ಯರ ಯುದ್ಧದಲ್ಲಿ ದೇವತೆಗಳ ಪರವಾಗಿ ಯುದ್ಧಮಾಡಿ ಅವರನ್ನು ಮೆಚ್ಚಿಸಿದನು. ಅವರು ವರವನ್ನು ಕೇಳೆನಲು, ತನ್ನ ಆಯುಃಪರಿಮಿತಿಯನ್ನು ಹೇಳಿರೆಂದನು. ಅದಕ್ಕವರು ಇನ್ನೊಂದು ಮುಹೂರ್ತ ಮಾತ್ರ ಉಳಿದಿರುವುದೆಂದು ಹೇಳಲು, ತಕ್ಷಣ ತನ್ನ ರಾಜಧಾನಿಗೆ ಹಿಂತಿರುಗಿ, ಮಗನಾದ ರಘುರಾಜನಿಗೆ ರಾಜ್ಯವನ್ನೊಪ್ಪಿಸಿ, ಶ್ರೀಹರಿಧ್ಯಾನದಿಂದ ಒಂದೇ ಮುಹೂರ್ತದಲ್ಲಿ, ಪರಮಪದವನ್ನು ಸಾಧಿಸಿದನು.

(೩) ಶ್ರೀಕೃಷ್ಣನು ಮುಕ್ತಾಶ್ರಯನು—ಮುಕ್ತಸೇವ್ಯನು. *'ಕೃಷ್ಣೋಽಜ್ಯತೇ ವೀತಮೋಹೈಃ'* ಎಂಬಲ್ಲಿ ಮುಕ್ತರಿಂದ ಪೂಜಿಸಲ್ಪಡುವನೆಂದು ಹೇಳಿದೆ. ವಸುದೇವ ಪುತ್ರನಾಗಿ ಅವತರಿಸಿದ ಶ್ರೀಕೃಷ್ಣನು ಮುಕ್ತಸೇವ್ಯನಾದ ಶ್ರೀಕೃಷ್ಣರೂಪದಿಂದ ಅತ್ಯಂತ ಅಭಿನ್ನನು.

## ಶ್ಲೋಕ ೧೦-೧೧

**ತತೋ ವೈಕುಂಠಮಗಮದ್ಭಾಸ್ವರಂ ತಮಸಃ ಪರಮ್।**
**ಯತ್ರ ನಾರಾಯಣಃ ಸಾಕ್ಷಾತ್ ನ್ಯಾಸಿನಾಂ ಪರಮಾ ಗತಿಃ ॥೧೦॥**

**ಶಾಂತಾನಾಂ ನ್ಯಸ್ತದಂಡಾನಾಂ ಯತೋ ನಾವರ್ತತೇ ಯತಿಃ।**
**ವೈಕುಂಠಂ ನಾಮ ಲೋಕಂ ತಂ ದಿವ್ಯಂ ನಿತ್ಯಂ ಸನಾತನಮ್ ॥೧೧॥**

**ಅರ್ಥ:** ತತಃ—ಅನಂತರ, ತಮಸಃ ಪರಂ—ಅಪ್ರಾಕೃತವಾದ (ತಮಸ್ಸು. ಜಡ—ಪ್ರಾಕೃತ), ಭಾಸ್ವರಂ—ಪ್ರಕಾಶಮಯವಾದ, ವೈಕುಂಠಂ—ವೈಕುಂಠ ನಗರಿಯನ್ನು, ಅಗಮತ್—ಹೊಂದಿದನು; ಯತ್ರ—ಯಾವ ನಗರಿಯಲ್ಲಿ, ನ್ಯಾಸಿನಾಂ—ಪರಮಹಂಸರ (ಸರ್ವಸಮರ್ಪಣೆ ಮಾಡುವ ಜ್ಞಾನಿಗಳ), ಪರಮಾಗತಿಃ—ಉತ್ತಮಾಶ್ರಯನಾದ, ಮತ್ತು ಶಾಂತಾನಾಂ—ಸದಾ ಪ್ರಸನ್ನ-ಚಿತ್ತರಾದ, ನ್ಯಸ್ತದಂಡಾನಾಂ—ಪ್ರಾಕೃತದೇಹರಹಿತರಾದ ಮುಕ್ತರಿಗೆ, ನಾರಾಯಣಃ—ನಾರಾಯಣನು, ಸಾಕ್ಷಾತ್—ಸದಾ ಪ್ರತ್ಯಕ್ಷನೋ, ಮತ್ತು ಯತಃ—ಯಾವಲ್ಲಿಂದ, ಯತಿಃ—ಅಲ್ಲಿಗೆ ಹೋದ ಅಸಂಗಿಯು (ಮುಕ್ತನು), ನಾವರ್ತತೇ—ತಿರುಗಿ ಬರುವುದಿಲ್ಲವೋ, ತಂ—ಆ, ದಿವ್ಯಂ—ಲೋಕ-ವಿಲಕ್ಷಣವಾದ, ನಿತ್ಯಂ—ನಾಶರಹಿತವಾದ, ಸನಾತನಂ—ಅನಾದಿಕಾಲ-ದಿಂದಲೂ ಇರುವ, **ವೈಕುಂಠಂನಾಮ ಲೋಕಂ**—ವೈಕುಂಠವೆಂಬ ಲೋಕ-ವನ್ನು ಕುರಿತು (ಅಗಮತ್—ಆ ಭೃಗುಋಷಿಯು ಹೋದನು—ವೈಕುಂಠ-ನಗರಿಯನ್ನೂ ಸೇರಿದನು).

### ಪದ ೧೦

ರಾಗ-ತೋಡಿ; ತಾಳ-ರೂಪಕ

**ಸಾಕ್ಷಾನ್ನಾರಾಯಣನಿಪ್ಪ ವೈಕುಂಠವ**
**ಪೊಕ್ಕು ಬದುಕ್ಕುವದೇ ಮೋಕ್ಷ**
**ಪಕ್ಷಪಾತವಿಲ್ಲ ಶುಕಮುನಿಯ ವಾಕ್ಯ ವಿ-**
**ವೇಕಿಗಳಿದ ನೀವೇ ನೋಡಿರೋ ॥೧॥**

**ಅರ್ಥ:** ಸಾಕ್ಷಾನ್ನಾರಾಯಣನಿಪ್ಪ—ಸದಾ ಪ್ರತ್ಯಕ್ಷನಾಗಿ ನಾರಾಯಣನಿರುವ, ವೈಕುಂಠವ—ವೈಕುಂಠವನ್ನು, ಪೊಕ್ಕು—ಹೋಗಿ ಸೇರಿ, ಬದುಕ್ಕುವದೇ—ಬಾಳು-ವುದೇ, ಮೋಕ್ಷ—ಮುಕ್ತಿಯು; ಪಕ್ಷಪಾತವಿಲ್ಲ—ಯಾವುದೊಂದು ಸಿದ್ಧಾಂತ-(ಪಕ್ಷ)ದಲ್ಲಿ ಆಗ್ರಹವಿಲ್ಲದ, ಶುಕಮುನಿಯ—ಶುಕಾಚಾರ್ಯರ, ವಾಕ್ಯ—

(ಹೀಗೆಂಬ) ನುಡಿ, ಇದ—ಇದನ್ನು, ವಿವೇಕಿಗಳು—ಬುದ್ಧಿಶಾಲಿಗಳಾದ, ನೀವೇ ನೋಡಿರೋ—ನೀವುಗಳೇ ತಿಳಿದು ನೋಡಿರಿ.

**ಎಂದೆಂದು ಕುಂಠನವೆಂಬ ನಾಶವಿಲ್ಲ-**
**ದಿಂದಿರೇಶನೆ ವಿಕುಂಠ**
**ಚಂದದವನ ಮನೆಯೆನಿಪ ಶ್ರೀವೈಕುಂಠಕ್ಕೆ**
**ಮಂದಮತಿಯೇ ನಾಶವುಂಟೇ** ॥೨॥

**ಅರ್ಥ:** ಎಂದೆಂದು—ಕಾಲತ್ರಯದಲ್ಲಿ, ಕುಂಠನವೆಂಬ—**'ಕುಂಠನ'**ವೆಂದು ಕರೆಯಲ್ಪಡುವ, ನಾಶವು ಇಲ್ಲದ, ಇಂದಿರೇಶನೆ—(ಯಾವ ಪ್ರಕಾರದ) ನಾಶವೂ ಇಲ್ಲದ ಲಕ್ಷ್ಮೀಪತಿಯೇ, ವಿಕುಂಠ—**ವಿಕುಂಠನೆಂಬ** ನಾಮವುಳ್ಳ-ವನು; ಚಂದದ—ವಿಲಕ್ಷಣವಾದ, ಅವನ—ಆ ವಿಕುಂಠನ, (ಅಥವಾ ಚಂದ-ದವನ—ಮಂಗಳಸ್ವರೂಪನಾದ ಆ ವಿಕುಂಠನ), ಮಂದಮತಿಯೇ, ಮನೆ-ಯೆನಿಪ—ಮನೆಯಾದ, ಶ್ರೀವೈಕುಂಠಕ್ಕೆ—ವೈಕುಂಠಲೋಕಕ್ಕೆ, ನಾಶವುಂಟೇ —ನಾಶವಿರುವುದೇ?

ನಿತ್ಯನಾದ ವಿಕುಂಠನ ಮನೆಯೂ ನಿತ್ಯವಿರಬೇಕೆಂಬಲ್ಲಿ ಲೌಕಿಕಯುಕ್ತಿಯನ್ನು ತೋರಿಸುತ್ತಾರೆ:

**ತನ್ನ ಮನೆ ಪೋದಮೇಲೆ ನಾರಾಯಣನು**
**ಬಿನ್ನುಗಾರನಂತೆ ಕಾನನದಿ**
**ವನಿತೆಯರ ಕೂಡಿ ಪಣ್ಣು ಫಲ ಮೆಲುವನೆ**
**ಮನಬಂದಂತೆ ನುಡಿಯದಿರು** ॥೩॥

**ಅರ್ಥ:** ತನ್ನ ಮನೆ—ತನ್ನ ಮನೆಯಾದ ವೈಕುಂಠವು, ಪೋದಮೇಲೆ —ನಷ್ಟವಾದರೆ (ನಾಶಹೊಂದಿದರೆ), ನಾರಾಯಣನು—ಆ ಲಕ್ಷ್ಮೀಪತಿಯು, ಬಿನ್ನುಗಾರನಂತೆ—ಬೇಡನಂತೆ (ವ್ಯಾಧನಂತೆ), ಕಾನನದಿ—ಅಡವಿಯಲ್ಲಿ, ವನಿತೆಯರ ಕೂಡಿ—ತನ್ನ ಪತ್ನಿಯರಿಂದ ಕೂಡಿ, ಪಣ್ಣು ಫಲ ಮೆಲುವನೆ —ಹಣ್ಣುಹಂಪಲುಗಳನ್ನು ತಿನ್ನುವನೇ? ಮನಬಂದಂತೆ ನುಡಿಯದಿರು—ಹುಚ್ಚನಂತೆ ಮಾತನಾಡಬೇಡ.

**ನಶ್ವರವಲ್ಲದ ಈ ಪದವೇ ಬುಧರಿಗೆ**
**ಶಾಶ್ವತಸ್ಥಾನವೆನಿಪುದು**

**ಭಾಸ್ವರವೈಕುಂಠವದರಿಂದ ಎಲ್ಲರ್ಗು**
**ನಿಶ್ಚಿತ ಮುಕುತಿ ಕಾಣಿರೋ ॥೪॥**

**ಅರ್ಥ:** ನಶ್ವರವಲ್ಲದ—ನಾಶರಹಿತವಾದ, ಈ ಪದವೇ—ಈ ಸ್ಥಾನವೇ, ಬುಧರಿಗೆ—ಬುಧಜನಕ್ಕೆ, ಶಾಶ್ವತಸ್ಥಾನವೆನಿಸುವುದು—ವಿಕಾರವಿಲ್ಲದ ನಿತ್ಯ-ಸ್ಥಾನವೆಂದು ಶಾಸ್ತ್ರಪ್ರಸಿದ್ಧವು; ಅದರಿಂದ—ಈ ಕಾರಣದಿಂದ, ಭಾಸ್ವರ-ವೈಕುಂಠವು—ಹೀಗೆ ವಿರಾಜಿಸುವ ಈ ವೈಕುಂಠವು (ಅದರ ಪ್ರಾಪ್ತಿಯು), ಎಲ್ಲರ್ಗು—ಎಲ್ಲ ಸುಜೀವರಿಗೆ, ನಿಶ್ಚಿತ ಮುಕ್ತಿ ಕಾಣಿರೋ—ತಪ್ಪದೇ ದೊರೆ-ಯುವ ಮೋಕ್ಷವೆಂದು ತಿಳಿಯಿರಿ.

**ವಿಶೇಷಾಂಶ:** (೧) ವೈಕುಂಠಾದಿ ಮುಕ್ತಲೋಕಗಳು ಅಪ್ರಾಕೃತ ಮತ್ತು ಲಕ್ಷ್ಮ್ಯಾತ್ಮಕಗಳೆಂದು ಹೇಳಲ್ಪಡುತ್ತವೆ. ಅಪ್ರಾಕೃತ, ಲಕ್ಷ್ಮ್ಯಾತ್ಮಕ ಶಬ್ದಗಳಿಂದ ಹೇಳಲ್ಪಡುವ ಅರ್ಥಸೂಕ್ಷ್ಮಗಳನ್ನು ವಿವೇಕಿಸಿ ತಿಳಿಯಬೇಕಾದುದು ಆವಶ್ಯಕ. ಲಕ್ಷ್ಮ್ಯಾತ್ಮಕವೆಂದರೆ ಲಕ್ಷ್ಮೀಸ್ವರೂಪವೇ ಹೇಗೆ? ಮುಕ್ತಲೋಕಗಳು ಮತ್ತು ಅಲ್ಲಿರುವ ಎಲ್ಲ ವಸ್ತುಗಳೂ ಲಕ್ಷ್ಮೀರೂಪಗಳೇ ಆದರೆ, ಮುಕ್ತ ಜೀವರಿಗೆ ಅವುಗಳ ಭೋಗವು ಹೇಗೆ ಸಲ್ಲುವುದು ಮತ್ತು ಭೋಗವೆಂದರೇನು, ಎಂಬುದನ್ನು ಸ್ಪಷ್ಟವಾಗಿ ಗ್ರಹಿಸಬೇಕಲ್ಲವೇ?

'*ವಿಮಲಾಕೃತಿಃ ಪ್ರಕೃತಿರೇವ ಮಹಾಮಣಿಹೇಮಮಯ್ಯಖಿಲವಸ್ತುಮಯೀ!*' (ಸುಮಧ್ವವಿಜಯ) ವಿಶ್ವವಿಭವೈಕಪದವಾದ ವೈಕುಂಠವನ್ನು ವರ್ಣಿಸುತ್ತಾ, 'ಇಹ—ಈ ವೈಕುಂಠದಲ್ಲಿ, ವಿಮಲಾಕೃತಿಃ—ನಿರ್ದೋಷಸ್ವರೂಪಳಾದ, ಪ್ರಕೃತಿರೇವ—ಮಹಾಲಕ್ಷ್ಮಿಯೇ, ಮಹಾಮಣಿಹೇಮಮಯೀ—ಅನರ್ಘ್ಯ-ಗಳಾದ ರತ್ನಸುವರ್ಣರೂಪಳೂ, ಹೆಚ್ಚೇನು, ಅಖಿಲವಸ್ತುಮಯೀ—ಸಮಸ್ತ ವಸ್ತುಸ್ವರೂಪಳೂ (ಆಗಿರುತ್ತಾಳೆ)' ಎಂದು ಹೇಳಲಾಗಿದೆ. ಈ ಶ್ಲೋಕದ 'ಛಲಾರಿ ವ್ಯಾಖ್ಯಾನ'ದಲ್ಲಿ, '*ಗೃಹಮಣಿಸುವರ್ಣಾದ್ಯಖಿಲಪದಾರ್ಥಾನಾಂ ನಿರ್ದೋಷಾತಿಸುಂದರಕಾಂತಿರಮಾಸ್ವರೂಪತ್ವಾತ್*'—ಎಂದರೆ, 'ಗೃಹ, ರತ್ನ, ಸುವರ್ಣ ಮೊದಲಾದ ಸಕಲ ಪದಾರ್ಥಗಳಿಗೆ, ಪರಿಶುದ್ಧವೂ ಅತಿ ಸುಂದರ-ಕಾಂತಿಯುಳ್ಳದ್ದೂ ಆದ ರಮಾಸ್ವರೂಪತ್ವವಿರುವುದರಿಂದ' ವೈಕುಂಠದ ಶೋಭಾತಿಶಯವು ಅಸಂಭಾವಿತವಲ್ಲವೆಂದು ಹೇಳಲಾಗಿದೆ. '*ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ!*' ಎಂದು (ಗೀತಾತಾತ್ಪರ್ಯ) ಹೇಳಿರುವುದು ಸಹ ಇದೇ ಅರ್ಥವನ್ನೇ ಸೂಚಿಸುತ್ತದೆ.

ವಿಷ್ಣುರಹಸ್ಯದಲ್ಲಿ (೧೭ನೇ ಅಧ್ಯಾಯ) ಹೀಗೆ ಹೇಳಲಾಗಿದೆ:

*'ಅಚೇತನೈವ ಪ್ರಕೃತಿರ್ನಿತ್ಯೈವ ಪರಿಕೀರ್ತಿತಾ।*
*ಸತ್ವಂ ಶುದ್ಧಂ ತಮಃ ಶುದ್ಧಂ ಆಕಾಶಃ ಕಾಲ ಏವ ಚ॥*
*ಅಕಾರಾದ್ಯಾಸ್ತಥಾ ವರ್ಣಾಃ ವಾಚೋ ವೇದಾತ್ಮಿಕಾಸ್ತಥಾ।*
*ಇತ್ಯಾದಿ ಪ್ರಕೃತಿರ್ನಿತ್ಯಾ ನಾನಾಭೇದಸಮನ್ವಿತಾ।*
*ಅನಂತಾಸನವೈಕುಂಠನಾರಾಯಣಪುರೇಷು ಯೇ॥*
*ಶ್ರೀಭಾಗಾಃ ಶುದ್ಧಸತ್ವಸ್ಥಾಃ ಪದ್ಮಶಂಖಾಂಬರಾದಿ ಚ।*
*ಕಿರೀಟಕಟಕಾದ್ಯಾ ಯೇಽಪ್ಯಲಂಕಾರಾ ಮಮ ಶ್ರಿಯಃ॥*
*ಇತ್ಯಾದ್ಯಾಃ ಸತ್ವರೂಪಾಃ ಸ್ಯುಃ ನಿತ್ಯಾನಾದಯ ಏವ ತೇ'*

ಇದೇ ವಿಷಯದಲ್ಲಿ ಪುನಃ ೫೯ನೇ ಅಧ್ಯಾಯದಲ್ಲಿ, ಹೀಗೆ ಹೇಳಲಾಗಿದೆ:

*'ಮಧ್ಯಭಾಗಃ ಶ್ರಿಯಸ್ತತ್ರ ಸ ತು ಲೋಕಃ ಸನಾತನಃ।*
*ಮುಕ್ತಾ ಏವ ರಮಂತೇಽತ್ರ ಪುನರಾವೃತ್ತಿವರ್ಜಿತಾಃ॥*
*ಶ್ರೀಭಾಗಃ ಶುದ್ಧಸತ್ವಾತ್ಮಾ ಮುಕ್ತೈರೇವ ನಿಷೇವಿತಃ।*
*ಯಥಾ ಯಥೈವ ಮುಕ್ತೇಚ್ಛಾ ಫಲಂ ಪುಷ್ಪಾದಿಕಂ ತಥಾ॥*
*ಸತ್ವತೋ ಜಾಯತೇ ಶೀಘ್ರಂ ಇಚ್ಛಾಂತೇ ತತ್ರ ಲೀಯತೇ।*
*ತರಂಗಾ ಇವ ತೋಯೇಷು ತಾದಾತ್ಮನೋಽಪಿ ತಲ್ಲಯಾಃ॥'* ಇತ್ಯಾದಿ.

ಉದಾಹೃತ ವಿಷ್ಣುರಹಸ್ಯಶ್ಲೋಕಗಳ ತಾತ್ಪರ್ಯವೇನೆಂದರೆ: ಅಚೇತನವೇ ಆದ ಪ್ರಕೃತಿಯೂ ನಿತ್ಯವೇ ಆಗಿದೆ. ಶುದ್ಧಸತ್ವ, ಶುದ್ಧತಮ, ಆಕಾಶ, ಕಾಲ, ಅಕಾರಾದಿ ವರ್ಣಗಳು, ಮತ್ತು ವೇದವಾಕ್ಯಗಳು (ವೇದಗತವಾದ ವರ್ಣ-ಪದಾದಿ ಕ್ರಮಗಳೂ), ಇತ್ಯಾದಿ ನಾನಾ ಭೇದಯುಕ್ತ ವಸ್ತುಸಮುದಾಯಗಳ ಸ್ವಭಾವಗಳು ನಿತ್ಯವಾಗಿವೆ; ಅನಂತಾಸನ, ವೈಕುಂಠ, ನಾರಾಯಣಪುರಗಳ-ಲ್ಲಿರುವ ಶ್ರೀಭಾಗಗಳು ಶುದ್ಧಸತ್ವಸ್ಥವಾಗಿವೆ; ಪದ್ಮ, ಶಂಖ, ಪೀತಾಂಬರ, ಕಿರೀಟ, ಕಡಗ ಮೊದಲಾದ ನನ್ನ ಮತ್ತು ಲಕ್ಷ್ಮೀದೇವಿಯ (ಅಥವಾ ಲಕ್ಷ್ಮೀ-ದೇವಿಯು ನನಗೆ ಮಾಡುವ) ಅಲಂಕಾರವಸ್ತುಗಳೆಲ್ಲವೂ ಶುದ್ಧಸತ್ವಸ್ವರೂಪ-ದವು— ಅನಾದಿ ನಿತ್ಯಗಳು.

[ಸೂಚನೆ: ಮೂಲಪ್ರಕೃತಿಯು ಅನಂತವೂ ಅಪಾರವೂ ಆಗಿದೆ. ಅದರಲ್ಲಿ ಒಂದು ಭಾಗ (ಏಕಾಂಶ) ಮಾತ್ರ, ಬ್ರಹ್ಮಾಂಡದ ಸೃಷ್ಟಿಗಾಗಿ ಉಪಯೋಗಿಸ-

ಲ್ಪಡುತ್ತದೆ. ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ ಭಾಗದಲ್ಲಿರುವ ಸತ್ವ-ತಮೋಗುಣಗಳು ಶುದ್ಧಸತ್ವ-ಶುದ್ಧತಮೋಗುಣಗಳೆಂದು ಕರೆಯಲ್ಪಡುತ್ತವೆ. ಸೃಷ್ಟಿಗಾಗಿ ಉಪಯೋಗಿಸಲಾಗುವ ಮೂಲಪ್ರಕೃತಿಯಲ್ಲಿ ಶ್ರೀಹರೀಚ್ಛೆಯಿಂದ, ಸತ್ವಗುಣ-ತಮೋಗುಣಗಳ ಮಿಶ್ರಣದಿಂದ ರಜೋಗುಣವೂ ಪ್ರಕಟವಾಗುತ್ತದೆ. ಪ್ರಳಯಕಾಲದಲ್ಲಿ ರಜೋಗುಣದ ಸತ್ವ-ತಮ ಅಂಶಗಳು, ಸತ್ವ-ತಮೋಗುಣಗಳಲ್ಲಿ ಲೀನವಾಗುತ್ತವೆ. ಈ ಪ್ರಮೇಯಗಳು ವಿಷ್ಣು ರಹಸ್ಯದಲ್ಲಿ ಅನ್ಯತ್ರ ವಿವರಿಸಲಾಗಿವೆ.]

ಶ್ರೀ, ಭೂ, ದುರ್ಗಾಭಾಗಗಳೆಂಬ ಮೂರು ಭಾಗಗಳುಳ್ಳ, ವೈಕುಂಠಾದಿ ಮೂರು ಸ್ಥಾನಗಳಲ್ಲಿ, ಮಧ್ಯಭಾಗವು ಶ್ರೀಭಾಗವು. ಅಲ್ಲಿ ಪುನರಾವೃತ್ತಿರಹಿತ-ರಾದ ಮುಕ್ತರು ಮಾತ್ರ ಕ್ರೀಡಿಸುತ್ತಾರೆ. ಮುಕ್ತರಿಂದಲೇ ಸೇವ್ಯವಾದ ಈ ಶ್ರೀಭಾಗವು ಶುದ್ಧಸತ್ವಾತ್ಮಕವಾದುದು; ಅಲ್ಲಿ, ಫಲಪುಷ್ಪಾದಿ ಸಕಲ ವಸ್ತುಗಳು, ಮುಕ್ತರ ಇಚ್ಛಾನುಸಾರವಾಗಿ (ಅಲ್ಲಲ್ಲಿ ಅದೇ ಕಾಲದಲ್ಲಿ) ಶುದ್ಧಸತ್ವದಿಂದ ಹುಟ್ಟುತ್ತವೆ (ರೂಪುಗೊಳ್ಳುತ್ತವೆ); ಅವರ ಇಚ್ಛೆಯು ಪೂರೈಸಿದ ನಂತರ (ಭೋಗಾನಂತರ), ಜಲಾತ್ಮಕವೇ ಆದ ಜಲತರಂಗಗಳು ಜಲದಲ್ಲಿಯೇ ಲಯ-ವಾಗುವಂತೆ ಶುದ್ಧಸತ್ವದಲ್ಲಿಯೇ ಲಯಹೊಂದುತ್ತವೆ. (ಲೀನವಾಗುತ್ತವೆ).

ಶ್ರೀಸುಮಧ್ವವಿಜಯಾದಿಗಳ ನಿರೂಪಣೆಗೂ ಉದಾಹೃತವಿಷ್ಣುರಹಸ್ಯದ ಮುಕ್ತಲೋಕನಿರೂಪಣೆಗೂ ಆಪಾತತಃ ತೋರುವ ವಿರೋಧವು ಅಪರಿ-ಹಾರ್ಯವೇನಲ್ಲ. **ವೈಕುಂಠಲೋಕದಲ್ಲಿ, ವೈಕುಂಠವೆಂದೇ ಕರೆಯಲ್ಪಡುವ ವೈಕುಂಠನಾಮಕ ಶ್ರೀಹರಿಯು ವಿಹರಿಸುವ ವೈಕುಂಠನಗರಿಯು** ಶ್ರೀಸುಮಧ್ವ-ವಿಜಯಾದಿಗಳ ವಿಷಯವೆಂದೂ, ವಿಷ್ಣುರಹಸ್ಯದಲ್ಲಿ ಅದನ್ನೂ **ಒಳಗೊಂಡ ಇಡೀ ವೈಕುಂಠ ಲೋಕವೇ** ಪ್ರಸಕ್ತವೆಂದೂ ತಿಳಿಯಬಹುದಾಗಿದೆ. ವೈಕುಂಠ-ನಗರಿಯಲ್ಲಿರುವ ಎಲ್ಲ ವಸ್ತುಗಳು ಲಕ್ಷ್ಮೀಸ್ವರೂಪಗಳೂ ಸತ್ವಾತ್ಮಕವೂ—(ಉಭಯಾತ್ಮಕವೆಂದೂ) ಆದುವೆಂದು ತಿಳಿಯಬಹುದು. ಛತ್ರ, ಚಾಮರ, ಪರ್ಯಂಕರೂಪಳಾಗಿ ತಾನೇ ಶ್ರೀವೈಕುಂಠನನ್ನು ಲಕ್ಷ್ಮೀದೇವಿಯು ಸೇವಿಸುವ-ಳೆಂಬಲ್ಲಿ ಹಿರಿಯದಾಸರ ಉಕ್ತಿಗಳೂ ಹೇರಳವಾಗಿವೆ. ಶ್ರೀಹರಿಯ ಸ್ವರೂಪ-ಗಳೇ ಆದ ಆಯುಧ ಆಭರಣಗಳೂ ಇರುತ್ತವೆಂಬುದನ್ನೂ, ಇಲ್ಲಿ, ಗಮನಿಸ-ಬೇಕು. ಮುಕ್ತರು ಭೋಗಿಸುವ ಫಲ ಪುಷ್ಪವಾಹನಾದಿ ಸಕಲ ವಸ್ತುಗಳು ಶುದ್ಧಸತ್ವಾತ್ಮಕಗಳು. ಅವುಗಳನ್ನು ಲಕ್ಷ್ಮೀಸ್ವರೂಪಗಳೆಂದು ತಿಳಿಯುವ ಕಾರಣ-

ವಿಲ್ಲ. ಒಂದರ್ಥದಲ್ಲಿ ಅವೂ ಲಕ್ಷ್ಮ್ಯಾತ್ಮಕಗಳೇ—ಲಕ್ಷ್ಮಿಯೇ ಸ್ವಾಮಿಯಾಗುಳ್ಳವುಗಳು. ಆಕೆಯೇ ಶುದ್ಧಸತ್ವದ ಅಭಿಮಾನಿಯೂ ನಿಯಾಮಕಳೂ ಆಗಿದ್ದಾಳೆ. ಶುದ್ಧಸತ್ವವೂ ನಿತ್ಯ; ಅದರ ನಿಯಾಮಕ ಲಕ್ಷ್ಮೀರೂಪವೂ ನಿತ್ಯ. ಹೀಗೆ ತಿಳಿದರೆ ಲಕ್ಷ್ಮ್ಯಾತ್ಮಕ ವಸ್ತುಗಳನ್ನು ಮುಕ್ತರು ಭೋಗಿಸುವುದೆಂದರೆ ಏನೆಂಬ ಪ್ರಶ್ನೆಗೇ ಅವಕಾಶವಿಲ್ಲ. ಭಿನ್ನಾಭಿಪ್ರಾಯವುಳ್ಳ ಕೆಲವರು, ಶಿಶುಗಳು ತಾಯಿಯ ತೊಡೆಯಲ್ಲಿ ಮಲಗುವಂತೆ, ಸ್ತನ್ಯಪಾನ ಇತ್ಯಾದಿಗಳನ್ನು ಮಾಡುವಂತೆಯೆಂದು ತಿಳಿದರೆ ಮುಕ್ತರು ಲಕ್ಷ್ಮೀಸ್ವರೂಪವಸ್ತುಗಳನ್ನು ಭೋಗಿಸುವರೆಂಬಲ್ಲಿ ಯಾವ ಯುಕ್ತಿ ವಿರೋಧವೂ ಇರುವುದಿಲ್ಲವೆನ್ನುತ್ತಾರೆ. ಆದರೆ ವಿಷ್ಣುರಹಸ್ಯದ ಸ್ಪಷ್ಟವಾಕ್ಯಗಳಿಂದ ಈ ವಾದವನ್ನು ಬೆಳೆಸುವ ಆವಶ್ಯಕತೆ ಕಾಣುವುದಿಲ್ಲ. ಶ್ರೀಹರಿಯ ದೇಹಪ್ರವೇಶದಿಂದ ಸಾಯುಜ್ಯಮುಕ್ತರು ಭೋಗಿಸುವ ಭೋಗಗಳು ಶ್ರೀಹರಿಯ ಭೋಗದಿಂದ ಭಿನ್ನಗಳೆಂದೇ ಹೇಳುವ ವಾಕ್ಯಗಳನ್ನೂ ಈ ಸಂದರ್ಭದಲ್ಲಿ ಲಕ್ಷಿಸಬೇಕು.

*'ಸಯುಜಃ ಪರಮಾತ್ಮಾನಂ ಪ್ರವಿಶ್ಯ ಚ ಬಹಿರ್ಗತಾಃ।*
*ಚಿದ್ರೂಪಾನ್ ಪ್ರಾಕೃತಾಂಶ್ಚಾಪಿ ವಿನಾ ಭೋಗಾಂಸ್ತು ಕಾಂಶ್ಚನ॥* (ಭಾಷ್ಯ).

ಕೆಲವು ಲಕ್ಷ್ಮ್ಯಾತ್ಮಕಗಳಾದ, ಭಗವಂತನಿಗೆ ಅಸಾಧಾರಣಭೋಗ್ಯಗಳಾದ, ಗಂಧಾದಿ ವಸ್ತುಗಳನ್ನು ಬಿಟ್ಟು, ಸ್ವಸ್ವರೂಪಭೂತ ಆನಂದಾದಿಗಳನ್ನೂ, ಪ್ರಾಕೃತ ಶುದ್ಧಸತ್ವಾತ್ಮಕ ಭೋಗಗಳನ್ನೂ ಸಾಯುಜ್ಯಮುಕ್ತಿಯನ್ನು ಹೊಂದಿರುವ ಬ್ರಹ್ಮಾದಿಗಳು, ಭೋಗಿಸುತ್ತಾರೆಂದು ಈ ಭಾಷ್ಯವಾಕ್ಯದ ಅರ್ಥವು ವಿವರಿಸಲ್ಪಟ್ಟಿದೆ. ವಿಷ್ಣುಲೋಕಕ್ಕೂ ವಿಷ್ಣುಪುರಿಗೂ ಇರುವ ವೈಲಕ್ಷಣ್ಯವನ್ನು ತಿಳಿದರೆ ಭಿನ್ನಾಭಿಪ್ರಾಯಗಳಿಗೆ ಯಾವ ಅವಕಾಶವೂ ಇರುವುದಿಲ್ಲ. ಈ ವಿಷಯಕವಾದ ಛಾಂದೋಗ್ಯಭಾಷ್ಯದ ಕೆಲವು ವಾಕ್ಯಗಳನ್ನೂ ಇಲ್ಲಿ ಗಮನಿಸಬಹುದು. ಶ್ವೇತದ್ವೀಪದಲ್ಲಿನ ನಾರಾಯಣನ ಆವಾಸವು ನಾರಾಯಣಪುರಿಯೆಂದೂ 'ಅಪರಾಜಿತಾ' ಎಂದೂ ಕರೆಯುಲ್ಪಡುತ್ತದೆ.

*'ತತ್ರ ವಿಷ್ಣೋಃ ಪುರಂ ದಿವ್ಯಮಪರಾಜಿತನಾಮಕಮ್।*
*ವಿಮಿತಾಖ್ಯಂ ಚ ಪರ್ಯಂಕಂ ವಿಷ್ಣೋರ್ಮಾನೇನ ಸಂಮಿತಮ್।*
*ಚಿತ್ಸುವರ್ಣಮಯಂ ದಿವ್ಯಂ ಲಕ್ಷ್ಮೀಸ್ತತ್ತಸ್ವರೂಪಿಣೀ॥'*

**ಭಾವಾರ್ಥ:** ಆ ಶ್ವೇತದ್ವೀಪದಲ್ಲಿ ಶ್ರೀವಿಷ್ಣುವಿನ **ಅಪರಾಜಿತವೆಂಬ** ಹೆಸರುಳ್ಳ ದಿವ್ಯನಗರವಿದೆ. ವಿಷ್ಣುವಿನ ಪರಿಮಾಣಕ್ಕೆ ಸಮವಾದ ಅತ ಏವ

'ವಿಮಿತ'ವೆಂದು ಕರೆಯಲ್ಪಡುವ ಪರ್ಯಂಕ(ಮಂಚ)ವಿದೆ. ಅದು ಚಿದ್ರೂಪ ಸುವರ್ಣಮಯವಾದುದು. ಅಲ್ಲಿರುವ ವಸ್ತುಗಳೆಲ್ಲವೂ ಲಕ್ಷ್ಮೀಸ್ವರೂಪಗಳೇ ಆಗಿವೆ. ಈ ಪ್ರಮೇಯವು ವೈಕುಂಠ ಮತ್ತು ಅನಂತಾಸನಗಳಿಗೂ ಅನ್ವಯಿಸುತ್ತೆಂಬುದರಲ್ಲಿ ಸಂಶಯವಿಲ್ಲ. 'ಲಕ್ಷ್ಮ್ಯಾತ್ಮಕ'ವೆಂಬ ಸ್ಥಳದಲ್ಲಿ 'ಲಕ್ಷ್ಮೀಃ ತತ್ತತ್ಸ್ವರೂಪಿಣೀ' ಎಂಬ ನಿರವಕಾಶಶಬ್ದ ಪ್ರಯೋಗವಿರುವುದನ್ನೂ ಲಕ್ಷಿಸಬಹುದು. ಏವಂ ಚ ಮುಕ್ತಲೋಕಗಳಲ್ಲಿ (ವೈಕುಂಠಾದಿ ಲೋಕಗಳ ಶ್ರೀಭಾಗಗಳಲ್ಲಿ) ಶ್ರೀಹರಿಯ ಆವಾಸಗಳಾದ ಪುರಿಗಳಲ್ಲಿರುವ ವಸ್ತುಗಳೆಲ್ಲವೂ ಲಕ್ಷ್ಮೀಸ್ವರೂಪಗಳೆಂದು ಸಿದ್ಧವಾಗುತ್ತದೆ.

(೨) ಮಹಾಪ್ರಳಯಕಾಲದಲ್ಲಿ ಮುಕ್ತ ಶ್ರೀಭಾಗಗಳೂ ಹಾಗೂ ಮುಕ್ತರೂ ಪರಮಾತ್ಮನ ಉದರ ಪ್ರವೇಶ ಮಾಡುವರು. ಆಗ ಮುಕ್ತರು ಭೋಗೇಚ್ಛಾರಹಿತರಾಗಿ ಕೇವಲ ಧ್ಯಾನಾಸಕ್ತರಾಗಿರುವರು. ಆದ್ದರಿಂದ ಶುದ್ಧ ಸತ್ವಾತ್ಮಕಲಕ್ಷ್ಮ್ಯಾತ್ಮಕ ವಸ್ತುಗಳ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಶುದ್ಧ ಸತ್ವವೂ ಅನಾದಿನಿತ್ಯವಾದ್ದರಿಂದ, 'ಅಪ್ರಾಕೃತ'ಗಳೆಂದು ಹೇಳಲ್ಪಡುವ ವೈಕುಂಠಾದಿ ಮುಕ್ತಲೋಕಗಳು, ಸೃಷ್ಟಿಯಲ್ಲಿ ಉಪಯೋಗಿಸಲ್ಪಡುವ ಸತ್ವಗುಣದಿಂದ ನಿರ್ಮಿತಗಳಲ್ಲವೆಂಬರ್ಥವನ್ನೂ ತಿಳಿಯಬಹುದಾಗಿದೆ. (ಅಪ್ರಾಕೃತ— ಸೃಷ್ಟ್ಯುಪಯುಕ್ತ ಪ್ರಕೃತಿಯಿಂದಾದುದಲ್ಲ).

(೩) 'ಚಂದದವನ ಮನೆ' ಎಂಬುದರಿಂದ ಅಖಂಡ ಸೌಂದರ್ಯರಾಶಿಯೇ ಮೂರ್ತಿವೆತ್ತಂತಿರುವ ವೈಕುಂಠಪತಿಯ ಸೌಂದರ್ಯವೂ ವಿವಕ್ಷಿತವೆಂದು ತಿಳಿಯಬಹುದು. *'ಸೌಂದರ್ಯಸಾರೈಕರಸಂ ರಮಾಪತೇ ರೂಪಂ ಸದಾನಂದಯತೀಹ ಮೋಕ್ಷಿಣಃ'* (ಸುಮಧ್ವ ವಿಜಯ) ಎಂದು, ಮುಕ್ತರ ಆನಂದಕ್ಕೆ ಮುಖ್ಯಹೇತುವಾದುದು ಶ್ರೀಹರಿಯ ದಿವ್ಯಸುಂದರವಿಗ್ರಹವೆಂದು ವರ್ಣಿತವಾಗಿದೆ.

(೪) ಸಕಲ ವೈಭವಪೂರ್ಣವಾದ ವೈಕುಂಠವನ್ನೇ ನಾಶವುಳ್ಳದ್ದೆಂದು ತಿಳಿಯುವ ಮೂರ್ಖರಿಗೆ ಉತ್ತರವೋ ಎಂಬಂತೆ, ಸಂಸಾರಸಮೇತ ಕಾಡಿನಲ್ಲಿ ಹಣ್ಣುಹಂಪಲ ತಿಂದು ಜೀವಿಸುವ ವ್ಯಾಧನ ದೃಷ್ಟಾಂತವನ್ನು ಕೊಟ್ಟು, ಹಾಗೆ ತಿಳಿಯುವವರು ಶ್ರೀಹರಿಯ ಸ್ವಾತಂತ್ರ್ಯ, ಸರ್ವಕರ್ತೃತ್ವ, ಮಹದೈಶ್ವರ್ಯಾದಿಗಳನ್ನು, ಹೆಚ್ಚೇನು! ಸರ್ವೋತ್ತಮನಾದ ಆತನ ಅಸ್ತಿತ್ವವನ್ನೇ ತಿರಸ್ಕರಿಸುವ ನಾಸ್ತಿಕರೇ ಸರಿ ಎಂಬ ಯುಕ್ತಿಯನ್ನು ಸೂಚಿಸಿದ್ದಾರೆ.

## ಪದ ೧೧

ರಾಗ-ಶಂಕರಾಭರಣ; ತಾಳ-ರೂಪಕ

**ಪರಮಗತಿಯೆಂದು ವೈಕುಂಠದರಸ**
**ಸಿರಿಪತಿಯೆಂದು ಶುಕಯೋಗಿ ವರ್ಣಿಸಿದ**
**ಅರಿಕೆಯುಳ್ಳ ಬುಧರು ಅದರಿಂದೀಪದವನ್ನು**
**ಪರಮಮುಕುತಿಯೆನಬೇಕು** ॥೧॥

**ಅರ್ಥ:** ವೈಕುಂಠದರಸ— ವೈಕುಂಠದೊಡೆಯನೇ, ಪರಮಗತಿಯೆಂದು— ಸರ್ವೋತ್ಕೃಷ್ಟ ಆಶ್ರಯನೆಂದೂ, (ದೊರಕಿಸಿಕೊಳ್ಳಲ್ಪಡಬೇಕಾದ ಅತ್ಯುತ್ತಮ ವಸ್ತುವೆಂದೂ), ಸಿರಿಪತಿಯೆಂದು— ಲಕ್ಷ್ಮೀಪತಿಯೆಂದೂ, ಶುಕಯೋಗಿ— ಶುಕಮುನಿಗಳು, ವರ್ಣಿಸಿದ— ವರ್ಣಿಸಿರುವರು; ಅದರಿಂದ— ಈ ಕಾರಣದಿಂದ, ಅರಿಕೆಯುಳ್ಳ— ವಿವೇಕವುಳ್ಳ, ಬುಧರು— ಪಂಡಿತರು (ಶಾಸ್ತ್ರಾಭ್ಯಾಸಿಗಳು), ಈ ಪದವನ್ನು— ಈ ಸ್ಥಾನವನ್ನು (ವೈಕುಂಠವನ್ನು), ಪರಮಮುಕುತಿಯೆನಬೇಕು— (ಪುರುಷಾರ್ಥಗಳಲ್ಲಿ) ಶ್ರೇಷ್ಠವಾದ ಮೋಕ್ಷವೆಂದು ತಿಳಿಯಬೇಕು.

**ಧನ್ಯಯತಿಗಳೀಲೋಕವ ಪೊಕ್ಕಮೇಲೆ**
**ಪುನರಾವೃತ್ತಿಯಿಲ್ಲ ಕಾಣಿರೋ**
**ಇನ್ನೊಂದು ಮೋಕ್ಷವುಂಟೆಂಬ ಖಳರ**
**ಮನ್ನ ಮುದ್ರಿಸಿತಾಗಿ** ॥೨॥

**ಅರ್ಥ:** ಧನ್ಯಯತಿಗಳು— ಕೃತಕೃತ್ಯರಾದ ಜ್ಞಾನಿಗಳು, ಈ ಲೋಕವ— ವೈಕುಂಠವನ್ನು, ಪೊಕ್ಕಮೇಲೆ— ಪ್ರವೇಶಿಸಿದ ನಂತರ, ಪುನರಾವೃತ್ತಿಯಿಲ್ಲ ಕಾಣಿರೋ— (ಸಂಸಾರಕ್ಕೆ) ಮತ್ತೆ ತಿರುಗಿಬರುವುದೆಂಬುದಿಲ್ಲ; ಇನ್ನೊಂದು ಮೋಕ್ಷವುಂಟೆಂಬ— ಬೇರೊಂದು ವಿಧದ ಮುಕ್ತಿಯು (ಸಗುಣಮುಕ್ತಿಯು) ಉಂಟೆಂದು ಹೇಳುವ, ಖಳರ— ದುರ್ಜನರ, ಮನ್ನ— ಮನಸ್ಸು, ಮುದ್ರಿಸಿತಾಗಿ— ಮುಚ್ಚಿಹೋಯ್ತಲ್ಲದೇ (ಅಳಿಸಿತಲ್ಲದೇ) ಬೇರಿಲ್ಲ.

**'ನ ಚ ಪುನರಾವರ್ತತೇ' ಎಂಬ ವೇದಾಂತ**
**ಮನ್ನಿಸಿದ ಮುಕ್ತಿ ಇನ್ನೊಂದು**
**ಹೆಸರಿಲ್ಲದ ಮುಕ್ತಿ ಸಲ್ಲದಾಗಿ ನಮ್ಮ**
**ಎಸೆವ ವೈಕುಂಠವೇ ಮುಖ್ಯ ಮೋಕ್ಷ** ॥೩॥

**ಅರ್ಥ:** ನ ಚ ಪುನರಾವರ್ತತೇ—ಎಂದೂ ವಾಪಸು ಬರುವುದಿಲ್ಲ, ಎಂಬ ವೇದಾಂತ—ಎಂದು ಹೇಳುವ ಬ್ರಹ್ಮಸೂತ್ರದ ವಾಕ್ಯವು, ಮನ್ನಿಸಿದ—ನಿರ್ಣಯಿಸಿ ಮಾನ್ಯಮಾಡಿರುವ, ಮುಕ್ತಿ—ಮೋಕ್ಷವು (ಇದೇ ಮೋಕ್ಷವು); ಇನ್ನೊಂದು ಹೆಸರಿಲ್ಲದ ಮುಕ್ತಿ—ಹೇಳಲಿಕ್ಕಿಲ್ಲದ ಬೇರೊಂದು ಮೋಕ್ಷವೆಂಬುದು (ಹೆಸರೂ ಇಲ್ಲದ) ಇಲ್ಲ; ಮತ್ತು, ಸಲ್ಲದಾಗಿ—ಕೂಡುವುದಿಲ್ಲವಾದ್ದರಿಂದ (ಅಂಗೀಕಾರಯೋಗ್ಯವಲ್ಲದ್ದರಿಂದ), ನಮ್ಮ—ನಾವು ಹೇಳುವ (ಶಾಸ್ತ್ರಸಿದ್ಧವಾದ), ಎಸೆವ ವೈಕುಂಠವೇ—ವಿರಾಜಿಸುವ ವೈಕುಂಠವೇ, ಮುಖ್ಯಮೋಕ್ಷ—ಮೋಕ್ಷವೆಂಬುದರ ಮುಖ್ಯಾರ್ಥವು.

**ಹೇಳೆಲೋ ವಾದಿ ತಮವೆಂಬ ನಿನ್ನ ಜ್ಞಾನ**
**ಬೀಳುಗೊಟ್ಟ ಲೋಕ ಪುಸಿಯೇ**
**ಆಲೋಚಿಸಿಕೊ ನಿನ್ನ ಮತದ ರಹಸ್ಯವ**
**ಈ ಲೋಕವೇ ದಿವ್ಯಮುಕ್ತಿ** ॥೪॥

**ಅರ್ಥ:** ಎಲೋ ವಾದಿ—ಹೇ ವಾದಿ! ಹೇಳು—ಉತ್ತರಕೊಡು, ತಮವೆಂಬ—ಅಂಧಕಾರವೆಂಬ (ತಮಸ್ಸಾಧಕವಾದ), ನಿನ್ನ ಜ್ಞಾನ—ನಿನ್ನ ಅರಿವು (ತಿಳುವಳಿಕೆ), ಬೀಳುಗೊಟ್ಟ—ತಳ್ಳಿಹಾಕಿದ (ತಿರಸ್ಕರಿಸಿದ), ಲೋಕ—ವೈಕುಂಠಲೋಕವು, ಪುಸಿಯೇ—ಸುಳ್ಳೇ? ನಿನ್ನ ಮತದ ರಹಸ್ಯ—ನಿನ್ನ ಮತದ ಗೂಢಾಭಿಪ್ರಾಯವನ್ನು, ಆಲೋಚಿಸಿಕೊ—ನಿನ್ನೊಳಗೆ ನೀನೇ ಯೋಚಿಸು; ಈ ಲೋಕವೇ—ನಾವು ಹೇಳಿದ ವೈಕುಂಠಲೋಕವೇ, ದಿವ್ಯಮುಕ್ತಿ—ಶ್ರೇಷ್ಠವಾದ (ಪ್ರಕಾಶಪೂರ್ಣವಾದ—ಅಂಧಕಾರಮಯವಲ್ಲದ) ಮೋಕ್ಷವು.

**ಇಂತು ನೋಡಲು ಸರ್ವಪದದ ಸಂಪದ ನಿನಗೆ**
**ಭ್ರಾಂತಗಂಟಲಗಾಣವಾಯಿತು**
**ಹಂತತನವ ಬಿಡು ನಾವೆಂದರ್ಥವನು ನೀನು**
**ಸಂತೋಷದಿಂದಂಗೀಕರಿಸು** ॥೫॥

**ಅರ್ಥ:** ಇಂತು ನೋಡಲು—ಹೀಗೆ ವಿಮರ್ಶಿಸಲು, ಸರ್ವಪದದ ಸಂಪದ—ಸಕಲಲೋಕಾಧಿಪತ್ಯಗಳ ಸಂಪತ್ತನ್ನೂ ಮೀರಿದ ಸಂಪತ್ತು, ಭ್ರಾಂತ—ಹೇ ಮಿಥ್ಯಾವಾದಿಯೇ! ನಿನಗೆ—ನಿನ್ನ ವಾದಗಳಿಗೆ (ಮೋಕ್ಷಸ್ವರೂಪಪ್ರತಿಪಾದನೆಗೆ), ಗಂಟಲಗಾಣವಾಯಿತು—ಕುತ್ತಿಗೆಯನ್ನು ಬಿಗಿದು ತಿರುಗಿಸಿ

ಉಸಿರಾಡದಂತೆ ಮಾಡಿತು (ಬಾಯಿಕಟ್ಟಿಸಿತು); ಹಂತತನವ — ಮೂರ್ಖ-ತನವನ್ನು (ಆತ್ಮಘಾತವನ್ನು), ಬಿಡು — ತ್ಯಜಿಸು, ನಾವೆಂದರ್ಥವನು — ನಾವು ಹೇಳಿದ ನಿರ್ಣಯವನ್ನು, ಅಂಗೀಕರಿಸು — ಒಪ್ಪಿಕೋ.

**ವಿಶೇಷಾಂಶ:** (೧) ವೇದಾರ್ಥಗಳ ನಿರ್ಣಯವು (ಅಂತನಿರ್ಣಯ) ಯಾವುದರಿಂದಲೋ ಅದು 'ವೇದಾಂತ'ವು. ನಾಲ್ಕು ಅಧ್ಯಾಯಗಳುಳ್ಳ ಬ್ರಹ್ಮ-ಮೀಮಾಂಸಾ ಶಾಸ್ತ್ರವೇ (ಬ್ರಹ್ಮಸೂತ್ರಗಳೇ) ವೇದಾಂತವೆಂದು ಪ್ರಸಿದ್ಧವಾಗಿದೆ.

(೨) ಮುಕ್ತಿಯಲ್ಲಿ, ಸಗುಣಮುಕ್ತಿ-ನಿರ್ಗುಣಮುಕ್ತಿಯೆಂಬ ಭೇದವಿಲ್ಲ. ಬ್ರಹ್ಮಸಾಕ್ಷಾತ್ಕಾರವಾದ ನಂತರ ಪ್ರಾರಬ್ಧ ಕರ್ಮಭೋಗಾವಸ್ಥೆಯಲ್ಲಿರುವ ಜೀವನು 'ಜೀವನ್ಮುಕ್ತ'ನೆಂದು ವ್ಯವಹರಿಸಲ್ಪಡುತ್ತಾನೆ — ಮುಕ್ತನೆಂದಲ್ಲ. ಇಂಥವನನ್ನು ಸಗುಣಮೋಕ್ಷವನ್ನು ಹೊಂದಿದವನೆಂದು ಕರೆಯಲು ಬರುವು-ದಿಲ್ಲ. ಪ್ರಾರಬ್ಧಕರ್ಮದ ಸುಖದುಃಖಾದಿ ಫಲಗಳನ್ನು ಭೌತಿಕದೇಹದಲ್ಲಿದ್ದು ಅನುಭವಿಸುತ್ತಿರುವವನನ್ನು ಮುಕ್ತನೆನ್ನಬಹುದೇ? ಅನ್ಯದೇಹಗಳನ್ನು ಹೊಂದಲು ಕಾರಣವಾಗುವ ಕರ್ಮಬಂಧರಹಿತನಾದ್ದರಿಂದ ಮಾತ್ರ, ಮುಕ್ತಪ್ರಾಯನು, ಅಷ್ಟೇ. ಸೂಕ್ಷ್ಮವಾದ ಅನಾದಿಲಿಂಗದೇಹವನ್ನೂ ತ್ಯಜಿಸಿ, ಸ್ವರೂಪಮಾತ್ರ-ದಿಂದ ವೈಕುಂಠಾದಿ ಮುಕ್ತಲೋಕವನ್ನು ಹೊಂದಿದವನೇ ಮುಕ್ತನು. ಅವನೇ ಪ್ರಾಕೃತಗುಣತ್ರಯಗಳನ್ನು ಅತಿಕ್ರಮಿಸಿದವನು — ಗುಣಸಂಗರಹಿತನು — ನಿರ್ಗು-ಣನು. ವೈಕುಂಠಾದಿಗಳೂ ಅಪ್ರಾಕೃತಗಳೇ. ಆದ್ದರಿಂದ ಇದೇ ನಿರ್ಗುಣ ಮುಕ್ತಿಯು. ಸಂಸಾರಾವಸ್ಥೆಯಲ್ಲಿ ಜೀವಸ್ವರೂಪವನ್ನು ಆಚ್ಛಾದಿಸಿರುವ ಅನ್ಯಥಾ ರೂಪಗಳನ್ನು (ಪ್ರಾಕೃತಾವರಣಗಳನ್ನು — ದೇಹಗಳನ್ನು) ತೊರೆದು ಸ್ವಸ್ವರೂಪ-ದಿಂದ ನಿಲ್ಲುವುದೇ ಮುಕ್ತಿಯು. *'ಮುಕ್ತಿರ್ಹಿತ್ವಾಽನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ'* ಎಂದು ಭಾಗವತದಲ್ಲಿ ಇದನ್ನೇ ಹೇಳಿದೆ. ಇದರ ತಾತ್ಪರ್ಯಭಾಗ-ದಲ್ಲಿ *'ನ ಚಾನ್ಯಾಮುಕ್ತಿರಸ್ತೀತ್ಯತ್ರ ಕಿಂಚಿನ್ಮಾನಂ'* — ಬೇರೆಯಾದ ಮತ್ತೊಂದು ಮುಕ್ತಿಯೆಂಬುದಿದೆ ಎಂಬಲ್ಲಿ ಯಾವ ಪ್ರಮಾಣವೂ ಇಲ್ಲವೆಂದು ಹೇಳ-ಲಾಗಿದೆ. ಜ್ಞಾನ, ಆನಂದಾದಿ ಗುಣಗಳಾದರೋ ಜೀವಸ್ವರೂಪಧರ್ಮಗಳೇ ಆಗಿವೆ. ಜೀವನು ನಿತ್ಯನು; ಹೀಗಿರಲು, ಜೀವನು ನಿರ್ಗುಣನೆಂದರೆ ಪ್ರಾಕೃತ ಸತ್ವಾದಿಗುಣವಿಲ್ಲದವನೆಂದೇ ಅರ್ಥ, ಅನ್ಯಾರ್ಥಕ್ಕೆಡೆಯಿಲ್ಲ. ಶ್ರುತಿಪುರಾಣ-ಗಳಲ್ಲಿ ನಿರ್ಗುಣಮುಕ್ತಿವಿಷಯಕವೆಂದು ಪ್ರಸಿದ್ಧವಾದ ಪ್ರಕರಣಗಳಲ್ಲಿಯೇ, ಮುಕ್ತರಿಗೆ ನಾನಾ ಭೋಗಗಳನ್ನೂ ಹೇಳಲಾಗಿದೆ. *'ಸೋಽಶ್ನುತೇ ಸರ್ವಾನ್*

*ಕಾಮಾನ್', 'ಆನಂದಮಯಮಾತ್ಮಾನಮುಪಸಂಕ್ರಮ್ಯ ಇಮಾಂಲ್ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್', 'ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮೇತಿ ಹೋವಾಚ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಾಮಣಃ'* ಇತ್ಯಾದಿ *'ನಿರ್ಗುಣಮುಕ್ತಿವಿಷಯತ್ವೇನ ಪ್ರಸಿದ್ಧೇಷ್ವೇವ ಸ್ಥಲೇಷು ಮುಕ್ತ್ಯ-ನಂತರಂ ಭೋಗೋಕ್ತೇಶ್ಚ'* ಎಂಬುದಾಗಿ ಮುಕ್ತರಿಗೆ ಭೋಗವನ್ನೂ ಹೇಳ-ಲಾಗಿದೆ. ಈ ವಾಕ್ಯಗಳ ಭಾವಾರ್ಥವು ಹೀಗಿದೆ: "ಮುಕ್ತನು ಅಪೇಕ್ಷಿತ ಸಕಲ-ಭೋಗಗಳನ್ನು ಹೊಂದುತ್ತಾನೆ; ಪೂರ್ಣಾನಂದಸ್ವರೂಪನಾದ ಪರಮಾತ್ಮನನ್ನು ಹೊಂದಿದ ಮುಕ್ತನು ಅಪೇಕ್ಷಿತ ಲೋಕಗಳನ್ನೂ, ಕಾಮಗಳನ್ನೂ ರೂಪ-ಗಳನ್ನೂ ಹೊಂದಿ ಸುಖಿಸುತ್ತಾನೆ; ಸ್ವಸ್ವರೂಪದ ಆವಿರ್ಭಾವವನ್ನು ಹೊಂದಿದ ಈ ಜೀವನು (ಮುಕ್ತನು), ವೈಕುಂಠದಲ್ಲಿ ಅಪೇಕ್ಷಿತವಾದುದನ್ನು ತಿನ್ನುತ್ತಾ, ಉಣ್ಣುತ್ತಾ ಕ್ರೀಡಿಸುತ್ತಾನೆ. ಸ್ತ್ರೀಯರೊಂದಿಗೆ ರಮಿಸುತ್ತಾನೆ; ಹೀಗೆ ನಿರ್ಗುಣ ಮುಕ್ತಿ ವಿಷಯಗಳೆಂದು ಪ್ರಸಿದ್ಧ ಶ್ರುತಿವಾಕ್ಯಗಳಲ್ಲಿ ಸಹ ಮುಕ್ತರಿಗೆ ಭೋಗವು ಹೇಳಲ್ಪಡುತ್ತವೆ.

ಇನ್ನು, ಬ್ರಹ್ಮೈಕ್ಯವೇ ನಿರ್ಗುಣಮುಕ್ತಿಯೆಂದು ಹೇಳಲು ಸಹ ಅವಕಾಶ-ವಿಲ್ಲ. ಬ್ರಹ್ಮನಲ್ಲಿ ಹೋಗಿ ಸೇರುವುದು ಬ್ರಹ್ಮೈಕ್ಯವಲ್ಲ. ನದಿಗಳು ಸಮುದ್ರವನ್ನು ಪ್ರವೇಶಿಸಿ ಏಕೀಭಾವವನ್ನು ಹೊಂದುವಂತೆ ಮುಕ್ತಜೀವರು ಪರಬ್ರಹ್ಮನಲ್ಲಿ ಸೇರಿ ಏಕೀಭಾವವನ್ನು ಹೊಂದುವರೆಂಬ ಮತ್ತು ತತ್ಸದೃಶವಾದ ದೃಷ್ಟಾಂತ-ಗಳನ್ನು ಹೇಳುವುದುಂಟು. ಇವುಗಳ ಸೂಕ್ಷ್ಮ ವಿಮರ್ಶೆಯನ್ನು ಶ್ರೀಮದಾನಂದ ತೀರ್ಥಭಗವತ್ಪಾದರು ತಮ್ಮ **'ವಿಷ್ಣುತತ್ವನಿರ್ಣಯ'** ಗ್ರಂಥದಲ್ಲಿ ಮಾಡಿರು-ವರು. ಗ್ರಂಥವಿಸ್ತಾರಭಯದಿಂದ ಅದರಲ್ಲಿ ಒಂದು ಭಾಗವನ್ನು ಮಾತ್ರ ಇಲ್ಲಿ ಉದಾಹರಿಸಲಾಗುತ್ತದೆ.

***'ತಾಃ ಸಮುದ್ರಾತ್ ಸಮುದ್ರ ಏವಾಪಿಯಂತಿ ಸ ಸಮುದ್ರ ಏವ ಭವತಿ'***

(ಶ್ರುತಿ)

ಇದನ್ನು ವಿಮರ್ಶಿಸುವ ವಾಕ್ಯ:

***'ಇತ್ಯತ್ರಾಪಿ ಭೇದ ಏವ ಉಚ್ಯತೇ।***
***ಅನ್ಯಥಾ ತಾಃ ಸಮುದ್ರ ಏವ ಭವತೀತಿ ವ್ಯಪದೇಶಃ ಸ್ಯಾತ್।***
***ಅತೋ ನದ್ಯಃ ಸಮುದ್ರಾದಾಗಚ್ಛಂತಿ ತಂ ಪ್ರವಿಶಂತಿ ಚ***
***ಸಮುದ್ರಸ್ತು ಸ ಏವ ನೈತಾಸಾಂ ಸಮುದ್ರತ್ವಂ ಭವತೀತ್ಯರ್ಥಃ'***

ಎಂದರೆ, 'ಅವು (ನದಿಗಳು) ಸಮುದ್ರದಿಂದ ಸಮುದ್ರವನ್ನೇ ಸೇರುತ್ತವೆ—ಸಮುದ್ರವು ಸಮುದ್ರವೇ ಆಗಿರುತ್ತದೆ; ಎಂದು ಹೇಳುವ ಈ ಶ್ರುತಿಯಲ್ಲಿ ಸಹ, ಜೀವಪರಮಾತ್ಮರ ಭೇದವೇ ಹೇಳಲ್ಪಡುತ್ತದೆ; ಹಾಗಲ್ಲದಿದ್ದರೆ ಆ ನದಿಗಳು ಸಮುದ್ರವೇ ಆಗುತ್ತದೆಯೆಂದು ಹೇಳಬೇಕಾಗಿತ್ತು; ಆದ್ದರಿಂದ ಸಮುದ್ರದಿಂದ ನದಿಗಳು ಹೊರಡುತ್ತವೆ—ಸಮುದ್ರವನ್ನೇ ಪ್ರವೇಶಿಸುತ್ತವೆ—ಸಮುದ್ರವಾದರೋ ಅದೇ (ಮೊದಲಿನಂತೆಯೇ) ಇರುತ್ತದೆ—ಆ ನದಿಗಳಿಗೆ ಸಮುದ್ರತ್ವವು (ಸಮುದ್ರಭಾವವು—ಸ್ವರೂಪವು) ಉಂಟಾಗುವುದಿಲ್ಲವೆಂದೇ ಅರ್ಥ. ಗಂಗಾನದೀ ಜಲಗಳು ಸಮುದ್ರವನ್ನು ಪ್ರವೇಶಿಸಿ, ಸಮುದ್ರವೇ ಆಗಿ-ಹೋದಂತೆ ಅಜ್ಞಾನಿಗಳಿಗೆ ತೋರಿದರೂ, ವಿಜ್ಞಾನಿಗಳು ಆಯಾ ನದೀಜಲಗಳ ಲಕ್ಷಣಗಳಿಂದ, ಆಯಾ ಜಲಗಳನ್ನು ಪ್ರತ್ಯೇಕಿಸಿ ತಿಳಿಯಬಲ್ಲರು. ಅಷ್ಟೇಕೆ! ಸೂರ್ಯಪ್ರಕಾಶದಲ್ಲಿ ಲೀನವಾಗಿ, ಪ್ರತ್ಯೇಕವಾಗಿ ತೋರದಿರುವ ನಕ್ಷತ್ರಾದಿ-ಗಳ ಪ್ರಕಾಶವನ್ನು ಸಹ ವಿಜ್ಞಾನಿಗಳು ಬೇರ್ಪಡಿಸಿ, ಪ್ರಯೋಗಶಾಲೆಗಳಲ್ಲಿ, ಪ್ರಕಟಿಸುತ್ತಾರೆ. ಮಹಾ ಪ್ರಕಾಶದಲ್ಲಿ ಅಲ್ಪಪ್ರಕಾಶವು ಅಡಗಿ—ಉಡುಗಿ ಹೋದಮಾತ್ರಕ್ಕೆ, ಅದರ ಪ್ರತ್ಯೇಕ ಅಸ್ತಿತ್ವವು ನಷ್ಟವಾಗುವುದಿಲ್ಲ.'

***'ಭೇದೇನೈವ ಜಗತ್ಸರ್ವಂ ಭೇದೇನೇಶಂ ಗುಣೈಃ ಸಹ।***
***ಭೇದೇನ ಜೀವಾನನ್ಯೋನ್ಯಂ ಮುಕ್ತಾಃ ಪಶ್ಯಂತಿ ಸರ್ವಶಃ॥'*** (ಬೃಹ. ಭಾಷ್ಯ)

—ಎಲ್ಲ ಜಗತ್ತನ್ನು ತನ್ನಿಂದ ಭಿನ್ನವೆಂದೂ ಗುಣಪೂರ್ಣನಾದ ಶ್ರೀಹರಿ-ಯನ್ನೂ, ಶ್ರೀಹರಿಯಿಂದ ಪರಸ್ಪರ ಸಹ, ಭಿನ್ನರಾದ ಅನ್ಯಜೀವರನ್ನೂ, ಮುಕ್ತರು ತಿಳಿಯುತ್ತಾರೆ ಮತ್ತು ನೋಡುತ್ತಾರೆ. ಸರ್ವಪ್ರಕಾರದಿಂದ (ತಾರತಮ್ಯ ಸಹಿತವಾಗಿ ಸರ್ವವನ್ನೂ ತಿಳಿಯುವ) ಮುಕ್ತರ ಜ್ಞಾನವು ಭೇದವನ್ನೇ ಸಾಧಿಸುತ್ತದಲ್ಲದೆ ಅಭೇದವನ್ನಲ್ಲ.

*'ಮುಕ್ತಾನಾಂ ಚಾಶ್ರಯೋ ವಿಷ್ಣುರಧಿಕೋಽಧಿಪತಿಸ್ತಥಾ।*
*ತದ್ವಶಾ ಏವ ತೇ ಸರ್ವೇ ಸರ್ವದೈವ ಸ ಈಶ್ವರಃ॥'* (ಪರಮಶ್ರುತಿ)

ವಿಷ್ಣುವು ಸರ್ವಮುಕ್ತರಿಗೂ ಆಶ್ರಯನು—ಅತ್ಯಂತ ಶ್ರೇಷ್ಠನು ಮತ್ತು ಮುಕ್ತರನ್ನು ಆಳುವ ಅಧಿಪತಿಯೂ ಆಗಿದ್ದಾನೆ. ಮುಕ್ತರೆಲ್ಲರೂ ಸದಾ ವಿಷ್ಣುವಿನ ವಶದಲ್ಲಿರುವರು—ಆತನೇ ಆ ಎಲ್ಲರ ಸ್ವತಂತ್ರ ನಿಯಾಮಕನು.

ಇತ್ಯಾದಿ ಬಹು ಪ್ರಮಾಣಗಳಿಂದ, ವಿಷ್ಣುಲೋಕದಲ್ಲಿ ವಿಷ್ಣುವಶರಾಗಿ ಸದಾ ಆನಂದಿಸುವುದೇ ಮೋಕ್ಷವು—ಮತ್ತೊಂದಲ್ಲವೆಂದು ಸಿದ್ಧವಾಗುತ್ತದೆ.

(೩) ಸಮಾಧಿಕರಹಿತನೆಂದೂ ಸಚ್ಚಿದಾನಂದಸ್ವರೂಪನೆಂದೂ ಭಗವಂತನನ್ನು ಉಪಾಸಿಸಬೇಕೆಂದು ವೇದಾಂತಸೂತ್ರಗಳು ನಿರ್ಣಯಿಸಿವೆ. ಹೀಗಿದ್ದರೂ, ಉಪಾಸನಾವಿಷಯನಾದ ಪರಮಾತ್ಮನು ನಿರ್ಗುಣ-ನಿರ್ವಿಶೇಷ-ನಿರವಯವಿ-ನಿರಾಕಾರ, ಇತ್ಯಾದಿಯಾಗಿ ಉಪಾಸಿಸಿದರೆ, ಆ ಉಪಾಸನೆಯ ಫಲವು ದುಃಖಪೂರ್ಣವಾದ ತಮಸ್ಸಲ್ಲದೆ ಸುಖರೂಪವಾಗಿರಲು ಶಕ್ಯವಲ್ಲ. ಈ ಪ್ರಮೇಯವನ್ನು ಸೂಚಿಸುತ್ತ **'ನಿನ್ನ ಮತದ ರಹಸ್ಯ ಆಲೋಚಿಸಿಕೊ'** ಎಂದಿರುವರು (೪ನೇ ನುಡಿ). ಇದರ ವಿವರವನ್ನು ಪದ (೬) ವಿಶೇಷಾಂಶ (೧) ರಲ್ಲಿ ನೋಡಬಹುದು.

### ಶ್ಲೋಕ ೧೨ ರಿಂದ ೧೫

**ಅವೈಷ್ಣವಾನಾಮಪ್ರಾಪ್ಯಂ ಗುಣತ್ರಯವಿವರ್ಜಿತಮ್**
**ನಿತ್ಯಸಿದ್ಧೈಃ ಸಮಾಕೀರ್ಣಂ ತನ್ಮಯ್ಯೈಃ ಪಾಂಚಕಾಲಿಕೈಃ ॥೧೨॥**

**ಸಭಾಪ್ರಾಸಾದಸಂಯುಕ್ತಂ ವನೈಶ್ಚೋಪವನೈರ್ವೃತಮ್**
**ವಾಪೀಕೂಪತಟಾಕೈಶ್ಚ ವೃಕ್ಷಷಂಡೈಶ್ಚ ಮಂಡಿತಮ್ ॥೧೩॥**

**ಅಪ್ರಾಕೃತಂ ಸುರೈರ್ವಂದ್ಯಮಯುತಾರ್ಕಸಮಪ್ರಭಮ್**
**ಪ್ರಕೃಷ್ಟ ಸತ್ವರಾಶಿಂ ತ್ವಾಂ ಕದಾ ದ್ರಕ್ಷ್ಯಾಮಿ ಚಕ್ಷುಷಾ ॥೧೪॥**

**ಬ್ರಹ್ಮಲೋಕಪದಾದೂರ್ಧ್ವಂ ಯತ್ಪುರಂ ಚಕ್ರಪಾಣಿನಃ**
**ಗೋವಿಂದಭಕ್ತಿ ಮಾಹಾತ್ಮ್ಯಂ ನರಾಣಾಂ ಚ ನ ಸಂಶಯಃ ॥೧೫॥**

**ಅರ್ಥ:** ಅವೈಷ್ಣವಾನಾಂ— ವಿಷ್ಣುಭಕ್ತಿರಹಿತರಿಗೆ, ಅಪ್ರಾಪ್ಯಂ— ಹೊಂದಲಶಕ್ಯವಾದುದೂ, ಗುಣತ್ರಯವಿವರ್ಜಿತಂ— (ಸತ್ವ, ರಜ, ತಮಗಳೆಂಬ) ಪ್ರಾಕೃತಗುಣತ್ರಯಗಳಿಲ್ಲದುದೂ, ತನ್ಮಯ್ಯೈಃ— ಶ್ರೀಹರಿಯನ್ನೇ ಪ್ರಧಾನನೆಂದು (ಸರ್ವೋತ್ತಮನೆಂದು) ತಿಳಿದ, ಪಾಂಚಕಾಲಿಕೈಃ— ಕಾಲನಿಯಾಮಕ (ಪಂಚಕಾಲನಾಮಕ) ಶ್ರೀಹರಿಯ ಅನನ್ಯಭಕ್ತರಾದ, ನಿತ್ಯಸಿದ್ಧೈಃ— ಮುಕ್ತರಿಂದ, ಸಮಾಕೀರ್ಣಂ— ತುಂಬಿರುವುದೂ; ॥೧೨॥

ಸಭಾಪ್ರಾಸಾದಸಂಯುಕ್ತಂ— ಸಭಾಮಂದಿರಗಳಿಂದಲೂ, ಉಪ್ಪರಿಗೆ ಮನೆಗಳಿಂದಲೂ ಕೂಡಿದ ಮತ್ತು, ವನೈಃ— ವನಗಳಿಂದಲೂ, ಉಪವನೈಶ್ಚ— ಉಪವನಗಳಿಂದಲೂ, ವೃತಂ— ಕೂಡಿದ, ವಾಪೀಕೂಪತಟಾಕೈಶ್ಚ— ವಾಪೀ-

ಕೂಪತಟಾಕಗಳಿಂದಲೂ (ವಾಪೀ—ಇಳಿಯುವ ಭಾವಿ, ಕೂಪ—ಸೇದುವ ಭಾವಿ, ತಟಾಕ—ಕೆರೆ ಸರೋವರಗಳು), ವೃಕ್ಷಷಂಡೈಶ್ಚ—ವೃಕ್ಷಸಮೂಹಗಳಿಂದಲೂ, ಮಂಡಿತಂ—ಶೋಭಿಸುವುದೂ (ಅಲಂಕೃತವಾದುದೂ); ॥೧೩॥

ಅಪ್ರಾಕೃತಂ—ಪ್ರಕೃತಿನಿರ್ಮಿತವಲ್ಲದ್ದೂ (ವಿಕಾರವಿಲ್ಲದುದೂ), ಸುರೈಃ—ದೇವತೆಗಳಿಂದ, ವಂದ್ಯಂ—ಸ್ತೋತ್ರಾರ್ಹವಾದುದೂ, ಅಯುತಾರ್ಕಸಮಪ್ರಭಂ—ಅಸಂಖ್ಯಾತಸೂರ್ಯಪ್ರಕಾಶವುಳ್ಳದ್ದೂ (ಅಯುತ—ಹತ್ತುಸಾವಿರ—ಅನಂತ), ಪ್ರಕೃಷ್ಟಸತ್ವರಾಶಿಂ—ಉತ್ತಮಜೀವಸಮೂಹಗಳುಳ್ಳದ್ದೂ; ॥೧೪॥

ಬ್ರಹ್ಮಲೋಕಪದಾದೂರ್ಧ್ವಂ—ಸತ್ಯಲೋಕಕ್ಕಿಂತಲೂ ಮೇಲಿರುವ, ನರಾಣಾಂ—ಮನುಷ್ಯರಿಗೆ (ವಿವೇಕಿಗಳಿಗೆ), ನ ಸಂಶಯ—ಸಂಶಯವಿಲ್ಲದಂತೆ, ಗೋವಿಂದಭಕ್ತಿ ಮಾಹಾತ್ಮ್ಯಂ—ಹರಿಭಕ್ತಿಯಿಂದಲೇ ಲಭ್ಯವೆಂಬ ಮಹಾತ್ಮ್ಯೆಯನ್ನು ಸಾರುವ, ಚಕ್ರಪಾಣಿನಃ—ಚಕ್ರಪಾಣಿಯ (ಶ್ರೀಹರಿಯ), ಯತ್ಪುರಂ—ಯಾವ ವೈಕುಂಠವೋ, ಅದನ್ನು ॥೧೫॥ ತ್ವಾಂ (ಅದಕ್ಕೆ ಅಧಿಪತಿಯಾದ) ನಿನ್ನನ್ನೂ, ಕದಾ—ಎಂದು, ದ್ರಕ್ಷ್ಯಾಮಿ—ನೋಡುವೆನು? (ಭಕ್ತನ ಆತುರತೆಯನ್ನು ನಿರೂಪಿಸುತ್ತದೆ).

(ಹಿಂದಿನ ೧೪ನೇ ಶ್ಲೋಕದಿಂದ ಅನ್ವಯವೆಂದು ತಿಳಿಯಬೇಕು).

**ವಿಶೇಷಾಂಶ:** (೧) ಈ ಶ್ಲೋಕಗಳು **'ಜಿತಂ ತೇ ಸ್ತೋತ್ರ'**ದಿಂದ ಎತ್ತಿ ಉದಾಹರಿಸಲ್ಪಟ್ಟವುಗಳಾಗಿವೆ. ಅಲ್ಲಿ, ಚತುರ್ಮುಖ ಬ್ರಹ್ಮದೇವನು, ವೈಕುಂಠವನ್ನೂ ವೈಕುಂಠಪತಿಯನ್ನೂ ನಿತ್ಯ ನೋಡುತ್ತಾ ಸೇವಿಸುವ, ತಮ್ಮ ಮಹಾಭಾಗ್ಯರೂಪದ ಭಾವೀ ಮುಕ್ತಸ್ಥಾನವನ್ನು ವರ್ಣಿಸುತ್ತಾರೆ. ಹಿಂದೊಮ್ಮೆ ಭಗವಂತನೇ ಅನುಗ್ರಹಿಸಿ ಮುಕ್ತಲೋಕವನ್ನು ಬ್ರಹ್ಮದೇವನಿಗೆ ತೋರಿಸಿದ್ದಾನೆ. ಆ ಸಂದರ್ಶನದ ಸ್ಮರಣೆಯು ಈ ವೈಕುಂಠಸ್ತುತಿಗೆ ಆಧಾರವೆಂದು ತಿಳಿಯಬಹುದಾಗಿದೆ.

***'ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ***
***ಸಂದರ್ಶಯಾಮಾಸ ಪರಂ ನ ಯತ್ಪರಮ್।***
***ಪ್ರವರ್ತತೇ ಯತ್ರ ರಜಸ್ತಮಸ್ತಯೋಃ***
***ಸತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ॥'*** ಇತ್ಯಾದಿ (ಭಾಗ. ೩ನೇ ಸ್ಕಂಧ)

—ಎಂಬುದಾಗಿ ವೈಕುಂಠಲೋಕವನ್ನು ತೋರಿಸಿದುದೂ ಮತ್ತು ವೈಕುಂಠದ ವರ್ಣನೆಯೂ ನಿರೂಪಿಸಲ್ಪಟ್ಟಿದೆ. ಉದಾಹೃತಭಾಗದ ಭಾವಾರ್ಥವು ಹೀಗಿದೆ:

ಪೂಜಿತನಾದ ಭಗವಂತನು ಬ್ರಹ್ಮದೇವನಿಗೆ, ತನ್ನ ಲೋಕವನ್ನು ತೋರಿಸಿ-ದನು; ಅದೇ ಅತ್ಯುತ್ಕೃಷ್ಟ ಪದವು—ಅದಕ್ಕಿಂತ ಉತ್ತಮವಾದ ಸ್ಥಾನವು ಮತ್ತೊಂದಿಲ್ಲ; ಅಲ್ಲಿ ಸತ್ವರಜಸ್ತಮೋಗುಣಗಳ ಅಥವಾ ಅವುಗಳ ಮಿಶ್ರಣದ ಅಥವಾ ಕಾಲ ವೇಗದ ಪ್ರಭಾವಗಳಿಲ್ಲ; ಇತ್ಯಾದಿ.

(೨) ಶ್ರೀಹರಿಯೇ **'ಪಂಚಕಾಲನು'.** ಆತನ ಪರಮಪ್ರಸಾದಕ್ಕೆ ಪಾತ್ರರಾದ-ವರು **'ಪಾಂಚಕಾಲಿಕರು'.** ಹಗಲು-ರಾತ್ರಿ, ಪಕ್ಷ-ಮಾಸ-ಸಂವತ್ಸರ, ಇತ್ಯಾದಿ ಅವಾಂತರಭೇದಗಳಿಂದ, ಯುಗ, ಮನ್ವಂತರ, ದಿನಕಲ್ಪ, ಪರ (ಬ್ರಹ್ಮನ ನೂರು ವರ್ಷಕಾಲ) ಮತ್ತು ಪ್ರಳಯಗಳೆಂಬ ಪಂಚವಿಧ ಕಾಲಗಳ ನಿಯಾಮಕ-ನಾದ ಕಾಲನಾಮಕ ಶ್ರೀಹರಿಯು **ಪಂಚಕಾಲನು.** ವೈಯಕ್ತಿಕವಾಗಿ (ಎಂದರೆ ಪ್ರತಿಜೀವರಿಗೆ ಸಂಬಂಧಿಸಿದಂತೆ), ಜಾಗ್ರತ್-ಸ್ವಪ್ನ-ಸುಷುಪ್ತಿ-ಸಮಾಧಿ ಮತ್ತು ಮೋಕ್ಷಗಳೆಂಬ ಅವಸ್ಥೆಗಳ ಕಾಲವಿಶೇಷಗಳನ್ನೂ ನಿಯಮಿಸುವನಾದ್ದರಿಂದಲೂ **ಪಂಚಕಾಲನೇ ಆ ಶ್ರೀಹರಿಯು.** ಅದೇ *'ಜಿತಂ ತೇ'* ಸ್ತೋತ್ರದಲ್ಲಿ,

*'ನಮಸ್ತೇ ಪಂಚಕಾಲಜ್ಞ ಪಂಚಕಾಲಪರಾಯಣ।*
*ಪಂಚಕಾಲೈಕಮನಸಾ ತ್ವಮೇವ ಗತಿರವ್ಯಯಾ॥'*

**ಪಂಚಕಾಲನೇ** ಮುಕ್ತಾಶ್ರಯನೆಂದೂ ಹೇಳಲಾಗಿದೆ.

### ಪದ ೧೨

ರಾಗ-ಮುಖಾರಿ; ತಾಳ-ರೂಪಕ

**ಲೋಕೈಕನಾಥ ನಾರಾಯಣಗೆ ಪ್ರಿಯವಾದ**
**ವೈಕುಂಠಪುರಿಯ ವರ್ಣಿಪೆನು**
**ಶ್ರೀಕಾಂತನೆಂದೆಂದು ಅಲ್ಲಿದ್ದ ಮುಕ್ತರ ನಿ-**
**ರಾಕುಲಸುಖವಿತ್ತು ಪೊರೆವ** ॥೧॥

**ಅರ್ಥ:** ಲೋಕೈಕನಾಥ ನಾರಾಯಣಗೆ—ಸರ್ವಲೋಕಗಳ ಸ್ವತಂತ್ರ ಪ್ರಭು-ವಾದ ನಾರಾಯಣನಿಗೆ, ಪ್ರಿಯವಾದ—ಪ್ರೀತಿವಿಷಯವಾದ, ವೈಕುಂಠ-ಪುರಿಯ—ವೈಕುಂಠನಗರವನ್ನು, ವರ್ಣಿಸುಪೆ—ವರ್ಣಿಸುತ್ತೇನೆ; ಶ್ರೀಕಾಂತನು—ಲಕ್ಷ್ಮೀಪತಿಯು, ಅಲ್ಲಿದ್ದ ಮುಕ್ತರ—ಅಲ್ಲಿರುವ ಮುಕ್ತರಿಗೆ, ಎಂದೆಂದು—ಯಾವಾಗಲೂ, ನಿರಾಕುಲ ಸುಖವಿತ್ತು—ದುಃಖಲೇಶವಿಲ್ಲದ ಪೂರ್ಣ-ಸುಖವನ್ನು ಕರುಣಿಸಿ, ಪೊರೆವ—ರಕ್ಷಿಸುತ್ತಾನೆ.

**ವಿಶೇಷಾಂಶ:** (೧) ವೈಕುಂಠಲೋಕದ ಶ್ರೀಭಾಗ ಮತ್ತು ವೈಕುಂಠ ನಗರಿಯ ವಿಷಯದಲ್ಲಿ ಹೇಳಲಾಗುವ ಎಲ್ಲ ಲಕ್ಷಣಗಳೂ (ಪ್ರಮೇಯಗಳೂ), ಶ್ವೇತ-ದ್ವೀಪ—ಅನಂತಾಸನಗಳಲ್ಲಿರುವ ಶ್ರೀಭಾಗಗಳಿಗೂ, ಪುರಿಗಳಿಗೂ ಅನ್ವಯಿಸು-ತ್ತವೆ. ಶ್ವೇತದ್ವೀಪದಲ್ಲಿರುವ ಶ್ರೀಹರಿಯ ಆವಾಸನಗರಿಯು **'ನಾರಾಯಣಪುರ'** ವೆಂದು ಕರೆಯಲ್ಪಡುತ್ತದೆ. ವೈಕುಂಠ ಮತ್ತು ಅನಂತಾಸನಗಳಲ್ಲಿ ಅದೇ ಹೆಸರಿನ ನಗರಿಗಳು ಶ್ರೀಹರಿಯ ಆವಾಸಗಳೆಂದು ತಿಳಿಯಬೇಕು.

(೨) *'ಪ್ರಿಯೋ ಹಿ ಜ್ಞಾನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ'* (ಗೀತಾ) ಎಂದು ಹೇಳಿರುವಂತೆ, ಜ್ಞಾನಿಗಳಿಗೆ ಶ್ರೀಹರಿಯು ಅತ್ಯಂತ ಪ್ರಿಯ-ನಾದ್ದರಿಂದಲೇ, ಶ್ರೀಹರಿಗೂ ಅವರು ಪ್ರಿಯರು. ಈ ಕಾರಣದಿಂದಲೇ ಮುಕ್ತರಿಗೆ ಪ್ರಿಯವಾದ ವೈಕುಂಠವೂ ಶ್ರೀಹರಿಗೆ ಪ್ರಿಯವು. 'ನಾರಾಯಣನಿಗೆ ಪ್ರಿಯವಾದ ವೈಕುಂಠಪುರಿ' ಎಂದುದು ಈ ದೃಷ್ಟಿಯಿಂದಲೇ. ಸರ್ವತ್ರ ವಾಸಿಸುವ ವಾಸುದೇವನಿಗೆ ಅನ್ಯಸ್ಥಳಗಳು ಅಪ್ರಿಯವೆಂದಲ್ಲ. ಸರ್ವಸಮನಾದ ಶ್ರೀಹರಿಗೆ ನಿರ್ನಿಮಿತ್ತ ಪ್ರೀತಿ ಅಪ್ರೀತಿಗಳೆಂಬುವಿಲ್ಲ.

**ಶ್ರೀಕೃಷ್ಣನಂಘ್ರಿಯ ನೆನೆಯಲೊಲ್ಲದವರಿಗೆ ಈ**
**ಲೋಕವೆಂದೆಂದು ದೊರಕದು**
**ಪ್ರಕೃಷ್ಟಸತ್ವರಾಶಿಗಳಿಪ್ಪವು ಗಡ**
**ಪ್ರಾಕೃತವಲ್ಲ ನಿತ್ಯ ಗಡ ॥೨॥**

**ಅರ್ಥ:** ಶ್ರೀಕೃಷ್ಣನಂಘ್ರಿಯ—ಶ್ರೀಹರಿಪಾದಗಳನ್ನು, ನೆನೆಯಲೊಲ್ಲದವ-ರಿಗೆ—ಸ್ಮರಿಸುವುದು ಬೇಡದವರಿಗೆ (ಎಂದೂ ಭಕ್ತಿಯಿಂದ ಸ್ಮರಿಸದ ತಮೋಯೋಗ್ಯರಿಗೆ), ಈ ಲೋಕವು—ಈ ವೈಕುಂಠಲೋಕವು (ನಗರಿ-ಮಾತ್ರವಲ್ಲ), ಎಂದೆಂದು—ಯಾವ ಕಾಲಕ್ಕೂ, ದೊರಕದು—ದೊರೆ-ಯುವುದಿಲ್ಲ; ಪ್ರಕೃಷ್ಟಸತ್ವರಾಶಿಗಳು—ಉತ್ತಮ ಸಾತ್ವಿಕ ಜೀವಸಮೂಹ-ಗಳು, ಅಲ್ಲಿ—ಆ ವೈಕುಂಠಲೋಕದಲ್ಲಿ, ಇಪ್ಪವು ಗಡ—ಇರುವುವೆಂಬುದು ಶಾಸ್ತ್ರಸಿದ್ಧ; ಪ್ರಾಕೃತವಲ್ಲ—ಆ ಲೋಕವು ವಿಕಾರವುಳ್ಳ ಪ್ರಕೃತಿನಿರ್ಮಿತವಲ್ಲ, ನಿತ್ಯಗಡ—ನಿತ್ಯವಾದುದೆಂಬುದೂ ಸಿದ್ಧ.

**ವಿಶೇಷಾಂಶ: 'ಪ್ರಕೃಷ್ಟಸತ್ವರಾಶಿಗಳು ಅಲ್ಲಿಪ್ಪವು'** ಎಂಬಲ್ಲಿರುವ **'ಪ್ರಕೃಷ್ಟ'** ಶಬ್ದದಲ್ಲಿ ಅಡಗಿರುವ ರಹಸ್ಯ ಪ್ರಮೇಯವು ಹೀಗಿದೆ:

*'ಶ್ವೇತದ್ವೀಪಂ ತತೋ ಗತ್ವಾ ವಿಷ್ಣುಂ ದೃಷ್ಟ್ವಾ ಚ ತೇ ತತಃ।*
*ಅನುಜ್ಞಾತಾಃ ಪ್ರಮೋದಂತೇ ನಿರ್ದುಃಖಾಸ್ತು ಧರಾದಿಷು॥*
*ಕೇಚಿದೇವ ವಸಂತ್ಯತ್ರ ಅಂತರಿಕ್ಷೇ ಚ ಕೇಚನ।*
*ಕೇಚಿತ್ಸ್ವರ್ಗೇ ಮಹರ್ಲೋಕೇ ಜನೇ ತಪಸಿ ಚಾಪರೇ॥*
*ಕೇಚಿತ್ಸತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರಸಾಗರಮ್।*
*ಶ್ವೇತದ್ವೀಪಂ ಚ ವೈಕುಂಠಂ ಅನಂತಾಸನಮಪ್ಯುತ॥'* (ಸ.ರ.ಮಾ)

-ಎಂಬ ವಾಕ್ಯಗಳು ಮುಕ್ತರ ವಾಸಸ್ಥಾನಗಳನ್ನು ನಿರೂಪಿಸುತ್ತವೆ. ಎಲ್ಲ ಮುಕ್ತಿಯೋಗ್ಯ ಜೀವರಿಗೂ ವೈಕುಂಠಾದಿ ಮುಕ್ತಧಾಮಗಳಲ್ಲಿ ಶ್ರೀಭಾಗವು ಲಭಿಸುವುದಿಲ್ಲ. ಉತ್ತಮಾಧಿಕಾರಿಗಳು ಮಾತ್ರ ಅಲ್ಲಿರುತ್ತಾರೆ. ಉದಾಹೃತ-ಶ್ಲೋಕಗಳ ಭಾವಾರ್ಥವೇನೆಂದರೆ: 'ಲಿಂಗದೇಹವನ್ನು ಬಿಟ್ಟನಂತರ ಎಲ್ಲ ಮುಕ್ತರೂ, ಮೊದಲು ಶ್ವೇತದ್ವೀಪಕ್ಕೆ ಹೋಗಿ, ಶ್ರೀನಾರಾಯಣನ ದರ್ಶನ-ವನ್ನು ಪಡೆದು, ಆತನ ಅನುಜ್ಞೆಯಿಂದ ತಮತಮಗೆ ನಿರ್ದೇಶಿಸಲಾಗುವ ಭೂಮ್ಯಾದಿ ಯೋಗ್ಯ ಸ್ಥಳಗಳನ್ನು ಸೇರಿ, ನಿರ್ದುಃಖಾನಂದವನ್ನು ಸವಿಯುತ್ತ ವಾಸಿಸುತ್ತಾರೆ; ಕೆಲವರು ಭೂಲೋಕದಲ್ಲಿ, ಕೆಲವರು ಅಂತರಿಕ್ಷದಲ್ಲಿ, ಮತ್ತೆ ಕೆಲವರು ಸ್ವರ್ಗ, ಮಹರ್ಲೋಕ, ಜನಲೋಕ, ತಪೋಲೋಕಗಳಲ್ಲಿಯೂ, ಇನ್ನೂ ಕೆಲವರು ಸತ್ಯಲೋಕದಲ್ಲಿಯೂ, ಅವರಿಗಿಂತ ಉತ್ತಮರು ಅಮುಕ್ತ-ವೈಕುಂಠಾದಿ ಭಾಗಗಳಲ್ಲಿಯೂ (ಭೂ, ದುರ್ಗಾಭಾಗಗಳು), ವಾಸಿಸುತ್ತಾರೆ; ಕೆಲವು ಮಹಾಜ್ಞಾನಿಗಳು ಕ್ಷೀರಸಾಗರದಲ್ಲಿ ವಿಹರಿಸುತ್ತಾರೆ; ಹೀಗೆ ಜ್ಞಾನಾಧಿಕ್ಯ-ಕ್ರಮದಿಂದ (ಸ್ವರೂಪಯೋಗ್ಯತಾ ತಾರತಮ್ಯಾನುಸಾರವಾಗಿ), ವೈಕುಂಠಾದಿ-ಗಳ ಶ್ರೀಭಾಗಗಳಲ್ಲಿಯೂ, ಅಲ್ಲಿಯೂ ವೈಕುಂಠನಗರದ ಹೆಚ್ಚು ಹೆಚ್ಚು ಸಮೀಪ-ದಲ್ಲಿಯೂ ವಾಸಿಸುವರು. ಭೂಮ್ಯಾದಿಗಳಲ್ಲಿರುವ ಮುಕ್ತರು, ಪ್ರಾಕೃತ-ದೇಹಾದಿಗಳಿಂದ ರಹಿತರಾಗಿ, ಸಂಸಾರಿಜೀವರಿಗೆ ಅದೃಶ್ಯರಾಗಿಯೇ ಇದ್ದು, ಶುದ್ಧಸತ್ವಾತ್ಮಕ ದೇಹಗಳನ್ನು ಸ್ವೇಚ್ಛಾನುಸಾರ ಪಡೆದು, ಸ್ವರೂಪದೇಹದಿಂದ ಸಹ, ನಿತ್ಯಾನಂದ ಭೋಗಿಗಳಾಗಿಯೇ ಇರುವರೆಂದು ತಿಳಿಯಬೇಕು.

**ಎಂದೆಂದು ನಿತ್ಯ ಸನಾತನವೆಂಬ ಈ**
**ಚಂದದ ಪದ ದಿವ್ಯಾಸ್ಪದ**
**ನಿತ್ಯ ತ್ರಿಗುಣಗಳು ಹೊಂದವೀಲೋಕಕ್ಕೆ**
**ಕುಂದುಕೊರತೆಗಳು ಇಲ್ಲ ಗಡ** ॥೩॥

**ಅರ್ಥ:** ಎಂದೆಂದು—ಎಲ್ಲ ಕಾಲದಲ್ಲಿ (ಪ್ರಳಯದಲ್ಲಿ ಸಹ), ನಿತ್ಯ—ನಾಶವಿಲ್ಲದುದೂ, ಸನಾತನವೆಂಬ—ಅನಾದಿಕಾಲದಿಂದಲೂ ಇರುವುದೂ ಎಂಬ, ಈ ಚಂದದ ಪದ—ಈ ವೈಭವದ ಲೋಕವು, ದಿವ್ಯಾಸ್ಪದ ಗಡ—ದೇವತೆಗಳಿಂದ ಮಾತ್ರ ಲಭ್ಯವಷ್ಟೆ! ನಿತ್ಯ—ಎಲ್ಲ ಕಾಲದಲ್ಲಿ, ತ್ರಿಗುಣಗಳು—ಸತ್ವರಜಸ್ತಮೋ ಗುಣಗಳು, ಈ ಲೋಕಕ್ಕೆ ಹೊಂದವು—ಸಂಬಂಧ-ವಾಗುವುದಿಲ್ಲ; ಕುಂದುಕೊರತೆಗಳು, ಇಲ್ಲ ಗಡ—(ಈ ಕಾರಣದಿಂದ) ದುಃಖಾದಿ ನ್ಯೂನತೆಗಳು ಸರ್ವಥಾ ಇಲ್ಲವೆಂಬುದೂ ಸ್ಪಷ್ಟವೇ.

**ವಿಶೇಷಾಂಶ:** ಸತ್ವಾದಿಗುಣಗಳು, ನಶ್ವರವಾದ ಸುಖಾದಿಗಳಿಗೆ ಕಾರಣ-ಗಳು, ಮುಕ್ತಲೋಕಗಳಲ್ಲಿ ಪ್ರಾಕೃತಗುಣಸಂಬಂಧವೇ ಇಲ್ಲದ ಪ್ರಯುಕ್ತ ಅನಿತ್ಯ ಮತ್ತು ಅಪೂರ್ಣಸುಖಾದಿಗಳಿಗೆ ಅವಕಾಶವೇ ಇಲ್ಲ. ಎಲ್ಲ ಮುಕ್ತರೂ ಸ್ವಯೋಗ್ಯತೆಗಳ ಪರಿಪೂರ್ಣತ್ವವನ್ನು ಹೊಂದಿದವರೇ ಆಗಿರುವರು. ದುಃಖಾದಿ ದೋಷಗಳಂತೂ ಅವರನ್ನು ಸೋಂಕುವುದೂ ಶಕ್ಯವಿಲ್ಲ. ಆದ್ದರಿಂದಲೇ '**ಕುಂದುಕೊರತೆ**ಗಳಿಲ್ಲ' ಎಂದರು. ಕುಂದು—ದೋಷ; ಕೊರತೆ—ನ್ಯೂನತೆ ಅಥವಾ ಅಪೂರ್ಣತೆ.

**ಆದರಿಂದ ಬೊಮ್ಮಾದಿ ದೇವರೆಲ್ಲರು ಹರಿಯ**
**ಸದನವೆನಿಪ ಪುರತ್ರಯಕ್ಕೆ**
**ಮುದದಿಂದ ಕೈಮುಗಿದು ಪೂಜಿಸುವರೆಂದು**
**ಪದನಿತ್ಯಸಿದ್ಧರಾಸ್ಪದ ಗಡ** ॥೪॥

**ಅರ್ಥ:** ಆದರಿಂದ—ಉತ್ತಮಾಧಿಕಾರಿಗಳೆಂಬ ಕಾರಣದಿಂದ, ಬ್ರಹ್ಮಾದಿ ದೇವರೆಲ್ಲರು—ಬ್ರಹ್ಮ ಮೊದಲಾದ ಎಲ್ಲ ದೇವತೆಗಳು, ಹರಿಯ ಸದನವೆನಿಪ—ಶ್ರೀಹರಿಯ ನಿತ್ಯವಾಸಸ್ಥಾನವಾದ, ಪುರತ್ರಯಕ್ಕೆ—ವೈಕುಂಠ, ನಾರಾಯಣ-ಪುರ, ಅನಂತಾಸನಗಳೆಂಬ ಮೂರು ನಗರಗಳಿಗೆ, ಮುದದಿಂದ—ಆನಂದ-ಭರಿತರಾಗಿ, ಎಂದೆಂದು—ಸರ್ವದಾ, (ತಮ್ಮಿಂದ ಪ್ರಾಪ್ಯಸ್ಥಾನಗಳಾದ್ದರಿಂದ), ಕೈಮುಗಿದು—ಕೈಜೋಡಿಸಿ (ಭಕ್ತಿಪೂರ್ವಕ ನಮಸ್ಕರಿಸಿ), ಪೂಜಿಸುವರು—ಗೌರವಿಸುತ್ತಾರೆ; ಪದನಿತ್ಯಸಿದ್ಧರ—ನಿಯಮೇನ ಪದಯೋಗ್ಯರಾದ (ಇಂದ್ರಾದಿ ಪದಯೋಗ್ಯರಾದ) ಮುಕ್ತಜೀವರಿಗೆ ಮಾತ್ರ, ಆಸ್ಪದ ಗಡ—ಲಭ್ಯವು; ಅಥವಾ, ಪದ—ಈ ಪುರಿಗಳು, ನಿತ್ಯಸಿದ್ಧರಾಸ್ಪದ—ಅನಾದ್ಯಪರೋಕ್ಷಜ್ಞಾನಿಗಳಾದ

ತತ್ವಾಭಿಮಾನಿ ದೇವತೆಗಳಿಂದಲೇ ಪ್ರಾಪ್ಯಗಳು; ಗಡ—(ಇವರಿಗೆ ಮಾತ್ರ ಈ ಪುರಿಗಳು; ಅನ್ಯರಿಗೆ ಅನ್ಯತ್ರವೆಂಬುದು) ಶಾಸ್ತ್ರಸಿದ್ಧ.

**ವಿಶೇಷಾಂಶ:** ತತ್ವಾಭಿಮಾನಿಗಳ ಸಾಮಾನ್ಯ ಲಕ್ಷಣಗಳನ್ನು ನಿರೂಪಿಸುತ್ತಾ,

*'ಅನಾದಿತೋಽಪ್ಯಾಪರೋಕ್ಷಯುಕ್ತಾ ರೂಪೇಷು ಚ ಕ್ವಚಿತ್*

*ಸಮಸ್ತಲಕ್ಷಣೈಃ ಪೂರ್ಣಾಃ ಸಮಸ್ತ ಜಗದೀಶ್ವರಾಃ।*

*ಮುಕ್ತಪ್ರಾಯಾಃ ಸದಾ ಸರ್ವೇ....'* (ಸ.ರ.ಮಾ.)

ಎಂದು ಹೇಳಲಾಗಿದೆ. ಇವರು ಅನಾದಿಕಾಲದಿಂದ ಭಗವಂತನ ಸಾಮಾನ್ಯಾ-ಪರೋಕ್ಷ(ಕೆಲವು ರೂಪಗಳ ಸಾಮಾನ್ಯಸಾಕ್ಷಾತ್ಕಾರ)ವುಳ್ಳವರು; ಸಾಧನಕಾಲ-ದಲ್ಲಿ ಅಧಿಕ ರೂಪಗಳ ಅಪರೋಕ್ಷವೂ, ಸ್ವಬಿಂಬದ ಸ್ಪಷ್ಟತೆಯೂ ವೃದ್ಧಿ ಹೊಂದುತ್ತದೆ. ಭಕ್ತಿವೈರಾಗ್ಯಾದಿ ಗುಣಗಳಿಂದ (ಲಕ್ಷಣಗಳಿಂದ) ಪೂರ್ಣರು. (ಸಮಸ್ತಲಕ್ಷಣೈಃ ಎಂದರೆ ಲಕ್ಷಣಶಾಸ್ತ್ರೋಕ್ತ ೩೨ ಲಕ್ಷಣಗಳೆಂದಲ್ಲ).

**ಅಲ್ಲಿದ್ದ ವಾಪೀಕೂಪತಟಾಕಂಗಳು ಮ-**
**ತ್ತಲ್ಲಿದ್ದ ಮನೆಗೋಪುರಗಳಾಗಿ**
**ಬಲ್ಲಿದಾ ಲಕುಮಿ ತನ್ನ ನಲ್ಲನ ಸೇವೆಗೆ**
**ಅಲ್ಲಿ ಬೇಕಾಗಿಹಳು ಗಡ ॥೫॥**

**ಅರ್ಥ:** ಅಲ್ಲಿದ್ದ—ವೈಕುಂಠಪುರಿಯಲ್ಲಿರುವ, ವಾಪೀಕೂಪತಟಾಕಂಗಳು—ವಾಪೀಕೂಪತಟಾಕಗಳು (ಜಲಾಶಯಗಳು—ಜಲವಿಹಾರಸ್ಥಾನಗಳು), ಮತ್ತ-ಲ್ಲಿದ್ದ—ಮತ್ತು ಅಲ್ಲಿರುವ, ಮನೆಗೋಪುರಗಳಾಗಿ—ಮನೆಗೋಪುರಗಳ ರೂಪ-ದಿಂದ, ಬಲ್ಲಿದಾ ಲಕುಮಿ—ಸರ್ವಶಕ್ತಳಾದ ಆ ಲಕ್ಷ್ಮೀದೇವಿ, ತನ್ನ ನಲ್ಲನ ಸೇವೆಗೆ—ತನ್ನ ಪತಿಯ ಸೇವೆಗಾಗಿ, ಅಲ್ಲಿ—ಆ ನಗರಿಯಲ್ಲಿ, ಬೇಕಾಗಿ—ಮನಃಪೂರ್ವಕ ಆಶಿಸಿಯೇ (ಅಲ್ಲಿಯೂ ಪತಿಸೇವೆಯು ತನಗೆ ಅತಿಪ್ರಿಯ-ವಾದ್ದರಿಂದಲೇ), ಇಹಳು ಗಡ—ಇರುವಳಷ್ಟೆ.

**ಅರ್ಕಕೋಟಿಗಳಂತೆ ವೈಕುಂಠಲೋಕ ದಶ**
**ದಿಕ್ಕಿನೊಳಗೆ ಬೆಳಗುವುದು**
**ಲಕ್ಷ್ಮಿಗಲ್ಲದೆ ಇಂಥ ಕಾಂತಿ ಮಿಕ್ಕವರಿಗೆ**
**ಬಕ್ಕೆ ನೀವೆ ವಿಚಾರಿಸಿರೋ ॥೬॥**

**ಅರ್ಥ:** ಅರ್ಕಕೋಟಿಗಳಂತೆ—ಕೋಟಿಸೂರ್ಯರಂತೆ, ವೈಕುಂಠಲೋಕ—ವೈಕುಂಠಲೋಕವು (ಪೂರಾ ಆ ಲೋಕವೇ), ದಶದಿಕ್ಕಿನೊಳಗೆ—ಹತ್ತು

ದಿಕ್ಕುಗಳಲ್ಲಿಯೂ, ಬೆಳಗುವುದು— ಪ್ರಕಾಶಿಸುತ್ತದೆ. ಲಕ್ಷ್ಮಿಗಲ್ಲದೆ— ಲಕ್ಷ್ಮೀದೇವಿಗಲ್ಲದೆ, ಇಂಥ ಕಾಂತಿ— ಈ ವಿಧ (ಆಹ್ಲಾದಕರ) ಪ್ರಕಾಶವು, ಮಿಕ್ಕವರಿಗೆ ಬಕ್ಕೆ— ಇತರರಿಗೆ (ಈ ವಿಧ ಪ್ರಕಾಶಶಕ್ತಿಯು) ಬರುವುದುಂಟೇ? ನೀವೆ ವಿಚಾರಿಸಿರೋ— ನೀವೇ ವಿಚಾರಮಾಡಿರಿ.

**ವಿಶೇಷಾಂಶ:**

*'ನ ತದ್ಭಾಸಯ ತೇ ಸೂರ್ಯೋ ನ ಶಶಾಂಕೋ ನ ಪಾವಕಃ।*

*ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ॥'* (ಗೀತಾ)

ಯಾವ ಲೋಕವನ್ನು ಸೂರ್ಯ-ಚಂದ್ರ-ಅಗ್ನಿಗಳು ಯಾರೂ ಪ್ರಕಾಶಗೊಳಿಸುವುದಿಲ್ಲವೊ, ಅಲ್ಲಿಗೆ ಹೋದವರು ತಿರುಗಿ ಬರುವುದಿಲ್ಲವೆಂದು ಹೇಳಲ್ಪಡುವ ಲೋಕವು ವೈಕುಂಠವಲ್ಲದೆ ಬೇರೆಯಲ್ಲ. ಕೋಟಿಸೂರ್ಯಪ್ರಕಾಶವಿದ್ದರೂ, ತಾಪವಿಲ್ಲದೇ ಕೋಟಿಚಂದ್ರಪ್ರಕಾಶದಂತೆ ಆಹ್ಲಾದಕರವಾದ ಲೋಕವಿಲಕ್ಷಣವಾದ ಈ ವೈಭವವು, ವೈಕುಂಠಲೋಕದಲ್ಲಲ್ಲದೇ ಅನ್ಯತ್ರ ಇಲ್ಲವೇ ಇಲ್ಲ. ಕಾಠಕೋಪನಿಷತ್ತು ಸಹ ವೈಕುಂಠವನ್ನು ಹೀಗೆಯೇ ವರ್ಣಿಸುತ್ತದೆ. ***'ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತಃ'***— ಇತ್ಯಾದಿ. ವೈಕುಂಠಲೋಕವನ್ನು ಮಾತ್ರ ಲಕ್ಷ್ಮೀದೇವಿಯ ಕಾಂತಿಯು ಸಾಕ್ಷಾತ್ತಾಗಿ ತಾನೇ ಪ್ರಕಾಶಗೊಳಿಸುತ್ತದೆ. ***'ತಮೇವ ಭಾಂತಮನುಭಾಂತಿ ಸರ್ವಂ'*** ಇತ್ಯಾದಿ ಪ್ರಮಾಣಗಳು ಸಾರುವಂತೆ. ಅಗ್ನಿಸೂರ್ಯಾದಿ ಅಧಿಷ್ಠಾನಗಳ ದ್ವಾರಾ ಪ್ರಕಾಶಿಸುವುದೂ ಆ ಲಕ್ಷ್ಮೀದೇವಿಯ ಕಾಂತಿಯೇ. ಲಕ್ಷ್ಮೀದೇವಿಯ ಪ್ರಕಾಶನ ಶಕ್ತಿಯೂ ಪ್ರಕಾಶರೂಪನಾದ ಸ್ವತಂತ್ರ ಶ್ರೀಹರಿಯ ಪ್ರಕಾಶಾಧೀನವೆಂಬುದನ್ನು ಮರೆಯಲಾಗದು.

**ವೈಕುಂಠವೆಂಬ ಹರಿಯ ಲೋಕ ಬೊಮ್ಮನ**
**ಲೋಕದಿಂದ ಮೇಲಿಹದು**
**ಶೋಕರಹಿತರಾದ ಸಿದ್ಧಸಾಧ್ಯರಲ್ಲಿ**
**ಬೇಕಾದ ಸುಖವನುಣುತಿಹರು** ॥೭॥

**ಅರ್ಥ:** ವೈಕುಂಠವೆಂಬ ಹರಿಯ ಲೋಕ— ವೈಕುಂಠವೆಂಬ ಭಗವಂತನ ಲೋಕವು, ಬೊಮ್ಮನ ಲೋಕದಿಂದ— ಸತ್ಯಲೋಕಕ್ಕಿಂತ, ಮೇಲಿಹದು— ಮೇಲ್ಭಾಗದಲ್ಲಿದೆ; ಶೋಕರಹಿತರಾದ— ಯಾವ ಪ್ರಕಾರದ ವ್ಯಾಕುಲವೂ ಇಲ್ಲದ, ಸಿದ್ಧಸಾಧ್ಯರು— ಸಿದ್ಧಿಯನ್ನು ಪಡೆದ ಮುಕ್ತರು (ಅಥವಾ ಸಿದ್ಧರು,

ಸಾಧ್ಯರು ಎಂಬ ಹೆಸರಿನ ಜೀವಸಮುದಾಯಗಳು), ಅಲ್ಲಿ—ವೈಕುಂಠ-ಲೋಕದಲ್ಲಿ, ಬೇಕಾದ ಸುಖವನ್ನು—ಇಚ್ಛಿತಭೋಗವನ್ನು, ಉಣುತಿಹರು—ಹೊಂದುತ್ತಿರುವರು.

**ವಿಶೇಷಾಂಶ: 'ಬೇಕಾದ ಸುಖವನುಣುತಿಹರು'** ಎಂಬುದರಿಂದ ಮುಕ್ತರು **'ಅಕಾಮಹತರು'** (ಕಾಮಹತರಲ್ಲ)—ಪೂರ್ಣಕಾಮರೆಂಬ ಶ್ರುತ್ಯುಕ್ತ-ಪ್ರಮೇಯವು ಹೇಳಲಾಗುತ್ತದೆ. ಮುಕ್ತರು ಇಚ್ಛಿಸುವ ಸಕಲ ಭೋಗಗಳೂ ಇಚ್ಛಿಸುವ ಮಾತ್ರದಿಂದ, ಯಾವ ವಿಧದ ಯತ್ನವೂ ಇಲ್ಲದೇ, ಸಿದ್ಧವಾಗುತ್ತವೆ. ಅಯೋಗ್ಯವಾದ—ತಮಗೆ ಯೋಗ್ಯವಲ್ಲದ—ಇಚ್ಛೆಯು ಮುಕ್ತರಿಗೆ ಎಂದೂ ಉಂಟಾಗುವುದಿಲ್ಲ.

*ಯಂ ಯಂ ಸುಖೀ ಕಾಮಯತೇಽರ್ಥಮತ್ರ*
*ಸಂಕಲ್ಪಮಾತ್ರಾತ್ಸಕಲೋಽಪಿ ಸಸ್ಯಾತ್।*
*ಇತ್ಯೇವ ವೇದಾ ಅಪಿ ವೇದಯಂತಿ*
*ಮುಕ್ತಿಂ ತತಃ ಕೋ ವಿಭವಾತಿರೇಕಃ॥* (ಸುಮಧ್ವವಿಜಯ)

—ಎಂದರೆ, ವೈಕುಂಠದಲ್ಲಿ ಮುಕ್ತರು ಯಾವ ಯಾವ ಭೋಗಗಳನ್ನು ಇಚ್ಛಿಸು-ತ್ತಾರೆಯೋ, ಆ ಎಲ್ಲವೂ, ತತ್ಕಾಲದಲ್ಲಿ ಸಂಕಲ್ಪಮಾತ್ರದಿಂದ (ಯಾವ ಯತ್ನದ ಅವಶ್ಯಕತೆಯೂ ಇಲ್ಲದೇ) ಸಿದ್ಧವಾಗುತ್ತವೆ. ವೇದಗಳೂ ಹೀಗೆಯೇ ಹೇಳುತ್ತವೆ. ವೈಕುಂಠಕ್ಕಿಂತ ಅತಿಶಯವಾದ ವೈಭವವು ಮತ್ತೆಲ್ಲೂ ಇಲ್ಲ.

**ಲಕ್ಷಯೋಜನದ ಮೇಲಿಕ್ಕು ಅನಂತಾಸನ**
**ಲಕ್ಷ್ಮೀಶನಿಹ ಶ್ವೇತದ್ವೀಪ**
**ಲಕ್ಷವೈವತ್ತು ವೈಕುಂಠ ಇಪ್ಪತ್ತೈದು**
**ಲಕ್ಷಷೋಡಶ ಕೋಟಿಯಲ್ಲಿಹುದು** **॥೮॥**

**ಅರ್ಥ:** ಅನಂತಾಸನ—ಅನಂತಾಸನವು, ಲಕ್ಷಯೋಜನದ ಮೇಲಿಕ್ಕು—(ಭೂಮಿಗಿಂತ) ಒಂದು ಲಕ್ಷಯೋಜನ ಎತ್ತರದಲ್ಲಿದೆ; ಲಕ್ಷ್ಮೀಶನಿಹ—ನಾರಾಯಣನಿರುವ, ಶ್ವೇತದ್ವೀಪ—(ಕ್ಷೀರಸಮುದ್ರದ ಮಧ್ಯದಲ್ಲಿರುವ) ಶ್ವೇತ-ದ್ವೀಪವು, ಲಕ್ಷವೈವತ್ತು—ಒಂದು ಲಕ್ಷದ ಐವತ್ತು ಸಾವಿರ ಯೋಜನ ಎತ್ತರ ವೈಕುಂಠವು, ಇಪ್ಪತ್ತೈದು ಲಕ್ಷ ಷೋಡಶಕೋಟಿಯಲ್ಲಿಹುದು—(ಭೂಮಿಯಿಂದ ಮೇಲೆ) ೧೬ ಕೋಟಿ ೨೫ ಲಕ್ಷಯೋಜನ ದೂರದಲ್ಲಿದೆ.

**ವಿಶೇಷಾಂಶ:** ತ್ರಿಧಾಮಗಳೆಂದು ಪ್ರಸಿದ್ಧವಾದ ವೈಕುಂಠ, ಶ್ವೇತದ್ವೀಪ, ಅನಂತಾಸನಗಳ ಎತ್ತರದ ಅಳತೆಗಳನ್ನು ಹೇಳುತ್ತಾರೆ.

*'ಪೃಥಿವೀಸ್ಥೇಷು ಸರ್ವೇಭ್ಯೋ ಲೋಕೋಽನಂತಾಸನಾತ್ಮಕಃ।*
*ಅಂತರಿಕ್ಷಾತ್ಮಕೇಭ್ಯಶ್ಚ ಶ್ವೇತದ್ವೀಪಸ್ಥಿತೋ ಹರಿಃ॥*
*ದ್ವ್ಯಾತ್ಮಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ॥*

ಎಂಬ (ಭಾಗವತತಾತ್ಪರ್ಯ) ವಾಕ್ಯವು, 'ಪೃಥ್ವಿಯಲ್ಲಿರುವ ಎಲ್ಲ ಸ್ಥಾನಗಳಿಗಿಂತ ಅನಂತಾಸನವು ಎತ್ತರವಾದುದು; ಅಂತರಿಕ್ಷಸ್ಥಾನಗಳಲ್ಲಿ ಶ್ವೇತದ್ವೀಪವೂ (ಅಲ್ಲಿರುವ ಶ್ರೀಹರಿಯೂ), ಇವೆರಡಕ್ಕಿಂತಲೂ ಮತ್ತು ಎಲ್ಲ ಲೋಕಗಳಿಗಿಂತಲೂ ಅತ್ಯುಚ್ಚಸ್ಥಾನದಲ್ಲಿರುವುದು ವೈಕುಂಠವೆಂದೂ ಹೇಳುತ್ತದೆ. ಈ ಸ್ಥಾನಗಳ ಎತ್ತರಗಳನ್ನು, ಯೋಜನಸಂಖ್ಯೆಗಳನ್ನು ಹೇಳಿ, ಸ್ಪಷ್ಟಗೊಳಿಸುತ್ತದೆ ಈ ನುಡಿ. ಅನಂತಾಸನವು ಭೂಮಿಯ ಮೇಲಿರುವ ಎತ್ತರವಾದ ಸ್ಥಾನ; ವೈಕುಂಠವು ಭೂಸ್ಪರ್ಶವಿಲ್ಲದ್ದು—ಸತ್ಯಲೋಕಕ್ಕೂ ಮೇಲ್ಭಾಗದಲ್ಲಿದೆ. ಆದರೆ ಶ್ವೇತದ್ವೀಪವು ಕ್ಷೀರಸಮುದ್ರ ಮಧ್ಯದಲ್ಲಿರುವುದೆಂದು, *'ತಸ್ಯಾಂ ಪೃಥಿವ್ಯಾಂ ಶ್ವೇತಾಖ್ಯೇ ದ್ವೀಪೇ ಮುಕ್ತೈರುಪಾಸಿತಃ'* ಎಂಬ ಬೃಹದಾರಣ್ಯಕಭಾಷ್ಯ ವಾಕ್ಯವು, ಹೇಳುತ್ತದೆ. ಕ್ಷೀರಸಮುದ್ರವಾದರೂ, ಪೃಥ್ವಿಯಲ್ಲಿಯೇ ಇರುವ ಸಪ್ತಸಮುದ್ರಗಳಲ್ಲಿ ಒಂದಾಗಿದೆ. ಹೀಗಿದ್ದೂ, ಮೇಲಿನ ಭಾಗವತತಾತ್ಪರ್ಯ ವಾಕ್ಯವು, ಅಂತರಿಕ್ಷಸ್ಥಾನಗಳಲ್ಲಿ ಶ್ವೇತದ್ವೀಪವು ಅತ್ಯುಚ್ಚವಾದುದೆಂದು ಹೇಳಿದ್ದು ಹೇಗೆಂಬ ಸಂಶಯವನ್ನು

*'ಘನೀಭೂತಕ್ಷೀರೋಪರಿ ಅವಸ್ಥಿತಸ್ಯ ಶ್ವೇತದ್ವೀಪಸ್ಯ*
*ಸಾಕ್ಷಾದ್ಭೂಸ್ಪರ್ಶಾಭಾವಾತ್,*
*ಕ್ಷೀರಾರ್ಣವಸ್ಯ ಭೂಮ್ಯಪೇಕ್ಷಯಾ ಅತ್ಯೌನ್ನತ್ಯಾಚ್ಚ ತದ್ವಿವಕ್ಷಯಾ।*
*ತಥಾ ಚ ಪೃಥಿವ್ಯಾಂ ಸಾಂದ್ರಕ್ಷೀರೋದಕಂ ತದುಪರಿ ಸಂಬದ್ಧ*
*ಶ್ವೇತದ್ವೀಪಃ ಇತಿ ಪರಂಪರಯಾ ಪೃಥಿವೀಸ್ಥತ್ವಂ ಚ ಇತಿ॥'*

ಎಂಬ (ಸ.ರ.ಮಾ.) ವಾಕ್ಯವು ಪರಿಹರಿಸುತ್ತದೆ. ಭೂಮಿಯಿಂದ ಒಂದು ಲಕ್ಷಯೋಜನದ ಮೇಲಿನ ಪ್ರದೇಶವು ಅಂತರಿಕ್ಷವೆಂದು ಕರೆಯಲ್ಪಡುತ್ತದೆ. ಶ್ವೇತದ್ವೀಪವು ೧॥ ಲಕ್ಷ ಯೋಜನವಿರುವುದರಿಂದ ಅಂತರಿಕ್ಷದಲ್ಲಿರುವುದೆಂದು ಹೇಳಲಾಗುತ್ತದೆ. ಘನೀಭೂತವಾದ ಕ್ಷೀರೋದಕದ ಮೇಲೆ ೧॥ ಲಕ್ಷಯೋಜನದಲ್ಲಿರುವ ಶ್ವೇತದ್ವೀಪಕ್ಕೆ ಸಾಕ್ಷಾತ್‌ಭೂಸ್ಪರ್ಶವಿಲ್ಲವಾದರೂ, ಘನೀ-

ಭೂತಕ್ಷೀರ ದ್ವಾರಾ ಸಂಬಂಧವಿದೆ. ಆದ್ದರಿಂದ ಭಾಗವತತಾತ್ಪರ್ಯಕ್ಕೂ, ಬೃಹದಾರಣ್ಯಕ ಭಾಷ್ಯವಾಕ್ಯಕ್ಕೂ ವಿರೋಧವಿಲ್ಲವೆಂದು ತಿಳಿಯಬೇಕು.

## ಶ್ಲೋಕ ೧೬

**ಸ ವೈ ಮಹಾಭಾಗವತಃ ಪರೀಕ್ಷಿದ್ಯೇನಾಪವರ್ಗಾಖ್ಯಮದಭ್ರಬುದ್ಧಿಃ**
**ಜ್ಞಾನೇನ ವೈಯಾಸಕಿಶಬ್ದಿತೇನ ಭೇಜೇ ಖಗೇಂದ್ರಧ್ವಜಪಾದಮೂಲಮ್॥**

**ಅರ್ಥ:** ವೈಯಾಸಿಕಿಶಬ್ದಿತೇನ—ಶುಕಾಚಾರ್ಯರಿಂದ ಹೇಳಲ್ಪಟ್ಟ (ಭಾಗವತಶಾಸ್ತ್ರೋಪದೇಶದಿಂದ ಆದ) ಯೇನ ಜ್ಞಾನೇನ—ಯಾವ ಜ್ಞಾನದಿಂದ, ಅಪವರ್ಗಾಖ್ಯಂ—ಮೋಕ್ಷವೆಂದು ಕರೆಯಲ್ಪಡುವ, ಖಗೇಂದ್ರಧ್ವಜ ಪಾದಮೂಲಂ—ಗರುಡಧ್ವಜನ (ಶ್ರೀಹರಿಯ) ಪಾದಾಶ್ರಯವನ್ನು, ಭೇಜೇ—ಹೊಂದಿಸಲ್ಪಟ್ಟನೋ, ಸಃ ಅದಭ್ರಬುದ್ಧಿಃ—ಆ ಮಹಾಬುದ್ಧಿಶಾಲಿಯಾದ ಪರೀಕ್ಷಿತನೇ, ಮಹಾಭಾಗವತಃ ವೈ—ಮಹಾಭಗವದ್ಭಕ್ತನಲ್ಲವೇ!

## ಪದ ೧೩

ರಾಗ-ಕಾಂಬೋಧಿ; ತಾಳ-ರೂಪಕ

**ಜ್ಞಾನಸಾಧ್ಯವಾದ ಮುಖ್ಯಮುಕ್ತಿಸ್ಥಾನ**
**ಶ್ರೀನಾಥನಿಹ ವೈಕುಂಠವೆಂದು**
**ಯೇನಾಪವರ್ಗವೆಂಬ ಭಾಗವತೋಕ್ತಿ**
**ತಾನೆ ನಿರ್ಣಯಿಸಿ ಪೇಳಿತಲ** ॥೧॥

**ಅರ್ಥ:** ಜ್ಞಾನಸಾಧ್ಯವಾದ—ಭಗವಂತನ ಜ್ಞಾನದಿಂದಲೇ ಲಭ್ಯವಾದ, ಮುಖ್ಯಮುಕ್ತಿಸ್ಥಾನ—ಪ್ರಧಾನಮುಕ್ತಲೋಕವು, ಶ್ರೀನಾಥನಿಹ—ಲಕ್ಷ್ಮೀಪತಿಯು (ನಿತ್ಯಪ್ರಕಟನಾಗಿ) ವಾಸಿಸುವ, ವೈಕುಂಠವೆಂದು—ವೈಕುಂಠವೆಂಬುದನ್ನು, ಯೇನಾಪವರ್ಗಾಖ್ಯವೆಂಬ ಭಾಗವತೋಕ್ತಿ—**'ಯೇನಾಪವರ್ಗಾಖ್ಯಂ'** ಎಂಬ ಭಾಗವತದ ನುಡಿಯು, ತಾನೆ ನಿರ್ಣಯಿಸಿ ಪೇಳಿತಲ—ಸ್ವಯಂ ನಿಶ್ಚಯಿಸಿ ಹೇಳಿರುವುದಲ್ಲವೇ!

**ವಿಶೇಷಾಂಶ:** (೧) ಗರುಡಧ್ವಜನ ಪಾದಗಳು ತಪ್ಪದೇ ಸದಾ ದೊರೆಯುವ ಸ್ಥಳವೆಂದರೆ, ಅದು ವೈಕುಂಠವೇ. ಇದನ್ನೇ ಅಪವರ್ಗ ಅಥವಾ ಮೋಕ್ಷವೆಂದು ಭಾಗವತವು ಹೇಳುತ್ತದೆ.

(೨) **'ಜ್ಞಾನೇನೈವ ಅಮೃತೀಭವತಿ', 'ವಿದ್ಯಯಾಽಮೃತಮಶ್ನುತೇ'** ಇತ್ಯಾದಿ ಶ್ರುತಿಗಳು ಜ್ಞಾನದಿಂದಲೇ ಮೋಕ್ಷವೆಂದು ಹೇಳುತ್ತವೆ. **'ಸ್ನೇಹೋ ಭಕ್ತಿರಿತಿ ಪ್ರೋಕ್ತತಯಾ ಮುಕ್ತಿರ್ನಚಾನ್ಯಥಾ'** ಇತ್ಯಾದಿ ಪ್ರಮಾಣವಾಕ್ಯಗಳು ಭಕ್ತಿಯಿಂದಲೇ ಮೋಕ್ಷವೆಂದು ಹೇಳುತ್ತವೆ. ಈ ಉಭಯ ಪಂಗಡದ ವಾಕ್ಯ-ಗಳಲ್ಲಿ ಪರಸ್ಪರ ವಿರೋಧವಿಲ್ಲ, *'ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ-ಸರ್ವತೋಽಧಿಕಃ ಸ್ನೇಹೋ ಭಕ್ತಿಃ'* ಎಂದರೆ, ಜ್ಞಾನಪೂರ್ವಕವಾದ ಸ್ನೇಹವೇ ಭಕ್ತಿಯೆಂದು ಹೇಳಿರುವುದರಿಂದ, ಜ್ಞಾನದಿಂದ ಮೋಕ್ಷವೆಂದು ಹೇಳುವ ವಾಕ್ಯಗಳಲ್ಲಿ, ಭಕ್ತಿಯೇ ಜ್ಞಾನಶಬ್ದದಿಂದ ಹೇಳಲ್ಪಟ್ಟಿದೆಯೆಂದು ತಿಳಿಯಬೇಕು. *'ಜ್ಞಾನಸ್ಯ ಭಕ್ತಿಭಾಗತ್ವಾತ್ ಭಕ್ತಿರ್ಜ್ಞಾನಮಿತೀರ್ಯತೇ'* (ಅನುವ್ಯಾಖ್ಯಾನ) ಎಂಬಲ್ಲಿ ಜ್ಞಾನವೆಂಬುದು ಭಕ್ತಿಯ ಮುಖ್ಯಭಾಗವಾಗಿರುವುದರಿಂದ, ಭಕ್ತಿಯು ಜ್ಞಾನವೆಂದೇ ಕರೆಯಲ್ಪಡುವುದೆಂದು ನಿರ್ಣಯಿಸಲಾಗಿದೆ.

೩) ಮುಖ್ಯಮುಕ್ತಿಸ್ಥಾನವೆಂಬುದರಿಂದ ವೈಕುಂಠವು ಮುಖ್ಯಾಧಿಕಾರಿಗಳಿಂದ ಮಾತ್ರ ಪ್ರಾಪ್ಯವೆಂಬ ಪ್ರಮೇಯವು ಸೂಚಿತವಾಗಿದೆ. ಪದ ೧೨ರ ವಿಶೇಷಾಂಶವನ್ನು ಇಲ್ಲಿ ನೋಡಬಹುದು.

**ಇದೆ ಅಪವರ್ಗವೆಂದು ವ್ಯಾಸದೇವ ತಾನೊ-**
**ರೆದು ಪೇಳ್ದ ಹರಿಪದವೆ ಮೋಕ್ಷ**
**ಅಧಮವಾದಿಗಳಿಗೆ ಇದಕೇಳಿ ಚಿತ್ತದ**
**ಮದವಳಿವುದು ಏನಾಶ್ಚರ್ಯ** **॥೨॥**

**ಅರ್ಥ:** ಇದೆ ಅಪವರ್ಗವೆಂದು— ಇದೇ (ವೈಕುಂಠಪ್ರಾಪ್ತಿಯೇ) ಮೋಕ್ಷ-ವೆಂದು, ವ್ಯಾಸದೇವ— ಭಾಗವತವನ್ನು ರಚಿಸಿದ ವೇದವ್ಯಾಸರೂಪೀ ಶ್ರೀ-ಹರಿಯೇ, ತಾನೊರೆದು— ತಾನು ನಿಶ್ಚಯಿಸಿ, ಪೇಳ್ದ— ಹೇಳಿದನು; (ಆದ್ದ-ರಿಂದ) ಹರಿಪದವೆ— ಶ್ರೀಹರಿಯ ಸ್ಥಾನವೇ, ಮೋಕ್ಷ— ಮೋಕ್ಷವೆಂಬುದು; ಅಧಮವಾದಿಗಳಿಗೆ— ನೀಚವಾದಿಗಳಿಗೆ, ಇದ ಕೇಳಿ— ಇದನ್ನು ಕೇಳಿ, ಚಿತ್ತದ — ಮನಸ್ಸಿನ, ಮದವಳಿವುದು— ದುರಾಗ್ರಹಜನ್ಯ (ಬ್ರಹ್ಮೈಕ್ಯವೇ ಮೋಕ್ಷ-ವೆಂಬ) ಮದವು (ಗರ್ವವು) ನಷ್ಟಹೊಂದುವುದೆಂಬುದು, ಏನಾಶ್ಚರ್ಯ— ಏನೂ ಆಶ್ಚರ್ಯವಲ್ಲ.

**ನಾಡಖೋಡಿಗಳ ಅನುಶಾಸನವ ನಂಬುವ**
**ಮೂಢ, ಸರ್ವರ ಗುರುವೆನಿಪ**

**ಪ್ರೌಢರ್ಗೆ ಸಮ್ಮತವಾದ ವ್ಯಾಸನ ಮತ**
**ನೋಡಿ ಮನ್ನಿಸಿ ಮನ್ನಿಸದಿರೆ ನಗರೆ ॥೩॥**

**ಅರ್ಥ:** ನಾಡಖೋಡಿಗಳ — ಲೋಕದಲ್ಲಿ ದುರಹಂಕಾರಿಗಳಾದವರ, ಅನು-ಶಾಸನವ — ಉಪದೇಶಗಳನ್ನು, ನಂಬುವ — (ತನ್ನ ಹಿತಸಾಧಕವೆಂದು) ವಿಶ್ವಾಸ-ಮಾಡುವ, ಮೂಢ — ಹೇ ಅವಿವೇಕಿ, ಸರ್ವರ ಗುರುವೆನಿಪ — ಜಗದ್ಗುರು-ಗಳೆಂದು ಪ್ರಸಿದ್ಧರಾದ, ವ್ಯಾಸನ — ವೇದವ್ಯಾಸರ, ಪ್ರೌಢರ್ಗೆ — ಜ್ಞಾನಿಗಳಿಗೆ (ಬುದ್ಧಿಶಾಲಿಗಳಾದ ಅನುಭವಸ್ಥರಿಗೆ), ಸಮ್ಮತವಾದ — ಒಪ್ಪಿಗೆಯಾದ, ಮತ-ನೋಡಿ — ನಿರ್ಣಯಾತ್ಮಕ ಸಿದ್ಧಾಂತಗಳನ್ನು ವಿಚಾರಮಾಡಿ, ಮನ್ನಿಸಿ — ಗೌರವಿಸಿ, ಮನ್ನಿಸದಿರೆ — ಅಂಗೀಕರಿಸದಿದ್ದರೆ, ನಗರೆ — (ಜ್ಞಾನಿಗಳು ನಿನ್ನನ್ನು ಮೂರ್ಖನೆಂದು) ಅಪಹಾಸ್ಯಮಾಡುವುದಿಲ್ಲವೇ?

**ವಿಶೇಷಾಂಶ:** 'ನಾಡಖೋಡಿಗಳ ಅನುಶಾಸನವ ನಂಬುವ' ಎಂಬುದಕ್ಕೆ, ದೇಶವನ್ನಾಳುವ ದುರಹಂಕಾರಿಗಳಾದ ರಾಜರು ಅಥವಾ ಅಧಿಕಾರಿಗಳು ಅಥವಾ, ಪುಢಾರಿಗಳ ಆಜ್ಞೆಗಳನ್ನು ಪಾಲಿಸುವುದು ನಮ್ಮ ಹಿತಕ್ಕಾಗಿಯೇ ಎಂದು ನಂಬಿ ನಡೆಯುವ ನೀನು (ಲೌಕಿಕ ಕಾನೂನುಗಳನ್ನು ಪಾಲಿಸುವ ನೀನು); ಎಂಬ ಅರ್ಥವನ್ನೂ ತಿಳಿಯಬಹುದು. ಈ ಶಾಸನಗಳನ್ನು ಪಾಲಿ-ಸುವ ಅಜ್ಞಾನಿಯು ಸರ್ವಜ್ಞರಾದ ಶ್ರೀಬಾದರಾಯಣರ ಆಜ್ಞೆಗಳನ್ನು ಪಾಲಿಸಿ, ಇಹಪರಗಳ ಹಿತವನ್ನೇಕೆ ಸಾಧಿಸಿಕೊಳ್ಳಬಾರದೆಂಬ ಯುಕ್ತಿಯನ್ನೂ ಈ ನುಡಿಯಲ್ಲಿ ಗ್ರಹಿಸಬಹುದು.

**ಭೇಜೇ ಖಗೇಂದ್ರಧ್ವಜಪಾದಮೂಲವೆಂದು**
**ಆ ಜಗತ್ಖ್ಯಾತಭಾಗವತ**
**ಓಜೆಯಿಂದಲಿ ಪೇಳಿತಾಗೆ ಅನ್ಯರ ಮತ**
**ರಾಜಿಪುದೆಂತು ಸಭೆಯೊಳು ॥೪॥**

**ಅರ್ಥ:** ಭೇಜೇ ಖಗೇಂದ್ರಧ್ವಜಪಾದಮೂಲ ಎಂದು — *'ಭೇಜೇ-ಖಗೇಂದ್ರಧ್ವಜಪಾದಮೂಲಂ'* ಎಂಬುದಾಗಿ, ಆ ಜಗತ್ಖ್ಯಾತಭಾಗವತ — (ಸಕಲವೇದಾಂತಸಾರವೆಂದು) ಜಗತ್ತಿನಲ್ಲಿ ಪ್ರಸಿದ್ಧವಾದ ಭಾಗವತಪುರಾಣವು, ಓಜೆಯಿಂದಲಿ — ಪ್ರಬಲವಾಗಿ ಸಮರ್ಥಿಸಿ, ಪೇಳಿತಾಗೆ — ಹೇಳಿರುವುದ-ರಿಂದ, ಅನ್ಯರ ಮತ — (ಇದಕ್ಕೆ ವಿರುದ್ಧವಾಗಿ ಹೇಳುವ) ಇತರರ

ಅಭಿಪ್ರಾಯವು, ಸಭೆಯೊಳು—ವಾದಸಭೆಗಳಲ್ಲಿ, ರಾಜಿಪುದೆಂತು—ಶೋಭಿಸಬಹುದೇ?

**ವಿಶೇಷಾಂಶ:** *'ಸರ್ವವೇದಾಂತಸಾರಂ ಹಿ ಶ್ರೀಭಾಗವತಮಿಷ್ಯತೇ'*—ಶ್ರೀಭಾಗವತವು ಸಕಲ ಉಪನಿಷತ್ತುಗಳ (ಅಥವಾ ಬ್ರಹ್ಮಸೂತ್ರಗಳ) ಸಾರವೆಂದು, ಭಾಗವತದಲ್ಲಿಯೂ,

*'ಅರ್ಥೋಽಯಂ ಬ್ರಹ್ಮಸೂತ್ರಾಣಾಂ ಭಾರತಾರ್ಥವಿನಿರ್ಣಯಃ।*
*ಗಾಯತ್ರೀಭಾಷ್ಯರೂಪೋಽಸೌ ವೇದಾರ್ಥಪರಿಬೃಂಹಿತಃ॥'*

—ಶ್ರೀಭಾಗವತವು ಬ್ರಹ್ಮಸೂತ್ರಾರ್ಥಗಳನ್ನೇ (ಸದೃಷ್ಟಾಂತವಾಗಿ) ನಿರೂಪಿಸುತ್ತದೆ; ಭಾರತಾರ್ಥವನ್ನು ನಿರ್ಣಯಿಸಿ ಹೇಳುತ್ತದೆ; ವೇದಮಾತೆಯೆಂದು ಪ್ರಸಿದ್ಧವಾದ ಗಾಯತ್ರೀಮಂತ್ರದ ಭಾಷ್ಯದಂತಿದೆ; ಮತ್ತು ವೇದಾರ್ಥಗಳಿಂದ ತುಂಬಿದೆ; ಎಂದು ತಾತ್ಪರ್ಯದಲ್ಲಿ ಉದಾಹೃತವಾದ ಇತರ ಪ್ರಮಾಣಗಳೂ ಹೇಳುತ್ತವೆ. ಆದ್ದರಿಂದ ಭಾಗವತವು ಪರಮಪ್ರಮಾಣಗ್ರಂಥವಾಗಿದೆ. ಇದರಲ್ಲಿ ಉಕ್ತವಾಗುವ ಪ್ರಮೇಯಗಳಿಗೆ ವಿರುದ್ಧವಾದ ಯಾವ ವಾದಗಳೂ ಗ್ರಾಹ್ಯಗಳಲ್ಲ.

**ಪೇಳೆಲೊ ವಾದಿ ಖಗೇಂದ್ರಧ್ವಜಪಾದ-**
**ಮೂಲ ನಿನ್ನ ಮುಕ್ತಿಯೊಳುಂಟೆ**
**ಈ ಲಿಂಗ ಹರಿಲೋಕಕ್ಕೆ ಸಾಧಾರಣವೆಂದು**
**ಬಾಲಕರೆಲ್ಲ ಬಲ್ಲರಲ್ಲೆ ॥೫॥**

**ಅರ್ಥ:** ವಾದಿ—(ಬ್ರಹ್ಮೈಕ್ಯವೇ ಮೋಕ್ಷವೆಂದು ಸಾಧಿಸುವ) ವಾದಿಯೇ! ನಿನ್ನ ಮುಕ್ತಿಯೊಳು—ನೀನು ಹೇಳುವ ಮೋಕ್ಷದಲ್ಲಿ, ಖಗೇಂದ್ರಧ್ವಜಪಾದಮೂಲ—ಗರುಡಧ್ವಜನ ಪಾದಮೂಲವೆಂಬುದು, ಉಂಟೇ—ಇರುವುದೇ? ಪೇಳೆಲೊ—ಹೇಳೆಲವೊ ಮೂರ್ಖ! ಈ ಲಿಂಗ—ಈ (ಹರಿಪಾದಮೂಲವೆಂಬ) ಲಕ್ಷಣವು, ಹರಿಲೋಕಕ್ಕೆ—ವೈಕುಂಠಕ್ಕೆ, ಸಾಧಾರಣವೆಂದು—ಸಾಮಾನ್ಯವೆಂದು (ನಿತ್ಯಲೋಕವಾದ್ದರಿಂದ ಸದಾ ಇರುವುದೆಂದು), ಬಾಲಕರೆಲ್ಲ—(ಪುಣ್ಯಬಲದಿಂದ ಭರತಖಂಡದಲ್ಲಿ ಜನ್ಮವೆತ್ತಿದ) ಶಾಸ್ತ್ರಾಭ್ಯಾಸವಿಲ್ಲದ ಅಜ್ಞರು ಸಹ (ಎಲ್ಲರೂ), ಬಲ್ಲರಲ್ಲೆ—(ಸಂಸ್ಕಾರಬಲದಿಂದಲೇ) ತಿಳಿದಿರುವರು. (ಹೀಗಿರಲು ವೈಕುಂಠಪ್ರಾಪ್ತಿಯೂ ಮೋಕ್ಷವಲ್ಲೆಂದು ವಾದಿಸುವ ನೀನು ಹೆಚ್ಚಿನ ಅಜ್ಞಾನಿಯು—ಮೂರ್ಖನು).

**ಅಲ್ಲಿ ಕೃಷ್ಣನ ಪಾದಸೇವೆಯೇ ಕೈವಲ್ಯ-**
**ವಲ್ಲದೇ ಅವನೈಕ್ಯ ಸಲ್ಲ**
**ಎಲ್ಲರೂ ಬಲ್ಲರು ಹರಿಯ ಭೇದ-**
**ವಲ್ಲದೆ ಇಲ್ಲವೆಂಬುದನು** **॥೬॥**

**ಅರ್ಥ:** ಅಲ್ಲಿ—ಆ ವೈಕುಂಠದಲ್ಲಿ, ಕೃಷ್ಣನ ಪಾದಸೇವೆಯೇ—ಶ್ರೀಕೃಷ್ಣನ ಪಾದಸೇವೆಯೆಂಬುದೇ, ಕೈವಲ್ಯ—ಮೋಕ್ಷಾನಂದವು; ಅಲ್ಲದೇ—ಹೀಗಲ್ಲದೆ, ಅವನೈಕ್ಯ—ಶ್ರೀಕೃಷ್ಣನೊಂದಿಗೆ ಐಕ್ಯಹೊಂದುವುದೆಂಬುದು, ಸಲ್ಲ—ಕೂಡುವುದಿಲ್ಲ; ಹರಿಯ ಭೇದವಲ್ಲದೆ ಇಲ್ಲವೆಂಬುದನು—ಶ್ರೀಹರಿಯಿಂದ ಭೇದವಿಲ್ಲದೇ ಇಲ್ಲ (ಭೇದ ಇದ್ದೇ ಇದೆ), ಭೇದವೇ ಸರಿ; ಐಕ್ಯವಲ್ಲವೆಂಬುದನ್ನು, ಎಲ್ಲರೂ ಬಲ್ಲರು—ಎಲ್ಲರೂ ತಿಳಿದಿರುವರು (ಆದರೆ ನೀನು ಮಾತ್ರ, ಎಲ್ಲರ ಅನುಭವಕ್ಕೆ ವಿರುದ್ಧವಾದ ಐಕ್ಯವನ್ನು ಸಾಧಿಸಲು ವಾದಿಸುತ್ತಿರುವಿ).

**ವಿಶೇಷಾಂಶ:** ವೈಕುಂಠದಲ್ಲಿ ಶ್ರೀಕೃಷ್ಣನ ಪಾದಸೇವೆಯೇ ಆನಂದವು—ಅದಕ್ಕೆ ಅನ್ಯಫಲವಿಲ್ಲ. ಅಲ್ಲಿ ಮುಕ್ತರು ಮಾಡುವ, ಅಧ್ಯಯನ-ಧ್ಯಾನ-ಅರ್ಚನ-ಕೀರ್ತನ-ನರ್ತನಗಳು, ಸಾಧನಗಳಲ್ಲಿ ಸಿದ್ಧವಾದ ಆನಂದರೂಪ-ಕ್ರಿಯೆಗಳೇ ಆಗಿವೆ.

*'ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ।*
*ನ ತು ಸಾಧನರೂಪಾ ಸಾ ಸಿದ್ಧಿರೇವಾತ್ರ ಸಾ ಯತಃ॥* (ಭಾಷ್ಯ)

ಎಂದೂ, *'ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನ ತು ಸಾಧನಂ'* (ನ್ಯಾಯ-ವಿವರಣ) ಎಂದೂ, ಹೇಳಲಾಗಿದೆ. ಇವುಗಳ ಅರ್ಥವೇನೆಂದರೆ: ಅತ್ರ—ಮುಕ್ತಸ್ಥಾನಗಳಲ್ಲಿ, ಹರೇಃ—ಶ್ರೀಹರಿಯ, ಉಪಾಸನಾ—ಅರ್ಚನಾದಿರೂಪದ ಸೇವೆಯು, ಸದೈವ—ಎಲ್ಲ ಕಾಲದಲ್ಲಿ, ಸುಖರೂಪಿಣೀ—ಸುಖರೂಪ-ವಾದುದೇ, ಸಾ—ಆ ಉಪಾಸನೆಯು, ಸಾಧನರೂಪಾ ನ ತು—(ಅನ್ಯಫಲ-ವನ್ನು ದೊರಕಿಸುವ) ಸಾಧನರೂಪವಾದುದು ಅಲ್ಲವೇ ಅಲ್ಲ; ಯತಃ—ಯಾವ ಕಾರಣದಿಂದ, ಅತ್ರ—ಅಲ್ಲಿ, ಸಿದ್ಧಿರೇವ—ಸಿದ್ಧಿಯೇ (ಫಲರೂಪವೇ) ಆಗಿರುವುದೋ, (ಆದ್ದರಿಂದ ಸಾಧನವಲ್ಲ). ಮುಕ್ತಾನಾಂ-ಮುಕ್ತರು ಮಾಡುವ, ಭಕ್ತಿಶ್ಚ—ಹರಿಭಕ್ತಿಯೂ ಸಹ, ಸುಖರೂಪೈವ—ಸುಖರೂಪವಾದುದೇ, ಸಾಧನಂ ನ ತು—ಸಾಧನವಲ್ಲವೇ ಅಲ್ಲ (ಭಕ್ತಿಯಿಂದ ಸಾಧಿಸಲಾಗುವ ಅನ್ಯಫಲವಿಲ್ಲ).

**ಖಗೇಂದ್ರನಾಮವೇ ಅದ್ವೈತತರತಮಭಾವ**
**ಬಗೆಯರುಪಿತು ಪಾದಪದುಮ**
**ಭಗವಂತನ ಸಾಕಾರನೆಂದು ಪೇಳಿತು ವ್ಯಾಸೋ-**
**ಕ್ತಿಗೆ ಕಾಮಧೇನೂಕ್ತಿ ಪ್ರತಿಯೇ** ॥೭॥

**ಅರ್ಥ:** ಖಗೇಂದ್ರನಾಮವೇ—'ಖಗೇಂದ್ರ' ಎಂಬ ಶಬ್ದವೇ ('ಭೇಜೇ-ಖಗೇಂದ್ರಧ್ವಜಪಾದಮೂಲಂ' ಎಂಬಲ್ಲಿರುವ ಖಗೇಂದ್ರಶಬ್ದವೇ), ಅದ್ವೈತ ತರತಮಭಾವಬಗೆಯ—ಅದ್ವೈತ (ಜೀವಬ್ರಹ್ಮೈಕ್ಯವಾದ) ಮತ್ತು ತಾರತಮ್ಯ ಮತಗಳ ಪ್ರಕಾರವನ್ನು (ಅವುಗಳಲ್ಲಿ ಯಾವುದು ಸರಿಯೆಂಬ ನಿರ್ಣಯ-ವನ್ನು), ಅರುಪಿತು—ಹೇಳಿತು; ಪಾದಪದಮ—**'ಪಾದ'** ಎಂಬ (ಪಾದ-ಪದ್ಮ) ಶಬ್ದವು, ಭಗವಂತನ—ಶ್ರೀಹರಿಯನ್ನು, ಸಾಕಾರನೆಂದು—(ಕರ-ಚರಣಾದಿ ಅವಯವಗಳುಳ್ಳ) ದಿವ್ಯರೂಪವುಳ್ಳವನೆಂದು, ಪೇಳಿತು—ಹೇಳಿತು; ವ್ಯಾಸೋಕ್ತಿಗೆ—ಶ್ರೀವೇದವ್ಯಾಸರ ನುಡಿಗೆ, ಕಾಮಧೇನೂಕ್ತಿ—ಪಶುನುಡಿಯು, ಪ್ರತಿಯೇ—ವಿರೋಧಿಯೇ? (ಎದುರು ನಿಲ್ಲಬಹುದೇ!)

**ವಿಶೇಷಾಂಶ:** (೧) 'ಖಗೇಂದ್ರಧ್ವಜಪಾದಮೂಲಂ' ಎಂಬ ಭಾಗವ-ತೋಕ್ತಿಯು, ತಾರತಮ್ಯಸಹಿತವಾದ ಜೀವಬ್ರಹ್ಮರ ಭೇದಜ್ಞಾನವೇ ಮೋಕ್ಷ-ಸಾಧಕ ಯಥಾರ್ಥಜ್ಞಾನವೆಂದು ನಿರ್ಣಯಿಸುತ್ತದೆನ್ನುತ್ತಾರೆ. ಖಗೇಂದ್ರನೆಂದರೆ ಪಕ್ಷಿರಾಜನಾದ ಗರುಡನು. ಅವನನ್ನು ವಾಹನವಾಗುಳ್ಳವನು ಶ್ರೀಹರಿ. ಗರುಡನೇ ಧ್ವಜವಾಗುಳ್ಳವನೆಂದರೆ, ಚಿಹ್ನೆ ಮತ್ತು ಲಾಂಛನವಾಗುಳ್ಳವ-ನೆಂದರ್ಥ. ಗರುಡನ ಆಗಮನವು ಶ್ರೀಹರಿಯ ಆಗಮನಸೂಚಕವು, ದೇಹಾಖ್ಯವೃಕ್ಷವನ್ನಾಶ್ರಯಿಸಿರುವ **'ಖಗ'**ನು ಜೀವನು. 'ಖಗೇಂದ್ರ' ಎಂಬ ಶಬ್ದವು ಜೀವರಲ್ಲಿ ತಾರತಮ್ಯವುಂಟೆಂಬುದನ್ನೂ ತಿಳಿಸುತ್ತದೆ. **ಇಂದ್ರನೆಂದರೆ** ಶ್ರೇಷ್ಠನು—ಉತ್ತಮನು. ಇವನು ಉತ್ತಮನೆನ್ನಲು, ಅನ್ಯರಿರಬೇಕಲ್ಲವೇ? ಇರುವವನು ಒಬ್ಬನೇ ಆದರೆ, ಅವನನ್ನು ಉತ್ತಮನೆಂದು ಕರೆಯಲಾಗುವು-ದಿಲ್ಲ. ಇಬ್ಬರಿದ್ದರೂ ಅಲ್ಲ—ಅನೇಕರಿರಬೇಕು. ತರ-ತಮಗಳಲ್ಲಿ **'ತಮ'** ಪ್ರತ್ಯಯವನ್ನು ಆಗಲೇ ಉಪಯೋಗಿಸುವುದು. ಆದ್ದರಿಂದ ತಾರತಮ್ಯಭಾವ-ಸಹಿತರಾದ ಅನೇಕ ಜೀವರಿರುವರೆಂದು ಸಿದ್ಧವಾಗುತ್ತದೆ. ಇಂತಿರುವ ಖಗೇಂದ್ರನನ್ನು ವಾಹನವಾಗಿ ಉಪಯೋಗಿಸಿ ಮೆರೆಯುವವನು, ಅವನಿಗಿಂತ ಉತ್ತಮನಲ್ಲವೆ? ಖಗೇಂದ್ರನೆಂದರೆ ಜೀವೋತ್ತಮನಾದ ವಾಯುದೇವನೂ

ಅಹುದು. ಶ್ರೀಹರಿಗೆ ಆತನೇ ಮುಖ್ಯವಾಹನನು—ಗರುಡನನ್ನೂ ಮೀರಿಸಿದ ವೇಗ ಮತ್ತು ಸಾಮರ್ಥ್ಯಗಳುಳ್ಳವನು. ಹೀಗೆ ತಾರತಮ್ಯಸಹಿತವಾದ ಸರ್ವೋತ್ತಮತ್ವವನ್ನು ಶ್ರೀಹರಿಗೆ ಸಾಧಿಸಿಕೊಡುತ್ತದೆ 'ಖಗೇಂದ್ರಧ್ವಜಪಾದ' ಶಬ್ದ. ಪಾದಶಬ್ದವು ಉತ್ತಮರ ಸ್ವರೂಪವಾಚಕವಾಗಿರುವಂತೆ, ಗಮನ-ಸಾಧನವಾದ ಕಾಲುಗಳೆಂಬ ಅವಯವವನ್ನು ಹೇಳುತ್ತದೆ. ಪಾದವುಳ್ಳವ-ನೆಂದರೆ (ಉಪಲಕ್ಷಣದಿಂದ) ಕರ-ಶಿರ, ಭುಜ ಮೊದಲಾದ ಅವಯವ-ಗಳಿಂದ ಸಹಿತವಾದ ಆಕಾರವುಳ್ಳವನೆಂದೂ ಸಿದ್ಧವಾಗುತ್ತದೆ. *ಏವಂ ಚ* ಅಭೇದವಾದಿಗಳು ಹೇಳುವಂತೆ ನಿರಾಕಾರನಲ್ಲವೆಂದೂ ಭಾಗವತದ ಇದೇ ಪದವು ಸಾಧಿಸಿಕೊಡುತ್ತದೆ.

(೨) ಜೀವ-ಜೀವ ಭೇದ, ಜೀವ-ಜಡ ಭೇದ, ಜಡ-ಜಡ ಭೇದಗಳು, ಅಜ್ಞಾನಿಗಳಿಗೆ ಸಹ ಅನುಭವದಿಂದ ಸಿದ್ಧವಾಗಿದೆ. ವಿಚಾರಪರರಾದವರಿಗೆ, ಈ ಜೀವಜಡಾತ್ಮಕ ಪ್ರಪಂಚದ ಸೃಷ್ಟ್ಯಾದಿ ಕಾರ್ಯಗಳು, ಅದ್ಭುತಶಕ್ತಿಯುಳ್ಳ ಒಬ್ಬ ಸ್ವತಂತ್ರಸರ್ವಜ್ಞನಿಂದಲೇ ಸಾಧ್ಯವೆಂದೂ, ತೋರದಿರುವುದಿಲ್ಲ. ಸರ್ವಶಕ್ತನಾದ ಈ ಈಶ್ವರನ ಅಸ್ತಿತ್ವ ಮತ್ತು ಮಹಿಮೆಗಳ ಯಥಾರ್ಥ-ಜ್ಞಾನವು, ವೇದಾದಿ ಆಗಮಗಳನ್ನುಳಿದು ಬೇರಾವ ಪ್ರಮಾಣಗಳಿಂದಲೂ ಲಭಿಸುವುದಿಲ್ಲ; ಮತ್ತು ಸರ್ವಾಪೇಕ್ಷಿತವಾದ ನಿತ್ಯನಿರ್ದುಃಖಾನಂದಸ್ಥಿತಿಯನ್ನು (ಮೋಕ್ಷವನ್ನು) ಹೊಂದುವ ಸಾಧನಗಳಾವುವೆಂಬುದೂ ಸಿದ್ಧವಾಗುವುದಿಲ್ಲ. ಆಗಮಗಳು, ಮಾಯಾವಾದತತ್ವವೆಂಬ ಜೀವಬ್ರಹ್ಮೈಕ್ಯವನ್ನು ನಿಷೇಧಿಸಿ ಭೇದವನ್ನೇ ಸಾರುತ್ತವೆ. ಆಗಮಗಳಲ್ಲಿ **'ಐಕ್ಯ'**ವೆಂಬ ಶಬ್ದದ ಪ್ರಯೋಗವು ಅಲ್ಲಲ್ಲಿ ಕಂಡುಬರುತ್ತದೆ. ಆದರೆ, ಅದು, ಜೀವಬ್ರಹ್ಮರ ಐಕ್ಯವನ್ನು (ಅವರು ಅಭಿನ್ನರೆಂಬ ಭಾವವನ್ನು) ಹೇಳುವುದಿಲ್ಲ. ಶ್ರುತಿವಾಕ್ಯಗಳೇ **'ಐಕ್ಯ'**ಶಬ್ದದ ತಾತ್ಪರ್ಯವನ್ನು ವಿವರಿಸುತ್ತವೆ. ನಿದರ್ಶನಾರ್ಥವಾಗಿ ಪರಮಶ್ರುತಿಯ ಒಂದು ವಾಕ್ಯವನ್ನು ಇಲ್ಲಿ ಉದಾಹರಿಸಲಾಗುತ್ತದೆ:

*'ಜೀವಸ್ಯ ಪರಮೈಕ್ಯಂ ತು ಬುದ್ಧಿಸಾರೂಪ್ಯಮೇವ ತು*
*ಏಕಸ್ಥಾನನಿವಾಸೋ ವಾ ವ್ಯಕ್ತಿಸ್ಥಾನಮಪೇಕ್ಷ್ಯ ಸಃ।*
*ನ ಸ್ವರೂಪೈಕತಾ ತಸ್ಯ ಮುಕ್ತಸ್ಯಾಪಿ ವಿರೂಪತಃ*
*ಸ್ವಾತಂತ್ರ್ಯಪೂರ್ಣತೇಽಲ್ಪತ್ವಪಾರತಂತ್ರ್ಯೇವಿರೂಪಿತೇ।'*

**ಅರ್ಥ:** ಜೀವಸ್ಯ—ಮುಕ್ತಜೀವನಿಗೆ, ಪರಮೈಕ್ಯಂ ತು—ಪರಮಾತ್ಮನಿಂದ ಐಕ್ಯವೆಂಬುದಾದರೋ, ಬುದ್ಧಿಸಾರೂಪ್ಯಮೇವ ತು—ಪರಮಾತ್ಮನ ಇಚ್ಛಾನು-

ರೂಪ ಇಚ್ಛೆಯುಳ್ಳವನೆಂಬುದೇ ಆಗಿದೆ; ವಾ— ಮತ್ತು, ಏಕಸ್ಥಾನನಿವಾಸಃ— ಒಂದೆಡೆಯಲ್ಲಿ ವಾಸವಾಗಿರುವಿಕೆಯು (ಸ್ಥಾನೈಕ್ಯವು); [ಜೀವಪರಮಾತ್ಮರಲ್ಲಿ ಸ್ಥಾನೈಕ್ಯವು ಸರ್ವದಾ ಸರ್ವತ್ರ ಇರುತ್ತದೆ— ಅವರು ನಿತ್ಯಸಖರು— ಅವರಲ್ಲಿ ವಿಯೋಗವೆಂಬುದು ಇಲ್ಲವೇ ಇಲ್ಲ; ಎಂದರೆ], ಸಃ— ಐಕ್ಯಭಾವವು, ವ್ಯಕ್ತಿ ಸ್ಥಾನಮಪೇಕ್ಷ್ಯ— ನಿತ್ಯವ್ಯಕ್ತವಾಗಿರುವ ಸ್ಥಾನದ (ಮುಕ್ತಧಾಮದ) ವಿವಕ್ಷೆ-ಯಿಂದ, ಕೂಡುತ್ತದೆ. (ಜೀವನೊಂದಿಗೆ ನಿತ್ಯವೂ ಇರುವ ಈಶ್ವರನು, ಜೀವ-ನಿಗೆ ನಿತ್ಯವ್ಯಕ್ತನಲ್ಲ ); ತಸ್ಯ— ಜೀವನಿಗೆ, ಮುಕ್ತಸ್ಯಾಪಿ— ಮುಕ್ತನಿಗೂ ಸಹ, ನ ಸ್ವರೂಪೈಕತಾ— ಸ್ವರೂಪದಿಂದ ಐಕ್ಯವಿಲ್ಲ (ಉಭಯರ ಸ್ವರೂಪಗಳೂ ಒಂದೇ ಅಲ್ಲ); (ಏಕೆಂದರೆ), ವಿರೂಪತಃ— ವಿರುದ್ಧಸ್ವರೂಪಧರ್ಮಗಳುಳ್ಳವರಾದ್ದ-ರಿಂದ; (ಅವು ಯಾವುವೆಂದರೆ), ಸ್ವಾತಂತ್ರ್ಯಪೂರ್ಣತೇ— ಸ್ವಾತಂತ್ರ್ಯ ಮತ್ತು ಪೂರ್ಣತ್ವಗಳು (ಶ್ರೀಹರಿಯ ಸ್ವರೂಪಧರ್ಮಗಳು), ಅಲ್ಪತ್ವಪಾರತಂತ್ರ್ಯೇ — ಅಲ್ಪತ್ವ ಮತ್ತು ಪಾರತಂತ್ರ್ಯಗಳು, ವಿರೂಪಿತೇ— ವಿರುದ್ಧಧರ್ಮಗಳಾಗಿವೆ.

(೩) **'ಕಾಮಧೇನೂಕ್ತಿ'**— ಎಂಬಲ್ಲಿನ ಕಾಮಧೇನು ಶಬ್ದವು ಅಪಹಾಸಕರ-ವಾಗಿ ಇಲ್ಲಿ ಉಪಯೋಗಿಸಲಾಗಿದೆ. ಕಾಮಧೇನು, ಗೋರೂಪವುಳ್ಳದ್ದು. ಗೋವು, ಪಶುಜಾತಿಗೆ ಸೇರಿದ್ದು, ಕಾಮಧೇನುವಿಗೆ ಮೋಕ್ಷಕೊಡುವ ಸಾಮರ್ಥ್ಯವೇ ಇಲ್ಲ. ಅದರಂತೆ, ನಿತ್ಯಸುಖರೂಪದ ಮೋಕ್ಷಕ್ಕೆ ಎಷ್ಟೂ ಸಾಧನವಾಗದ, ಪ್ರತ್ಯುತ ದುಃಖಮಯವಾದ ತಮಸ್ಸಿಗೇ ಕಾರಣವಾಗುವ, ಜೀವ ಬ್ರಹ್ಮೈಕ್ಯ— ಪರಮಾತ್ಮನಿಗೆ ನಿರ್ಗುಣತ್ವ ನಿರಾಕಾರತ್ವಾದಿಗಳನ್ನು ಹೇಳುವ ಮಾಯಾವಾದಿಯ ಉಪದೇಶವೂ, ಪಶುಸಮಾನನಾದ ಮೂರ್ಖನ ಮಾತಿನಂತೆ, ಎಂದು ತಾತ್ಪರ್ಯ.

## ಶ್ಲೋಕ ೧೭

**ನ ವರ್ತತೇ ಯತ್ರ ರಜಸ್ತಮಸ್ತಯೋ-**
**ಸ್ಸತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ।**
**ನ ಯತ್ರ ಮಾಯಾ ಕಿಮುತಾಪರೇ ಹರೇ-**
**ರನುವ್ರತಾ ಯತ್ರ ಸುರಾಸುರಾರ್ಚಿತಾಃ॥**

**ಅರ್ಥ:** ಯತ್ರ, ಯಾವ ಮುಕ್ತ ಲೋಕಗಳಲ್ಲಿ, ರಜಃ— ರಜೋಗುಣವೂ, ತಮಃ— ತಮೋಗುಣವೂ, ತಯೋಃ ಮಿಶ್ರಂ ಸತ್ವಂ ಚ— ಅವುಗಳಿಂದ

ಮಿಶ್ರಿತವಾದ ಸತ್ವಗುಣವೂ (ಶುದ್ಧ ಸತ್ವದ ಇರುವಿಕೆಗೆ ವಿರೋಧವಿಲ್ಲೆಂದೂ ಸೂಚಿತ). ನ ವರ್ತತೇ — ಇರುವುದಿಲ್ಲವೋ, ನ ಚ ಕಾಲವಿಕ್ರಮಃ — ಕಾಲದ ಸಾಮರ್ಥ್ಯವೂ ಇಲ್ಲವೋ, ಯತ್ರ ಮಾಯಾ ನ — ಎಲ್ಲಿ ತ್ರಿಗುಣಾತ್ಮಕ ಪ್ರಕೃತಿಯೇ ಇಲ್ಲವೋ (ಒಂದೊಂದು ಗುಣವಿಲ್ಲದಿದ್ದರೂ, ತ್ರಿಗುಣಾತ್ಮಕವಾದುದು ಇರಬಹುದೆಂಬ ಸಂಶಯಕ್ಕೂ ಅವಕಾಶವಿಲ್ಲ), ಕಿಮುತ ಅಪರೇ — ಪ್ರಕೃತಿವಿಕಾರಗಳಿಲ್ಲ ಎಂಬುದು ಸುತರಾಂ ಸಿದ್ಧವೋ — (ವಿಕಾರಗಳಿಲ್ಲವೆಂದು ಹೇಳಲೇನು?), ಯತ್ರ — ಎಲ್ಲಿ, ಸುರಾಸುರಾರ್ಚಿತಾಃ — ದೇವತೆಗಳು (ಸುರರು) ಮತ್ತು ತತ್ವಾಭಿಮಾನಿದೇವತೆಗಳು (ಅಸುರರು) ಸ್ವಾವರರಿಂದ ಯಥಾಯೋಗ್ಯವಾಗಿ ಸೇವಿಸಲ್ಪಡುವರೋ, ಹರೇರನುವ್ರತಾಃ — (ಈ ಎಲ್ಲರೂ), ಶ್ರೀಹರಿಯ ಸೇವಕರಾಗಿರುವರೋ, (ಇಂತಹ ಮುಕ್ತ ಲೋಕವನ್ನು ಶ್ರೀಹರಿಯು ಚತುರ್ಮುಖನಿಗೆ ಅನುಗ್ರಹಿಸಿ, ದರ್ಶನ ಮಾಡಿಸಿದನು). ಹೀಗೆ ಮುಕ್ತಲೋಕವನ್ನು ಭಾಗವತ ದ್ವಿತೀಯಸ್ಕಂಧದಲ್ಲಿ ವರ್ಣಿಸಲಾಗಿದೆ.

## ಪದ ೧೪

ರಾಗ-ನಾದನಾಮಕ್ರಿಯೆ; ತಾಳ-ರೂಪಕ

**ಮುಕ್ತಿಯೊಳಿಹ ಭೇದ ಸತ್ಯವೆಂಬುದು ಸಿದ್ಧ**
**ಮತ್ತ ನ ಯತ್ರ ಮಾಯಾ ಎಂಬ**
**ಯತ್ರ ಭಾಗವತೋಕ್ತಿ ಮುಕ್ತರ ಭೇದವ**
**ಸತ್ಯವನೆ ಸ್ಥಾಪಿಸಿತಲಾ** ॥೧॥

**ಹರೇರನುವ್ರತಾ ಯತ್ರ ಎಂದು ಸ್ಮೃತಿ**
**ನಿರುಪಿಸಿತು ಹರಿಯ ಭೇದ**
**ಪರಮಾರ್ಥಸತ್ಯ ನಿನಗು ವಾದಿ ಆ ಮಾಯೆ**
**ಇರದೆ ಕಲ್ಪಿತವಹುದೇ** ॥೨॥

**ಈಷನ್ಮಾಯೆ ಇರೆ ಯತ್ರ ಮಾಯಾ ನೇತಿ**
**ವ್ಯಾಸನ ಸಾಮಾನ್ಯನಿಷೇಧ**
**ಪುಸಿಕೂಡುವುದು ಪುಟ್ಟೊಂದು ಘಟವಿರಲು**
**ನಾಸ್ತ್ಯತ್ರ ಘಟವೆಂದು ನುಡಿವುದೇ** ॥೩॥

**ನಿನ್ನಿಚ್ಛೆಗೆ ಬೇಕಾದರ್ಥವ ಪೇಳ್ವದೆ ಶಬ್ದ**
**ತನ್ನ ಶಕ್ಯವಾದರ್ಥವನೆ**
**ಎನ್ನಬಹುದೈಸೆ ತುಹಿನಪದ ವಹ್ನಿಯ**
**ವಹ್ನಿತ್ರಯಕೂಡಿ ನುಡಿವುದೇ ॥೪॥**

**ಅರ್ಥ:** ಮುಕ್ತಿಯೊಳಗಿಹ— ಮುಕ್ತಿಯಲ್ಲಿರುವ, ಭೇದ— ಭೇದವು, ಸತ್ಯ-ವೆಂಬುದು— ಸತ್ಯವೆಂದು ಹೇಳುವುದು, ಸಿದ್ಧ— ಶಾಸ್ತ್ರಸಿದ್ಧವಾಗಿದೆ. ಮತ್ತ— ಎಲೋ ಉನ್ಮತ್ತವಾದಿಯೇ! 'ನ ಯತ್ರ ಮಾಯಾ' ಎಂಬ— 'ನ ಯತ್ರ ಮಾಯಾ' ಎಂಬುದೂ, 'ಯತ್ರ' ಭಾಗವತೋಕ್ತಿ— 'ಯತ್ರ ಸುರಾಸುರಾ-ರ್ಚಿತಾಃ' ಎಂಬ ಭಾಗವತವಾಕ್ಯವೂ, ಮುಕ್ತರ ಭೇದವ— ಮುಕ್ತರು ಪರಸ್ಪರ ಮತ್ತು ಶ್ರೀಹರಿಯಿಂದ ಭಿನ್ನರೆಂಬುದನ್ನು ಹೇಳಿ, ಸತ್ಯವನೆ— (ಶಾಸ್ತ್ರಸಿದ್ಧ) ಸತ್ಯವನ್ನೇ, ಸ್ಥಾಪಿಸಿತಲಾ— ದೃಢಪಡಿಸಿತು, ನೋಡು! ॥೧॥

ಹರೇರನುವ್ರತಾ ಯತ್ರ ಎಂದು ಸ್ಮೃತಿ— 'ಹರೇರನುವ್ರತಾಃ' ಹರಿಯ ಸೇವಕರು ಯಾವ ವೈಕುಂಠದಲ್ಲಿರುವರೋ ಎಂದು ಭಾಗವತವು ಹೇಳಿ, ಹರಿಯ ಭೇದ— (ಮುಕ್ತರಿಂದ) ಹರಿಯ ಭೇದವನ್ನು, ಪರಮಾರ್ಥಸತ್ಯ— ಮೋಕ್ಷದಲ್ಲಿ ಸಹ ಸತ್ಯವೆಂದು (ಪರಮಸತ್ಯವೆಂದು), ನಿರುಪಿಸಿತು— ನಿರೂಪಿಸುತ್ತದೆ. ವಾದಿ— ಹೇ ಮಾಯಾವಾದಿಯೇ! ನಿನಗು— ನಿನ್ನ ಮತ-ದಂತೆ ಹೇಳುವ, ಆ ಮಾಯೆ— ನೀನು ಹೇಳುವ ಮಾಯೆಯು, ಇರದೆ— ನಿನಗೇ ಇದೆಯಲ್ಲದೇ, ಕಲ್ಪಿತವಹುದೆ— ಮಿಥ್ಯೆಯಾಗಬಲ್ಲದೇ! **ಅಥವಾ,** ಆ ಮಾಯೆ— 'ಅಲ್ಲಿ ಮಾಯೆಯಿಲ್ಲ' ಎಂದು ಭಾಗವತವು ಹೇಳಿದ ಮಾಯೆಯು, ಕಲ್ಪಿತವಹುದೇ— ಉಕ್ತಿಗೆ ವಿರುದ್ಧವಾಗಿ ಕಲ್ಪನೆಯೆನ್ನಬಹುದೇ? ॥೨॥

[ವೈಕುಂಠವೆಂಬುದು ಸಗುಣಮುಕ್ತಿ, ನಿರ್ಗುಣಮುಕ್ತಿಯೆಂಬ ಬ್ರಹ್ಮೈಕ್ಯವಲ್ಲ; ಸಗುಣಮುಕ್ತಿಯಲ್ಲಿ ಮಾಯೆಯು ಕಿಂಚಿತ್ ಇದೆ— ಸಂಸಾರಾವಸ್ಥೆಯಲ್ಲಿರು-ವಷ್ಟು ಬಂಧಕವಲ್ಲ, ಎಂದು ಹೇಳುವಿಯಾದರೆ], ಈಷನ್ಮಾಯೆಯಿದೆ— ಸ್ವಲ್ಪ ಮಾಯೆಯಿದ್ದರೆ, ಯತ್ರ ಮಾಯಾ ನೇತಿ— ಎಲ್ಲಿ ಮಾಯೆಯಿಲ್ಲವೋ ಎಂಬ, ವ್ಯಾಸನ— ಶ್ರೀವ್ಯಾಸರ (ಭಾಗವತ ಕರ್ತೃಗಳ), ಸಾಮಾನ್ಯನಿಷೇಧ— ಮಾಯೆಯೇ ಇಲ್ಲವೆಂಬ (ಸಾಮಾನ್ಯ) ನಿಷೇಧವಾಕ್ಯವು, ಪುಸಿಕೂಡುವುದು — ಸುಳ್ಳೆಂದಾಗುತ್ತದೆ; ಪುಟ್ಟೊಂದು— ಸಣ್ಣದಾದ ಒಂದು, ಘಟವಿರಲು—

ಘಟವು ಇರುತ್ತಿರಲು, ನಾಸ್ತ್ಯತ್ರ ಘಟವೆಂದು— ಇಲ್ಲಿ ಘಟವಿಲ್ಲೆಂದು, ನುಡಿ-ವುದೇ — ಹೇಳಬಹುದೇ? ॥೩॥

ಶಬ್ದ— ಶಬ್ದವು, ನಿನ್ನಿಚ್ಛೆಗೆ— ನಿನ್ನ ಮನಸ್ಸಿಗೆ, ಬೇಕಾದರ್ಥವ— ತೋರುವ ಅರ್ಥವನ್ನು, ಪೇಳ್ವದೆ— ಹೇಳುವುದೇ? (ಇಲ್ಲ); ತನ್ನ ಶಕ್ಯವಾದರ್ಥವನೆ— ತನ್ನ ಮುಖ್ಯವೃತ್ತಿಯ ಅರ್ಥವನ್ನೇ, ಎನ್ನಬಹುದು— ಹೇಳುತ್ತದೆನ್ನಬಹುದು, ಐಸೆ— ಹೀಗೆಂಬುದೇ ಸರಿಯಷ್ಟೆ; (ಮುಖ್ಯವೃತ್ತಿಯನ್ನು ಬಿಟ್ಟು, ಶಬ್ದವು ಯಾವ ಅರ್ಥವನ್ನಾದರೂ ಹೇಳಬಹುದೆಂದರೆ), ತುಹಿನಪದ— **'ತುಹಿನ'** (=ಮಂಜು) ಎಂಬ ಶಬ್ದವು, **ವಹ್ನಿಯ**— ಅಗ್ನಿಯನ್ನು, ವಹ್ನಿತ್ರಯಕೂಡಿ — ವಹ್ನಿ, ವಹ್ನಿ, ವಹ್ನಿ ಎಂದು ಮೂರಾವರ್ತಿ ಸಾರಿದರೂ, ನುಡಿವುದೇ — ಹೇಳುವುದೇ? (ತುಹಿನವೆಂದರೆ **ವಹ್ನಿ** ಎಂದು ಮೂರಾವರ್ತಿ ಘೋಷಿಸಿ-ದರೆ, ಅದು ತುಹಿನಶಬ್ದದ ಅರ್ಥವಾದೀತೇ? ಸರ್ವಥಾ ಸಾಧ್ಯವಿಲ್ಲ.) ॥೪॥

**ವಿಶೇಷಾಂಶ:** (೧) ೨ನೇ ನುಡಿಯಲ್ಲಿ **'ಸ್ಮೃತಿ ನಿರುಪಿಸಿತು'** ಎಂಬಲ್ಲಿ ಪ್ರಸಕ್ತವಾದ ಸ್ಮೃತಿಯು, ಶ್ರೀಮದ್ಭಾಗವತವು. ಸ್ಮೃತಿಗ್ರಂಥಗಳೂ, ವೇದಾರ್ಥ-ಗಳನ್ನೇ ಪ್ರತಿಪಾದಿಸುವುವಾದ್ದರಿಂದ, ಪ್ರಮಾಣಗಳೇ. ಆಗಮವು ಅಪೌರು-ಷೇಯ ಮತ್ತು ಪೌರುಷೇಯ ಭೇದದಿಂದ, ಎರಡು ಪ್ರಕಾರವಾದುದು. ಶ್ರುತಿಗಳು ಅಪೌರುಷೇಯ— ಯಾರೊಬ್ಬರಿಂದ ರಚಿತವಾದುವಲ್ಲ ಮತ್ತು ಅನಾದಿ ನಿತ್ಯ. ಪುರಾಣ, ಇತಿಹಾಸ, ಧರ್ಮಶಾಸ್ತ್ರಾದಿ ವೇದಾನುಸಾರಿ ಗ್ರಂಥ-ಗಳು ಪುರುಷಕೃತವಾದುವು ಮತ್ತು ಅನಿತ್ಯ; ಆದರೂ ಪ್ರಮಾಣಗಳು. ಶ್ರೀಮದ್ಭಾಗವತವೂ ಸ್ಮೃತಿಯು; ನಾರಾಯಣಾವತಾರರಾದ ಶ್ರೀವೇದವ್ಯಾಸ-ರಿಂದ ರಚಿತವಾದುದು.

*'ಶ್ರುತಿರ್ವಾ ವ ನಿತ್ಯಾ ಅನಿತ್ಯಾ ವಾ ವ ಸ್ಮೃತಯೋ*
*ಯಾಶ್ಚಾನ್ಯಾ ವಾಚಃ'* (ಪೈಂಗಿಶ್ರುತಿ)

— 'ಶ್ರುತಿಗಳೇ ನಿತ್ಯವಾದವು, ಸ್ಮೃತಿಗಳು ಮತ್ತು ಇತರ ಸಮಸ್ತವಾಕ್ಯಗಳೂ ಅನಿತ್ಯವಾದವುಗಳು' ಎಂದು ಶ್ರುತಿಯೇ ಹೇಳುತ್ತದೆ.

*'ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ*
*ಸರ್ಗೇ ಸರ್ಗೇಽಮುನೈವೈತ ಉದ್ಗೀರ್ಯಂತೇ ತಥೈವ ಚ।*
*ಪುರಾಣಾನಿ ತದರ್ಥಾನಿ ಸರ್ಗೇ ಸರ್ಗೇಽನ್ಯಥೈವ ತು*
*ಕ್ರಿಯಂತೇಽತಸ್ತ್ವನಿತ್ಯಾನಿ ತದರ್ಥಾಃ ಪೂರ್ವಸರ್ಗವತ್॥'*

ಪುರಾಣಾನಾಮನ್ಯಥಾಶಬ್ದ ರಚನಮೇವಾನಿತ್ಯತ್ವಂ' (ವಿಷ್ಣುತತ್ವ ನಿರ್ಣಯ) ಎಂಬ ವಾಕ್ಯಗಳಿಂದ ಮೇಲಿನ ಶ್ರುತ್ಯರ್ಥವು ವಿವರಿಸಲ್ಪಟ್ಟಿದೆ.

**ಅರ್ಥ:** ಸಮಸ್ತವೇದಗಳೂ ನಿತ್ಯ. ಏಕಪ್ರಕಾರದಿಂದ ವಿಷ್ಣುಬುದ್ಧಿಸ್ಥ-ವಾಗಿರುತ್ತವೆ; ಪ್ರತಿಸೃಷ್ಟಿಕಾಲದಲ್ಲಿ ಆತನಿಂದಲೇ, ಇದ್ದಂತೆ ಉಚ್ಚರಿಸಲ್ಪಟ್ಟು ಪ್ರಕಟವಾಗುತ್ತವೆ. ವೇದಾರ್ಥಗಳನ್ನೇ ಹೇಳುವ ಪುರಾಣಾದಿಗಳು ಹಿಂದಿನ ಕಲ್ಪಗಳಂತೆಯೇ ಇರುತ್ತವೆ. ಆದರೆ ಅರ್ಥತಃ ಏಕಪ್ರಕಾರವಾಗಿದ್ದು ಶಬ್ದರಚನೆ-ಯಿಂದ ಭಿನ್ನಪ್ರಕಾರವಾಗಿರುತ್ತವೆ. ಆದ್ದರಿಂದಲೇ ಅವು ಅನಿತ್ಯಗಳೆನಿಸುತ್ತವೆ.

(೨) ಶಕ್ಯವಾದ ಅರ್ಥವೆಂದರೆ ಶಬ್ದದ ಮುಖ್ಯವೃತ್ತಿಯಿಂದ ತಿಳಿದು ಬರುವ (ಹೇಳಲ್ಪಡುವ) ಅರ್ಥ. ಶಬ್ದಗಳ ಅರ್ಥಪ್ರತಿಪಾದನ ರೀತಿಗಳು (ವ್ಯಾಪಾರಗಳು—ವೃತ್ತಿಗಳು) ನಾನಾಪ್ರಕಾರವಾಗಿವೆ. ಪರಮಮುಖ್ಯವೃತ್ತಿ, ಮುಖ್ಯವೃತ್ತಿ, ಅಮುಖ್ಯವೃತ್ತಿಗಳೆಂಬುವು ಶಬ್ದಪ್ರವೃತ್ತಿಯ ಪ್ರಧಾನವಿಭಾಗಗಳು. ಪರಮಮುಖ್ಯವೃತ್ತಿಯಿಂದ ಎಲ್ಲ ಶಬ್ದಗಳೂ ವಿಷ್ಣುವಾಚಕಗಳು (ವಿಷ್ಣುವೆಂಬ ಅರ್ಥವುಳ್ಳವುಗಳು); ಮುಖ್ಯವೃತ್ತಿಯೆಂಬುದು, ರೂಢಿ-ಯೋಗ—ಯೋಗ-ರೂಢಿ, ಎಂದು ತ್ರಿವಿಧವಾಗಿರುವುದು. ಅಮುಖ್ಯವೃತ್ತಿಯು, ಲಕ್ಷಣಾ-ಗೌಣೀ-ಉಪಚಾರ-ರೂಢೋಪಚಾರ-ರೂಢಲಕ್ಷಣಾ ಇತ್ಯಾದಿ ವಿಭಾಗಗಳುಳ್ಳದ್ದು. ಪ್ರಕೃತ, ಮುಖ್ಯವೃತ್ತಿಯನ್ನು ಗಮನಿಸುವಾ: ಪ್ರಯೋಗಬಾಹುಲ್ಯವು ರೂಢಿ. ಗೋ, ಘಟ ಮೊದಲಾದ ಶಬ್ದಗಳಂತೆ, ಆಯಾ ವಸ್ತುವಾಚಕಗಳಾಗಿರುತ್ತವೆ. ಶಬ್ದವು ತನ್ನ ಅವಯವಗಳಿಂದಲೇ ವಸ್ತುನಿರ್ದೇಶಮಾಡುವುದು ಯೋಗವು. ಪಾಚಕ-ವಾಹಕ ಇತ್ಯಾದಿಗಳಂತೆ; ಯೋಗರೂಢಿ ಎಂಬುದು ಪಂಕಜಶಬ್ದ-ದಂತೆ, ಪಂಕೇ—ಕೆಸರಿನಲ್ಲಿ, ಜ—ಹುಟ್ಟಿದ್ದು (ಇದು ಶಬ್ದದ ಅವಯವಾರ್ಥ —ಯೋಗ), ಆದರೆ ನೀರಿನಲ್ಲಿ ಹುಟ್ಟುವ ಇನ್ನೂ ಅನೇಕ ವಸ್ತುಗಳಿದ್ದಾಗ್ಯೂ; **ಪಂಕಜ ಶಬ್ದವು** ಕಮಲದಲ್ಲಿಯೇ ರೂಢಿಯಿಂದ ಉಪಯೋಗಿಸಲಾಗುತ್ತದೆ. ಆದ್ದರಿಂದ ಇದನ್ನು **'ಯೋಗರೂಢಿ'** ಎನ್ನುವರು. ಹೀಗೆ ತ್ರಿವಿಧವಾಗಿರುವ ಮುಖ್ಯ ವೃತ್ತಿಯು **'ಶಕ್ತಿ'** ಎಂದೂ ಕರೆಯಲ್ಪಡುತ್ತದೆ. ಶಕ್ತಿಯಿಂದ ತಿಳಿದು-ಬರುವ ಅರ್ಥವನ್ನೇ **'ಶಕ್ಯಾರ್ಥ'**ವೆಂದೂ ಕರೆಯುವರು. ಪ್ರಬಲಕಾರಣ-ಗಳಿಲ್ಲದೆ ಮುಖ್ಯವೃತ್ತಿ ಅಥವಾ ಶಕ್ಯಾರ್ಥವನ್ನು ತ್ಯಜಿಸತಕ್ಕದ್ದಲ್ಲವೆಂಬುದು ಸರ್ವವಾದಿಗಳಿಂದ ಅಂಗೀಕರಿಸಲ್ಪಟ್ಟಿದೆ.

(೩) 'ಮಾಯಾ' ಶಬ್ದವು ಅನೇಕಾರ್ಥಗಳುಳ್ಳದ್ದು.

*'ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ।*
*ಪ್ರಕೃತಿರ್ವಾಸನೇತ್ಯೇವ ತವೇಚ್ಛಾಽನಂತ ಕಥ್ಯತೇ॥'* (ಸ್ಕಾಂದ)

— ಎಂಬಲ್ಲಿ, ಮಹಾಮಾಯಾ, ಅವಿದ್ಯಾ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ, ಎಂಬ ಶಬ್ದಗಳೂ ಭಗವದಿಚ್ಛೆಯನ್ನೇ ಹೇಳುತ್ತವೆಂದು ಹೇಳಲಾಗಿದೆ.

ಅಂದರೆ: ಮಾಯಾ, ಅವಿದ್ಯಾ, ಪ್ರಕೃತಿ, ವಾಸನಾ ಇತ್ಯಾದಿ ಶಬ್ದಗಳು ಸಮಾನಾರ್ಥಕಗಳೆಂದು (ಪರ್ಯಾಯಪದಗಳೆಂದು) ತಿಳಿದುಬರುತ್ತದೆ. **'ಮಾಯಾ'** ಶಬ್ದದಿಂದ ಬೋಧ್ಯಗಳಾದ ಯಾವ ವಸ್ತುವೂ ವೈಕುಂಠದಲ್ಲಿಲ್ಲ. ಭಗವದಿಚ್ಛೆಯೂ ಮುಕ್ತಜೀವರಿಗೆ ಬಂಧಕವಲ್ಲ; ಅವರ ಇಚ್ಛೆಗಳೆಲ್ಲವೂ ಸರ್ವದಾ ಭಗವದಿಚ್ಛಾನುಸಾರಿಗಳೇ ಆಗಿರುವುದರಿಂದ.

(೪) ೨ನೇ ನುಡಿಯಲ್ಲಿ **'ಹರಿಯ ಭೇದ ಪರಮಾರ್ಥ ಸತ್ಯ'** ಎಂದಿರುವರು. ಮಾಯಾವಾದದಂತೆ ಸತ್ಯವೆಂಬುದು ಮೂರು ಪ್ರಕಾರವಾದುದು. ಹಗ್ಗದಲ್ಲಿ ಭ್ರಮಕಾಲದಲ್ಲಿ ಕಾಣುವ ಸರ್ಪವು, **ಪ್ರಾತಿಭಾಸಿಕಸತ್ಯ;** ಎಂದರೆ ತತ್ಕಾಲದಲ್ಲಿ ತೋರಿ, ನಂತರ ಅದಲ್ಲವೆಂಬ ಜ್ಞಾನಕ್ಕೆ ವಿಷಯವಾಗುವುದು. ಇನ್ನು, ಜೀವಬ್ರಹ್ಮೈಕ್ಯಜ್ಞಾನವಾಗುವವರೆಗೆ ತೋರುತ್ತಿದ್ದು, ನಾನಾ ವ್ಯವಹಾರಗಳಿಗೆ ಅವಕಾಶವನ್ನು ಕೊಡುವ ಪ್ರಪಂಚವನ್ನು, **ವ್ಯಾವಹಾರಿಕ ಸತ್ಯ**ವೆನ್ನುವರು. ತ್ರಿಕಾಲಗಳಲ್ಲಿ ಏಕಪ್ರಕಾರವಾಗಿ ಜ್ಞಾನಗೋಚರವಾಗುವ ವಸ್ತು ಮಾತ್ರ **ಪಾರಮಾರ್ಥಿಕಸತ್ಯ**ವೆನಿಸುವುದು. ವೈಕುಂಠವು ತ್ರಿಕಾಲಗಳಲ್ಲಿ ಏಕಪ್ರಕಾರವಾಗಿರುವ ನಿತ್ಯಲೋಕವು. ಜೀವೋತ್ತಮರಾದ (ಜ್ಞಾನಿಶ್ರೇಷ್ಠರಾದ) ಅಮುಕ್ತ ಬ್ರಹ್ಮ-ವಾಯುಗಳು ಸೃಷ್ಟಿಕಾಲದಲ್ಲಿ ಸಹ ಭಗವದನುಗ್ರಹದಿಂದ ಮುಕ್ತಲೋಕವನ್ನು ಕಂಡಿದ್ದಾರೆ. ಪ್ರಳಯಾನಂತರವೂ, ಮುಂದೆ ಎಲ್ಲ ಕಾಲದಲ್ಲಿ ಇರುವುದನ್ನಾಗಿ, ಅನಾದಿಕಾಲದಿಂದ ಅಲ್ಲಿರುವ ಮುಕ್ತಜೀವರು ಕಾಣುತ್ತಲೇ ಇದ್ದಾರೆ. ವೈಕುಂಠವು ಪರಮಾರ್ಥಸತ್ಯತ್ವವುಳ್ಳದ್ದಾದ್ದರಿಂದಲೂ, ಅಲ್ಲಿ ಮಾಯೆಯೆಂಬುದಿಲ್ಲವೆಂದೂ, ಜೀವರು ಪರಸ್ಪರ ಮತ್ತು ಶ್ರೀಹರಿಯಿಂದ ಭಿನ್ನರೇ ಆಗಿರುವರೆಂದೂ ಭಾಗವತಸ್ಮೃತಿಯು ಹೇಳುವುದರಿಂದ, ಭೇದವನ್ನು ಪರಮಾರ್ಥಸತ್ಯವೆಂದು ಒಪ್ಪಲೇಬೇಕೆಂಬ ಯುಕ್ತಿಯನ್ನು ವಿವರಿಸುವರೆಂದು ತಿಳಿಯಬೇಕು.

## ಶ್ಲೋಕ ೧೮

**ತನ್ಮಧ್ಯೇ ನಗರೀ ದಿವ್ಯಾ ಸಾಽಯೋಧ್ಯೇತಿ ಪ್ರಕೀರ್ತಿತಾ।**
**ಆರೂಢಯೌವನೈರ್ನಿತ್ಯಾ ದಿವ್ಯನಾರೀನರೈರ್ಯುತಾ॥**

**ಅರ್ಥ:** ತನ್ಮಧ್ಯೇ—ವೈಕುಂಠಲೋಕದ ಮಧ್ಯದಲ್ಲಿ, ದಿವ್ಯಾ ನಗರೀ—ದಿವ್ಯನಗರಿಯಿದೆ (ಶ್ರೀಹರಿಯ ಆವಾಸವಿದೆ); ಸಾ—ಆ ನಗರಿಯು, ಆಯೋಧ್ಯಾ ಇತಿ ಪ್ರಕೀರ್ತಿತಾ—**ಅಯೋಧ್ಯೆಯೆಂಬ** ಪ್ರಸಿದ್ಧನಾಮವುಳ್ಳದ್ದು; ನಿತ್ಯಾ—(ಅದು) ಎಲ್ಲ ಕಾಲದಲ್ಲಿರತಕ್ಕದ್ದು; ಆರೂಢಯೌವನೈಃ—ನಿತ್ಯ-ತಾರುಣ್ಯವುಳ್ಳ, ದಿವ್ಯನಾರೀನರೈಃ—ಮುಕ್ತಸ್ತ್ರೀಪುರುಷರಿಂದ, ಯುತಾ—ಕೂಡಿದೆ.

## ಪದ ೧೫

ರಾಗ-ವಸಂತಭೈರವಿ; ತಾಳ-ರೂಪಕ

**ರನ್ನಕೆತ್ತಿಸಿದ ಚಿನ್ನದೊಳು ಕೋಟೆ**
**ಮನ್ಮಥನಯ್ಯನ ಪುರಿಗೆ**
**ತನ್ಮಧ್ಯದಲಿ ಅಯೋಧ್ಯವೆಂಬ ನಗರಿ ಸು-**
**ವರ್ಣಗೋಪುರದಲೊಪ್ಪಿಹವು** ॥೧॥

**ಸಿರಿದೇವಿ ತಾನೆ ಮುರಹರನ ಪಟ್ಟಣದೊಳು**
**ಪರಿಪರಿಯ ಮನೆಯ ರೂಪದಲ್ಲಿ**
**ಮಿರಿಮಿರನೆ ಮಿಂಚುವಳು ಹಚ್ಚಪ್ರಕೃತಿಯಿಂದ**
**ವಿರಚಿತಗೃಹಗಳೊಪ್ಪಿಹವು** ॥೨॥

**ಅರ್ಥ:** ಮನ್ಮಥನಯ್ಯನ ಪುರಿಗೆ—ಶ್ರೀಹರಿಯ ರಾಜಧಾನಿಗೆ, ರನ್ನ ಕೆತ್ತಿಸಿದ—ರತ್ನಖಚಿತವಾದ, ಚಿನ್ನದೊಳು—ಸುವರ್ಣನಿರ್ಮಿತವಾದ, ಕೋಟೆ—ಕೋಟೆಯಿದೆ; ತನ್ಮಧ್ಯದಲಿ—(ಆ ವಿಶಾಲವಾದ ರಾಜಧಾನಿಯ) ಆ ಪುರಿಯ ಮಧ್ಯದಲ್ಲಿ, ಅಯೋಧ್ಯವೆಂಬ—ಅಯೋಧ್ಯೆಯೆಂದು ಕರೆಯಲ್ಪ-ಡುವ, ನಗರಿ—ನಗರಿಯಿದೆ; (ರಾಜಗೃಹಗಳಿರುವ—ಅರಮನೆಗಳಿರುವ ಆ ನಗರಿಯು), ಸುವರ್ಣ ಗೋಪುರದಲಿ—ಸುವರ್ಣರಚಿತ ಗೋಪುರಗಳಿಂದ, ಒಪ್ಪಿಹವು—(ರಾಜಗೃಹಗಳು) ಶೋಭಿಸುತ್ತವೆ. ॥೧॥

ಮುರಹರನ—ಶ್ರೀಹರಿಯ, ಪಟ್ಟಣದೊಳು—ನಗರಿಯಲ್ಲಿ, ಶಿರಿದೇವಿ—ಶ್ರೀಮಹಾಲಕ್ಷ್ಮಿಯೇ, ತಾನೆ—ಸ್ವಯಂ (ಸಾಕ್ಷಾತ್ತಾಗಿ), ಪರಿಪರಿಯ—ನಾನಾವಿಧದ, ಮನೆಯ ರೂಪದಲ್ಲಿ—ಗೃಹಗಳ (ಅರಮನೆಗಳ) ರೂಪದಿಂದ, ಮಿರಿಮಿರನೆ—ಥಳಥಳ, ಮಿಂಚುವಳು—ಪ್ರಕಾಶಿಸುತ್ತಾಳೆ; ಹಚ್ಚಪ್ರಕೃತಿಯಿಂದ—ತನ್ನ ಶುದ್ಧ ಸ್ವರೂಪದಿಂದ, ವಿರಚಿತ—ಆಕೆಯೇ ನಿರ್ಮಿಸಿದ, ಗೃಹಗಳೊಪ್ಪಿಹವು—ಸುಂದರವಾದ ಗೃಹಗಳಿವೆ; **ಅಥವಾ** (ವೈಕುಂಠಲೋಕದಲ್ಲಿ), ಹಚ್ಚಪ್ರಕೃತಿಯಿಂದ—ಶುದ್ಧಸತ್ವದಿಂದ, ವಿರಚಿತ—ನಿರ್ಮಿತವಾದ, ಗೃಹಗಳೊಪ್ಪಿಹವು—(ಮುಕ್ತರ) ಗೃಹಗಳು ವಿರಾಜಿಸುತ್ತವೆ.

**ವಿಶೇಷಾಂಶ:** (೧) ಪುರಿ—ವಿಶಾಲವಾದ ರಾಜಧಾನಿ. ನಗರ—ಅನೇಕ ರಾಜಗೃಹಗಳಿರುವ ಪುರಿಯ ಮಧ್ಯಭಾಗ. ಪಟ್ಟಣ ನಗರ ಶಬ್ದಗಳು ಸಮಾನಾರ್ಥಕಗಳಾಗಿ ಉಪಯೋಗಿಸಲ್ಪಟ್ಟಿವೆ.

(೨) ಮನ್ಮಥನಯ್ಯ—ಮನ್ಮಥನನ್ನು ಪುತ್ರನನ್ನಾಗಿ ಪಡೆದವನು; ಮುರಹರ—ಮುರನಾಮಕ ದೈತ್ಯನನ್ನು ಕೊಂದವನು; ಈ ಶಬ್ದಗಳಿಂದ ಪ್ರಸಿದ್ಧನಾದವನು **ಶ್ರೀಕೃಷ್ಣನಷ್ಟೆ!** ವೈಕುಂಠಾಧಿಪತಿಯು, ಶ್ರೀಕೃಷ್ಣನಿಂದ ಅತ್ಯಂತ ಅಭಿನ್ನನೆಂದು ಸೂಚಿಸುತ್ತವೆಂದು ತಿಳಿಯಬೇಕು. ***'ಕೃಷ್ಣೋ ಇಜ್ಯತೇ ವೀತಮೋಹೈಃ'*** —ಮುಕ್ತರಿಂದ ಶ್ರೀಕೃಷ್ಣನೇ ಪೂಜಿಸಲ್ಪಡುತ್ತಾನೆಂದೂ ಹೇಳಲ್ಪಟ್ಟಿದೆ.

(೩) ವೈಕುಂಠಪುರದ ಮಧ್ಯದಲ್ಲಿರುವ, ಅನೇಕ ರಾಜಗೃಹಗಳಿಂದ (ವಿಹಾರ-ಶಯ್ಯಾ-ಆಸನ-ಭೋಜನ ಇತ್ಯಾದಿಗಳಿಗಾಗಿ ಏರ್ಪಟ್ಟ) ವಿಶಾಲವಾದ ನಗರವು **ಅಯೋಧ್ಯೆ** ಎಂಬ ಇನ್ನೊಂದು ಅನ್ವರ್ಥನಾಮವುಳ್ಳದ್ದು. ಶ್ರೀಹರಿಯ ಇಚ್ಛೆಯಿಲ್ಲದೆ—ಅನುಮತಿಯಿಲ್ಲದೇ ಯಾರೂ (ಮುಕ್ತಬ್ರಹ್ಮಾದಿಗಳು ಸಹ) ಪ್ರವೇಶಿಸಲು ಅವಕಾಶವಿಲ್ಲದ ನಗರಿಯದು. ಇಚ್ಛೆಗೆ ವಿರುದ್ಧವಾಗಿ ಯಾರೂ ಪ್ರವೇಶಿಸಲು ಸಮರ್ಥರಲ್ಲವೆಂದು ಹೇಳಲೇನು! ಈ ವೈಕುಂಠನಗರಕ್ಕೆ ಸದೃಶವಾಗಿದ್ದುದರಿಂದಲೇ, ಶ್ರೀಹರಿಯು ರಾಮಾವತಾರದಲ್ಲಿ ವಾಸಿಸಿದ ನಗರವೂ **'ಅಯೋಧ್ಯೆ'**ಯೆಂದೇ ಪ್ರಸಿದ್ಧವಾಯಿತು.

### ಶ್ಲೋಕ ೧೯

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ॥**

**ಅರ್ಥ:** ಇದು ಗೀತಾ ೧೫ನೇ ಅಧ್ಯಾಯದ ಶ್ಲೋಕವು. ತತ್—ಆ ವೈಕುಂಠಲೋಕವು, ಮಮ ಪರಮಂ ಧಾಮ—ನನ್ನ ಸರ್ವೋತ್ಕೃಷ್ಟವಾದ ಲೋಕವು; ತತ್—ಅದನ್ನು, ಸೂರ್ಯಃ—ಸೂರ್ಯನು, ನ ಭಾಸಯತೇ—ಪ್ರಕಾಶಗೊಳಿಸುವುದಿಲ್ಲ; ಶಶಾಂಕಃ ನ—ಚಂದ್ರನೂ ಪ್ರಕಾಶಗೊಳಿಸುವುದಿಲ್ಲ; ಯದ್ಗತ್ವಾ—ಯಾವ ಲೋಕವನ್ನು ಹೊಂದಿದವರು, ನ ನಿವರ್ತಂತೇ—(ಇತರ) ಭೂಮ್ಯಾದಿ ಲೋಕಗಳಿಗೆ—ಪ್ರಾಕೃತದೇಹವಾಸಕ್ಕೆ) ತಿರಿಗಿ ಬರುವುದಿಲ್ಲವೋ, ಅದೇ ನನ್ನ ಪರಮಧಾಮವು.

**ಪದ ೧೬**

ರಾಗ-ಕೇದಾರಗೌಳ; ತಾಳ-ಆದಿ

**ಅನರ್ಘ್ಯರತುನಮಂದಿರಗಳೊಳುಪ್ಪರಿಗೆಗಳ**
**ಬಣ್ಣಿಸಲೆನ್ನಳವಲ್ಲ**
**ರತ್ನದ ದ್ವಾರಪ್ರಾಕಾರಕಾಂತಿಗೆ-**
**ತ್ತನ್ನಲೋಡುವುದಂಧಕಾರ** ॥೧॥

**ಅರ್ಥ:** ಅನರ್ಘ್ಯರತುನಮಂದಿರಗಳೊಳುಪ್ಪರಿಗೆಗಳ—ಅನರ್ಘ್ಯವಾದ (ಬೆಲೆಕಾಣದ) ರತ್ನನಿರ್ಮಿತ ಗೃಹಗಳನ್ನು, ಅವುಗಳಲ್ಲಿರುವ (ನಾನಾವೈಭವ-ಯುತ) ಉಪ್ಪರಿಗೆಗಳನ್ನೂ, ಬಣ್ಣಿಸಲು—ವರ್ಣಿಸಲು, ಎನ್ನಳವಲ್ಲ—ನನ್ನ ಕೈಲಾಗದು (ನನ್ನ ಯೋಗ್ಯತೆ ಮೀರಿದುದು); ರತ್ನದ ದ್ವಾರ—ರತ್ನನಿರ್ಮಿತ-ದ್ವಾರಗಳ, ಪ್ರಾಕಾರಕಾಂತಿಗೆ—ಪ್ರಾಕಾರಗಳ (ಸುತ್ತಲಿರುವ ಗೋಡೆಗಳ) ಪ್ರಕಾಶಕ್ಕೆ, ಅಂಧಕಾರ—ಕತ್ತಲೆಯು, ಎತ್ತನ್ನಲೋಡುವುದು—ಎಲ್ಲಿಯೋ ಓಡಿಹೋಗುತ್ತದೆ.

**ಅಯುತಾರ್ಕಸಮಪ್ರಭೆಯೆಂಬ ಪಂಚರಾತ್ರ**
**ಭಯವಿಲ್ಲದಚ್ಯುತನ ಪುರವ**
**ಪ್ರಿಯದಿಂದ ಕೊಂಡಾಡಿತಾಗಿ ಈ ಪುರ ಕತ್ತ-**
**ಲೆಯ ಕೆಡಿಸಿದೊಂದರಿದೇ** ॥೨॥

**ಅರ್ಥ:** ಅಯುತಾರ್ಕಸಮಪ್ರಭೆಯೆಂಬ—'ಅಯುತಾರ್ಕಸಮಪ್ರಭಂ' ಹತ್ತುಸಾವಿರ ಸೂರ್ಯರ ಪ್ರಕಾಶದಂತೆ ಪ್ರಕಾಶವುಳ್ಳದ್ದೆಂದು ಹೇಳುವ **'ಪಂಚರಾತ್ರ'** ಆಗಮವು, ಭಯವಿಲ್ಲದಚ್ಯುತನ ಪುರವ—ಸರ್ವದಾ ಸರ್ವ-

ಪ್ರಕಾರದ ಭಯಗಳಿಂದ ರಹಿತವಾದ (ಅತ ಏವ **'ಅಭಯಸ್ಥಾನ'**ವೆಂದು ಪ್ರಸಿದ್ಧವಾದ), ಶ್ರೀಹರಿಪುರವನ್ನು, ಪ್ರಿಯದಿಂದ—ಸಂತೋಷದಿಂದ, ಕೊಂಡಾಡಿತಾಗಿ—ಸ್ತುತಿಸುವುದರಿಂದ, ಕತ್ತಲೆಯ—ಕತ್ತಲೆಯನ್ನು (ತಮಸ್ಸನ್ನು —ಅಂಧಕಾರವನ್ನು), ಕೆಡಿಸಿದೊಂದರಿದೇ—ಓಡಿಸಿತೆಂಬುದರಲ್ಲಿ ಆಶ್ಚರ್ಯ-ವೇನಿದೆ!

**ವಿಶೇಷಾಂಶ:** 'ವಾಪೀಕೂಪತಟಾಕೈಶ್ಚ ವೃಕ್ಷಷಂಡೈಃಸುಮಂಡಿತಮ್।
ಅಪ್ರಾಕೃತಂ ಸುರೈರ್ವಂದ್ಯಂ **ಅಯುತಾರ್ಕಸಮಪ್ರಭಮ್**॥'

ಎಂದು ಮುಕ್ತಲೋಕವು (ವೈಕುಂಠವು) ವರ್ಣಿತವಾಗಿದೆ. ನಾನಾ ಜಲಾಶಯ-ಗಳಿಂದಲೂ, ವಿವಿಧವಿಚಿತ್ರವೃಕ್ಷಗಳಿಂದಲೂ ಅಲಂಕೃತವಾದ ವೈಕುಂಠವು ತ್ರಿಗುಣಾತ್ಮಕವಾದ ಪ್ರಕೃತಿಯಿಂದ ರಹಿತವಾದುದೂ, ದೇವತೆಗಳಿಂದ ಸ್ತುತ್ಯ-ವಾದುದೂ, (೧೦,೦೦೦ ಅಥವಾ) ಅಸಂಖ್ಯಸೂರ್ಯರ ಕಾಂತಿಗೆ ಹೋಲುವ ಅಮಿತಪ್ರಕಾಶವುಳ್ಳದ್ದೂ ಆಗಿದೆ, ಎಂಬುದು ಉದಾಹೃತವಾಕ್ಯದ ತಾತ್ಪರ್ಯ.

**ನಾಲ್ಕು ದಿಕ್ಕುಗಳಲ್ಲಿ ಬಾಗಿಲ ಸಾಲ್ಗಳು**
**ಚೌಕಶುದ್ಧವಾದ ಕೋಟೆಯೊಳಗೆ**
**ಲೋಕಪಾಲಕರ ಮನ್ನಣೆಯಿಂದಲಲ್ಲಿಗೆ**
**ಶ್ರೀಕಾಂತನೊಮ್ಮೊಮ್ಮೆ ಬಾಹ** ॥೩॥

**ಅರ್ಥ:** ನಾಲ್ಕುದಿಕ್ಕುಗಳಲ್ಲಿ—ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ, ಬಾಗಿಲ ಸಾಲ್ಗಳು—ದ್ವಾರಗಳ ಸಾಲುಗಳು, ಚೌಕಶುದ್ಧವಾದ ಕೋಟೆಯೊಳಗೆ—ಚಚ್ಚೌಕವಾದ (ಉದ್ದ—ಅಗಲಗಳಲ್ಲಿ ಸ್ವಲ್ಪವೂ ವ್ಯತ್ಯಾಸವಿಲ್ಲದ ಅಥವಾ ಪವಿತ್ರವಾದ) ಕೋಟೆಗೋಡೆಗಳಲ್ಲಿರುವುವು; ಲೋಕಪಾಲಕರ—ಇಂದ್ರಾದಿ-ದೇವತೆಗಳ, ಮನ್ನಣೆಯಿಂದಲಿ—ಪ್ರಾರ್ಥನೆಯಿಂದ, (ಅವರಿಗೆ ತನ್ನ ದಿವ್ಯ-ಸಂದರ್ಶನವನ್ನೀಯಲು), ಅಲ್ಲಿಗೆ—ಆ ದ್ವಾರಗಳ ಬಳಿ, ಶ್ರೀಕಾಂತ—ಲಕ್ಷ್ಮೀ-ಪತಿಯು, ಒಮ್ಮೊಮ್ಮೆ—ಒಂದೊಂದು ವೇಳೆ (ಆಗಾಗ), ಬಾಹ—ಬರುವನು.

**'ಸ ಏನಾನ್ ಬ್ರಹ್ಮ ಗಮಯತಿ'ಯೆಂಬ ಶ್ರುತಿ**
**ನಯದಿಂದ ನಿರ್ಣೈಸಿತಾಗಿ**
**ಪ್ರಿಯವಾದ ಲಿಂಗದೇಹ ಜೀವನ್ಮುಕ್ತರು**
**ಜಯಜಯವೆನ್ನುತ್ತಿಹರಲ್ಲಿ** ॥೪॥

**ಅರ್ಥ:** '*ಸ ಏನಾನ್ ಬ್ರಹ್ಮ ಗಮಯತಿ*'ಯೆಂಬ ಶ್ರುತಿ—ಎಂದರೆ, ಆ ವಾಯುದೇವನು ಜೀವನ್ಮುಕ್ತಜೀವರನ್ನು (ಸಾಧನಪರಿಪೂರ್ತಿಗೊಂಡ ಜೀವರನ್ನು) ಬ್ರಹ್ಮನನ್ನು ಹೊಂದಿಸುವನೆಂದು ಹೇಳುವ ಶ್ರುತಿಯು, ನಯದಿಂದ —ನ್ಯಾಯಬದ್ಧವಾಗಿ, ನಿರ್ಣೈಸಿತಾಗಿ—ನಿರ್ಣಯಿಸಿರುವುದರಿಂದ, ಪ್ರಿಯವಾದ—ಅನಾದಿಕಾಲದಿಂದ ತಮ್ಮೊಂದಿಗಿದ್ದು ಆವರೆಗೆ (ಅಭಿಮಾನತ್ಯಾಗಪರ್ಯಂತ) ತಮಗೆ ಪ್ರಿಯವಾಗಿದ್ದ, ಲಿಂಗದೇಹಜೀವನ್ಮುಕ್ತರು—ಲಿಂಗದೇಹಸಹಿತರಾದ ಜೀವನ್ಮುಕ್ತರು, ಅಥವಾ ಅನಾದಿ ಸಂಬಂಧದಿಂದ ನಿತ್ಯಸಖನಂತಿದ್ದ ಲಿಂಗದೇಹವನ್ನುಳ್ಳ ಜೀವರು, ಅಲ್ಲಿ—ಹೊರಭಾಗದಲ್ಲಿ (ಶ್ರೀಭಾಗದ ಹೊರಗೆ), ಜಯಜಯವೆನ್ನುತ್ತಿಹರು—ಜಯಘೋಷಮಾಡುತ್ತಿರುವರು. (ಜಯ—ಜಯ ಎಂದು ಶ್ರೀಹರಿಯನ್ನು ಸ್ತುತಿಸುತ್ತಿರುವರು.)

**ಅಪ್ರತೀಕಾಲಂಬನರ ಮುಖ್ಯಪ್ರಾಣ**
**ಸಪ್ತಪ್ರಾಕಾರಂಗಳೊಳಗೆ**
**ಮುಕ್ತಿಪರ್ಯಂತ ಭೋಗಂಗಳುಂಡುಕೊಂ-**
**ಡಿಪ್ಪಂತೆ ಕಟ್ಟುಮಾಡುವನು ॥೫॥**

**ಅರ್ಥ:** ಅಪ್ರತೀಕಾಲಂಬನರ—ವ್ಯಾಪ್ತ್ಯೋಪಾಸಕರಾದ ಜೀವರನ್ನು, ಮುಖ್ಯಪ್ರಾಣ—ಶ್ರೀವಾಯುದೇವನು, ಸಪ್ತಪ್ರಾಕಾರಂಗಳೊಳಗೆ—ವೈಕುಂಠದ ಹೊರವಲಯದ ಏಳು ಪ್ರಾಕಾರಗಳಲ್ಲಿ, ಮುಕ್ತಿ ಪರ್ಯಂತ—ಲಿಂಗದೇಹಭಂಗವಾಗುವವರೆಗೆ, ಭೋಗಂಗಳ—ನಾನಾ ಭೋಗಗಳನ್ನು, ಉಂಡುಕೊಂಡಿಪ್ಪಂತೆ—ಭೋಗಿಸಿಕೊಂಡಿರುವಂತೆ, ಕಟ್ಟುಮಾಡುವನು—ವಿಧಿಸುವನು (ಶ್ರೀಭಾಗವನ್ನು ಪ್ರವೇಶಿಸದಂತೆ ಆಜ್ಞಾಪಿಸುವನು.)

**ಮುಕ್ತಾಮುಕ್ತರು ಕೂಡಿ ಅದರಿಂದ ಬೆರಸಿಹರು**
**ಸಪ್ತಪ್ರಾಕಾರಂಗಳೊಳಗೆ**
**ಚಿತ್ರಚಾವಡಿಯೊಳು ಅಲ್ಲಿರ್ದ ಹರಿಯೀಗೆ**
**ಮುಕ್ತಸುರರು ಬಿನ್ನೈಸುವರು ॥೬॥**

**ಅರ್ಥ:** ಅದರಿಂದ—ಈ ಕಾರಣದಿಂದ, ಸಪ್ತಪ್ರಾಕಾರಂಗಳೊಳಗೆ—ಆ ಸಪ್ತಪ್ರಾಕಾರಗಳಲ್ಲಿ, ಮುಕ್ತಾಮುಕ್ತರು ಕೂಡಿ—ಲಿಂಗಭಂಗವಾದವರು ಮತ್ತು ಆಗದವರು ಸಹ, ಬೆರಸಿಹರು—ಮಿಶ್ರಿತರಾಗಿರುವರು; ಚಿತ್ರಚಾವಡಿಯೊಳು

—ವಿಚಿತ್ರ (ಆ ಪ್ರಾಕಾರಗಳಲ್ಲಿರುವ) ಮಂಟಪಗಳಲ್ಲಿ, ಅಲ್ಲಿರ್ದ—ಅಲ್ಲಿರುವ, ಹರಿಯೀಗೆ—ಶ್ರೀಹರಿ ಮತ್ತು ಲಕ್ಷ್ಮೀದೇವಿಗೆ (ಈ—ಲಕ್ಷ್ಮೀದೇವಿ), ಮುಕ್ತ-ಸುರರು—ಮುಕ್ತದೇವತೆಗಳು, ಬಿನ್ನೈಸುವರು—ವಿಜ್ಞಾಪಿಸಿಕೊಳ್ಳುತ್ತಾರೆ (ಸಲಿಂಗಿಗಳನ್ನು ಗತಲಿಂಗಿಗಳನ್ನಾಗಿಸಿ ಉದ್ಧರಿಸಲು ಬೇಡುತ್ತಾರೆ).

**ಮುಕ್ತರ್ಗೆ ಮನೆಯಾದ ಹರಿಯ ಅಂತಃಪುರದ**
**ಸುತ್ತಲಿಪ್ಪದು ವಿರಜಾನದೀ**
**ತತ್ವಜ್ಞಾನಿಗಳಿಗೆ ಅದರೊಳು ಮುಳುಗಿ ನಿ-**
**ರ್ಮುಕ್ತವಾಹದು ಲಿಂಗದೇಹ** ॥೭॥

**ಅರ್ಥ:** ಮುಕ್ತರ್ಗೆ ಮನೆಯಾದ—ಪ್ರತಿಮುಕ್ತರ ನಿತ್ಯಗೃಹವಾದ, ಹರಿಯ ಅಂತಃಪುರದ—ಶ್ರೀಹರಿಯ ಪುರದ (ವೈಕುಂಠಪುರಿಯ ಹೊರಗೆ), ಸುತ್ತ-ಲಿಪ್ಪದು ವಿರಜಾನದೀ—ಸುತ್ತಲೂ ವಿರಜಾನದಿಯಿದೆ; ಅದರೊಳು—ಆ ನದಿಯಲ್ಲಿ, ಮುಳುಗಿ—ಮುಳುಗಿ ಸ್ನಾನಮಾಡಿ, ತತ್ವಜ್ಞಾನಿಗಳಿಗೆ—ಆ ಜೀವನ್ಮುಕ್ತರಿಗೆ, ಲಿಂಗದೇಹ—(ಅವರ) ಲಿಂಗದೇಹವು, ನಿರ್ಮುಕ್ತವಾಹದು —ಕಳಚಿ ಹೋಗುತ್ತದೆ (ಬಿಟ್ಟು ತೊಲಗುತ್ತದೆ).

**ವಿಶೇಷಾಂಶ:** (೧) ಈ ಪದದ ೩-೪ನೇ ನುಡಿಗಳಲ್ಲಿ ಪ್ರಸಕ್ತವಾದ *'ಸ ಏನಾನ್ ಬ್ರಹ್ಮ ಗಮಯತಿ'* ಮತ್ತು *'ಅಪ್ರತೀಕಾಲಂಬನರ ಮುಖ್ಯ ಪ್ರಾಣ'* ಎಂಬ ಈ ಎರಡು ಪ್ರಮೇಯಗಳಿಗೆ ಸಂಬಂಧಿಸಿದ ವಿವರಗಳನ್ನು ಗಮನಿಸ-ಬೇಕಾದುದು ಅವಶ್ಯಕ. ಮುಕ್ತಿಯೋಗ್ಯಜೀವರನ್ನು ಎರಡು ದೊಡ್ಡ ವಿಭಾಗ-ಗಳಲ್ಲಿ ಸೇರಿಸಬಹುದು. ಒಂದೊಂದು ಪಂಗಡದವರಲ್ಲಿ ಸಹ ತಾರತಮ್ಯ (ಜೀವ-ಜೀವರಲ್ಲಿ) ಇರುತ್ತೆಂಬುದನ್ನು ಮಾತ್ರ ಮರೆಯಲಾಗದು.

*'ಪ್ರತೀಕಂ ದೇಹ ಉದ್ದಿಷ್ಟೋ ಯೇಷಾಂ ತತ್ರೈವ ದರ್ಶನಮ್।*
*ನ ತು ವ್ಯಾಪ್ತತಯಾ ಕ್ವಾಪಿ ಪ್ರತೀಕಾಲಂಬನಾಸ್ತು ತೇ॥*
*ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ।*
*ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾಣಾಂ ಶತಂ ತಥಾ॥*
*ಏತೇಽಧಿಕಾರಿಣೋ ವ್ಯಾಪ್ತದರ್ಶನೇಽನ್ಯೇ ನ ತು ಕ್ವಚಿತ್।*
*ಅಪ್ರತಿಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು॥*
*ಸ್ವದೇಹೇ ಬ್ರಹ್ಮ ದೃಷ್ಟ್ವೈವ ಗಚ್ಛೇದ್ಬ್ರಹ್ಮಸಲೋಕತಾಮ್।*
*ಬ್ರಹ್ಮಣಾ ಸಹ ಸಂಪ್ರಾಪ್ತೇ ಸಂಹಾರೇ ಪರಮಂ ಪದಮ್॥'* (ಗಾರುಡ).

**ತಾತ್ಪರ್ಯ:** ದೇಹವು ಪ್ರತೀಕವೆಂದು ಕರೆಯಲ್ಪಡುತ್ತದೆ. ಯಾರಿಗೆ ದೇಹದಲ್ಲಿಯೇ ಪರಮಾತ್ಮನ ದರ್ಶನವಾಗುವುದೋ, ವ್ಯಾಪ್ತನಾದ ಶ್ರೀಹರಿ-ದರ್ಶನವಿಲ್ಲವೋ, ಅವರು ಪ್ರತೀಕಾಲಂಬನರು. (ಉಪಾಸನಾನುಗುಣವಾದ ದರ್ಶನವಾಗುತ್ತದೆ. ಪ್ರತೀಕಾಲಂಬನರು ವ್ಯಾಪ್ತ್ಯೋಪಾಸನೆಯಲ್ಲಿ ಸಮರ್ಥ-ರಲ್ಲ). ದೇವತೆಗಳು ವ್ಯಾಪ್ತ್ಯೋಪಾಸಕರು—ಅವರೇ ಅಪ್ರತೀಕಾಲಂಬನರು. ಇವರೊಂದಿಗೆ, ವಿಶಿಷ್ಟರಾದ **ನೂರು ಋಷಿಗಳೂ, ನೂರು ರಾಜರೂ, ನೂರು ಗಂಧರ್ವರೂ** ಸಹ ಇರುವರು. ಈ ಎಲ್ಲರೂ ಭಗವಂತನ ವ್ಯಾಪ್ತ್ಯೋಪಾಸನೆಯಲ್ಲಿ ಅಧಿಕಾರಿಗಳು. (ವ್ಯಾಪ್ತ್ಯೋಪಾಸಕರ ಉಪಾಸನಾ ವ್ಯಾಪ್ತಿಯಲ್ಲಿ ಸಹ ತಾರತಮ್ಯವಿರುವುದೆಂಬುದನ್ನು ಮರೆಯಬಾರದು) ಅಪ್ರತೀಕಾಲಂಬನರು ತಮ್ಮ ಸಾಧನ ಪರಿಪೂರ್ತಿಯಾದ ನಂತರ ಪರಬ್ರಹ್ಮ-ನನ್ನು ಸೇರುತ್ತಾರೆ. ಸ್ವದೇಹದಲ್ಲಿಯೇ ಬ್ರಹ್ಮದರ್ಶನ ಪಡೆದವರು, ಚತುರ್ಮುಖಬ್ರಹ್ಮನನ್ನು (ಕಾರ್ಯಬ್ರಹ್ಮನೆಂದು ಕರೆಯಲ್ಪಡುವ) ಸತ್ಯ-ಲೋಕಾಧಿಪತಿಯನ್ನು ಹೊಂದಿ, ಮಹಾಪ್ರಳಯದ ನಂತರ, ಆತನೊಂದಿಗೆ ಪರಬ್ರಹ್ಮನನ್ನು ಹೊಂದುತ್ತಾರೆ. *'ಪ್ರತಿಮಾಸ್ವಪ್ರಬುದ್ಧಾನಾಂ ಸರ್ವತ್ರ ವಿದಿ-ತಾತ್ಮನಾಂ'*— ಎಂದರೆ, ಪ್ರಚುರಜ್ಞಾನರಹಿತರಿಗೆ ಪ್ರತೀಕಗಳಲ್ಲಿಯೂ, ವಿಶಾಲಜ್ಞಾನಿಗಳಿಗೆ ಸರ್ವತ್ರದಲ್ಲಿ ಶ್ರೀಹರಿದರ್ಶನವೆಂದು ಹೇಳುವ ಪ್ರಮಾಣ-ವಾಕ್ಯವು ಪ್ರತೀಕಾಲಂಬನರು ಮತ್ತು ಅಪ್ರತೀಕಾಲಂಬನರ ಉಪಾಸನಾ-ವೈಲಕ್ಷಣವನ್ನು ಹೇಳುತ್ತದೆ. ಅಪ್ರತೀಕಾಲಂಬನರು ಪರಬ್ರಹ್ಮನನ್ನು ಹೊಂದು-ವರೆಂದರೆ, ಲಿಂಗಭಂಗದ ನಂತರ, ಚತುರ್ಮುಖನೊಂದಿಗೆ ಎಂದು ತಿಳಿಯ-ಬೇಕು. ಆವರೆಗೆ ಸತ್ಯಲೋಕವನ್ನು ದಾಟಿ ಅಮುಕ್ತ ವೈಕುಂಠಭಾಗದಲ್ಲಿ ವಿಹರಿಸುತ್ತಿರುವರೆಂದರ್ಥ. ಈ ಉಭಯ ವರ್ಗದ ಜೀವರನ್ನೂ ವಾಯು-ದೇವನು, ಲಿಂಗಭಂಗಪರ್ಯಂತ ಅವರಿರಬೇಕಾದ ಸ್ಥಾನವನ್ನು ಮುಟ್ಟಿಸು-ತ್ತಾನೆಂದು, *'ಸ ಏನಾನ್ ಬ್ರಹ್ಮ ಗಮಯತಿ'* ಎಂಬ ಶ್ರುತಿಯು ಹೇಳುತ್ತದೆ. **'ಏನಾನ್'** ಎಂದರೆ, ಸಾಧನಪರಿಪೂರ್ತಿಯಾಗಿ, ಪ್ರಾರಬ್ಧಭೋಗವೂ ಮುಗಿದಿರುವ ಜೀವರು. 'ಬ್ರಹ್ಮ ಗಮಯತಿ' ಬ್ರಹ್ಮನನ್ನು ಹೊಂದಿಸುತ್ತಾ-ನೆಂದರೆ, ಯಾವ ಮಾರ್ಗದಿಂದ ಎಂಬಂಶವನ್ನೂ ತಿಳಿಯಬೇಕಾಗುತ್ತದೆ. *'ಮಾಸೇಭ್ಯಃ ಸಂವತ್ಸರಂ ಸಂವತ್ಸರಾದಾದಿತ್ಯಂ ಆದಿತ್ಯಾಚ್ಚಂದ್ರಮಸಂ ಚಂದ್ರ-ಮಸೋ ವಿದ್ಯುತಂ ತತ್ಪುರುಷೋ ಮಾನವಃ* ***ಸ ಏನಾನ್ ಬ್ರಹ್ಮ ಗಮಯತಿ*** *ಏಷ ದೇವಯಾನಃ ಪಂಥಾ ಇತಿ'* (ಛಾಂದೋಗ್ಯ) ಎಂಬ ಶ್ರುತಿಯಲ್ಲಿ *'ಸ*

*ಏನಾನ್ ಬ್ರಹ್ಮ ಗಮಯತಿ'* ಎಂಬುದು ಒಂದು ವಾಕ್ಯ. ಈ ಶ್ರುತ್ಯರ್ಥವೇನೆಂದರೆ: 'ಮಾಸಾಭಿಮಾನಿ ಲೋಕದಿಂದ ಸಂವತ್ಸರಾಭಿಮಾನಿ ಲೋಕವನ್ನು, ಅಲ್ಲಿಂದ ಆದಿತ್ಯಲೋಕವನ್ನೂ, ಅಲ್ಲಿಂದ ಚಂದ್ರಲೋಕವನ್ನೂ, ಅಲ್ಲಿಂದ ವಿದ್ಯುದಭಿಮಾನಿ (ಭಾರತೀದೇವಿಯ) ಲೋಕವನ್ನೂ ಹೊಂದಿ, ಅಲ್ಲಿಂದ, ಆ ಭಾರತೀಪತಿಯಾದ ಸರ್ವಜ್ಞನಾದ ವಾಯುದೇವನು *(ತತ್ಪುರುಷೋ ಮಾನವಃ)* ಬ್ರಹ್ಮನ ಸಮೀಪವನ್ನು ಮುಟ್ಟಿಸುತ್ತಾನೆ; ಇದೇ ದೇವಯಾನವೆಂಬ ಮೋಕ್ಷಮಾರ್ಗವು.' ಇಲ್ಲಿರುವ 'ಬ್ರಹ್ಮ'ನು ಯಾರೆಂಬಲ್ಲಿ, ಶುಕಾಚಾರ್ಯರ ಹಾಗೂ ಜೈಮಿನ್ಯಾಚಾರ್ಯರ ಅಭಿಪ್ರಾಯಗಳು ಭಿನ್ನವಾಗಿವೆ. ಶುಕರು **'ಕಾರ್ಯಬ್ರಹ್ಮನನ್ನು'** ಎಂದೂ, ಜೈಮಿನಿಗಳು ಬ್ರಹ್ಮಶಬ್ದದ ಮುಖ್ಯಾರ್ಥವನ್ನೇ ಇಟ್ಟುಕೊಂಡು **'ಪರಬ್ರಹ್ಮನನ್ನೇ'** ಎಂದೂ ತಿಳಿಯುತ್ತಾರೆ. ಈ ಉಭಯರ ಅಭಿಪ್ರಾಯಗಳೂ ವಿವಕ್ಷಾಭೇದದಿಂದ ಸತ್ಯವಾದವುಗಳೇ— ಶ್ರೀಬಾದರಾಯಣರ ಏಕದೇಶಾಭಿಪ್ರಾಯ ಮಾತ್ರವಾಗಿವೆ. **ಶ್ರೀಬಾದರಾಯಣರೇ** ಇದನ್ನು ನಿರ್ಣಯಿಸಿ, ***'ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ತತ್ಕ್ರತುಶ್ಚ ಓಂ'*** (ಬ್ರಹ್ಮಸೂತ್ರ) ಎಂಬಲ್ಲಿ ಹೇಳಿರುವರು. ಇದರ ಅರ್ಥ: ವಾಯುದೇವನು, ಅಪ್ರತೀಕಾಲಂಬನರನ್ನು, ಪರಬ್ರಹ್ಮನನ್ನು ಮುಟ್ಟಿಸುತ್ತಾನೆ—ಆದರೆ ಎಲ್ಲರನ್ನೂ ಅಲ್ಲ; ಪ್ರತೀಕಾಲಂಬನರನ್ನು ಚತುರ್ಮುಖ ಬ್ರಹ್ಮನನ್ನು ಹೊಂದಿಸುತ್ತಾನೆ; ಎಲ್ಲರನ್ನೂ ಪರಬ್ರಹ್ಮನನ್ನಾಗಲಿ, ಅಥವಾ ಎಲ್ಲರನ್ನೂ ಚತುರ್ಮುಖಬ್ರಹ್ಮನನ್ನಾಗಲಿ, ಹೊಂದಿಸುವನೆಂಬ ಎರಡು ಪಕ್ಷಗಳೂ ದೋಷಗ್ರಸ್ತವಾಗುತ್ತವೆ. ಏಕೆಂದರೆ, 'ತತ್ಕ್ರತುರ್ಭವತಿ' ಎಂಬ ಶ್ರುತಿಯು, ಅವರವರ ಭಗವತ್ಪೂಜಾನುಸಾರವಾಗಿಯೂ, ಯೋಗ್ಯತಾತಾರತಮ್ಯಾನುಸಾರವಾಗಿಯೂ ಹೊಂದುವರೆಂದು ಹೇಳುವುದರಿಂದ, ಅಧಿಕಾರಿಭೇದದಿಂದ, **'ಬ್ರಹ್ಮ ಗಮಯತಿ'** ಎಂಬಲ್ಲಿನ ಬ್ರಹ್ಮಶಬ್ದಾರ್ಥವನ್ನು ತಿಳಿಯಬೇಕು. ಶುಕಾಚಾರ್ಯರ ಅಭಿಪ್ರಾಯದಲ್ಲಿ ವಿವಕ್ಷಿತರು ಪ್ರತೀಕಾಲಂಬನರು; ಜೈಮಿನಿಗಳಿಗೆ ವಿವಕ್ಷಿತರು ಅಪ್ರತೀಕಾಲಂಬನರು. ಹೀಗೆ ಉಭಯರ ಮತಗಳೂ ಸತ್ಯವೇ ಆದರೂ, ಶ್ರೀಬಾದರಾಯಣರ ಏಕದೇಶಾಭಿಪ್ರಾಯಮಾತ್ರವಾಗಿವೆಯಲ್ಲದೇ ವಿರುದ್ಧವಲ್ಲ.

(೨) ಭಕ್ತಿಯುತವಾದ (ಯಥಾಯೋಗ್ಯಂ ಶಮದಮಾದಿ ಗುಣಗಳುಳ್ಳ ಮುಕ್ತಿಯೋಗ್ಯಸ್ವರೂಪವುಳ್ಳ ಜೀವರಿಂದ ಮಾಡಲ್ಪಡುವ) ಶ್ರವಣ ಮನನ

ಧ್ಯಾನಗಳಿಂದ, ಭಗವಂತನು ಪ್ರಸನ್ನನಾಗಿ ದರ್ಶನಭಾಗ್ಯವನ್ನು ಕರುಣಿಸುತ್ತಾನೆ. ಈ ದರ್ಶನವು ಬ್ರಹ್ಮಸಾಕ್ಷಾತ್ಕಾರವೆಂದೂ ಅಪರೋಕ್ಷವೆಂದೂ ಕರೆಯಲ್ಪಡುತ್ತದೆ. ಅಪರೋಕ್ಷದಿಂದ ಸಂಚಿತಕರ್ಮಗಳು ದಹಿಸಿಹೋಗುತ್ತವೆ. ಅಪರೋಕ್ಷಕಾಲದಲ್ಲಿ ಫಲೋನ್ಮುಖವಾಗಿ, ಆರಂಭವಾಗಿರುವ ಕರ್ಮವನ್ನು ಮಾತ್ರ ಭೋಗಿಸಿ, ಪುನರ್ಜನ್ಮರಹಿತನಾಗಿ, ತನ್ನ ಮುಂದಿನ ಗತಿಗೆ ಸಾಗುತ್ತಾನೆ. ಅಪರೋಕ್ಷಾ ನಂತರ, ಪ್ರಾರಬ್ಧಕರ್ಮಭೋಗಕಾಲದಲ್ಲಿ ಅಥವಾ ಮುಂದೆ ಲಿಂಗದೇಹಭಂಗದವರೆಗೆ, ಮಾಡುವ ಕರ್ಮಗಳು ಲೇಪವಾಗುವುದಿಲ್ಲ. ಎಲ್ಲ ಸಾಧನಪೂರ್ತಿಯಾದ ಜೀವರೂ, *'ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ। ಪರಸ್ಯಾಂತೇ ಪರಾತ್ಮಾನಃ ಪ್ರವಿಂಶತಿ ಪರಂ ಪದಂ'*— ಭಗವನ್ನಿಷ್ಠರಾದ ಈ ಎಲ್ಲಾ ಜ್ಞಾನಿಗಳೂ, **'ಪರ'ನಾಮಕ** ಬ್ರಹ್ಮದೇವನ ಆಯುರ್ಮಾನವು ಮುಗಿದನಂತರ ಮಹಾಪ್ರಳಯವಾಗಲು, ಲಿಂಗಭಂಗ ಹೊಂದಿ ಆತನೊಂದಿಗೆ ಪರಮಾತ್ಮನ ಉದರಪ್ರವೇಶಮಾಡಿ, ಧ್ಯಾನದಲ್ಲಿದ್ದು ಸೃಷ್ಟಿಕಾಲ ಬರಲು ಸ್ವಯೋಗ್ಯ ನಿತ್ಯಸ್ಥಾನಗಳನ್ನು ಹೊಂದುವರೆಂದು, ಹೇಳಿರುವುದರಿಂದ, ಪ್ರಳಯಕಾಲವನ್ನು ನಿರೀಕ್ಷಿಸಿ ಕಾದಿರಬೇಕು. ಬ್ರಹ್ಮದೇವನ ಆಯುರ್ಮಾನದ ವಿವಿಧ ಅಲ್ಪಾಂಶಕಾಲಾವಧಿಯಲ್ಲಿ, ಬಹುಜೀವರ ಸಾಧನವು ಪೂರ್ತಿಗೊಂಡಿರುತ್ತದೆ. ಜೀವೋತ್ತಮನಾದ ಬ್ರಹ್ಮದೇವನಿಗಿಂತ ಎಲ್ಲಜೀವರೂ ಅವರರಾದ್ದರಿಂದ, ಸ್ವರೂಪತಾರತಮ್ಯಾನುಗುಣವಾಗಿ, ಸಾಧನಕಾಲವು ಅಲ್ಪವೇ ಆಗಿರುತ್ತದೆ. ಬ್ರಹ್ಮದೇವನೊಂದಿಗೆ ಹೊರಡುವ ಕಾಲವನ್ನು ನಿರೀಕ್ಷಿಸುತ್ತ ವಾಸಿಸುವ ಸ್ಥಳಗಳೂ ಭಿನ್ನವಾಗಿಯೇ ಇರುತ್ತವೆ. ಅಪ್ರತೀಕಾಲಂಬನರು ಅಮುಕ್ತವೈಕುಂಠದಲ್ಲಿಯೂ, ಪ್ರತೀಕಾಲಂಬನರು ಚತುರ್ಮುಖನ ಲೋಕದಲ್ಲಿಯೂ ಇರುವರು. ಚತುರ್ಮುಖನ ಲೋಕವೆಂದರೆ ಸತ್ಯಲೋಕಮಾತ್ರವಲ್ಲ; ಆತನ ಆಧಿಪತ್ಯಕ್ಕೆ ಒಳಪಟ್ಟ ೧೪ ಲೋಕಗಳೂ ಆತನ ಲೋಕವೇ. ಪ್ರತಿಯೊಬ್ಬ ಜೀವನೂ ತನಗೆ ಯೋಗ್ಯವಾದ ಸ್ಥಳದಲ್ಲಿರುತ್ತಾನೆ. ಈ ಉಭಯವರ್ಗದ ಜ್ಞಾನಿಗಳನ್ನು ಅವರವರ ಸ್ಥಾನಗಳಿಗೆ ಮುಟ್ಟಿಸುವವರು —ವಾಯುದೇವರು. ವೈಕುಂಠವಾದರೋ ಪರಬ್ರಹ್ಮನ ಲೋಕವೇ. ಅಲ್ಲಿ (ಅಮುಕ್ತಭಾಗದಲ್ಲಿರುವವರಿಗೆ ಸಹ) ಆಗಾಗ್ಯೆ ವೈಕುಂಠಪತಿಯ ದರ್ಶನವೂ ಆಗುತ್ತದೆ. ಸ್ಥಾನಭೇದದಿಂದ, ಅಲ್ಲಿ, ಆ ಜೀವರು ಅನುಭವಿಸುವ ಭೋಗಗಳೂ ತಾರತಮ್ಯಾನುಸಾರವಾಗಿ ಭಿನ್ನವಾಗಿರುತ್ತವೆ.

(೩) ಶ್ರೀಭಾಗ ವೈಕುಂಠದ ಹೊರವಲಯದ ಸಪ್ತಪ್ರಾಕಾರಗಳು ಅತ್ಯಂತ ವಿಸ್ತಾರವಾದವುಗಳು—ನಾನಾ ಸುಖಭೋಗಗಳ ಅವಕಾಶವುಳ್ಳವು. ಅದು, ಮುಕ್ತ-ಅಮುಕ್ತಗಳೆಂಬ ಉಭಯಭಾಗಗಳೂ ಕೂಡಿಕೊಳ್ಳುವ ವಲಯ. ಅಮುಕ್ತಭಾಗವು ಕ್ರಮವಾಗಿ ಮುಕ್ತಭಾಗದೊಡನೆ ಕೂಡಿಕೊಳ್ಳುತ್ತ ಸಾಗುವ ಪ್ರದೇಶವದು. ಆ ಪ್ರಾಕಾರಗಳು ಮುಗಿದೊಡನೆ ಕೇವಲ ಮುಕ್ತಭಾಗವೇ ಉಳಿಯುತ್ತದೆ. ಅಮುಕ್ತಭಾಗವನ್ನು ಹೊಂದಿಸಲ್ಪಟ್ಟ ಸಲಿಂಗಿಗಳಾದ ಅಪ್ರ-ತೀಕಾಲಂಬನರು, ಶ್ರೀಹರಿಯ ಅನುಗ್ರಹದಿಂದ ಇಚ್ಛಿತರೂಪಗಳನ್ನು ಸ್ವೀಕರಿಸಿ ಇಲ್ಲಿ ವಿಹರಿಸುತ್ತಾರೆ. ಮುಕ್ತಭಾಗದಲ್ಲಿರುವ ಮುಕ್ತಜೀವರು ಸಹ, ಆ ಪ್ರಕಾರಗಳಲ್ಲಿ ಬಂದು ವಿಹರಿಸುತ್ತಾರೆ. ಹೀಗೆ, ಉಭಯರೂ ಮಿಶ್ರರಾಗಿ, ಈ ಪ್ರಕಾರಗಳಲ್ಲಿ ವಿಹರಿಸುತ್ತಿರುವರು.

(೪) ಮುಕ್ತರ ಭೋಗಪ್ರಕಾರ ಮತ್ತು ವಿರಜಾನದಿಯಲ್ಲಿ ಲಿಂಗದೇಹಗಳನ್ನು ತ್ಯಜಿಸುವಿಕೆ, ಮೊದಲಾದ ಪ್ರಮೇಯ ವಿವರಣೆಗಳನ್ನು ಮುಂದಿನ ೧೭-೧೮ನೇ ಪದಗಳ ವಿಶೇಷಾಂಶ ಭಾಗದಲ್ಲಿ ನೋಡಬಹುದು.

**ಶ್ಲೋಕ (೨೦-೨೧-೨೨)**

**ಪ್ರಧಾನಪರಮವ್ಯೋಮ್ನೋರಂತರಾ ವಿರಜಾನದೀ।**
**ದೇವಾಂಗಸ್ವೇದಜನಿತಾ ತೋಯ್ಯೈಃ ಪ್ರಸವಿತಾ ಶುಭಾ॥**

**ಮೋಕ್ಷಂ ಪರಂಪದಂ ದಿವ್ಯಮಮೃತಂ ವಿಷ್ಣುಮಂದಿರಮ್।**
**ಅಕ್ಷರಂ ಪರಮಂ ಧಾಮ ವೈಕುಂಠಂ ಶಾಶ್ವತಂ ಪದಮ್॥**

**ನಿತ್ಯಂ ಚ ಪರಮವ್ಯೋಮ ಸರ್ವೋತ್ಕೃಷ್ಟಂ ಸನಾತನಮ್।**
**ಪರ್ಯಾಯವಾಚಕಾಸ್ತಸ್ಯ ಪರಂಧಾಮ್ನೋಽಚ್ಯುತಸ್ಯ ಚ॥**

**ಅರ್ಥ:** ಪ್ರಧಾನಪರಮವ್ಯೋಮ್ನೋಃ—ಪ್ರಕೃತಿ ಮತ್ತು ಅವ್ಯಾಕೃತಾಕಾಶಗಳ, ಅಂತರಾ—ಮಧ್ಯದಲ್ಲಿರುವ, ವಿರಜಾನದೀ—ವಿರಜಾನದಿಯು, ದೇವಾಂಗ ಸ್ವೇದಜನಿತಾ—ಶ್ರೀಹರಿಯ ದೇಹದ ಬೆವರಿನಿಂದ ಹುಟ್ಟಿದುದು; ತೋಯ್ಯೈಃ—(ಆ ಬೆವರೇ ಆದ) ಜಲದಿಂದ, ಪ್ರಸವಿತಾ—ಹರಿಯುವುದು, ಶುಭಾ—ಪರಮ ಪವಿತ್ರವಾದುದು. ॥೨೦॥

**ವಿಶೇಷಾಂಶ:** (೧) 'ಪರಮವ್ಯೋಮ'ವೆಂಬುದು ವೈಕುಂಠದಲ್ಲಿರುವ ಶ್ರೀ-ಹರಿಯ ಪಟ್ಟಣದ ನಾಮ. ಇದಕ್ಕೂ ಪ್ರಕೃತಿಸಂಬಂಧವುಳ್ಳ ಅಮುಕ್ತಭಾಗಕ್ಕೂ

ಮಧ್ಯದಲ್ಲಿ ವಿರಜಾನದಿಯಿದೆ. ಬ್ರಹ್ಮಾಂಡದ ಬಹುವಿಸ್ತಾರದ ಬಹಿರಾವರಣಗಳಲ್ಲಿ ಕೊನೆಯದಾದ ಪ್ರಕೃತ್ಯಾವರಣಕ್ಕೂ ಅದರ ಮೇಲಿರುವ ಅನಂತವಿಸ್ತಾರದ ಅವ್ಯಾಕೃತಾಕಾಶಕ್ಕೂ ಮಧ್ಯದಲ್ಲಿ ವಿರಜಾನದಿಯು ಇರುವುದೆಂದೇ ತಿಳಿಯಬೇಕಾಗಿಲ್ಲ.

(೨) ಶ್ರೀಹರಿಯ ಸ್ವೇದವೂ (ಬೆವರೂ) ಸಹ ಚಿದಾನಂದಾತ್ಮಕವಾದುದು. ಶ್ರೀಹರಿಯ ಸ್ವರೂಪದೇಹದಲ್ಲಿಯೂ ಇರುವ ಶ್ರೀದೇವಿಯು, ಈ ಸ್ವೇದದೊಂದಿಗೆ ಹೊರಗೆ ಹರಿಯುತ್ತಾಳೆ—ಅದನ್ನಾಶ್ರಯಿಸಿದ ಲಕ್ಷ್ಮೀಸ್ವರೂಪವೇ ವಿರಜಾನದಿಯು. ಈ ಪ್ರಮೇಯಗಳನ್ನು ಮುಂದಿನ ಪದದಲ್ಲಿ ಗ್ರಂಥಕರ್ತರು ವಿವರಿಸುತ್ತಾರೆ.

**ಅರ್ಥ:** ಮೋಕ್ಷಂ—ಮೋಕ್ಷವು, ಪರಂಪದಂ—ಪರಮಪದ, ವಿಷ್ಣುಮಂದಿರಂ—ವಿಷ್ಣುವಿನ ಮಂದಿರ, ದಿವ್ಯಂ—ದಿವ್ಯ, ಅಮೃತಂ—ಅಮೃತ, ಅಕ್ಷರಂ—ನಿತ್ಯವಾದ, ಪರಮಂ ಧಾಮ—ಪರಮಧಾಮ, ವೈಕುಂಠಂ—ವೈಕುಂಠ, ಶಾಶ್ವತಂ ಪದಂ—ಶಾಶ್ವತ ಪದ. ನಿತ್ಯಂ—ನಿತ್ಯವಾದ, ಸರ್ವೋತ್ಕೃಷ್ಟಂ—ಸರ್ವಸ್ಥಾನಗಳಿಗಿಂತ ಶ್ರೇಷ್ಠವಾದ, ಸನಾತನಂ—ಅನಾದಿನಿತ್ಯನಾದ, ಪರಮಂ ವ್ಯೋಮ ಚ—ಪರಮವ್ಯೋಮ ಎಂಬುದು ಸಹ, ಅಚ್ಯುತಸ್ಯ—ಶ್ರೀಹರಿಯ, ಪರಂ ಧಾಮ್ನಃ—ಶ್ರೇಷ್ಠವಾದ ವಾಸಸ್ಥಾನದ, ಪರ್ಯಾಯವಾಚಕಾಃ—ಏಕಾರ್ಥವುಳ್ಳ ನಾಮಗಳು. (೨೧-೨೨ನೇ ಶ್ಲೋಕಗಳು).

## ಪದ ೧೭

ರಾಗ-ಪಂತುರಾವಳಿ; ತಾಳ-ರೂಪಕ

**ಸಪ್ತಮದ್ವಾರಪರ್ಯಂತ ಬಂಧಕಮಾಯೆ**
**ಮತ್ತೆ ಮುಕ್ತಿಯೊಳಿಪ್ಪ ಹರಿಯ**
**ಉತ್ತಮಾಂತಃಪುರವಿಂತೆರಡರ ನಡುವೆ**
**ಸುತ್ತಲಿಪ್ಪುದು ವಿರಜಾನದೀ** ॥೧॥

**ಅರ್ಥ:** ಸಪ್ತಮದ್ವಾರಪರ್ಯಂತ—(ಸಪ್ತಪ್ರಾಕಾರಗಳಲ್ಲಿ ಎಲ್ಲಕ್ಕೂ ಹೊರಗಿನದಾದ ಏಳನೇ ಪ್ರಾಕಾರದಲ್ಲಿರುವ) ಏಳನೇ ಮಹಾದ್ವಾರದವರೆಗೆ, ಬಂಧಕಮಾಯೆ—ಸುತ್ತುಗಟ್ಟಿರುವ ಪ್ರಕೃತಿಯಿರುವುದು; ಮತ್ತೆ—ಆದರೆ

(ಮತ್ತು), ಮುಕ್ತಿಯೊಳಿಪ್ಪ— ಮುಕ್ತಭಾಗದಲ್ಲಿರುವ, ಉತ್ತಮಾಂತಃಪುರವು— ಶ್ರೇಷ್ಠವಾದ ಮಧ್ಯಹರಿಪುರವು, ಇಂತೆರಡರ— ಹೀಗೆಂಬ ಎರಡರ, ನಡುವೆ — ಮಧ್ಯದಲ್ಲಿ (ಏಳನೇ ಪ್ರಕಾರದ ಹೊರಗಿರುವ ಪ್ರಕೃತಿ ಮತ್ತು ಹರಿಪುರಗಳ ಮಧ್ಯದಲ್ಲಿ), ವಿರಜಾನದೀ— ವಿರಜಾನದಿಯು, ಸುತ್ತಲಿಪ್ಪುದು— ಸುತ್ತಲೂ ಇರುವುದು.

**ಏಳನೇ ಬಾಗಿಲಲಿದ್ದ ಜಯವಿಜಯರು**
**ಭೂಲೋಕದಲಿ ಪುಟ್ಟಿದರಾಗಿ**
**ಕಾಲನವರ ಭಯವಲ್ಲಿ ಪರ್ಯಂತರ**
**ಕಾಲೂರಿ ಜನ ಮೆಟ್ಟುವಳು ॥೨॥**

**ಅರ್ಥ:** ಏಳನೇ ಬಾಗಿಲಲಿದ್ದ— ಏಳನೆಯ (ಹೊರಗಿನಿಂದ ಮೊದಲಿನ) ಮಹಾದ್ವಾರದಲ್ಲಿದ್ದ, ಜಯವಿಜಯರು— ಜಯ, ವಿಜಯರೆಂಬ ದ್ವಾರ-ಪಾಲಕರು, ಭೂಲೋಕದಲ್ಲಿ— ಭೂಮಿಯಲ್ಲಿ, ಪುಟ್ಟಿದರಾಗಿ— ಹುಟ್ಟಿದ್ದ-ರಿಂದ, ಕಾಲನವರ ಭಯ— (ಶಾಪನಿಮಿತ್ತ) ಮೃತ್ಯು ಭಯವು, ಅಲ್ಲಿ ಪರ್ಯಂತರ— ಅಲ್ಲಿಯವರೆಗೆ ಮಾತ್ರ (ವೆಂದು ತಿಳಿಯಬೇಕು); ಕಾಲೂರಿ ಜನ ಮೆಟ್ಟುವಳು— ಮೃತ್ಯುದೇವತೆಯು ಜನರನ್ನು ಕಾಲಿನಿಂದ ಮೆಟ್ಟುತ್ತಾಳೆ (ತನ್ನ ವಶಪಡಿಸಿಕೊಳ್ಳುತ್ತಾಳೆ.)

**ಅದರಿಂದೊಳಗೆ ಮುಕ್ತರ್ಹೋಗುವರಲ್ಲದೆ ಮಿಕ್ಕ**
**ಬುಧರಿಗೆ ಸಂಚಾರ ಸಲ್ಲ**
**ಅದು ಕಾರಣ ನಾರಾಯಣ ತಾನಲ್ಲಿಗೆ ಬಂದು**
**ಮುದವಿತ್ತ ಸನಕಾದಿಗಳಿಗೆ ॥೩॥**

**ಅರ್ಥ:** ಅದರಿಂದೊಳಗೆ— (ಜಯವಿಜಯರಿರುವ) ದ್ವಾರದಿಂದೊಳಗೆ, ಮುಕ್ತರು— ಮುಕ್ತರು ಮಾತ್ರ, ಹೋಗುವರಲ್ಲದೆ— ಪ್ರವೇಶಿಸುವರಲ್ಲದೆ, ಮಿಕ್ಕ ಬುಧರಿಗೆ— ಉಳಿದ ಜ್ಞಾನಿಗಳಿಗೆ (ಅಮುಕ್ತ ವೈಕುಂಠವನ್ನು ಹೊಂದಿಸಲ್ಪಟ್ಟ ಅಪ್ರತೀಕಾಲಂಬನರಿಗೂ), ಸಂಚಾರ ಸಲ್ಲ— ಸಂಚಾರವು ಕೂಡುವುದಿಲ್ಲ; ಅದು ಕಾರಣ— ಆ ಕಾರಣದಿಂದ, ನಾರಾಯಣ— ಶ್ರೀವೈಕುಂಠನು, ತಾನಲ್ಲಿಗೆ ಬಂದು— ತಾನೇ ದ್ವಾರದವರೆಗೆ ಬಂದು, ಸನಕಾದಿಗಳಿಗೆ— ಸನಕಾದಿ ಯೋಗಿಗಳಿಗೆ, ಮುದವಿತ್ತ— ದರ್ಶನಾನಂದವನ್ನಿತ್ತನು.

**ವಿಶೇಷಾಂಶ:** (೧) ಶ್ರೀಭಾಗವೈಕುಂಠಲೋಕದ ಹೊರವಲಯದ ಏಳನೇ ಪ್ರಾಕಾರದವರೆಗೆ ಮೃತ್ಯುಭಯವುಂಟೆಂಬುದಕ್ಕೆ, ಅಲ್ಲಿಂದ ಮರ್ತ್ಯಲೋಕಕ್ಕೆ (ಮನುಷ್ಯಲೋಕಕ್ಕೆ) ಶಾಪಾದಿ ವಿಶೇಷ ನಿಮಿತ್ತದಿಂದ, ಬೀಳಲವಕಾಶವಿರುವ ಸ್ಥಾನವೆಂದು ತಿಳಿಯಬೇಕಲ್ಲದೆ, ಅಲ್ಲಿರುವ ಪ್ರಜೆಗಳಿಗೆ ಮನುಷ್ಯಲೋಕದಂತೆ ಜನನ-ಮರಣಗಳುಂಟೆಂದಾಗಲಿ, ಯಮದೂತರ ಭಯವುಂಟೆಂದಾಗಲಿ ತಿಳಿಯಕೂಡದು. ಸನಕಾದಿಗಳ ಶಾಪದಿಂದ ಜಯವಿಜಯರು ಭೂಲೋಕದಲ್ಲಿ ಜನ್ಮತಾಳಿದರೆಂಬುದು, ಈ ಪ್ರಮೇಯವನ್ನು ಸಾಧಿಸುತ್ತದೆ.

(೨) ಶ್ರೀಭಾಗ ವೈಕುಂಠದ ಪ್ರಾಕಾರಗಳಂತೆ, ಅದರ ಮಧ್ಯದಲ್ಲಿರುವ, ವೈಕುಂಠನ ಅಂತಃಪುರವಾದ ನಗರಕ್ಕೂ ಸಪ್ತಪ್ರಾಕಾರಗಳಿವೆ. ಈ ನಗರಿಯು **'ಪರಮವ್ಯೋಮ'**ವೆಂದು ಕರೆಯಲ್ಪಡುತ್ತದೆ. ಇದರ ಹೊರಗಿನ (ಕಡೆಯ) ಪ್ರಕಾರದ ಸುತ್ತಲೂ ವಿರಜಾನದಿ ಇರುವುದು. **ಪದ ೧೬೮ರ ೬ನೇ ನುಡಿಯಲ್ಲಿ** ಹೇಳಿದಂತೆ, ಮುಕ್ತಾಮುಕ್ತರು ಮಿಶ್ರಿತರಾಗಿ, ಸಪ್ತಪ್ರಾಕಾರಗಳಲ್ಲಿ ವಿಹರಿಸುವರೆಂಬುದು ಶ್ರೀಭಾಗವೈಕುಂಠದ ಸಪ್ತಪ್ರಾಕಾರಗಳು—ಶ್ರೀಹರಿಯ ಅಂತಃಪುರದ ಪ್ರಾಕಾರಗಳಲ್ಲ. ಆ ಪ್ರಾಕಾರಗಳಲ್ಲಿಯಾದರೂ ಅಮುಕ್ತರು, ವಿಶೇಷವಾಗಿ ವಾಯುದೇವನಿಂದ ಅಮುಕ್ತವೈಕುಂಠವನ್ನು ಹೊಂದಿಸಲ್ಪಟ್ಟ ಅಪ್ರತೀಕಾಲಂಬನರು. ಕಾಲವಿಶೇಷಗಳಲ್ಲಿ ಪ್ರವೇಶಿಸಿ ವಿಹರಿಸುವರಲ್ಲದೇ, ಖಾಯಂ ವಾಸವಿಲ್ಲ.

(೩) ಮುಕ್ತಸ್ಥಾನದಲ್ಲಿರುವ ಶ್ರೀಹರಿಯ ಅಂತಃಪುರದೊಳಗೆ (ನಗರಿಯೊಳಗೆ) ಶ್ರೀಭಾಗದಲ್ಲಿರುವ ಸರ್ವಮುಕ್ತರಿಗೂ, ಪ್ರವೇಶಕ್ಕೆ ಅವಕಾಶವಿಲ್ಲ. ಶ್ರೀಹರಿಯ ವಿಶೇಷಾನುಗ್ರಹದಿಂದ ಹಾಗೆ ಪ್ರವೇಶವಿರುವವರಿಗೆ ಸಹ, ಸರ್ವಕಾಲದಲ್ಲಿಯೂ ಅಲ್ಲ. ಅಮುಕ್ತವರ್ಗಕ್ಕೆ ಸೇರಿದವನಾದರೂ, ವಾಯುದೇವನು, ತನ್ನ ಇಚ್ಛೆ ಬಂದಾಗ, ವೈಕುಂಠ ಮೊದಲಾದ ಮುಕ್ತಭಾಗದ ಶ್ರೀಹರಿಯ ಅಂತಃಪುರವನ್ನು ಪ್ರವೇಶಿಸಿ, ದರ್ಶನಸಂಭಾಷಣಗಳನ್ನು ನಡೆಸಿ ಹಿಂತಿರುಗುವ ವಿಶೇಷಾವಕಾಶವನ್ನು ಪಡೆದಿರುವನು.

*'ಪಯೋಧಿಮಧ್ಯಂ ಚ ಮೇ ಸುಸದ್ಮ ಚಾನ್ಯದೇವ ವಾ।*
*ಯಥೇಷ್ಟತೋ ಗಮಿಷ್ಯಸಿ ಸ್ವದೇಹಸಂಯುತೋಽಪಿ ಸನ್॥'*

(ತಾತ್ಪರ್ಯನಿರ್ಣಯ)

—'ಶ್ವೇತದ್ವೀಪದಲ್ಲಿರುವ ಅಥವಾ ನನ್ನ ಇತರ ಮುಕ್ತ ಲೋಕಗಳಲ್ಲಿರುವ ಅಂತಃಪುರಗಳನ್ನು ಈ ದೇಹದಿಂದಲೇ ನಿನ್ನ ಇಚ್ಛಾನುಸಾರ ಪ್ರವೇಶಿಸುವವ-

ನಾಗು' ಎಂದು ಶ್ರೀರಾಮಚಂದ್ರನು ಹನುಮದವತಾರನಾದ ವಾಯುದೇವ-ನಿಗೆ ವರಪ್ರದಾನ ಮಾಡಿದನೆಂದು ಹೇಳಲಾಗಿದೆ.

**ಹರಿಯಂತರ್ನಗರಿಗೆ ಪರಮಂ ವ್ಯೋಮನಾಮ**
**ಹೊರಗಿದ್ದ ಪ್ರಕೃತಿಯೇ ಪ್ರಧಾನಾ**
**ಪುರಾಣಂಗಳದರಿಂದ ಪ್ರಧಾನ-**
**ಪರಮವ್ಯೋಮಾಂತದಿ ವಿರಜೆಯೆಂದೊರೆದವು** ॥೪॥

**ಅರ್ಥ:** ಹರಿಯ—ಶ್ರೀಹರಿಯ, ಅಂತರ್ನಗರಿಗೆ—ಅಂತಃಪುರಕ್ಕೆ, **ಪರಮಂವ್ಯೋಮ**ನಾಮ—ಪರಮವ್ಯೋಮವೆಂಬ ಹೆಸರು; ಹೊರಗಿದ್ದ—ಶ್ರೀಭಾಗವೈಕುಂಠದ ಹೊರಗಿರುವ, ಪ್ರಕೃತಿಯೇ ಪ್ರಧಾನಾ—ಪ್ರಕೃತಿಯೇ ಪ್ರಧಾನವೆಂಬ ನಾಮವುಳ್ಳದ್ದು; ಅದರಿಂದ—ಈ ಕಾರಣದಿಂದಲೇ, ಪುರಾಣಂಗಳು—ಪುರಾಣಗಳು, ಪ್ರಧಾನಪರಮವ್ಯೋಮಾಂತದಿ—ಪ್ರಧಾನ-ಪರಮವ್ಯೋಮಗಳ ಮಧ್ಯದಲ್ಲಿ, ವಿರಜೆಯೆಂದೊರೆದವು—ವಿರಜಾನದಿ-ಯಿರುವುದೆಂದು ಹೇಳುತ್ತದೆ.

**ವಿಶೇಷಾಂಶ:** ಶ್ರೀಹರಿಯ ಅಂತಃಪುರದ ಹೊರಗೆ ಸುತ್ತಲೂ ವಿರಜಾ-ನದಿಯಿದೆ. ಅದು ಶ್ರೀಭಾಗವೈಕುಂಠದಲ್ಲಿಯೇ ಇದೆ. ಇದರ ಹೊರಗಿನ ಸಪ್ತಪ್ರಾಕಾರಗಳ ಹೊರಗೆ ಅಮುಕ್ತವೈಕುಂಠಭಾಗವಿದೆ. ಅದು ಅಪ್ರಾಕೃತವಲ್ಲ—ಪ್ರಕೃತಿಸಂಬಂಧವುಳ್ಳದ್ದು. *ಏವಂ ಚ* ಪ್ರಕೃತಿಗೂ ಶ್ರೀಹರಿಯ ಅಂತಃಪುರಕ್ಕೂ ಮಧ್ಯೆ ವಿರಜಾನದಿಯಿದೆ.

**ಹರಿಯಂಗದೊಳಗಿರ್ದ ಬೆವರೂದಕವಾಗಿ**
**ಶಿರಿದೇವಿ ತಾನೆ ಪೊರಮಟ್ಟು**
**ಪರಿವಳು ರಜಶಬ್ದಸೂಚಿತಗುಣತ್ರಯವಿರದ**
**ಕಾರಣ ವಿರಜೆ ಎನಿಪಳು** ॥೫॥

**ಅರ್ಥ:** ಹರಿಯಂಗದೊಳಗಿರ್ದ—ಶ್ರೀಹರಿಯ ದೇಹದಲ್ಲಿದ್ದ, ಬೆವರು—ಬೆವರೆಂಬುದೇ, ಉದಕವಾಗಿ—ಜಲವಾಗಿ, ಶಿರಿದೇವಿ ತಾನೆ—ಲಕ್ಷ್ಮೀ-ದೇವಿಯೇ ಆ ರೂಪದಿಂದ, ಪೊರಮಟ್ಟು—ಹೊರಟುಬಂದು (ಹೊರಗೆ-ಬಂದು), ಪರಿವಳು—ಹರಿಯುತ್ತಾಳೆ; ರಜಶಬ್ದಸೂಚಿತ—'ರಜ' ಶಬ್ದದಿಂದ ಸೂಚಿತವಾದ, ಗುಣತ್ರಯವು—ಮೂರು ಗುಣಗಳು, ಇರದ ಕಾರಣ—(ಆ

ಲಕ್ಷ್ಮ್ಯಾತ್ಮಕ ಜಲದಲ್ಲಿ), ಇಲ್ಲದ ಕಾರಣ, ವಿರಜೆ ಎನಿಪಳು—(ವಿ—ವಿಗತವಾದ, ರಜ—ತ್ರಿಗುಣಗಳುಳ್ಳ) **'ವಿರಜಾ'**ಎಂಬ ಅನ್ವರ್ಥನಾಮವುಳ್ಳವಳು.

**ವಿಶೇಷಾಂಶ:** (೧) ಲಕ್ಷ್ಮೀನಾರಾಯಣರಿಬ್ಬರೂ ಎಲ್ಲ ಕಾಲದಲ್ಲಿ (ಅವತಾರಗಳಲ್ಲಿ ಸಹ) ಸಚ್ಚಿದಾನಂದದೇಹಿಗಳು. ಅವರಿಗೆ ಪ್ರಾಕೃತದೇಹಸಂಬಂಧವು ಯಾವ ಕಾಲಕ್ಕೂ ಎಲ್ಲಿಯೂ ಇಲ್ಲ. ಶ್ರೀಹರಿಯ ದೇಹದಿಂದ ಹೊರಹೊರಡುವ ಬೆವರೂ ಜ್ಞಾನಾನಂದಸ್ವರೂಪವಾದುದೇ. ಶ್ರೀಹರಿಯ ದೇಹದಲ್ಲಿರುವ ಲಕ್ಷ್ಮೀದೇವಿಯೂ ಈ ರೂಪದಿಂದ ಇದರೊಂದಿಗೆ ಹೊರಗೆ ಹರಿಯುತ್ತಾಳೆ—ಜಲರೂಪದಿಂದ ಹರಿದು ಬರುವುದರಿಂದ, ದೇಹದಿಂದ ಹೊರಡುವ ಬೆವರೆಂದು ಕರೆಯಲಾಗುತ್ತದೆ. ದುರ್ಗಂಧಾದಿ ದುರ್ಲಕ್ಷಣಯುಕ್ತ ಪ್ರಾಕೃತ ದೇಹದಿಂದ ಸ್ರವಿಸುವ ಮಲವಿಶಿಷ್ಟಜಲವೆಂದು ಸರ್ವಥಾ ಭಾವಿಸಬಾರದು.

(೨) ಸತ್ವ-ತಮೋಗುಣಮಿಶ್ರಣದಿಂದಾದುದು ರಜೋಗುಣ. ಸೃಷ್ಟಿ ಕಾಲದಲ್ಲಿ ಶ್ರೀಹರಿಯಾಜ್ಞೆಯಿಂದ ನಿರ್ಮಿತವಾಗುತ್ತದೆ. ರಜೋಗುಣದಲ್ಲಿ ಸತ್ವ-ತಮೋಗುಣಗಳೆರಡೂ ಇರುವ ಕಾರಣ, ರಜೋಗುಣರಹಿತವೆಂಬುದರಿಂದ ತ್ರಿಗುಣರಾಹಿತ್ಯವನ್ನೂ ಹೇಳಿದಂತೆಯೇ ಸರಿ. ವಿರಜಾನದಿಯು ಶುದ್ಧಸತ್ವಾತ್ಮಕವೂ (ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ ಸತ್ವಗುಣದಿಂದಾದುದೂ) ಅಲ್ಲವೆಂದು ತಿಳಿಯಬೇಕು. ಅದು ಅಪ್ರಾಕೃತವು—ಲಕ್ಷ್ಮೀದೇವಿಯದೇ ಒಂದು ರೂಪ. ಚಿದಾನಂದಾತ್ಮಕ ಶ್ರೀಹರಿಯ ಬೆವರು ನದೀರೂಪದ ಲಕ್ಷ್ಮೀದೇವಿಗೆ ಆಶ್ರಯವೆಂದೂ ತಿಳಿಯಬೇಕು. ಆ ಬೆವರೂ ಶ್ರೀಹರಿಯಿಂದ ಅಭಿನ್ನವೇ ಆದುದು.

***(೩) 'ವೈಕುಂಠಪರಿಘಾಽಕೃತ್ಯಾಂ ವಿರಜಾಯಾಂ ಸಮಸ್ತಶಃ।***
***ಮಹಾಲಕ್ಷ್ಮೀಸ್ವರೂಪಿಣ್ಯಾಂ ವಿಗಾಹ್ಯ ಪ್ರಕೃತೇಃ ಪರಮ್॥***
***ಪ್ರಾರಬ್ಧ ಕರ್ಮಶೇಷಂ ಚ ಲಿಂಗದೇಹಾದಿಕಂ ತಥಾ।***
***ವಿನಾಶ್ಯ ಜಠರೇ ವಿಷ್ಣೋಃ ಪ್ರವಿಶ್ಯಾನುಗ್ರಹಾದ್ಧರೇಃ।***
***ತಮೇವ ಪರಮಶ್ರೇಷ್ಠಂ ಧ್ಯಾಯಂತಃ ಕಮಲಾಪತಿಮ್'॥*** (ಸ.ರ.ಮಾ)

ಎಂಬೀ ವಾಕ್ಯಗಳು, 'ವೈಕುಂಠವನ್ನು ಸುತ್ತಿ ಹರಿಯುವ, ಮಹಾಲಕ್ಷ್ಮೀಸ್ವರೂಪದ ವಿರಜಾನದಿಯಲ್ಲಿ ಮುಳುಗಿ ಸ್ನಾನಮಾಡಿ, ಪ್ರಾರಬ್ಧಕರ್ಮಶೇಷವನ್ನೂ, ಲಿಂಗದೇಹಾದಿ ಪ್ರಾಕೃತ ಸಂಬಂಧವನ್ನೂ, ಕಳೆದುಕೊಂಡು, (ಪ್ರಳಯ-

ಕಾಲದಲ್ಲಿ ಸರ್ವವನ್ನೂ ಉದರದಲ್ಲಿ ಧರಿಸಿರುವ) ವಿಷ್ಣುವಿನ ಉದರವನ್ನು ಪ್ರವೇಶಿಸಿ ಶ್ರೀಹರಿಧ್ಯಾನದಿಂದ ಸ್ವರೂಪಾನಂದವನ್ನು ಅನುಭವಿಸುವರೆಂದು, ಹೇಳುತ್ತವೆ.'

ಸೃಷ್ಟಿಕಾಲದಲ್ಲಿ ವೈಕುಂಠಲೋಕವು ಬ್ರಹ್ಮಾಂಡದೊಳಗೆ (ಸತ್ಯಲೋಕದ ಮೇಲೆ) ಇರುತ್ತದೆ. ಪ್ರಳಯದಲ್ಲಿ ಬ್ರಹ್ಮಾಂಡವು ಲಯವಾಗಲು, ಅದರ ಬಹಿರಾವರಣಗಳಾದ ಜಲ, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ ಮತ್ತು ತ್ರಿಗುಣಗಳು, ಬ್ರಹ್ಮಾಂಡಸೃಷ್ಟಿಗೆ ಪೂರ್ವದಲ್ಲಿ ಸೂಕ್ಷ್ಮಸೃಷ್ಟಿಯಲ್ಲಿ ಸೃಷ್ಟರಾದ ತತ್ವಾಭಿಮಾನಿಗಳ ಸಮೇತ, ಕ್ರಮದಿಂದ ಲಯಗೊಳ್ಳುತ್ತವೆ. ಆ ಕಾಲಕ್ಕೆ ಬ್ರಹಾಂಡದೊಳಗಿದ್ದ ನಿತ್ಯವೈಕುಂಠವು, ನಿತ್ಯವಾದ ಅವ್ಯಾಕೃತಾಕಾಶ ಮತ್ತು ತ್ರಿಗುಣಾತ್ಮಕ ಪ್ರಕೃತಿಯ ಮಧ್ಯದಲ್ಲಿ ಬಂದು, ಶ್ರೀಹರಿಯ ಅಚಿಂತ್ಯಶಕ್ತಿಯಿಂದ, ಆತನ ಉದರ ಪ್ರವೇಶಮಾಡಿ ಅವ್ಯಕ್ತರೂಪದಿಂದ ಅಲ್ಲಿ ಸ್ಥಿತವಾಗುತ್ತದೆ. ಸೃಷ್ಟಿಕಾಲದಲ್ಲಿ (ಎಂದರೆ ಬ್ರಹ್ಮಾಂಡವು ಸೃಷ್ಟವಾದನಂತರ ಸ್ಥಿತಿಕಾಲದಲ್ಲಿ — ಪ್ರಳಯಪರ್ಯಂತ) ವಿರಜಾನದಿಯು, ಪರಮವ್ಯೋಮವೆಂದು ಕರೆಯಲ್ಪಡುವ ಶ್ರೀಹರಿಯ ಅಂತಃಪುರದ ಸುತ್ತಲೂ ಪ್ರವಹಿಸುತ್ತಲಿರುವುದು. ಬ್ರಹ್ಮಾಂಡದ ಬಹಿರಾವರಣಗಳು ಲಯಹೊಂದುತ್ತಿರಲು, ಆಗ ಅಲ್ಲಿರುವ ವಿರಜಾನದಿಯ ಸ್ನಾನದಿಂದ ಲಿಂಗದೇಹವು ಕಳಚುವುದೆಂದೂ ಹೇಳಲಾಗುತ್ತದೆ.

[ಈ ಪ್ರಮೇಯನಿರೂಪಣೆಯ ಸತ್ತತ್ವರತ್ನಮಾಲಾ ಮೂಲವಾಕ್ಯಗಳನ್ನು ಗ್ರಂಥವಿಸ್ತಾರಭಯದಿಂದ ಉದಾಹರಿಸಲಾಗಿಲ್ಲ.]

(೪) ಜಗತ್ಸೃಷ್ಟಿಯಲ್ಲಿ ರಜೋಗುಣವು ಹೇಗೆ ಉಪಯೋಗಿಸಲ್ಪಡುತ್ತದೆಂಬ ಪ್ರಮೇಯವು ವಿಷ್ಣುರಹಸ್ಯದಲ್ಲಿ ನಿರೂಪಿಸಲ್ಪಟ್ಟಿದೆ. ಈ ನಿರೂಪಣೆಯು ಇದೇ ನುಡಿಯ ವಿಶೇಷಾಂಶ (೨) ನ್ನು ಪ್ರಮಾಣೀಕರಿಸುತ್ತದೆ. ಅದು ಹೀಗಿದೆ—

*'ತತೋ ಮಮೇಚ್ಛಯೈವೈಷಾ ಲಕ್ಷ್ಮೀರ್ಭೂರೂಪಮಾಸ್ಥಿತಾ।'*
*ತತೋ ಭೂಸ್ತಮಸೋ ರಾಶೇಃ ಕಿಂಚಿಚ್ಚಕ್ರೇ ತಮಃ ಪೃಥಕ್॥*
*ಸತ್ವರಾಶೇಸ್ತಥಾ ಸತ್ವಂ ಪೃಥಕ್ಚೈ ವ ಚಕಾರ ಹ।*
*ವಿಲೋಡಯಾಮಾಸ ತಮಃ ಸತ್ವೇ ಸತ್ವಂ ತಮಸ್ಯಪಿ॥*
*ತತಸ್ತಸ್ಮಾ ತ್ಸಮಾದಾಯ ಮಿಶ್ರೀಭೂತಾದ್ಗುಣದ್ವಯಾತ್॥*
*ಭಾಗದ್ವಯಯುತಂ ಚಕ್ರೇ ಶಬಲಂ ತದ್ರಜೋಽಭವತ್॥*
*ಏವಂ ರಾಶಿತ್ರಯೇ ಜಾತೇ.......'*

**ಭಾವಾರ್ಥ:** 'ನನ್ನ ಇಚ್ಛೆಯಿಂದಲೇ ಲಕ್ಷ್ಮೀದೇವಿಯು ಭೂರೂಪಳಾದಳು; ತಮೋಗುಣರಾಶಿಯಿಂದ, ಸ್ವಲ್ಪ ತಮೋಗುಣವನ್ನು ಪ್ರತ್ಯೇಕಿಸಿದಳು; ಅದ-ರಂತೆ ಸತ್ವರಾಶಿಯಿಂದ ಸ್ವಲ್ಪ ಸತ್ವಗುಣವನ್ನು ಬೇರೆ ಮಾಡಿದಳು; ಅವುಗಳನ್ನು ಪರಸ್ಪರ ವಿಲೋಡನ ಮಾಡಿದಳು (ಚೆನ್ನಾಗಿ ಕಲೆಸಿ ಬೆರೆಸಿದಳು). ನಂತರ ಮಿಶ್ರೀಭೂತಗುಣದ್ವಯದಿಂದ, ಎರಡು ಭಾಗಗಳೂ ಸೇರಿದ ಒಂದು ರಾಶಿಮಾಡಿದಳು—ಅದೇ ರಜೋಗುಣವು—ಮಿಶ್ರಬಣ್ಣವುಳ್ಳದ್ದು—ಹೀಗೆ ರಾಶಿ ತ್ರಯವಾಗಲು.....'. ಪ್ರಳಯಕಾಲದಲ್ಲಿ ಈ ರಜೋಗುಣವು ನಷ್ಟಗೊಂಡು, ಸತ್ವ-ತಮೋಭಾಗಗಳು ಆಯಾ ರಾಶಿಯಲ್ಲಿ ಸೇರುತ್ತವೆ. ಸತ್ವ-ತಮೋ-ಗುಣರಾಶಿಗಳು ಮೊದಲಿನಂತೆ ಉಳಿಯುತ್ತವೆ. ಗುಣಸಾಮ್ಯವೇ ಲಯ ಗುಣವೈಷಮ್ಯವೇ ಸೃಷ್ಟಿಯೆಂಬುದರ ಭಾವವನ್ನು ಈ ವಿವರಣೆಯಿಂದ ಗ್ರಹಿಸಬಹುದು.

**ಲೆಕ್ಕವಿಲ್ಲದ ಮುಕ್ತಿ ಯೋಗ್ಯಜೀವರನು ಮುಸುಕಿರ್ದ**
**ಪ್ರಕೃತಿಯ ಕೆಡಿಸುವ**
**ಶಕ್ತಿ ವ್ಯಕ್ತಿಗಳಿಗೆ ಹರಿಯಂಗಸಂಗಾಡಿ**
**ದಕ್ಕವಾದಳು ಲಕ್ಷ್ಮೀದೇವೀ** ॥೬॥

**ಅರ್ಥ:** ಲೆಕ್ಕವಿಲ್ಲದ—ಅಸಂಖ್ಯಾತ, ಮುಕ್ತಿ ಯೋಗ್ಯಜೀವರನು—ಮುಕ್ತಿ ಯೋಗ್ಯಜೀವರ ಸ್ವರೂಪದೇಹಗಳನ್ನು, ಮುಸುಕಿರ್ದ—(ಅನಾದಿಕಾಲದಿಂದ) ಮುಚ್ಚಿರುವ, ಪ್ರಕೃತಿಯ—(ಲಿಂಗದೇಹರೂಪದಿಂದಿರುವ) ಪ್ರಕೃತಿಯನ್ನು, ಕೆಡಿಸುವ—ಬಿಡಿಸುವ (ನಷ್ಟಗೊಳಿಸುವ), ಶಕ್ತಿವ್ಯಕ್ತಿಗಳಿಗೆ—ಸಾಮರ್ಥ್ಯಗಳು ಪ್ರಕಟವಾಗುವುದಕ್ಕೆ, ಹರಿಯಂಗಸಂಗಾಡಿ—ಶ್ರೀಹರಿಯ ದೇಹಸಂಬಂಧದ (ಬೆವರೊಡನಿದ್ದ), ಲಕ್ಷ್ಮೀದೇವಿ—ಲಕ್ಷ್ಮೀದೇವಿಯು, ದಕ್ಕವಾದಳು—ದಕ್ಷ ಳಾದಳು (ಸಮರ್ಥಳಾದಳು).

**ವಿಶೇಷಾಂಶ:** ವಿರಜಾನದೀ ಸ್ನಾನವು ಲಿಂಗದೇಹಭಂಗವನ್ನುಂಟು ಮಾಡುವ ಸಾಮರ್ಥ್ಯವನ್ನು ಹೊಂದಿರುವುದು ಸಹ ಶ್ರೀಹರಿಯಿಂದಲೇ ಎಂಬುದರ ವಿವರಣೆಯಿದು.

**ಶ್ಲೋಕ ೨೩**

**ನಿಃಶ್ರೇಯಸಂ ಚ ನಿರ್ವಾಣಂ ಕೈವಲ್ಯಂ ಮೋಕ್ಷ ಉಚ್ಯತೇ**
**ನಾನಾಜಾತಿಸಮಾಕೀರ್ಣಂ ವೈಕುಂಠಂ ತದ್ಧರೇಃ ಪದಮ್॥**

**ಅರ್ಥ:** ಮೋಕ್ಷ — ಮೋಕ್ಷವು, ನಿಃಶ್ರೇಯಸಂ — ಅಪೇಕ್ಷಿತ ಸರ್ವಸ್ವವೂ ಸಿದ್ಧವಿರುವ ಅತ್ಯುತ್ತಮಸ್ಥಿತಿಯು, ನಿರ್ವಾಣಂ — ಪ್ರಾಕೃತದೇಹವಿಲ್ಲದ ಸ್ಥಿತಿಯು, ಕೈವಲ್ಯಂ ಚ — ಅಯೋಗ್ಯಾಶ್ರಯವಿಲ್ಲದ ಸ್ವರೂಪಸ್ಥಿತಿಯು, ಉಚ್ಯತೇ — (ಎಂದು) ಹೇಳಲ್ಪಡುತ್ತದೆ. ತತ್ ವೈಕುಂಠಂ — ಆ ಮೋಕ್ಷಸ್ಥಾನವೇ ವೈಕುಂಠವು; ಹರೇಃ ಪದಂ — ಶ್ರೀಹರಿಯ ಸ್ಥಾನವು (ನಿತ್ಯಪ್ರಕಟನಾಗಿ, ಮುಕ್ತಾಭೀಷ್ಟ-ದಾಯಕನಾಗಿ ವಿರಾಜಿಸುವ ಸ್ಥಾನವು); ನಾನಾಜಾತಿ ಸಮಾಕೀರ್ಣಂ — ಬಹುಬಗೆಯ ಮುಕ್ತ ಜೀವಸಮೂಹಗಳಿಂದ ಪೂರ್ಣವಾದುದು.

### ಪದ ೧೮

ರಾಗ-ವಸಂತಭೈರವಿ; ತಾಳ-ಝಂಪೆ

**ವಿರಜೆಯೆಂಬ ಪಟ್ಟಣದೊಳು ಮುಕ್ತರ**
**ವಿರಿಂಚಾದಿ ಸುರರು ಮಾನವರು**
**ತರುಪಕ್ಷಿಮೊದಲಾದ ನಾನಾಜಾತಿಯರಿಹರು**
**ವರಪ್ರಭಾವ ತಮಗಿಂಬುಗೊಡದು** ॥೧॥

**ಅರ್ಥ:** ವಿರಜೆಯೆಂಬ — ತ್ರಿಗುಣಗಳಿಲ್ಲದ್ದರಿಂದ **'ವಿರಜಾ'** ಎಂದು ಕರೆಯ-ಲ್ಪಡುವ, ಮುಕ್ತರ ಪಟ್ಟಣದೊಳು — ಮುಕ್ತರು ವಾಸಿಸುವ ನಗರಿಗಳಲ್ಲಿ, ವಿರಿಂಚಾದಿ ಸುರರು — ಬ್ರಹ್ಮಾದಿ ದೇವತೆಗಳು, ಮಾನವರು — ಮನುಷ್ಯರು, ತರು, ಪಕ್ಷಿ ಮೊದಲಾದ — ವೃಕ್ಷ, ಪಕ್ಷಿ, ಮೊದಲಾದ, ನಾನಾಜಾತಿಯ-ರಿಹರು — ನಾನಾವರ್ಗದ ಮುಕ್ತ ಜೀವರಿದ್ದಾರೆ; ವರಪ್ರಭಾವ — (ಉತ್ತಮರ) ವರಬಲವು, ತಮಗೆ — ಆ ಮುಕ್ತರಿಗೆ, ಇಂಬುಗೊಡದು — ಆಶ್ರಯವಲ್ಲ (ಇಚ್ಛಿತ ಸರ್ವಸ್ವವನ್ನೂ ಹೊಂದುವರೆಂಬ ಮುಕ್ತರ ಸತ್ಯಸಂಕಲ್ಪರೂಪ ಸಾಮರ್ಥ್ಯವು, ಸ್ವಾಭಾವಿಕವು; ವರಬಲದಿಂದ ಬಂದುದಲ್ಲ).

**ಜಾತಿಹೀನರೆಂದು ನೀಕರಿಸದಿರು ಶ್ರೀ-**
**ಪತಿ ಮತ್ಸ್ಯಕೂರ್ಮಾಕೃತಿಯಿಂ**
**ಖ್ಯಾತನಾಗಿರನೆ ಬಲ್ಲವರು ಆ ರೂಪಗಳ**
**ಓಡು ಮನ್ನಿಸುತ ತುತಿಸುವರು** ॥೨॥

ಅರ್ಥ: ಜಾತಿಹೀನರೆಂದು — (ಅವರವರ ಸ್ವರೂಪಾಕೃತಿ ಮತ್ತು ಗುಣಗಳ ನಿಮಿತ್ತ) ವರ್ಗಭೇದವುಳ್ಳವರಾಗಿ ಉಚ್ಚನೀಚತರತಮಗಳುಳ್ಳವರೆಂಬ ಕಾರಣ-

ದಿಂದ, ನೀಕರಿಸದಿರು—ಮುಕ್ತರನ್ನು (ಇವರು ಹೀನರು-ನೀಚರು ಎಂದು) ನಿರಾಕರಿಸಬೇಡ; ಶ್ರೀಪತಿ—ನಾರಾಯಣನು, ಮತ್ಸ್ಯಕೂರ್ಮಾಕೃತಿಯಿಂ—ಮೀನು, ಆಮೆ, ರೂಪಗಳಿಂದ, ಖ್ಯಾತನಾಗಿರನೆ—ಪ್ರಸಿದ್ಧಮಹಿಮನಾಗಿಲ್ಲವೇ? ಬಲ್ಲವರು—ಜ್ಞಾನಿಗಳು, ಆ ರೂಪಗಳ—ಆ ರೂಪಗಳನ್ನು, ಓಡು—ಮನಮೆಚ್ಚಿ (ಭಕ್ತಿಯಿಂದ), ಮನ್ನಿಸುತ—ಪೂಜಿಸುತ್ತ, ತುತಿಸುವರು—ಸ್ತುತಿಸುವುದಿಲ್ಲವೇ?

**ವಿಶೇಷಾಂಶ:** (೧) ಮುಕ್ತರಲ್ಲಿ ತರತಮಭಾವಗಳಿದ್ದರೂ, ಎಲ್ಲರೂ ಸತ್ಯಕಾಮರು, ದುಃಖಾದಿ ದೋಷರಹಿತರು, ಪೂರ್ಣಾನಂದವುಳ್ಳವರು, ಜ್ಞಾನಪೂರ್ಣರು ಇತ್ಯಾದಿ ಮಹಿಮೆಗಳಿಂದ, ಬಂಧನದಲ್ಲಿರುವ ಸಂಸಾರಿಜೀವರಿಂದ ವಿಲಕ್ಷಣರಾಗಿರುವವರು—ವಂದ್ಯರೇ ಆಗಿರುವರು. ವೃಕ್ಷ-ಪಕ್ಷಿ ಮೊದಲಾದ ಅವರ ಆಕೃತಿಗಳಿಂದ ಅವರನ್ನು ಹೀನರೆಂದು ಬಗೆಯಲಾಗದು. ಆಕಾರವು ಹೀನತ್ವಭಾವನೆಗೆ ಕಾರಣವಲ್ಲವೆಂಬಲ್ಲಿ ಮಾತ್ರ, ಮತ್ಸ್ಯ-ಕೂರ್ಮಾದಿ ಶ್ರೀಹರಿಯ ಅವತಾರರೂಪಗಳ ದೃಷ್ಟಾಂತವೆಂದು ತಿಳಿಯಬೇಕು.

(೨) ಮುಕ್ತರಲ್ಲಿ ನಾನಾ ಆಕೃತಿ ನಿಮಿತ್ತವಾದ ಜಾತಿ (ಗುಂಪು)ಗಳಿರುವಂತೆ, ಬ್ರಾಹ್ಮಣಾದಿ ವರ್ಣಭೇದದಿಂದ ಸಹ, ಜಾತಿಗಳಿವೆ. ಮುಕ್ತಮನುಷ್ಯೋತ್ತಮ ಜೀವರಲ್ಲಿ ಸಹ, ಜಾತಿಗಳು (ವರ್ಣಭೇದಗಳು) ಹೀನತ್ವಭಾವನೆಗೆ ಕಾರಣವಲ್ಲ. ಮುಕ್ತರೆಲ್ಲರೂ ಸ್ವಾವರರಿಂದ ಪೂಜ್ಯರೂ ಸೇವ್ಯರೂ ಆಗಿರುವರು ಮತ್ತು ಉತ್ತಮರಿಂದ ಉಚಿತವಾಗಿ ಗೌರವಿಸಲ್ಪಡುತ್ತಾರೆ.

*'**ಬ್ರಾಹ್ಮಣಾದ್ಯಾಶ್ಚತುರ್ವರ್ಣಾ** ಆದ್ಯಾ ಯೇ ಪರಿಕೀರ್ತಿತಾಃ।*
*ಮೂರ್ಧಾವಸಿಕ್ತಸೂತಾದ್ಯಾ ಅನುಲೋಮವಿಲೋಮಿನಃ॥*
*ದ್ವಿತೀಯಾ ದ್ವಾದಶೈವಂ ಸ್ಯುರ್ನೃಪ ಷೋಡಶಜಾತಯಃ।*
*ಏತಜ್ಜಾತೀಯಯೋಷಾಭಿಃ ಸ್ವೀಯಾಭಿಃ ಸರ್ವದೈವ ತು।*
*ಸ್ವರೂಪಾನಂದಮಾಪನ್ನಾ ಮೋದಂತೇ ವಿಷ್ಣುಸದ್ಮಸು॥'* (ವಿಷ್ಣುರಹಸ್ಯ)

ಎಂಬಲ್ಲಿ 'ಬ್ರಾಹ್ಮಣಾದಿ ಮೊದಲಿನ ನಾಲ್ಕು ವರ್ಣಗಳು. ಮೂರ್ಧಾವಸಿಕ್ತ, (ಬ್ರಾಹ್ಮಣಪುರುಷ ಕ್ಷತ್ರಿಯಸ್ತ್ರೀಯರಿಗೆ ಹುಟ್ಟಿದವನು). ಸೂತ (ಕ್ಷತ್ರಿಯ ಪುರುಷ ಬ್ರಾಹ್ಮಣ ಸ್ತ್ರೀಯರಿಗೆ ಹುಟ್ಟಿದವನು), ಮೊದಲಾದ ಅನುಲೋಮ ಪ್ರತಿಲೋಮಜಾತಿಗಳಿಗೆ ಸೇರಿದ ೧೨ ಜಾತಿಗಳೆಂಬ ಎರಡನೇ ವರ್ಗದವರು, ಹೀಗೆ ಒಟ್ಟು ೧೬ ಜಾತಿಯ ಪುರುಷರು ತಮ್ಮ ವರ್ಗದ ಸ್ತ್ರೀಯರಿಂದ ಸಹಿತವಾಗಿ, ಸ್ವರೂಪಾನಂದವನ್ನು ಹೊಂದಿ ವಿಷ್ಣುಲೋಕದಲ್ಲಿ ವಿಹರಿಸುವರು'

ಎಂದು ಹೇಳಲಾಗಿದೆ. ಈ ಹದಿನಾರು ಜಾತಿಗಳಿಂದ ಮುಂದೆ ಸಹಸ್ರಾರು ಸಂಕರ ಜಾತಿಗಳು ಲೋಕದಲ್ಲಿ ಹುಟ್ಟುತ್ತವೆ. ಆದರೆ ಆ ಜಾತಿಗಳು ಸ್ವರೂಪ-ದಲ್ಲಿಲ್ಲ. ಮೂಲಭೂತ ೧೬ ಜಾತಿಗಳು ಸ್ವರೂಪದಲ್ಲಿ ಸಹ ಉಂಟೆಂದು ಹೇಳಲಾಗುತ್ತದೆ. ಎಂದರೆ, ಈ ೧೬ ಜಾತಿಯ ಜೀವರಲ್ಲಿ ಕಂಡುಬರುವ ಎಲ್ಲ ಸದ್ಗುಣಗಳು ಆ ಜಾತಿಯ ಮುಕ್ತ ಜೀವಸ್ವರೂಪಗಳಲ್ಲಿ ಪರಿಪೂರ್ಣ-ವಾಗಿರುವುವೆಂದರ್ಥ.

**ಬೆಲ್ಲದ ಜೇನಿನಿಂದ ಮಾಡಿದ ಕಾಸಾರ**
**ಸಲ್ಲದೇ ಬಲ್ಲ ಬುಧರಿಗೆ**
**ಕಲ್ಲೆಂದು ಬಿಡುವರೆ ಮಾಣಿಕ್ಯರತ್ನವ**
**ಅಲ್ಲಿರ್ದ ಜಾತಿ ಶೋಭನವು** ॥೩॥

**ಅರ್ಥ:** ಬೆಲ್ಲದ ಜೇನಿನಿಂದ—ಸಿಹಿಯಾದ ಜೇನುತುಪ್ಪದಿಂದ, ಮಾಡಿದ—ತಯಾರಿಸಿದ, ಕಾಸಾರ—ಸರೋವರವು, ಬಲ್ಲಬುಧರಿಗೆ—ಹರಿಯ ಅದ್ಭುತ ಮಹಿಮಾಜ್ಞಾನವುಳ್ಳವರಿಗೆ, ಸಲ್ಲದೇ—ಮನಸ್ಸಿಗೆ ಒಪ್ಪುವುದಿಲ್ಲವೆ? (ಆನಂದಕೊಡುವುದಿಲ್ಲವೇ?) ಮಾಣಿಕ್ಯರತ್ನವ—'ಮಾಣಿಕ್ಯ'ವೆಂಬ ರತ್ನವನ್ನು, ಕಲ್ಲೆಂದು—ಕಲ್ಲಿನ ಜಾತಿಗೆ ಸೇರಿದುದೆಂದು, ಬಿಡುವರೆ—(ಸ್ವೀಕರಿಸದೆ—ಗೌರವಿಸದೆ) ಬಿಡುವರೇ? ಅಲ್ಲಿರ್ದ ಜಾತಿ—ಅಲ್ಲಿರುವ ಜಾತಿಯೇ, ಶೋಭನವು—ಶುಭವು (ಮಾಣಿಕ್ಯದಲ್ಲಿರುವ ಜಾತಿ ಎಂಬ ಧರ್ಮವೇ ಪವಿತ್ರವಾದುದು). [ಅದರಂತೆ ಎಲ್ಲ ಮುಕ್ತರ, ಮುಕ್ತರೆಂಬ ಜಾತಿಯೇ—ಆ ಗುಂಪಿನ ಧರ್ಮವೇ ಶುಭವೆಂದು ಭಾವ.]

**ಉರಗ ಗರುಡ ಹಂಸ ವೃಷ ಮೇಷ**
**ತುರಗ ಮಹಿಷ ಮಕರ ಕರಿಗಳು**
**ಸುರರು ಮನ್ನಿಸಿಕೊಳರೆ ಶಾಮಶಬಳರನು**
**ನರರಿಲ್ಲಿ ನಿರುತ ಪೂಜಿಸರೇ** ॥೪॥

**ಅರ್ಥ:** ಉರಗ—ಸರ್ಪ, ಗರುಡ, ಹಂಸ, ವೃಷ—ಎತ್ತು (ವೃಷಭ), ಮೇಷ—ಹೋತ, ತುರಗ—ಕುದುರೆ, ಮಹಿಷ—ಕೋಣ, ಮಕರ—ಮೊಸಳೆ, ಕರಿಗಳು—ಆನೆ (ಇವುಗಳನ್ನು), ಸುರರು—ದೇವತೆಗಳು, ಮನ್ನಿಸಿ-ಕೊಳರೆ—(ಅವುಗಳ ಜಾತಿಗಳನ್ನು ಗೌರವಿಸಿ ತಮ್ಮ ವಾಹನಗಳಿಗಾಗಿ)

ಸ್ವೀಕರಿಸದಿರುತ್ತಾರೆಯೇ? (ಸ್ವೀಕರಿಸುವುದಿಲ್ಲವೇ?); ಇಲ್ಲಿ—ಈ ವೈಕುಂಠದಲ್ಲಿ, ನರರು—ಮುಕ್ತಮನುಷ್ಯರು, ಶಾಮ ಶಬಳರನು—ನೀಲವರ್ಣ ಮಿಶ್ರವರ್ಣಗಳೆಂಬ ವರ್ಣನಿಮಿತ್ತ ಭಿನ್ನ ಜಾತಿಯವರೆಂದು (ಸ್ತೋತ್ತಮರನ್ನು) ನಿರುತ—ತಪ್ಪದೇ, ಪೂಜಿಸರೇ—ಪೂಜಿಸದಿರುತ್ತಾರೆಯೇ?

**ಉತ್ತರಲೋಕದಿ ನಾನಾಜಾತಿಗಳಿಗೆ**
**ಉತ್ತಮಾಶೆಯು ತಪ್ಪದೆನಲು**
**ಚಿತ್ತಿನ ಪುತ್ಥಳಿಯಾಗಿ ಮುಕ್ತಿಯೊಳಿರ್ದ**
**ಚಿತ್ರಜಾತಿಗಳ ಬಣ್ಣಿಪರು ॥೫॥**

**ಅರ್ಥ:** ಉತ್ತರಲೋಕದಿ—ಸ್ವರ್ಗಾದಿ ಮೇಲಿನ ಲೋಕಗಳಲ್ಲಿ, ನಾನಾ ಜಾತಿಗಳಿಗೆ—(ತರತಮಭಾವಗಳುಳ್ಳ) ವಿವಿಧವರ್ಗದ ಜೀವರಿಗೆ, ಉತ್ತಮಾಶೆಯು—ಶ್ರೇಷ್ಠವಾದ ಅಭೀಷ್ಟಗಳು, ತಪ್ಪದೆನಲು—ದೊರೆಯದಿರವೆಂದು (ತಪ್ಪುವುದಿಲ್ಲವೆಂದು) ಹೇಳುವಾಗ, ಚಿತ್ತಿನ—ಜ್ಞಾನದ, ಪುತ್ಥಳಿಯಾಗಿ—ಪ್ರತಿಮೆ (ಮೂರ್ತಿ)ಯಾಗಿ (ಜ್ಞಾನಾದಿ ಗುಣಗಳೇ ದೇಹವಾಗುಳ್ಳ), ಮುಕ್ತಿಯೊಳಿರ್ದ—ಮುಕ್ತಲೋಕಗಳಲ್ಲಿರುವ, ಚಿತ್ರಜಾತಿಗಳ—ವಿವಿಧ ಜೀವಸಮೂಹಗಳನ್ನು, ಬಣ್ಣಿಪರು!—ವರ್ಣಿಸುವುದೇನತಿಶಯ. (ಇಚ್ಛಿತ ಸರ್ವವನ್ನು ಮುಕ್ತರು, ಜಾತಿಭೇದವಿಲ್ಲದೆಯೇ ಹೊಂದುವರೆಂದು ಅವರ ಮಹಿಮೆಯನ್ನು ವರ್ಣಿಸುವುದು ಯಾವ ಯುಕ್ತಿಗೂ ವಿರೋಧವಲ್ಲವೆನ್ನುತ್ತಾರೆ.)

**ವಿಶೇಷಾಂಶ:** ಜೀವಸ್ವರೂಪಗಳು ನಾನಾ ಆಕಾರಗಳುಳ್ಳವು. ಪಶು, ಪಕ್ಷಿ, ವೃಕ್ಷಾದಿರೂಪವುಳ್ಳವರೂ ಇರುವರು. ಎಲ್ಲರ ದೇಹಗಳೂ ಜ್ಞಾನಾತ್ಮಕವೇ—ಪ್ರಾಕೃತವಲ್ಲ. ಆದ್ದರಿಂದಲೇ ವಿಕಾರವಿಲ್ಲದ ನಿತ್ಯದೇಹಗಳು. ಎಲ್ಲರೂ ಸುಖಸ್ವರೂಪರು—ದುಃಖಲೇಶವೂ ಇಲ್ಲದವರು. 'ಮುಕ್ತನು ದುಃಖರಹಿತನಾದರೆ, ಸುಖವುಳ್ಳವನೂ ಅಲ್ಲ—ಸಂಸಾರಿ ಜೀವರಲ್ಲಿ ಸುಖದುಃಖಗಳ ಸಾಹಚರ್ಯವು ಕಂಡುಬರುವುದರಿಂದ' ಎಂಬ ತರ್ಕದಿಂದ, ಮುಕ್ತನಿಗೆ ಸುಖದುಃಖಗಳೆರಡರ ಅಭಾವವನ್ನು ತಿಳಿಯುವ ಮಂದಮತಿಯು, ಮುಕ್ತನಿಗೆ, 'ಮುಕ್ತನು, ಸ್ವರೂಪಶೂನ್ಯನು, ಚೇತನತ್ವವಿದ್ದೂ ದುಃಖರಹಿತನಾದ್ದರಿಂದ; ಸ್ವರೂಪಶೂನ್ಯನಲ್ಲದವನು ದುಃಖರಹಿತನೂ ಅಲ್ಲ, (ವ್ಯತಿರೇಕದಿಂದ) ಸಂಸಾರಿಜೀವನಂತೆ' ಎಂಬ ತರ್ಕದಿಂದ, ಸ್ವರೂಪವೂ ಇಲ್ಲೆಂದು ಬಗೆದರೆ, ಶೂನ್ಯವಾದಿಯೇ ಆಗುವನಲ್ಲವೇ!

*'ದುಃಖವ್ಯಾಪ್ತಂ ಸುಖಂ ಬದ್ಧೇ ದೃಷ್ಟ್ವಾ ಮುಕ್ತೇರ್ನಿರಸ್ಯತಾ।*
*ಸ್ವರೂಪಂ ಚ ನಿರಸ್ಯೇತ ಶೂನ್ಯವಾದೀ ತದಾ ಭವೇತ್॥'*

ಎಂಬಲ್ಲಿ (ಸುಮಧ್ವವಿಜಯ) ಮುಕ್ತನಿಗೆ ಸ್ವರೂಪವನ್ನು ಒಪ್ಪಲೇಬೇಕೆಂಬ ವಿಷಯವನ್ನು ವಿಮರ್ಶಿಸಿ ನಿಶ್ಚಯಿಸಲಾಗಿದೆ. ಸ್ವರೂಪವೇ ಇಲ್ಲವೆಂದರೆ ಮೋಕ್ಷವು ಪುರುಷಾರ್ಥವೇ ಆಗಲಾರದು.

## ಶ್ರುತಿ ೨-೩

*ಸರ್ವೇ ನಂದಂತಿ ಯಶಸಾಗತೇನ ಸಭಾಸಾಹೇನ ಸಖ್ಯಾ ಸಖಾಯಃ।*
*ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ॥*

*ಋಚಾಂತ್ವಃಪೋಷಮಾಸ್ತೇ ಪುಪುಷ್ವಾನ್*
*ಗಾಯತ್ರಂತ್ವೋ ಗಾಯತಿ ಶಕ್ವರೀಷು।*
*ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ*
*ಯಜ್ಞಸ್ಯ ಮಾತ್ರಾಂ ವಿಮಿಮೀತ ಉತ್ವಃ॥*

**ಭಾವಾರ್ಥ:** ಮುಂದಿನ ಪದದ ೩-೪ನೇ ನುಡಿಗಳಲ್ಲಿ ಮೊದಲಿನ ಶ್ರುತ್ಯರ್ಥವನ್ನೂ, ೫-೬ನೇ ನುಡಿಗಳಲ್ಲಿ ಎರಡನೆಯ ವಾಕ್ಯದ ಅರ್ಥವನ್ನೂ, ಗ್ರಂಥಕರ್ತರೇ ವಿವರಿಸಿರುವರು. ಅವುಗಳ ಸಂಕ್ಷಿಪ್ತತಾತ್ಪರ್ಯವು ಹೀಗಿದೆ: ಬಾಹ್ಯಾಂತಃಕರಣಾದಿ ದುಃಖಜನಕ ಮೂಲಕಾರಣಗಳುಳ್ಳ ಲಿಂಗದೇಹವನ್ನು ಕಳೆದು, ತಮಗೆ ಇಚ್ಛಿತಭೋಗಗಳನ್ನು ಸಂಕಲ್ಪಮಾತ್ರದಿಂದ ದೊರಕಿಸುವ, ಪವಿತ್ರ ಯಶಸ್ಸುಳ್ಳ ತಮ್ಮ ನಿತ್ಯಸಖನಾದ ಹಯವದನಸ್ವಾಮಿಯನ್ನು, ಮುಕ್ತರು, ತಮ್ಮ ಸಭೆಗಳಲ್ಲಿ ಆನಂದದಿಂದ ಗಾನಮಾಡುತ್ತಾ ನಮಸ್ಕರಿಸುತ್ತಾರೆ.

ಮುಕ್ತರಾದ ಬ್ರಹ್ಮರು ಅಸಂಖ್ಯಾತರಾಗಿರುವರು. ಅವರಲ್ಲಿ ಒಬ್ಬನು ಋಗ್ವೇದ ಮಂತ್ರಗಳನ್ನು ಅತ್ಯಂತ ಸ್ಪಷ್ಟವಾಗಿ ಉಚ್ಚರಿಸುತ್ತಿರುವನು; ಇನ್ನೊಬ್ಬ ಬ್ರಹ್ಮನು, ಶಕ್ವರೀ ಛಂದಸ್ಸಿನ ಋಕ್ಕುಗಳಲ್ಲಿ 'ಗಾಯತ್ರ'ವೆಂಬ ಸಾಮವನ್ನು ಗಾನಮಾಡುತ್ತಿರುವನು; ಇನ್ನೊಬ್ಬನು ಪುರಾಣಾದಿ ಪೌರುಷೇಯಗ್ರಂಥಗಳನ್ನು ಅನುವಾದ ಮಾಡುತ್ತಿರುವನು; ಮತ್ತೊಬ್ಬನು, ಯಜ್ಞನಾಮಕ ವಿಷ್ಣುವಿನ ಅಂಶವನ್ನು ಚಿಂತಿಸುತ್ತಿರುವನು.

**ವಿಶೇಷಾಂಶ:** ಅನೇಕ ಮುಕ್ತಬ್ರಹ್ಮರು ವಿವಿಧಕಾಲಗಳಲ್ಲಿ, ನಾನಾ ಪ್ರಕಾರದಿಂದ ಶ್ರೀಹರಿಯನ್ನು ಉಪಾಸಿಸುತ್ತಾರೆ. ಬ್ರಹ್ಮ ಶಬ್ದವು ಸ್ವಯೋಗ್ಯ

ಪೂರ್ಣತ್ವವನ್ನು ಹೊಂದಿದ ಮುಕ್ತಜೀವಸಾಮ್ಯವಾಚಕವೂ ಆಗಿದೆ. ಆದ್ದರಿಂದ, ಬ್ರಹ್ಮಾದಿ ಸಕಲ ಮುಕ್ತಜೀವರಿಂದ ಸೇವ್ಯನಾದ ಶ್ರೀಹರಿಯೇ ಸರ್ವೋತ್ತಮನೆಂದೂ, ಮುಕ್ತಿಯಲ್ಲಿ ಸಹ, ಭೇದ ಮತ್ತು ತಾರತಮ್ಯಗಳುಂಟೆಂದೂ ಈ ಶ್ರುತಿಗಳು ಸಾಧಿಸುತ್ತವೆಂಬುದು ಸ್ಪಷ್ಟವಿದೆ.

## ಪದ ೧೯

ರಾಗ-ಕಾಂಬೋದಿ; ತಾಳ-ರೂಪಕ

**ಯತ್ರ ಬ್ರಹ್ಮಾ ಪವಮಾನಛಂದಸ್ಯಾಂ ವಾಚಂ ವದನ್**
**ಇತ್ಯಾದಿ ವೇದವೇ**
**ಮುಕ್ತಿಯಲಿಪ್ಪ ಬ್ರಹ್ಮಾದಿಜೀವರ**
**ವರ್ತನೆಯನು ವರ್ಣಿಸುತಲಿದಕೋ** ॥೧॥

**ಅರ್ಥ:** ಯತ್ರ ಬ್ರಹ್ಮಾ ಪವಮಾನಛಂದಸ್ಯಾಂ ವಾಚಂ ವದನ್—ಯಾವ ವೈಕುಂಠದಲ್ಲಿ, ಮುಕ್ತಬ್ರಹ್ಮನು, ಪರಮಾನಸೂಕ್ತದಲ್ಲಿರುವ ವಾಕ್ಯಗಳನ್ನು ಪಠಿಸುತ್ತಾ, ಇತ್ಯಾದಿ ವೇದವೇ—ಈ ಮೊದಲಾದ ಅರ್ಥವನ್ನು ಹೇಳುವ ವೇದವೇ, ಮುಕ್ತಿಯಲ್ಲಿಪ್ಪ—ಮುಕ್ತಸ್ಥಾನಗಳಲ್ಲಿರುವ, ಬ್ರಹ್ಮಾದಿ ಜೀವರ—ಬ್ರಹ್ಮನೇ ಮೊದಲಾದ ಜೀವರ, ವರ್ತನೆಯನ್ನು—ನಡವಳಿಕೆಗಳನ್ನು, ವರ್ಣಿಸುತಲಿದಕೋ—ವರ್ಣಿಸುತ್ತಿದೆ, ನೋಡು. (ಬೇರೇನು ಪ್ರಮಾಣ ಬೇಕು ಮುಕ್ತರ ಭೇದ ಮತ್ತು ಸ್ವರೂಪಾದಿಗಳನ್ನು ತಿಳಿಯಲು!)

**ಹರಿಪುರದೊಳಗಿಪ್ಪ ಸಕಲ ಮುಕ್ತರುಗಳ**
**ಇರವ ಬಣ್ಣಿಸಿ ಪೊಗಳುವ**
**ಸರ್ವೇ ನಂದಂತೀತ್ಯಾದಿ ಯೆಂಬರ್ಥವನೆ**
**ವರೆವೆನು ಕೇಳಿ ಸಜ್ಜನರು** ॥೨॥

**ಅರ್ಥ:** ಹರಿಪುರದೊಳಗಿಪ್ಪ—ವೈಕುಂಠದ ರಾಜಧಾನಿಯಲ್ಲಿರುವ, ಸಕಲ ಮುಕ್ತರುಗಳ—ಎಲ್ಲ ಮುಕ್ತಜೀವರ, ಇರವ—ಸ್ಥಿತಿಪ್ರಕಾರವನ್ನು, ಬಣ್ಣಿಸಿ ಪೊಗಳುವ—ವರ್ಣಿಸಿ ಹೇಳುವ, ಸರ್ವೇ ನಂದಂತೀತ್ಯಾದಿ—ಸರ್ವರೂ ಆನಂದಭರಿತರೆಂದು ಮುಂತಾಗಿ, ಎಂಬರ್ಥವನೆ—ಹೇಳುವ ಫಲವನ್ನೇ (ಪುರುಷಾರ್ಥವನ್ನೇ), ವರೆವೆನು—ಹೇಳುವೆನು, ಸಜ್ಜನರು—ಹರಿಭಕ್ತರು, ಕೇಳಿ—ಕೇಳಿ ಅದರಲ್ಲಿ ನಿಷ್ಠೆಯನ್ನು ಹೊಂದಿರಿ.

**ಹೃದಯದ ಪಾಪವ ತೊಳೆವನವ ನೀವು**
**ಪದುಮನಾಭನೆ ಮುಕ್ತರುಗಳ**
**ಕುದುರೆಯಂತೆ ಕುಣಿವ ಕಣ್ಗೆ ಗೋಚರನಾಗಿ**
**ಒದಗಿಸಿಕೊಡುವ ಸುಖಾದಿಗಳ ॥೩॥**

**ಅರ್ಥ:** ನೀವು—ಸಂಸಾರಿಗಳಾದ ಸುಜೀವರು, ಕೇಳಿ—(ಹಿಂದಿನ ನುಡಿಯಿಂದ ಆವೃತ್ತಿಮಾಡಿಕೊಳ್ಳಬೇಕು) ಕೇಳಿರಿ; ಅವ—ಶ್ರೀಹರಿಯೇ, ಹೃದಯದ ಪಾಪವ—ಸಂಸಾರಕ್ಕೆ ಕಾರಣವಾದ ಮನಸ್ಸಿನ ದೋಷವನ್ನು (ಲಿಂಗದೇಹವೆಂಬ ಪ್ರಾಕೃತಬಂಧವೆಂಬ ದೋಷವನ್ನು), ತೊಳೆವನು—(ವಿರಜಾನದಿಯಲ್ಲಿ) ಕಳೆದು ಶುದ್ಧಸ್ವರೂಪರನ್ನಾಗಿ ಮಾಡುವನು; ಮುಕ್ತರುಗಳ—ಮುಕ್ತಜೀವರ, ಕಣ್ಗೆ ಗೋಚರನಾಗಿ—ಕಣ್ಣುಮುಂದೆ ನಿಂತು (ಪ್ರತ್ಯಕ್ಷನಾಗಿ), ಪದುಮನಾಭನೆ—ಆ ಪದ್ಮನಾಭನೇ (ಶ್ರೀಹರಿಯೇ), ಕುದುರೆಯಂತೆ ಕುಣಿವ—ಕುದುರೆಯಂತೆ (ಮುಕ್ತರನ್ನು ಆಕರ್ಷಿಸಿ) ನರ್ತಿಸುತ್ತಾನೆ; ಸುಖಾದಿಗಳ—ಇಚ್ಛಿತಭೋಗಗಳನ್ನು, ಒದಗಿಸಿಕೊಡುವ—ಯಾವ ಯತ್ನವೂ ಬೇಕಿಲ್ಲದೆ ತತ್ಕಾಲದಲ್ಲಿ ಸಿದ್ಧಪಡಿಸುತ್ತಾನೆ.

**ಅಲ್ಲಲ್ಲಿ ಪಾಡುವ ಮುಕ್ತರ ಸಭೆಗಳ**
**ಉಲ್ಲಾಸವ ಕಂಡು ತಾ ತಳಿವ**
**ಬಲ್ಲಿದ ಯಶಸ್ಸುಳ್ಳ ಹರಿಯೆಂಬ ಸಖನಿಂದ**
**ಎಲ್ಲ ಮುಕ್ತರು ಸುಖಿಸುವರು ॥೪॥**

**ಅರ್ಥ:** ಅಲ್ಲಲ್ಲಿ—ಆಯಾ ಮುಕ್ತಸ್ಥಾನಗಳಲ್ಲಿ (ವೈಕುಂಠಾದಿ ಸ್ಥಾನಗಳಲ್ಲಿ), ಪಾಡುವ—ತನ್ನ ಗುಣಗಾನದಲ್ಲಿ ತೊಡಗಿರುವ, ಮುಕ್ತರ ಸಭೆಗಳ—ಮುಕ್ತಸಮೂಹಗಳ, ಉಲ್ಲಾಸವ ಕಂಡು—ಲವಲವಿಕೆಯನ್ನು ನೋಡಿ, ತಾ ತಳಿವ—ತಾನು (ಅವರಿಗೆ) ಕಾಣಿಸಿಕೊಳ್ಳುತ್ತಾನೆ; (ಪ್ರಸನ್ನನಾಗುತ್ತಾನೆ); ಬಲ್ಲಿದ ಯಶಸ್ಸುಳ್ಳ—ಮಹಾಯಶಸ್ಸುಳ್ಳ (ಉತ್ತಮ ಕೀರ್ತಿಯುಳ್ಳ), ಹರಿಯೆಂಬ—ಶ್ರೀಹರಿಯೆಂಬ, ಸಖನಿಂದ—ಸದಾ ತಮ್ಮೊಡನಿರುವ ಪ್ರಿಯಸ್ನೇಹಿತನಿಂದ ಕೂಡಿ, ಎಲ್ಲ ಮುಕ್ತರು ಸುಖಿಸುವರು—ಸರ್ವಮುಕ್ತರು ಆನಂದಿಸುತ್ತಾರೆ.

**ಒಬ್ಬ ಬ್ರಹ್ಮನು ಋಗ್ವಾಕ್ಯವ ಪೋಷಿಸುವ ಗಡ ಮ-**
**ತ್ತೊಬ್ಬ ಗಾಯತ್ರ ಸಾಮವನು**

**ಉಬ್ಬಿದ ಮನದಿಂದ ಗಾನವ ಪಾಡುತ್ತ**
**ಒಬ್ಬ ಬ್ರಹ್ಮನು ಪುರಾಣಗಳ** **॥೫॥**

**ಅರ್ಥ:** ಒಬ್ಬ ಬ್ರಹ್ಮನು— ಮುಕ್ತಬ್ರಹ್ಮರನೇಕರಲ್ಲಿ ಒಬ್ಬನು, ಋಗ್ವಾಕ್ಯವ— ಋಗ್ವೇದಮಂತ್ರಗಳನ್ನು, ಪೋಷಿಸುವ ಗಡ— ಪೋಷಿಸುತ್ತಿರುವನು, (ಅಧ್ಯಯನ ಮಾಡುತ್ತಿರುವನು ನೋಡು!), ಮತ್ತೊಬ್ಬ— ಮುಕ್ತಬ್ರಹ್ಮನು, ಗಾಯತ್ರ ಸಾಮವನು— **'ಗಾಯತ್ರ'**ವೆಂಬ ಸಾಮವೇದಭಾಗವನ್ನು, ಉಬ್ಬಿದ ಮನದಿಂದ— ಅತಿಸಂತೋಷದಿಂದ, ಗಾನವ ಪಾಡುತ್ತ— ಗಾನಮಾಡುತ್ತಲೂ, ಒಬ್ಬ ಬ್ರಹ್ಮನು— ಇನ್ನೊಬ್ಬ ಬ್ರಹ್ಮನು, ಪುರಾಣಗಳ— ಪುರಾಣಗಳನ್ನು (ಮುಂದಿನ ನುಡಿಯಿಂದ ಅನ್ವಯ ಪೂರ್ತಿಯಾಗುತ್ತವೆ).

**ಪದ್ಮನಾಭನ ಪುರದಿ ಓದುತಿಪ್ಪನು ಗಡ**
**ಮತ್ತೊಬ್ಬ ಶ್ರೀಹರಿಯ ಮೂರ್ತಿಯನೆ**
**ಅಬ್ಬರದಿಂದ ನೆನೆದು ಸುಖಿಸುವ ಗಡ**
**ಒಬ್ಬ ಬ್ರಹ್ಮನು ಸೋಮರಸವ** **॥೬॥**

**ಅರ್ಥ:** ಪದ್ಮನಾಭನ ಪುರದಿ— ಶ್ರೀಹರಿಪುರದಲ್ಲಿ, ಓದುತಿಪ್ಪನು ಗಡ— (ಪುರಾಣಗಳನ್ನು) ಪಠನಮಾಡುತ್ತಿರುವನಲ್ಲವೇ! ಮತ್ತೊಬ್ಬ— ಇನ್ನೊಬ್ಬ ಬ್ರಹ್ಮನು, ಶ್ರೀಹರಿಯ ಮೂರ್ತಿಯನೆ— ಶ್ರೀಹರಿಯ ರೂಪವನ್ನು, ಅಬ್ಬರದಿಂದ— ಆಶ್ಚರ್ಯಚಕಿತನಾಗಿ, ನೆನೆದು ಸುಖಿಸುವ ಗಡ— ಧ್ಯಾನಿಸಿ ಆನಂದಪಡುತ್ತಾನೆ; ಒಬ್ಬ ಬ್ರಹ್ಮನು— ಬೇರೊಬ್ಬ ಬ್ರಹ್ಮನು, ಸೋಮರಸವ— ಸೋಮರಸವನ್ನು (ಮುಂದಿನ ನುಡಿಯಿಂದ ಅನ್ವಯಪೂರ್ತಿಯಾಗುವುದು).

**ಅಬ್ಜನಾಭನಿಗಗ್ನಿಮುಖದಿ ಕೊಡುವ ಗಡ ಮ-**
**ತ್ತೊಬ್ಬ ಬ್ರಹ್ಮನು ಪೂಜಿಸುವ ಗಡ**
**ಸರ್ಬದೇವರುಗಳೀಪರಿಯಲ್ಲಿ ನರಹರಿಯ**
**ಗರ್ಭವಾಸದಲಿಹರು ಗಡ** **॥೭॥**

**ಅರ್ಥ:** ಅಬ್ಜನಾಭನಿಗೆ— ಶ್ರೀಪದ್ಮನಾಭನಿಗೆ, ಅಗ್ನಿಮುಖದಿ— ಅಗ್ನಿದ್ವಾರಾ, ಕೊಡುವ ಗಡ— (ಸೋಮರಸವನ್ನು) ಅರ್ಪಿಸುತ್ತಿರುವನಲ್ಲವೇ! ಮತ್ತೊಬ್ಬ ಬ್ರಹ್ಮನು— ಇನ್ನೂ ಒಬ್ಬ ಮುಕ್ತಬ್ರಹ್ಮನು, ಪೂಜಿಸುವ ಗಡ— ಪೂಜಿಸುತ್ತಿರುವನಷ್ಟೆ! ಸರ್ವದೇವರುಗಳು— ಎಲ್ಲ ಮುಕ್ತದೇವತೆಗಳು, ಈ ಪರಿಯಲ್ಲಿ— ಈ

ಪ್ರಕಾರದ ನಾನಾವ್ಯಾಪಾರಗಳಲ್ಲಿರುತ್ತಾ, ನರಹರಿಯ— ಶ್ರೀನೃಸಿಂಹನ, ಗರ್ಭ-ವಾಸದಲಿಹರು — ಆಶ್ರಯದಲ್ಲಿರುತ್ತಾರೆ.

**ಇಂತನಂತಬ್ರಹ್ಮಾದ್ಯರು ವೈಕುಂಠದಲ್ಲಿ**
**ಅಂತರಂತರದಲಿಹರೆಂದು**
**ಮಂತ್ರಗಳೆ ಕೊಂಡಾಡುತಲಿವೆಯದರಿಂದ ಶ್ರೀ-**
**ಕಾಂತನ ಪುರಿಯ ನೆನೆವೆ** ॥೮॥

**ಅರ್ಥ:** ಇಂತು — ಹೀಗೆ, ಅನಂತಬ್ರಹ್ಮಾದ್ಯರು — ಅಸಂಖ್ಯಾತಬ್ರಹ್ಮಾದಿ ಮುಕ್ತರು, ವೈಕುಂಠದಲ್ಲಿ— ವೈಕುಂಠಪುರಿಯಲ್ಲಿ, ಅಂತರಂತರದಲಿ — ಭಿನ್ನಭಿನ್ನ ವ್ಯಾಪಾರಗಳಲ್ಲಿ (ಬ್ರಹ್ಮಾದಿಗಳು ತರತಮಭಾವದಿಂದ), ಇಹರೆಂದು — ಇರುವ-ರೆಂದು, ಮಂತ್ರಗಳೆ— (ಅನಾದಿನಿತ್ಯ) ವೇದಗಳೇ, ಕೊಂಡಾಡುತಿವೆ— (ಮುಕ್ತ-ಲೋಕಗಳ ಮಹಿಮೆಯನ್ನು) ಸ್ತುತಿಸುತ್ತಿವೆ; ಅದರಿಂದ— ಆದ್ದರಿಂದ, ಶ್ರೀಕಾಂತನ ಪುರಿಯ — ಲಕ್ಷ್ಮೀಪತಿಯ ರಾಜಧಾನಿಯನ್ನು (ಸರ್ವೈಶ್ವರ್ಯ-ಸಂಪನ್ನನಾಗಿ ವಿರಾಜಿಸುವ ಶ್ರೀಹರಿಯ ಪುರವನ್ನು) ನೆನೆವೆ— ಸ್ಮರಿಸಿ ನಮಸ್ಕರಿಸುತ್ತೇನೆ.

**ವಿಶೇಷಾಂಶ:** (೧) ಅತಿಚಪಲತೆವುಳ್ಳದ್ದರಿಂದ (active) ಕುದುರೆಯು **'ಅಶ್ವ'**ವೆಂದು ಕರೆಯಲ್ಪಡುತ್ತದೆ. ನರ್ತಿಸುವ ಅಶ್ವವು ತನ್ನ ಅಂಗಾಂಗಗಳ ಚಪಲತೆಯಿಂದ ನೋಡುವವರ ಕಣ್ಮನಗಳನ್ನು ಸೆಳೆಯುವಂತೆ, ಶ್ರೀಹರಿಯು ಮುಕ್ತರನ್ನು ಆಕರ್ಷಿಸಿ ಸುಖಪ್ರದನಾಗುತ್ತಾನೆ.

(೨) ಶ್ರೀಹರಿಯು ಜೀವರ=ಚೇತನರ ಅನಾದಿನಿತ್ಯಸಖನು (ಜೊತೆ-ಯಲ್ಲಿರುವವನು). ಮುಕ್ತಿಯಲ್ಲಾದರೋ, ಸರ್ವದಾ ಪ್ರಕಟನಾಗಿ ಸುಖಪ್ರದ ಸಖನಾಗಿಯೇ ಇರುವನು.

(೩) ಮುಕ್ತಿಯಲ್ಲಿ (ಮುಕ್ತಲೋಕದಲ್ಲಿ) ಅನಾದಿಕಾಲದಿಂದ ತಂತಮ್ಮ ಬ್ರಹ್ಮಕಲ್ಪದಲ್ಲಿ) ಮುಕ್ತರಾಗುತ್ತಬಂದ, ಅಸಂಖ್ಯಾತಬ್ರಹ್ಮರಿದ್ದಾರೆ. ಅವರು ಸ್ವೇಚ್ಛೆಯಿಂದ ನಾನಾವಿಧ ಹರಿಪೂಜೆಗಳಲ್ಲಿ ತೊಡಗಿ ಆನಂದಿಸುತ್ತಿರುವರು. ವೇದಾಧ್ಯಯನ, ಪುರಾಣಗಳ ಪಠನ ಶ್ರವಣಾದಿಗಳು, ಯಜ್ಞಾದಿ ಶ್ರೀಹರಿಯ ಅರ್ಚನೆಗಳು ಇತ್ಯಾದಿ ಮುಕ್ತರ ಕರ್ಮಗಳು, ಆವರೆಗೆ ಲಭ್ಯವಾಗದ ಬೇರೊಂದು ಫಲಕ್ಕೆ ಸಾಧನಗಳಲ್ಲ. ಈ ಹಿಂದೆ ಹೇಳಿದಂತೆ, ('ಸಾಧ್ಯಾನಂದ ಸ್ವರೂಪಾಸ್ತು ಭಕ್ತಿರ್ನೈವಾತ್ರ ಸಾಧನಂ') ಆನಂದೋದ್ರೇಕದಿಂದ ಈ ವ್ಯಾಪಾರ-

ಗಳಲ್ಲದೇ, ಆನಂದಕ್ಕಾಗಿ ಅಲ್ಲವೆಂಬ ಮುಖ್ಯಪ್ರಮೇಯವನ್ನು ಮರೆಯಲಾಗದು.

(೪) **ಗಾಯತ್ರ** ಸಾಮವನ್ನು, ಛಾಂದೋಗ್ಯೋಪನಿಷತ್ತು ಹೀಗೆ ನಿರೂಪಿಸುತ್ತದೆ: *'ಮನೋ ಹಿಂಕಾರೋ ವಾಕ್ ಪ್ರಸ್ತಾವಃ ಚಕ್ಷುರುದ್ಗೀಥಃ ಶ್ರೋತ್ರಂ ಪ್ರತಿಹಾರಃ ಪ್ರಾಣೋನಿಧನಂ ಏತದ್ಗಾಯತ್ರಂ ಪ್ರಾಣೇಷು ಪ್ರೋತಂ' 'ಹಿಂ'* ಎನಿಸುವ (**ಹಿಂಕಾರ**ವಾಚ್ಯ) ಪ್ರದ್ಯುಮ್ನನು ಮನಸ್ಸಿನಲ್ಲಿದ್ದು ಮನನೆಂದು ಕರೆಯಲ್ಪಡುವನು; **ಪ್ರಸ್ತಾವ**ನೆನಿಸುವ ವಾಸುದೇವನು ವಾಕ್ ಎಂದು ಕರೆಸುತ್ತ ವಾಗಿಂದ್ರಿಯದಲ್ಲಿರುತ್ತಾನೆ; **ಉದ್ಗೀಥ**ನೆನಿಸುವ ನಾರಾಯಣನು, ಕಣ್ಣಿನಲ್ಲಿದ್ದು ಚಕ್ಷುವೆನಿಸುತ್ತಾನೆ; **ಪ್ರತಿಹಾರ**ನೆನಿಸುವ ಅನಿರುದ್ಧನು ಕಿವಿಯಲ್ಲಿದ್ದು ಶ್ರೋತ್ರನೆನಿಸುತ್ತಾನೆ; **ನಿಧನ** ನಾಮಕ ಸಂಕರ್ಷಣನು ಪ್ರಾಣನಲ್ಲಿದ್ದು ಪ್ರಾಣನೆನಿಸುತ್ತಾನೆ; ಪ್ರಾಣನಲ್ಲಿರುವ ವಿಷ್ಣುವನ್ನಾಶ್ರಯಿಸಿದ **ಗಾಯತ್ರ** ಸಾಮವು ಇಂದ್ರಿಯಗಳಲ್ಲಿರುವ ವಿಷ್ಣುವನ್ನು ಸ್ತುತಿಸುತ್ತದೆ. ಆದಿ ಮತ್ತು ಉಪದ್ರವಗಳೆಂಬ ಸಾಮಗಳು ಸೇರಿ ಸಪ್ತವಿಧಸಾಮಗಳೆಂದೂ ಹೇಳಲಾಗುತ್ತದೆ. ಎಲ್ಲ ಸಾಮಗಳಿಂದ ಪ್ರತಿಪಾದ್ಯನು **'ಸಾಮ'**ನಾಮಕ ಶ್ರೀಹರಿಯೇ.

(೫) **'ಅನಂತಬ್ರಹ್ಮಾದ್ಯರು'** ಎಂದರೆ ಅಸಂಖ್ಯಾಕಬ್ರಹ್ಮನೇ ಮೊದಲಾದ ಮುಕ್ತಜೀವರು. ನಿತ್ಯವಾದ ತಮ್ಮ ಸ್ವರೂಪಧರ್ಮಗಳಿಗುಚಿತವಾದ, ಹರಿಸೇವೆಗಳನ್ನು ಮುಕ್ತಿಯಲ್ಲಿ ಸ್ವಭಾವದಿಂದಲೇ ಆಚರಿಸುತ್ತಿರುವರು— ವಿಧ್ಯನುಸರಣಕ್ಕಾಗಿ ಅಲ್ಲ— ಅವು ಸಾಧನರೂಪಗಳೂ ಅಲ್ಲ— ಮುಕ್ತರು ವಿಧಿಬದ್ಧರೂ ಅಲ್ಲ.

*'ಇಜ್ಯತೇ ಯಜ್ಞ ಶೀಲೈಸ್ಸ ಯಜ್ಞಃ ಪ್ರಾಜ್ಞಮಧ್ಯೇ ಪರಃ ಪ್ರೋಚ್ಯತೇಽನ್ಯೈಃ।*
*ಗೀಯತೇ ಗೇಯಕೀರ್ತಿಃ ಸುಗೀತೈಃ ವಿಧ್ಯ್ಯಬದ್ಧೈಃಸದಾನಂದಸಾಂದ್ರೈಃ॥'*

(ಸುಮಧ್ವವಿಜಯ) ಎಂಬುದಾಗಿ ಮುಕ್ತರು ಸ್ವಭಾವದಿಂದಲೇ ಯಜ್ಞಾದಿಕರ್ಮಗಳನ್ನಾಚರಿಸುವರೆಂದೂ, ವಿಧಿಬದ್ಧರಲ್ಲವೆಂದೂ ಹೇಳಲಾಗಿದೆ.

(೬) *'ವ್ಯವೇತಸಂಕ್ಲೇಶವಿಮೋಹಸಾಧ್ವಸಂ ಸ್ವದೃಷ್ಟವದ್ಭಿರ್ವಿಬುಧೈರಭಿಷ್ಟುತಂ'* ಎಂದು ಭಾಗವತದಲ್ಲಿ ವೈಕುಂಠಲೋಕವನ್ನು ಋಷ್ಯಾದಿ ಸಿದ್ದರು ನೆನೆದು ಸ್ತುತಿಸುವರೆಂದು ಹೇಳಲಾಗಿದೆ. ವೈಕುಂಠಸ್ಮರಣೆಯ ಮಹಿಮೆಯನ್ನು ಸೂಚಿಸುತ್ತಾ 'ಶ್ರೀಕಾಂತನ ಪುರಿಯ ನೆನೆವೆ' ಎಂದಿದ್ದಾರೆ ಗ್ರಂಥಕರ್ತರು.

**ಪದ ೨೦**

ರಾಗ-ನಾದನಾಮಕ್ರಿಯೆ; ತಾಳ-ಝಂಪೆ.

**ಮನೋಜವೇಷ್ವಸಮಾ ಬಭೂವುಃಯೆಂಬ**
**ಚಿನುಮಯರಾದ ಮುಕ್ತರಿಗೂ**
**ಅನುಭವಿಸುವ ಆನಂದಾದಿಗಳ ತಾರತಮ್ಯ-**
**ವನು ಶ್ರುತಿ ತಾನೆ ಪೇಳಿತಲ್ಲ** ॥೧॥

**ಅದರಿಂದ ಬೊಮ್ಮಪಟ್ಟದವರೆಲ್ಲವರೊಳು**
**ಮೊದಲಿಗರೆಂದವರ ಚಂದದೀ-**
**ಪದವಿಯ ಬೇರೆ ಕೊಂಡಾಡಿತು ಮತ್ತುಳಿದವರ-**
**ನೊಂದಾಗಿ ತುತಿಸಿತು.** ॥೨॥

**ಅರ್ಥ:** ಮನೋಜವೇಷ್ವಸಮಾ ಬಭೂವುಃ—ಪ್ರಜ್ಞಾದಿಗುಣಗಳಲ್ಲಿ ತಾರ-ತಮ್ಯವುಳ್ಳವರಾದರು, ಎಂಬ—ಎಂದು ಹೇಳುವ, ಶ್ರುತಿ—ಶ್ರುತಿಯು, ಚಿನುಮಯರಾದ—ಜ್ಞಾನಸ್ವರೂಪರಾದ, ಮುಕ್ತರಿಗೂ—ಮುಕ್ತಜೀವರಿಗೆ ಸಹ, ಅನುಭವಿಸುವ—ಅವರು ಅನುಭವಿಸುವ, ಆನಂದಾದಿಗಳ—ಸುಖಜ್ಞಾನಾದಿ-ಗಳ, ತಾರತಮ್ಯವನು—ತರತಮಭಾವಗಳನ್ನು, ತಾನೆ—ಸ್ವಯಂ, ಪೇಳಿತಲ್ಲ—ಹೇಳಿರುವುದಲ್ಲವೇ? ॥೧॥

ಅದರಿಂದ—ಈ ಶ್ರುತಿಪ್ರಮಾಣದಿಂದ, ಬೊಮ್ಮಪಟ್ಟದವರು—ಬ್ರಹ್ಮ-ಪದವಿಗೆ ಅರ್ಹರಾದ ಜೀವರು (ಬ್ರಹ್ಮಪದವಿಯಿಂದ ಮುಕ್ತರಾದವರು), ಎಲ್ಲವರೊಳು—ಎಲ್ಲ ಮುಕ್ತರಲ್ಲಿ, ಮೊದಲಿಗರೆಂದು—ಶ್ರೇಷ್ಠರೆಂದು, ಅವರ ಚಂದದ—ಅವರಿಗೇ ಯೋಗ್ಯವಾದ, ಈ ಪದವಿಯ—ಈ ಬ್ರಹ್ಮಪದವಿ-ಯನ್ನು, (ಅಥವಾ ಅವರ, ಚಂದದ ಈ ಪದವಿಯ—ಅವರ ಈ ಮಹಾ-ವೈಭವದ ಪದವಿಯನ್ನು), ಬೇರೆ—ಪ್ರತ್ಯೇಕವಾಗಿ, ಕೊಂಡಾಡಿತು—(*'ಋಚಾಂ ತ್ವಃ ಪೋಷಮಾಸ್ತೇ'* ಎಂಬ ಶ್ರುತಿಯು) ಸ್ತುತಿಸಿ ವರ್ಣಿಸುತ್ತದೆ; ಮತ್ತುಳಿ-ದವರನು—ಮುಕ್ತಬ್ರಹ್ಮರನ್ನು ಬಿಟ್ಟು ಇತರ ಮುಕ್ತರನ್ನು, ಒಂದಾಗಿ—ಒಟ್ಟಿಗೇ (ಮುಕ್ತರೆಂಬ ಒಂದು ಗುಂಪಿನವರನ್ನಾಗಿ), ತುತಿಸಿತು—ಪ್ರಶಂಸಿಸುತ್ತದೆ. ॥೨॥

**ವಿಶೇಷಾಂಶ:** ೧ನೇ ನುಡಿಯಲ್ಲಿ ಆದಿಪದದಲ್ಲಿ ಪ್ರಸಕ್ತವಾದ ಒಂದು ಶ್ರುತಿಯು ಹೀಗಿದೆ:

*'ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ।*
*ಆದಘ್ನಾಸ ಉಪಕಕ್ಷಾಸ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇದದೃಶ್ರೇ॥'*

**ಅರ್ಥ:** ಅಕ್ಷಣ್ವಂತಃ—ಕಣ್ಣುಳ್ಳವರು, ಕರ್ಣವಂತಃ—ಕಿವಿಯುಳ್ಳವರು, (ಭಗವದ್ದರ್ಶನ—ಭಗವನ್ಮಹಿಮಾಶ್ರವಣಾದಿ ಮುಖ್ಯಫಲವುಳ್ಳ ಎಂದರೆ ಸಫಲವಾದ ಚಕ್ಷುರಾದಿ ಇಂದ್ರಿಯಗಳುಳ್ಳವರು), ಸಖಾಯಃ—ಪರಸ್ಪರ ಪ್ರೀತಿಯುಕ್ತರು (ಮಾತ್ಸರ್ಯಾದಿ ರಹಿತರು) **ಅಥವಾ** ಶ್ರೀಹರಿಯನ್ನೇ ನಿತ್ಯಸಖನನ್ನಾಗುಳ್ಳವರಾದ ಮುಕ್ತರು, ಮನೋಜವೇಷು—ಮನೋವೇಗದಲ್ಲಿ (ಜ್ಞಾನಾದಿಗುಣಗಳಲ್ಲಿ), ಅಸಮಾಃ—ಸಮರಲ್ಲದವರು (ತಾರತಮ್ಯವುಳ್ಳವರು), ಬಭೂವುಃ—ಆದರು; ತ್ವೇಉ—ಅವರಲ್ಲಿ ಕೆಲವರು, ಆದಘ್ನಾಸಃ—ವಿಸ್ತಾರವಾದ ಕ್ಷೀರಸಮುದ್ರದಲ್ಲಿ ಕ್ರೀಡಿಸುವವರಾಗಿಯೂ, ತ್ವೇ—ಮತ್ತೆ ಕೆಲವರು, ಉಪಕಕ್ಷಾಸಃ—ಸಮೀಪದ ಅಶ್ವತ್ಥವನದಲ್ಲಿ ಕ್ರೀಡಿಸುವವರೂ, ತ್ವೇ—ಇನ್ನೂ ಕೆಲವರು, ಸ್ನಾತ್ವಾ ಉ ಹ್ರದಾ ಇವ—ಸ್ನಾನಯೋಗ್ಯವಾದ (ಮುಳುಗಿ ಮಜ್ಜನಮಾಡಲು ಯೋಗ್ಯವಾದ) ಸರೋವರಗಳಂತೆ (ಹ್ರದ=ಮಡುವು) ಧ್ಯಾನದಲ್ಲಿ ನಿಶ್ಚಲರಾಗಿ ನಿಂತೇ, ದದೃಶ್ರೇ—(ಪರಮಾತ್ಮನನ್ನು) ಕಂಡರು (ವಿವಿಧವಾಗಿ ವಿಹರಿಸುವ ಈ ಎಲ್ಲರೂ ಕಾಣುತ್ತಾರೆ).

**ಪದ ೨೧**

ರಾಗ-ಕಾಂಬೋದಿ; ತಾಳ-ಝಂಪೆ

**ಹರಿಯರಮನೆಯ ಓಲಗಶಾಲೆಯೊಳಗಿಪ್ಪ**
**ವಿರಿಂಚರಾಶಿಗೆ ಲೆಕ್ಕವಿಲ್ಲ**
**ಥರಥರದಲಿ ಬಾಳ್ವ ಖಗೇಂದ್ರಚಂದ್ರಾದಿಸುರರ**
**ತಿಂಥಿಣಿಯನೇನೆಂಬೆ ॥೧॥**

**ಪುಟ್ಟಮುನಿಯ ಪೊಟ್ಟೆಯಂಬುಧಿಜಲಕಿಂಬು-**
**ಗೊಟ್ಟಂತೆನಲು ಸರ್ವೇಶ್ವರನ**
**ಪಟ್ಟದ ಮನೆಯ ಚಾವಡಿ ಬಂದಬಂದಷ್ಟು**
**ಮುಕ್ತರ್ಗಿಂಬುಗೊಡದೇ ॥೨॥**

**ಒಂದೊಂದು ಕಲ್ಪದಿ ಮುಕ್ತರಾದಮರರು**
**ಚಂದಚಂದದಲಿಹರು**

**ಇಂದಿರೆಯೋಲಗದಿ ವಾಣಿ ಮೊದಲಾದ**
**ಇಂದುಮುಖಿಯರೊಪ್ಪಿಹರು ॥೩॥**

**ಅವರ ಲಾವಣ್ಯವ ಅವರ ತಾರುಣ್ಯವ**
**ಅವರುಟ್ಟ ಚಿತ್ರಾಂಬರವ**
**ಅವರ ಸರ್ವಾಂಗದಿವ್ಯಾಭರಣಗಳಾ-**
**ವಿವರವನಾವ ಬಣ್ಣಿಸುವ ॥೪॥**

**ಅರ್ಥ:** ಹರಿಯ—ವೈಕುಂಠಪತಿಯ, ಅರಮನೆಯ—ದಿವ್ಯರಾಜಭವನದ, ಓಲಗಶಾಲೆಯೊಳಗಿಪ್ಪ—(ದರ್ಶನವಿತ್ತು ಸೇವೆಯನ್ನು ಸ್ವೀಕರಿಸುವ) ಸಭಾಮಂಟಪದಲ್ಲಿರುವ, ವಿರಿಂಚಿರಾಶಿಗೆ—ಮುಕ್ತಬ್ರಹ್ಮರ ಸಮೂಹಕ್ಕೆ, ಲೆಕ್ಕವಿಲ್ಲ—ಗಣನೆಯಿಲ್ಲ; ಥರಥರದಿ—ನಾನಾ ಪ್ರಕಾರದಿಂದ, ಬಾಳ್ವ—ಶೋಭಿಸುವ, (ವಿವಿಧ ಕಾರ್ಯಕಲಾಪಗಳಲ್ಲಿ ತೊಡಗಿರುವ), ಖಗೇಂದ್ರ ಚಂದ್ರಾದಿ ಸುರರ—ಗರುಡ, ಇಂದ್ರ, ಚಂದ್ರಾದಿ ದೇವತೆಗಳ, ತಿಂಥಿಣಿಯನು—ಸಮೂಹಗಳನ್ನು, ಏನೆಂಬೆ—ಏನೆಂದು ವರ್ಣಿಸಲಿ! ॥೧॥

ಪುಟ್ಟಮುನಿಯ—ಅಲ್ಪನಾದ ಅಗಸ್ತ್ಯಋಷಿಯ, ಪೊಟ್ಟೆಯು—ಹೊಟ್ಟೆಯು, ಅಂಬುಧಿಜಲಕೆ—ಸಮುದ್ರಜಲರಾಶಿಗೆ, ಇಂಬುಗೊಟ್ಟಂತೆ—(ತನ್ನಲ್ಲಿ ತುಂಬಿಕೊಳ್ಳಲು) ಅವಕಾಶ ಕೊಟ್ಟಿತೆಂದು, ಎನಲು—ಹೇಳುತ್ತಿರಲು, ಸರ್ವೇಶ್ವರನ—ಸಾರ್ವಭೌಮನಾದ ವೈಕುಂಠಪತಿಯ (ಅಚಿಂತ್ಯ ಸಾಮರ್ಥ್ಯವುಳ್ಳ ಶ್ರೀಹರಿಯ), ಪಟ್ಟದಮನೆಯ ಚಾವಡಿ—ರಾಜಭವನದ ಸಭಾಮಂಟಪವು, ಬಂದಬಂದಷ್ಟು ಮುಕ್ತರ್ಗೆ—ಬರುವ ಎಲ್ಲ ಮುಕ್ತರಿಗೆ (ಮುಕ್ತಸಮೂಹಕ್ಕೆ), ಇಂಬುಗೊಡದೇ—ಸ್ಥಳಾವಕಾಶವನ್ನು ಕೊಡುವುದರಲ್ಲೇನಾಶ್ಚರ್ಯ. ॥೨॥

ಒಂದೊಂದು ಕಲ್ಪದಿ—ಪ್ರತಿಯೊಂದು ಬ್ರಹ್ಮಕಲ್ಪದಲ್ಲಿ, ಮುಕ್ತರಾದಮರರು — ಮುಕ್ತಿಯನ್ನು ಹೊಂದಿದ ದೇವತೆಗಳು, ಚಂದದಲಿಹರು—ನಾನಾತರಹದವರು ಇರುವರು; (ತರತಮಯುಕ್ತವಾದ ಪರಿಪರಿಯ ಸುಖಗಳನ್ನು ಅನುಭವಿಸುತ್ತಲಿರುವರು); ಇಂದಿರೆಯ—ಶ್ರೀಲಕ್ಷ್ಮೀದೇವಿಯ, ಓಲಗದಿ—ಸಭೆಯಲ್ಲಿ, ವಾಣಿ ಮೊದಲಾದ—ಸರಸ್ವತೀದೇವಿ ಮೊದಲಾದ, ಇಂದುಮುಖಿಯರು—ಮುಕ್ತಸ್ತ್ರೀಯರು, ಒಪ್ಪಿಹರು—ವಿರಾಜಿಸುತ್ತಿರುವರು. ॥೩॥

ಅವರ ಲಾವಣ್ಯವ—ಆ ಸ್ತ್ರೀಯರ ಸೌಂದರ್ಯವನ್ನು, ಅವರ ತಾರುಣ್ಯವ—ಅವರ ನಿತ್ಯಯೌವನದ ಸೊಬಗನ್ನು, ಅವರುಟ್ಟ—ಅವರು ಧರಿಸಿದ, ಚಿತ್ರಾಂಬರವ—ವಿಚಿತ್ರವಸ್ತ್ರಗಳನ್ನು, ಅವರ ಸರ್ವಾಂಗ ದಿವ್ಯಾಭರಣಗಳ—

ತಮ್ಮ ಸರ್ವಾಂಗಗಳಲ್ಲಿ ಧರಿಸಿರುವ ಅವರ ದಿವ್ಯ (ಲೋಕವಿಲಕ್ಷಣ) ಭೂಷಣ-ಗಳನ್ನು, ವಿವರವನು—ಅವುಗಳ ವಿವರವನ್ನು, ಆವ ಬಣ್ಣಿಸುವ—ವರ್ಣಿಸ-ಬಲ್ಲವನಾರು? (ಯಾರೂ ಶಕ್ತರಲ್ಲ; ವರ್ಣನಾತೀತವಾದವುಗಳು). ॥೪॥

**ವಿಶೇಷಾಂಶ:** ಮಹಾವಿಭವೈಕಪದವಾದ ವೈಕುಂಠದಲ್ಲಿರುವ ಮುಕ್ತ ಪ್ರಜೆ-ಗಳ ವರ್ಣನೆಯನ್ನು ಯಾರೂ ಮಾಡಿ ಮುಗಿಸಲಾರರು. ಮಹಾಕವಿಗಳ ಉತ್ಪ್ರೇಕ್ಷಕಸಾಮರ್ಥ್ಯವನ್ನೂ ಅತಿಕ್ರಮಿಸಿ ನಿಂತಿರುವ ವೈಭವವದು.

*'ವೈಕುಂಠೇ ತೇ ಶ್ರೀವಿಶೇಷಾ ಜನಾನಾಮ-*
*ತ್ಯಾಶ್ಚರ್ಯಂ ಚಿತ್ತವಾಚಾಮಭೂಮಿಃ'*

ಎಂದರೆ, 'ವೈಕುಂಠಲೋಕದ ಆ ಜನಗಳ ಶೋಭಾವಿಶೇಷಗಳು ಅತಿ ವಿಚಿತ್ರ-ವಾದವು; ಮಾತುಗಳಿಂದ ಹೇಳಲಿಕ್ಕೂ ಮನಸ್ಸಿನಿಂದ ಚಿಂತಿಸಲಿಕ್ಕೂ ಬಾರ-ದವುಗಳಾಗಿವೆ ಎಂದೂ, *'ಇಹ ಸಂಭವೇತ್ಸಕಲಕಾಂತಿರಸಃ ಕಥಿಕೋಽಧಿ-ಕೋಕ್ತಿಭಿರತಃ ಕವಿಭಿಃ'*— ಎಂದರೆ, 'ಮಹಾಕವಿಗಳು ಅಧಿಕೋಕ್ತಿಗಳಿಂದ (ಆಪಾ-ತತಃ ಅಯುಕ್ತವೆಂದು ತೋರುವ ಶಬ್ದಗಳಿಂದ) ಹೇಳುವ ಶೋಭಾತಿಶಯ-ಗಳೆಲ್ಲವೂ ಈ ಲೋಕದಲ್ಲಿವೆ' ಎಂದೂ ಶ್ರೀಸುಮಧ್ವವಿಜಯದಲ್ಲಿ ಹೇಳ-ಲಾಗಿದೆ. ಅಲ್ಲಿನ ವೈಕುಂಠಲೋಕದ ವರ್ಣನೆಯ ಸಾರಸಂಗ್ರಹವೇ ಈ ಪದದ ನುಡಿಗಳಲ್ಲವೆ!

*'ತದನಾದಿಕಾಲಮಿತಮುಕ್ತಿರತೇ-*
*ರಗಣೇಯಶಂಭುಮುಖಸಂಘತತೇಃ।*
*ನಗರೈರ್ಮಹಾಪುರಮಸಂಹತಿಮಲ್ಲಸತಿ*
*ಪ್ರಭೋರಯಮಹೋ ಮಹಿಮಾ॥'*

*'ವಿಧಯೋ ವಿಹಂಗಪತಯೋಽಗಣಿತಾ ರಮಣೀಯುತಾಸ್ಸಫಣಿಪೇಂದ್ರ ಮುಖಾಃ',*
*'ಅತಿಸುಂದರಾಃ ಸುರಭಯಃ ಪುರುಷಾಃ........ವಿಚರಂತಿ ನಿತ್ಯ ತರುಣಾ ಇಹ ತೇ'*

ಮತ್ತು

*'ಕರಪಲ್ಲವೈಸ್ತರಲಿತೈರ್ಲಲಿತೈರಸಕೃತ್ಕ್ವಣತ್ಕನಕಕಂಕಣಕೈಃ*
*ವರಹಾರರಾಜಿಭಿರುತಾನುಪದಂ ಪ್ರತಿಲೋಡಿತಾಭಿರಶನೈರುರಸಿ'*

ಇತ್ಯಾದಿ ವಾಕ್ಯಗಳ ಭಾವವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

**ಅರ್ಥ:** ಅನಾದಿಕಾಲಂ—ಅನಾದಿ ಕಾಲದಿಂದ, ಇತಮುಕ್ತಿರತೇಃ—ಹೊಂದಿದ ಮೋಕ್ಷಸುಖವುಳ್ಳ, ಅಗಣೇಯಶಂಭುಮುಖಸಂಘತತೇಃ—

ಅಸಂಖ್ಯಾಕ ಚತುರ್ಮುಖರೇ ಮೊದಲಾದವರ ಸಮೂಹವುಳ್ಳ ('ಶಂಭೂ-ಬ್ರಹ್ಮತ್ರಿಲೋಚನೌ'—ಅಮರಕೋಶ), ನಗರ್ಯೈಃ—ಪಟ್ಟಣಗಳಿಂದ, ಅಸಂಹತಿ-ಮತ್—ನಿಬಿಡತೆಯಿಲ್ಲದ (ಸಂಹತಿ—ದಟ್ಟವಾಗಿರುವಿಕೆ), ತತ್—ಆ, ಮಹಾ-ಪುರಂ—(ವೈಕುಂಠವೆಂಬ) ಮಹಾನಗರಿಯು, ಲಸತಿ—ವಿರಾಜಿಸುತ್ತದೆ; ಅಯಂ ಮಹಿಮಾ—(ಅನಾದಿಕಾಲದಿಂದ ಬ್ರಹ್ಮ, ಗರುಡಾದಿ ಅಸಂಖ್ಯ-ಮುಕ್ತರು ಬಂದು ಸೇರಿದರೂ, ಆ ನಗರಗಳು ನಿಬಿಡವಾಗದೆ ಅವಕಾಶ-ಪ್ರದಗಳಾಗಿ ಇರುತ್ತವೆಂಬ) ಈ ಮಹಿಮೆಯು, ಅಹೋ—ಆಶ್ಚರ್ಯವು, 'ಅಗಣಿತಾಃ—ಅಸಂಖ್ಯಾಕರಾದ, ವಿಧಯಃ—ಚತುರ್ಮುಖಬ್ರಹ್ಮರು, ವಿಹಂಗ-ಪತಯಃ—ಗರುಡರು, ಸಫಣಿಪೇಂದ್ರಮುಖಾಃ—ಶೇಷನಿಂದ ಸಹಿತರಾದ ಇಂದ್ರಾದಿ ದೇವತೆಗಳು, ರಮಣೀಯುತಾಃ—ತಮ್ಮ (ನಿಯತ ಯುವತಿಯ-ರಾದ) ಸ್ತ್ರೀಯರೊಂದಿಗೆ (ಮೋದರಸವನ್ನು—ಶ್ರೀಹರಿದರ್ಶನದಿಂದ ಉತ್ಕೃಷ್ಟಾ-ನಂದವನ್ನು ಅನುಭವಿಸುತ್ತಾರೆ.)

'ಅತಿಸುಂದರಾಃ—(ಆ ಮುಕ್ತರು) ಮಹಾ ಸುಂದರರೂ, ಸುರಭಯಃ—ಸಹಜವಾದ ಸುಗಂಧ ಪರಿಮಳಯುಕ್ತ ದೇಹವುಳ್ಳವರೂ ಆದ, ಪುರುಷಾಃ—ಮುಕ್ತಪುರುಷರು, ಇಹ—ಈ ವೈಕುಂಠದಲ್ಲಿ, ನಿತ್ಯತರುಣಾಃ—ನಿತ್ಯ ಯುವಕರಾಗಿ ವಿಚರಂತಿ—ಸಂಚರಿಸುತ್ತಾರೆ.'

ಮತ್ತು

'ತರಲಿತೈಃ—ಚಪಲಗಳಾದ (ಚಲಿಸುತ್ತಿರುವ), ಲಲಿತೈಃ—ಮೃದುವಾದ, ಅಸಕೃತ್—ನಿರಂತರವಾಗಿ, ಕ್ವಣತ್ಕನಕಕಂಕಣಕೈಃ—ಧ್ವನಿಗೈಯುತ್ತಿರುವ ಸುವರ್ಣ ನಿರ್ಮಿತ ಕಂಕಣ(ಕೈಬಳೆ)ಗಳನ್ನು ಧರಿಸಿರುವ, ಕರಪಲ್ಲವೈಃ—ಚಿಗುರಿನಂತೆ ಕೋಮಲವಾದ ಹಸ್ತಗಳಿಂದಲೂ, ಅನುಪದಂ—ಪ್ರತಿ ಹೆಜ್ಜೆಗೂ, ಉರಸಿ—ವಕ್ಷಸ್ಥಳದಲ್ಲಿ (ಎದೆಯ ಮೇಲೆ), ಅಶನೈಃ—ವೇಗವಾಗಿ, ಪ್ರತಿಲೋಡಿತಾಭಿಃ—(ನಡಿಗೆಯಿಂದ ಕುಚಗಳನ್ನು) ಬಡಿಯುತ್ತಿರುವ ವರಹಾರರಾಜಿಭಿಃ — ಮುತ್ತಿನಹಾರಗಳ ಕಾಂತಿಗಳಿಂದಲೂ (ಶೋಭಿಸುವ ಮುಕ್ತಸ್ತ್ರೀಜನರಿಂದ ತುಂಬಿದೆ ಇತ್ಯಾದಿ).'

## ಶ್ಲೋಕ ೨೪-೨೫

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ।**
**ಸರ್ಗೇಽಪಿ ನೋಪಜಾಯಂತೇ ಪ್ರಳಯೇ ನ ವ್ಯಥಂ ತಿ ಚ ॥೨೪॥**

**(ಗೀತಾ)**

**ಸರ್ವೇ ಚತುರ್ಬಾಹವ ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃಸುವರ್ಚಸಃ ಪ್ರವಾಳವೈಡೂರ್ಯಮೃಣಾಲವರ್ಚಸಃ ಪರಿಸ್ಫುರತ್ಕುಂಡಲಮೌಳಿ-ಮಾಲಿನಃ ॥೨೫॥** (ಭಾಗವತ)

**ಅರ್ಥ:** ಇದಂ ಜ್ಞಾನಂ—(ಸ್ವತಂತ್ರನಾದ ನನ್ನ ಇಚ್ಛೆಯಂತೆ ನನ್ನ ಅಧೀನ-ವಾದ ಪ್ರಕೃತಿಯು ಜೀವರನ್ನು ಬಂಧಿಸಿರುವ ಪ್ರಕಾರವನ್ನೂ, ಆ ಬಂಧನದಿಂದ ಮುಕ್ತರಾಗುವ ಮಾರ್ಗವನ್ನೂ ಬೋಧಿಸುವ) ಈ ಜ್ಞಾನವನ್ನು, ಉಪಾಶ್ರಿತ್ಯ —ಆಶ್ರಯಿಸಿ (ಅದರಲ್ಲಿ ನಿಷ್ಠೆಯನ್ನು ಹೊಂದಿ), ಮಮ—ನನ್ನ, ಸಾಧರ್ಮ್ಯಂ —ಸಮಾನಧರ್ಮವನ್ನು, ಆಗತಾಃ—ಹೊಂದಿದವರು (ನನ್ನ ಲೋಕಕ್ಕೆ ಪ್ರಾಪ್ತ-ರಾದವರು), ಸರ್ಗೇऽಪಿ—ಸೃಷ್ಟಿಕಾಲದಲ್ಲಿ ಸಹ, ನ ಉಪಜಾಯಂತೇ—(ಪ್ರಾಕೃತ ದೇಹಯೋಗರೂಪದ) ಉತ್ಪತ್ತಿಯನ್ನು (ಜನ್ಮವನ್ನು) ಹೊಂದುವು-ದಿಲ್ಲ; ಪ್ರಲಯೇ—ಪ್ರಳಯಕಾಲದಲ್ಲಿ, ನ ವ್ಯಥಂತಿ—(ಮರಣಾದಿ) ದುಃಖ-ವನ್ನು ಹೊಂದುವುದಿಲ್ಲ. ॥೨೪॥

**ಅರ್ಥ:** (ಸಾರೂಪ್ಯಮುಕ್ತಿಯನ್ನು ಹೊಂದಿದ) ಎಲ್ಲರೂ, ಚತುರ್ಬಾಹವಃ —ನಾಲ್ಕು ಭುಜಗಳುಳ್ಳವರು, ಉನ್ಮಿಷನ್ಮಣಿಪ್ರವೇಕನಿಷ್ಕಾಭರಣಾಃ—ಥಳ-ಥಳಿಸುವ ರತ್ನಖಚಿತಸುವರ್ಣಾಭರಣಗಳುಳ್ಳವರು, ಸುವರ್ಚಸಃ—ಉತ್ತಮ ದೇಹಕಾಂತಿಯುಳ್ಳವರು, ಪ್ರವಾಳವೈಡೂರ್ಯಮೃಣಾಲವರ್ಚಸಃ—ಹವಳ, ವೈಡೂರ್ಯ, ಕಮಲದ ದೇಟುಗಳಂತೆಯೂ ಹೊಳೆಯುವರು; ಪರಿಸ್ಫುರ-ತ್ಕುಂಡಲ ಮೌಲಿಮಾಲಿನಃ—ಪ್ರಕಾಶಮಾನವಾದ ಕರ್ಣಕುಂಡಲ, ಕಿರೀಟ, ಹಾರಗಳುಳ್ಳವರೂ (ಆಗಿ ಶೋಭಿಸುವರು). ॥೨೫॥

## ಪದ ೨೨

ರಾಗ-ನಾದನಾಮಕ್ರಿಯೆ; ತಾಳ-ಝಂಪೆ

**ಇಟ್ಟ ಮುಕುಟಗಳ ತೊಟ್ಟ ಅಂಗಿಗಳ**
**ವಟ್ಟ ಪದಕಹಾರಗಳ**
**ಉಟ್ಟ ಪೊಂಬಟ್ಟೆಗಳ ಕಂಕಣಾಂಗದಗಳ**
**ಮೆಟ್ಟಿದ ಪೊನ್ನಪಾವುಗಿಯ** ॥೧॥

**ಪೊಳೆವ ಕುಂಡಲಗಳ ಉಲಿವ ಕಿಂಕಿಣಿಗಳ**
**ನಳನಳಿಸುವ ನೆವಳಗಳ**

**ನಲಿವಂದುಗೆಗಳ ಮುಕ್ತರ ದಿವ್ಯಾಂಗದಾ-**
**ಚೆಲುವನದಾವ ಬಣ್ಣಿಸುವ ॥೨॥**

**ಕರಚತುಷ್ಟಯದ ಮುಕ್ತರು ಕೃಷ್ಣನೊಡನಲ್ಲಿ**
**ಸರಿಬೆರಸಿಹ ಸಮಯದಲ್ಲಿ**
**ಉರದ ಶ್ರೀವತ್ಸ ಕೌಸ್ತುಭದ ಕುರುಹನೆ ಕಂಡು**
**ಹರಿಯಿವನೆಂದರಿವನು ಗಡ ॥೩॥**

**ವಿರಿಂಚ ಕೈಮುಗಿಯಲು ಗರುಡನೇರಿ ಬರಲು**
**ಉರಗನ ಮಂಚದಲ್ಲಿರಲು**
**ಅರಿವರು ಅಲ್ಲದಿದ್ದರೆ ಸಾರೂಪ್ಯದಿ**
**ತೆರೆವಡಿಸಿಕೊಡಲಿಹದು ಗಡ ॥೪॥**

**ಅರ್ಥ:** ಇಟ್ಟ ಮುಕುಟಗಳ—ಧರಿಸಿದ ಕಿರೀಟಗಳನ್ನು, ತೊಟ್ಟ ಅಂಗಿಗಳ —ಬಿಗಿದ ಕವಚಗಳನ್ನು, ವಟ್ಟ ಪದಕಹಾರಗಳ—ಹಾಕಿಕೊಂಡ ಪದಕಗಳುಳ್ಳ ಹಾರಗಳನ್ನು, ಉಟ್ಟ ಪೊಂಬಟ್ಟೆಗಳ—ಉಟ್ಟಿರುವ ಬಂಗಾರಬಣ್ಣದ ವಸ್ತ್ರಗಳನ್ನು (ಅಥವಾ ಜರತಾರಿ ಪೀತಾಂಬರಗಳನ್ನು), ಕಂಕಣಾಂಗದಗಳ—ಬಾಹುಭೂಷಣಗಳನ್ನು, ಮೆಟ್ಟಿದ ಪೊನ್ನಪಾವಿಗೆಯ—ಕಾಲಲ್ಲಿ ಧರಿಸಿದ ಹೊನ್ನಿನ ಹಾವಿಗೆಗಳನ್ನು ॥೧॥

ಪೊಳೆವ ಕುಂಡಲಗಳ—ಹೊಳೆಯುವ ಕುಂಡಲಗಳನ್ನು, ಉಲಿವ ಕಿಂಕಿಣಿಗಳ—ಧ್ವನಿಮಾಡುವ ಕಿರುಗೆಜ್ಜೆಗಳನ್ನು, ನಳನಳಿಸುವ ನೆವಳಗಳ—ತೂಗಾಡುವ ಝುಂಕೆ(ಲೋಲಕ್ಕು)ಗಳನ್ನು, ನಲಿವಂದುಗೆಗಳ—ಚಲಿಸುತ್ತಿರುವ ಕಾಲಂದುಗೆ, ಮುಕ್ತರ—(ಇತ್ಯಾದಿ ಅಲಂಕಾರಗಳುಳ್ಳ) ಮುಕ್ತರ, ದಿವ್ಯಾಂಗದ —ದಿವ್ಯದೇಹದ, ಆ ಚೆಲುವ—ಅದ್ಭುತ ಸೌಂದರ್ಯವನ್ನು, ಅದಾವ—ಆ ಯಾವನು, ಬಣ್ಣಿಸುವ—ವರ್ಣಿಸಬಲ್ಲನು ॥೨॥

ಕರಚತುಷ್ಟಯದ—ಚುತುರ್ಭುಜಗಳುಳ್ಳ, ಮುಕ್ತರು—ಈ ಮುಕ್ತರು, ಕೃಷ್ಣನೊಡನೆ—ಶ್ರೀಹರಿಯೊಂದಿಗೆ, ಅಲ್ಲಿ—ವೈಕುಂಠದಲ್ಲಿ, ಸರಿಬೆರಸಿಹ ಸಮಯದಲ್ಲಿ—ಕೂಡಿರುವ (ಒಟ್ಟಿಗಿರುವ) ಸಮಯದಲ್ಲಿ, ಉರದ—ಎದೆಯಲ್ಲಿರುವ, ಶ್ರೀವತ್ಸಕೌಸ್ತುಭದ—ಶ್ರೀವತ್ಸ ಮತ್ತು ಕೌಸ್ತುಭ (ಕಂಠದಲ್ಲಿರುವ) ಕೌಸ್ತುಭಮಣಿಗಳ, ಕುರುಹನೆ—ಕಂಡು—ಲಾಂಛನಗಳನ್ನು (ಹೆಗ್ಗುರುತುಗಳನ್ನು) ನೋಡಿ,

ಹರಿಯಿವನೆಂದು— ಈತನೇ ಶ್ರೀಹರಿಯೆಂದು, ಅರಿವನು ಗಡ— ತಿಳಿಯುವನು (ಗುರ್ತಿಸಬಹುದಲ್ಲದೇ ಬೇರಾವ ಕಾರಣದಿಂದಲ್ಲ) ॥೩॥

ವಿರಿಂಚ ಕೈಮುಗಿಯಲು— ಮುಕ್ತಬ್ರಹ್ಮನು ಕೈಮುಗಿದಾಗ, ಗರುಡನೇರಿ ಬರಲು— ಗರುಡಾರೂಢನಾಗಿ ಬಂದಾಗ, ಉರಗನ ಮಂಚದಲ್ಲಿರಲು— ಶೇಷಪರ್ಯಂಕನಾದಾಗ (ಶೇಷದೇವನ ದೇಹದಲ್ಲಿ ಮಲಗಿದಾಗ), ಅರಿವರು — (ಆತನೇ ಶ್ರೀಹರಿಯೆಂದು) ತಿಳಿಯುವರು; ಅಲ್ಲದಿದ್ದರೆ— ಈ ಲಕ್ಷಣಗಳಿಂದಲ್ಲದಿದ್ದರೆ (ಇವುಗಳನ್ನು ಬಿಟ್ಟು), ಸಾರೂಪ್ಯದಿ— ಸಾರೂಪ್ಯ ಮುಕ್ತಿಯಲ್ಲಿ, ತೆರವಡಿಸಿಕೊಡಲಿಹದು ಗಡ— (ಸಾರೂಪ್ಯ ಮುಕ್ತರ ರೂಪವು) ಮೋಹಗೊಳಿಸುವುದು, (ಶ್ರೀಹರಿಯೇ ಈತನೆಂಬ ನಿಶ್ಚಯವನ್ನೂ) ಮರೆಮಾಡುವುದು. ॥೪॥

**ವಿಶೇಷಾಂಶ:** ಮುಕ್ತರ ಸಾರೂಪ್ಯ ಪ್ರಕಾರವು ಹೀಗೆ ವರ್ಣಿತವಾಗಿದೆ.

*'ಸಚತುರ್ಭುಜಾ ವನಜಪತ್ರದೃಶೋ ವರವೇಷಿಣೋऽತ್ರ ಸಪಿಶಂಗಪಟಾಃ।*
*ಅರುಣಪ್ರಭಾಶ್ಚ ತರುಣಾಭ್ರರುಚೋ ವಿಚರಂತಿ ನಾಥರುಚಯಃ ಪುರುಷಾಃ॥'*

(ಸುಮಧ್ವವಿಜಯ)

**ಅರ್ಥ:** ಅತ್ರ— ಈ ವೈಕುಂಠದಲ್ಲಿ, ನಾಥರುಚಯಃ— (ತಮ್ಮ) ನಾಥನಾದ ವೈಕುಂಠಪತಿಯ ಕಾಂತಿಗೆ (ಕಿಂಚಿತ್) ಸದೃಶವಾದ ಕಾಂತಿಯುಳ್ಳ, ಪುರುಷಾಃ— ಮುಕ್ತಜೀವರು, ವಿಚರಂತಿ— ಸಂಚರಿಸುತ್ತಾರೆ; ಸಚತುರ್ಭುಜಾಃ— (ಅವರು) ನಾಲ್ಕು ಬಾಹುಗಳುಳ್ಳವರು, ವನಜಪತ್ರದೃಶಃ— ಕಮಲದಳದಂತೆ ನೇತ್ರಗಳುಳ್ಳವರು, ವರವೇಷಿಣಃ— ಉತ್ತಮ ವಸ್ತ್ರಾಲಂಕಾರಗಳಿಂದ ಭೂಷಿತರು, ಸಪಿಶಂಗಪಟಾಃ— ಪೀತಾಂಬರಧಾರಿಗಳು, ಅರುಣಪ್ರಭಾಃ— ಎಳೆಸೂರ್ಯನಂತೆ ಕಾಂತಿಯುಳ್ಳವರು, ತರುಣಾಭ್ರರುಚಃ— (ಕೆಲವರು) ನೂತನ ಮೇಘದಂತೆ ನೀಲ ವರ್ಣದಿಂದ, ಶೋಭಿಸುವವರು.

ಮೇಲಿನ ೨ಳನೇ ಶ್ಲೋಕದಲ್ಲಿ ಹೇಳಿದಂತೆ, ಮುಕ್ತರು ಜನನ ಮರಣ ರಹಿತರೆಂಬುದರಲ್ಲಿ ಪರಮಾತ್ಮನ ಸಮಾನಧರ್ಮವುಳ್ಳವರು. ಪರಮಾತ್ಮನಿಗೆ ಸಮವಾದ ಜ್ಞಾನಾನಂದಾದಿಗಳು ಮಾತ್ರ ಅವರಲ್ಲಿಲ್ಲವೇ ಇಲ್ಲ. ಜನನ ಮರಣಗಳಿಂದ ಉಪಲಕ್ಷಿತವಾದ ಅನ್ಯದೋಷಗಳೂ ಇಲ್ಲವೆಂದು ಸುಮಧ್ವವಿಜಯವು ಸ್ಪಷ್ಟಗೊಳಿಸುತ್ತದೆ.

*'ನ ಭವಂತಿ ಯತ್ರ ಮೃತಿಜನ್ಮ ಜರಾಸ್ತ್ರಿವಿಧಂ ಭಯಂ ಕಿಮುತ ದುಃಖ-ಗಣಾಃ।*
*ಅಪರಂ ಚ ಕಿಂಚಿದಶುಭಂ ನ ಭವೇನ್ನ ಗುಣಾದಿ ತತ್ರಭವಮೂಲಮಪಿ॥'*

**ಅರ್ಥ:** ಯತ್ರ—ವೈಕುಂಠದಲ್ಲಿ, ಮೃತಿಜನ್ಮಜರಾಃ—ಮರಣ, ಜನನ, ಮುಪ್ಪುಗಳಾಗಲಿ, ತ್ರಿವಿಧಂ—ಆಧಿಭೌತಿಕ, ಆಧ್ಯಾತ್ಮಿಕ, ಆಧಿದೈವಿಕಗಳೆಂಬ ಮೂರು ವಿಧದ, ಭಯಂ—ಭಯವಾಗಲಿ, ನ ಭವಂತಿ—ಇರುವುದೇ ಇಲ್ಲವೋ, (ಹೀಗಿರಲು) ಕಿಮುತ ದುಃಖಗಣಃ—ಅನ್ಯದುಃಖಸಮೂಹವು ಎಲ್ಲಿ ಬಂತು? (ಇರಲು ಹೇಗೆ ಸಾಧ್ಯ); ಅಪರಂ ಚ—ಮತ್ತೆ ಬೇರೆ, ಕಿಂಚಿತ್ ಅಶುಭಂ—ಯಾವುದೇ (ಮಾತ್ಸರ್ಯಾದಿ) ದೋಷಲೇಶವು, ನ ಭವೇತ್—ಇರಲು ಅವಕಾಶವೇ ಇಲ್ಲ; (ಏಕೆಂದರೆ) ತತ್ಪ್ರಭವಮೂಲಂ—ದೋಷ-ಗಳ ಉತ್ಪತ್ತಿಗೆ ಕಾರಣವಾದ, ಗುಣಾದ್ಯಪಿ—ಸತ್ವಾದಿಪ್ರಾಕೃತಗುಣಗಳೂ, ನ—ಇಲ್ಲ.

**ಪದ ೨೩**

ರಾಗ-ಪಂತುವರಾಳಿ; ತಾಳ-ಆದಿ

**ಸಾಯುಜ್ಯ ಸಾಲೋಕ್ಯ ಸಾಮೀಪ್ಯ ಸಾರೂಪ್ಯ**
**ಈಯಂದದಿ ಚತುರ್ವಿಧ ಮುಕುತಿಯೊಳು**
**ಹೇಯಲಿಂಗದೇಹ ಪೋದರೆ ಮೇಲವರವರ**
**ಯೋಗ್ಯತೆಯಿಂದಲೊಪ್ಪುವ ಗಡ ॥೧॥**

**ಅರ್ಥ:** ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, (ಎಂಬ) ಈಯಂದದಿ—ಈ ರೀತಿಯಾಗಿ, ಮುಕುತಿಯೊಳು—ಮುಕ್ತಿಯಲ್ಲಿ, ಚತುರ್ವಿಧ—ನಾಲ್ಕು ಪ್ರಕಾರವಿದೆ; ಹೇಯ—ಅಸಹ್ಯವಾದ, (ತೊಲಗಿಸಲು ಯೋಗ್ಯವಾದ), ಲಿಂಗದೇಹ—ಲಿಂಗದೇಹವು, ಪೋದರೆ—ಹೋದರೆ, ಮೇಲೆ—ಆನಂತರ, ಅವರವರ—ಆಯಾ ಜೀವರ, ಯೋಗ್ಯತೆಯಿಂದಲೊಪ್ಪುವುದು ಗಡ—ಯೋಗ್ಯತೆಯಂತೆ (ಅವರ ಸ್ವರೂಪವು ಆವಿರ್ಭಾವಗೊಂಡು) ಶೋಭಿಸುವುದು.

**ಶ್ರೀಕಾಂತನಂಗವ ಮುಟ್ಟಿಕೊಂಡಿಪ್ಪುದು**
**ಬೇಕಾದ ಸಾಯುಜ್ಯ ಮುಕ್ತಿಕಾಣಿರೋ**
**ಈ ಕುಜನರೆಂಬೈಕ್ಯವ ಯುಜಿರ್ ಯೋಗೇಯೆಂಬ**
**ವ್ಯಾಕರಣೋಕ್ತಿ ಬಿಡಿಸಿತು ॥೨॥**

**ಅರ್ಥ:** ಶ್ರೀಕಾಂತನ—ಲಕ್ಷ್ಮೀಪತಿಯ, ಅಂಗವ—ದೇಹವನ್ನು, ಮುಟ್ಟಿ-ಕೊಂಡಿಪ್ಪುದು—ಕೂಡಿಕೊಂಡಿರುವುದು, ಬೇಕಾದ—ಅಪೇಕ್ಷಿತವಾದ,

ಸಾಯುಜ್ಯಮುಕ್ತಿ— ಸಾಯುಜ್ಯಮುಕ್ತಿಯು, ಕಾಣಿರೋ— ತಿಳಿಯಿರೋ, ಈ ಕುಜನರು— ಮಾಯಾವಾದಿಗಳೆಂಬ ದುರ್ಜನರು, ಎಂಬೈಕ್ಯವ— ಹೇಳುವ **'ಐಕ್ಯ'** ಶಬ್ದಾರ್ಥವನ್ನು, **'ಯುಜಿರ್ ಯೋಗೇ'** ಎಂಬ— ಯುಜಿರ್‌ಧಾತು, ಯೋಗ (ಸಂಬಂಧ)ವೆಂದರ್ಥದಲ್ಲಿರುತ್ತದೆಂಬ, ವ್ಯಾಕರಣೋಕ್ತಿ— ವ್ಯಾಕರಣದ ನಿರೂಪಣೆಯು, ಬಿಡಿಸಿತು— ಸ್ಪಷ್ಟಪಡಿಸಿತು.

**ಹರಿಯಂಗವಾಶ್ರೈಸಿ ಅಲ್ಲಿಪ್ಪದೇ ಅವರ**
**ಪರಗತಿಯದರಮೇಲೆ ಮುಕ್ತಿಯೊಳೂ**
**ತರತರದಲ್ಲಿ ಹರಿಯ ಮುಕ್ತಿಯಲಿಹರಾಗಿ ಆ**
**ಪಿರಿಯಸುರರೆ ಸಾಯುಜ್ಯಮೋಕ್ಷಕರು ॥೩॥**

**ಅರ್ಥ:** ಹರಿಯಂಗವ— ಶ್ರೀಹರಿಯ ದೇಹದ ಒಂದೊಂದು ಅಂಗವನ್ನು, ಆಶ್ರೈಸಿ— ಆಶ್ರಯಿಸಿ, ಅಲ್ಲಿಪ್ಪದೇ— ಅಲ್ಲಿರುವುದೇ, ಅವರ ಪರಗತಿಯು— ಅವರಿಗೆ ಉತ್ತಮಗತಿಯು; ಅದರ ಮೇಲೆ— ಅವರಿಗೂ ದೊಡ್ಡ ಯೋಗ್ಯತೆಯವರು (ತಾರತಮ್ಯಾನುಸಾರವಾಗಿ), ಮುಕ್ತಿಯೊಳು— ಮುಕ್ತಿಯಲ್ಲಿ, ತರತರದಲ್ಲಿ— ನಾನಾ ಪ್ರಕಾರವಾಗಿ, (ಬಹ್ವಂಗಗಳಲ್ಲಿ— ಸರ್ವಾಂಗಗಳಲ್ಲಿ), ಹರಿಯ ಮುಕ್ತಿಯಲಿಹರಾಗಿ, ಶ್ರೀಹರಿಯ ದೇಹದಲ್ಲಿ ಇರುತ್ತಾದ್ದರಿಂದ, ಆ ಪಿರಿಯ —ಆ ಹಿರಿಯ, ಸುರರೆ— ದೇವತೆಗಳೇ, ಸಾಯುಜ್ಯಮೋಕ್ಷಕರು— ಸಾಯುಜ್ಯ ಮೋಕ್ಷವುಳ್ಳವರು.

**ವಿಶೇಷಾಂಶ:**

*(೧) 'ಏಕಾದಶೇಂದ್ರಿಯಾಣ್ಯೇವಂ ತನ್ಮಾತ್ರಾ-ಪಂಚಕಂ ತಥಾ।*
*ಷೋಡಶೈವ ಕಲಾಃ ಪ್ರೋಕ್ತಾಃ ಲಿಂಗದೇಹಸ್ತದಾತ್ಮಕಃ॥'*

ಕರ್ಮೇಂದ್ರಿಯಗಳು ಐದು, ಜ್ಞಾನೇಂದ್ರಿಯಗಳು ಐದು, ಮನಸ್ಸು ಹೀಗೆ ಹನ್ನೊಂದು ಇಂದ್ರಿಯಗಳು, ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ತನ್ಮಾತ್ರಗಳು, ಒಟ್ಟು ಹದಿನಾರು ತತ್ವಗಳ ಸೂಕ್ಷ್ಮಾಂಶಗಳಿಂದ ಆದುದು ಲಿಂಗ ದೇಹ.

(೨) ಮನುಷ್ಯೋತ್ತಮರಿಂದ ಆರಂಭವಾಗುವ ಮುಕ್ತಿಯೋಗ್ಯಜೀವ ಸಮುದಾಯದವರಿಗೆ ಲಭಿಸುವ ಮೋಕ್ಷವು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂದು ನಾಲ್ಕು ಪ್ರಕಾರವಾಗಿರುತ್ತದೆ. ಮನುಷ್ಯೋತ್ತಮರಿಂದಲೂ ಅವರರಾದ ತೃಣಾದಿ ಜೀವರಲ್ಲಿಯೂ ಮುಕ್ತಿಯೋಗ್ಯರಿರು-

ವರು. ದೊರೆಯುವ ಮುಕ್ತಿಯು, ಅವರವರ ಉಪಾಸನಾನುಸಾರವಾಗಿರುತ್ತದೆ. ಉಪಾಸನಾಧಿಕಾರವಾದರೋ ಅವರ ಸ್ವರೂಪಯೋಗ್ಯತೆಯ ತಾರತಮ್ಯಾನುಗುಣವಾಗಿರುತ್ತದೆ. ಶ್ರೀಹರಿಯು ಅನಂತಗುಣಿಯು, ಆತನ ಒಂದು ಗುಣ ಮಾತ್ರದಿಂದ ಆರಂಭಿಸಿ ಬಹುಗುಣಗಳನ್ನೂ ಅನಂತಗುಣಗಳನ್ನೂ ಧ್ಯಾನಿಸುವ ಅಧಿಕಾರಿಗಳಿದ್ದಾರೆ. ತೃಣಜೀವರು ಏಕಗುಣೋಪಾಸಕರು, ಅವರಿಗೆ, ಆತ್ಮಾ=ಮಮಸ್ವಾಮೀ ಎಂಬ ಒಂದು ಗುಣಧ್ಯಾನದಿಂದ ಆ ಗುಣಸ್ವರೂಪನಾದ ಶ್ರೀಹರಿಯ ಪ್ರತ್ಯಕ್ಷವಾಗುತ್ತದೆ. ಚತುರ್ಮುಖಬ್ರಹ್ಮನು, ಶ್ರೀಹರಿಯನ್ನು ಅನಂತಗುಣೋಪಸಂಹಾರ ಪೂರ್ವಕ ಧ್ಯಾನಿಸಿ ಹಾಗೆ ಪ್ರತ್ಯಕ್ಷೀಕರಿಸಿಕೊಳ್ಳುವ ಉತ್ತಮಾಧಿಕಾರಿಯು, **ದೇವರ್ಷಿಪಿತೃಪನರಾಃ** (ತತ್ತ್ವಸಂಖ್ಯಾನ) ಎಂಬಲ್ಲಿ ಮುಕ್ತಿಯೋಗ್ಯಜೀವ ಸಮುದಾಯಗಳು ಐದು ದೊಡ್ಡವರ್ಗಗಳಲ್ಲಿ ಸಮಾವೇಶವಾಗುತ್ತವೆಂದು ಹೇಳಲಾಗಿದೆ. ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು, ಮನುಷ್ಯೋತ್ತಮರೆಂಬುವುಗಳೇ ಆ ಐದು ವರ್ಗಗಳು, ಮನುಷ್ಯತ್ತೋಮರು ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕು ಗುಣಗಳ ಧ್ಯಾನದಲ್ಲಿಯೂ, ಅವರಿಂದ ಮೇಲಿನ ಉತ್ತಮರು ಯಥಾಯೋಗ್ಯವಾಗಿ ಬಹುಗುಣಗಳ ಉಪಾಸನೆಯಲ್ಲಿಯೂ ಅಧಿಕಾರಿಗಳೆಂದು ಹೇಳಲಾಗುತ್ತದೆ. ಈ ಎಲ್ಲರಿಗೆ ದೊರೆಯುವ ಮುಕ್ತಿಯು ಮೇಲೆ ಹೇಳಿದಂತೆ ನಾಲ್ಕು ಪ್ರಕಾರವಾಗಿರುತ್ತದೆ—ಅವರವರ ಯೋಗ್ಯತೆಯಂತೆ ಆಯಾ ಮುಕ್ತಿಯೇ ಅವರಿಗೆ ಲಭಿಸುತ್ತದೆ. ಉತ್ತಮಾಧಿಕಾರಿಗಳಾದ ದೇವತೆಗಳಲ್ಲಿ ಶ್ರೇಷ್ಠರಾದವರು ಮಾತ್ರ (ಪಿರಿಯ ಸುರರೆ) ಸಾಯುಜ್ಯ ಮುಕ್ತಿಯನ್ನು ಹೊಂದುವರು.

(೩) ಶ್ರೀಹರಿಯಿಂದ ಐಕ್ಯವನ್ನು ಹೊಂದುವುದೇ ಸಾಯುಜ್ಯಮುಕ್ತಿಯೆಂದು ತಿಳಿಯುವುದು, ತಮಸ್ಸಾಧಕ ಮಿಥ್ಯಾಜ್ಞಾನವು. ಪರಮಾತ್ಮನಲ್ಲಿ ಪ್ರವೇಶಿಸುವುದು—ಅವನನ್ನು ಕೂಡಿಕೊಳ್ಳುವುದೇ **'ಸಾಯುಜ್ಯ'**ವು. ಹೀಗೆಂಬುದು **'ಯುಜಿರ್ ಯೋಗೇ'** ಎಂಬ ಧಾತ್ವರ್ಥದಿಂದಲೂ ಸಿದ್ಧವಾಗುತ್ತದೆ. **'ಅಂಗಾವಬದ್ಧ'**ರೆಂಬ ದೇವತೆಗಳು ಶ್ರೀಹರಿಯ ಚಕ್ಷುರಾದಿ ಅಂಗಗಳಿಂದ ಉತ್ಪನ್ನರಾಗಿ (ಪ್ರಾಕೃತದೇಹಯೋಗವೆಂಬ ಜನ್ಮ ಪಡೆದು) ಆ ಭಗವದಂಗಗಳನ್ನೇ ವಿಶೇಷವಾಗಿ ಉಪಾಸಿಸಿ, ಮುಕ್ತಿಯಲ್ಲಿ, ಆಯಾ ಅಂಗಗಳಲ್ಲಿ ಪ್ರವಿಷ್ಟರಾಗಿ, ಅಲ್ಲಿದ್ದು ನಾನಾ ಭೋಗಗಳನ್ನು ಅನುಭವಿಸಿ ಆನಂದಿಸುವರು. ತತ್ತ್ವಾಭಿಮಾನಿ ದೇವತೆಗಳು ಈ ಗುಂಪಿಗೆ ಸೇರಿದವರು. *'ಚಕ್ಷೋಃ*

*ಸೂರ್ಯೋ ಅಜಾಯತ ಇತ್ಯಾದ್ಯುಪಾಸನಂ ಚ ದೇವಾನಾಂ ಕಾರ್ಯಮೇವ ಸ್ವೋತ್ಪತ್ತಿ-ಸ್ಥಾನತ್ವಾತ್ ಮುಕ್ತೌ ತತ್ರ ಲಯಸ್ಯ ಅಪೇಕ್ಷಿತತ್ವಾಚ್ಚ ಉಪಪನ್ನಂ ತೇಷಾಂ ತಥೋಪಾಸನಂ ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ'* (ಸೂತ್ರಭಾಷ್ಯ) ಎಂದರೆ—

'ಕಣ್ಣುಗಳಿಂದ ಸೂರ್ಯನು ಹುಟ್ಟಿದನು—ಇತ್ಯಾದಿ ಶ್ರುತ್ಯುಕ್ತಭಗವದಂಗ-ಗಳ ಮಹಿಮೆಗಳನ್ನು, ಸೂರ್ಯಾದಿ ದೇವತೆಗಳು ಉಪಾಸಿಸಲೇಬೇಕು. ಏಕೆಂದರೆ ಆಯಾ ಭಗವದಂಗಗಳು ತಮಗೆ ಉತ್ಪತ್ತಿಸ್ಥಾನವಾಗಿವೆ—ಸರ್ವ ಪ್ರಕಾರದಿಂದ ತಮಗೆ ಆಶ್ರಯಸ್ಥಾನಗಳಾಗಿವೆ—ಮುಕ್ತಿಯಲ್ಲಿ ಅಲ್ಲಿ ತಾವು ಪ್ರವೇಶಿಸಬೇಕಾಗಿದೆ (ಲಯ—ಪ್ರವೇಶದಿಂದ ಲೀನವಾಗುವಿಕೆ). ಆದ್ದರಿಂದ ಅವರು ಹೀಗೆ ಉಪಾಸಿಸಬೇಕಾದುದು ಯುಕ್ತವೇ ಆಗಿದೆ. ಆ ದೇವತೆಗಳಿಗೆ ಭಗವದಂಗಪ್ರವೇಶವೇ ಮುಕ್ತಿಯೆಂದು ಜ್ಞಾನಿಗಳು ತಿಳಿಯುತ್ತಾರೆ.'

ಈ ಸಾಯುಜ್ಯಮುಕ್ತರು, ಶ್ರೀಹರಿದೇಹದಿಂದ ಹೊರಗೂ ಇದ್ದು ನಾನಾ ಭೋಗಗಳನ್ನು ಹೊಂದುತ್ತಾರೆ. ಈ ಉಭಯಪ್ರಕಾರದ ಭೋಗದಿಂದ ಸ್ವಯೋಗ್ಯವಾದ ಪೂರ್ಣಾನಂದವನ್ನು ಹೊಂದುವರಲ್ಲದೇ, ಶ್ರೀಹರಿಯ ಅಮಿತಾನಂದವನ್ನಲ್ಲ. ಮುಕ್ತರಿಗೆ ಭೋಗದಿಂದ ಆನಂದವಲ್ಲ, ಕಿಂ ತು ಆನಂದದಿಂದ ಭೋಗವೆಂಬುದನ್ನು ಮರೆಯಲಾಗದು. (ಸಾಧ್ಯಾನಂದ-ಸ್ವರೂಪಾಸ್ತು ಮುಕ್ತಿರ್ನೈವಾತ್ರ ಸಾಧನಂ). ಸಾಯುಜ್ಯಮುಕ್ತರ ಭೋಗವನ್ನೂ ಆನಂದವನ್ನೂ ನಿರ್ಣಯಿಸಿ ಹೇಳುವ ಪ್ರಮಾಣವಾಕ್ಯಗಳು ಹೀಗಿವೆ: ಬೃಹತ್ತಂತ್ರ ಮತ್ತು ಭವಿಷ್ಯತ್ ಪುರಾಣ:

*ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ।*
*ಗಚ್ಛೇಚ್ಚ ಹರಿಪಾದೇನ ಮುಕ್ತಸ್ಯೈಷಾ ಸ್ಥಿತಿರ್ಭವೇತ್॥*
*ತದಂಗಾನುಗೃಹೀತೈಶ್ಚ ಸ್ವಾಂಗೈರೇವ ಪ್ರವರ್ತನಮ್।*
*ಕುರ್ವಂತಿ ಭುಂಜತೇ ಭೋಗಾನ್ ತದಂತರ್ಬಹಿರೇವ ಚ॥*
*ಮುಕ್ತಾಃಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾಂಲ್ಲೇಶತಃ ಕ್ವಚಿತ್।*
*ಬಹಿಷ್ಠಾನ್ ಭುಂಜತೇ ನಿತ್ಯಂ ನಾನಂದಾದೀನ್ ಕಥಂಚನ॥*

**ಅರ್ಥ:** ಹರಿಹಸ್ತೇನ ಆದತ್ತೇ—ಶ್ರೀಹರಿಯ ಕೈಗಳಿಂದ ತೆಗೆದುಕೊಳ್ಳು-ತ್ತಾನೆ; ಹರಿದೃಷ್ಟ್ಯಾ ಏವ ಪಶ್ಯತಿ—ಶ್ರೀಹರಿಯ ಕಣ್ಣುಗಳಿಂದಲೇ ನೋಡು-ತ್ತಾನೆ; ಹರಿಪಾದೇನ ಗಚ್ಛೇತ್ ಚ—ಶ್ರೀಹರಿಯ ಪಾದದಿಂದಲೇ ನಡೆಯು-

ತ್ತಾನೆ, ಏಷಾ ಸ್ಥಿತಿಂಃ— ಈ ಪ್ರಕಾರದ ಸ್ಥಿತಿಯು, ಮುಕ್ತಸ್ಯ— ಸಾಯುಜ್ಯ-ಮುಕ್ತನಿಗೆ, ಭವೇತ್— ಇರುತ್ತದೆ. (ಶ್ರೀಹರಿದೇಹದಲ್ಲಿರುವಾಗ, ಸರ್ವಾಂಗ-ಸಾಯುಜ್ಯಕ್ಕೆ ಅಧಿಕಾರಿಯಾದ ಬ್ರಹ್ಮದೇವನ ಸ್ಥಿತಿಯು ವರ್ಣಿತವಾಗಿದೆ; ಆದಿತ್ಯಾದಿ ಇತರರು ಸ್ವಾಶ್ರಯವಾದ ಅಂಗಗಳಲ್ಲಿ ಮಾತ್ರವಿದ್ದು ಭೋಗಿಸು-ತ್ತಾರೆ). ತದಂಗಾನು ಗೃಹೀತೈಶ್ಚ— ಶ್ರೀಹರಿಯ ಅವಯವಗಳ ಅನುಗ್ರಹವುಳ್ಳ, ಸ್ವಾಂಗೈರೇವ— ತಮ್ಮ ಅಂಗಗಳಿಂದಲೇ, ಪ್ರವರ್ತನಂ— ಪ್ರವೃತ್ತಿಸುವುದನ್ನು, ಕುರ್ವಂತಿ— ಮಾಡುತ್ತಾರೆ. ತದಂತರ್ಬಹಿರೇವ ವಾ— ಶ್ರೀಹರಿಯ ದೇಹ-ದೊಳಗೆ ಮತ್ತು ಹೊರಗೆ ಸಹ, ಭೋಗಾನ್— ಭೋಗಗಳನ್ನು, ಭುಂಜತೇ— ಅನುಭವಿಸುತ್ತಾರೆ.

ಮುಕ್ತಾಃ— ಸಾಯುಜ್ಯಮುಕ್ತರು, ಪರಂ ವಿಷ್ಣುಂ— ತಮ್ಮಿಂದ ಭಿನ್ನನೂ ಸರ್ವೋತ್ತಮನೂ (ಪರ-ಭಿನ್ನ-ಉತ್ತಮ) ಆದ ವಿಷ್ಣುವನ್ನು, ಪ್ರಾಪ್ಯ— ಹೊಂದಿ, ತದ್ಭೋಗಾನ್— ಹರಿದೇಹದಲ್ಲಿದ್ದು ಅಲ್ಲಿನ ಭೋಗಗಳನ್ನು, ಕ್ವಚಿತ್ — ಕಾಲವಿಶೇಷದಲ್ಲಿ ಮಾತ್ರ, ಲೇಶತಃ— ಅತ್ಯಲ್ಪವಾಗಿ, ಬಹಿಷ್ಠಾನ್— ಹೊರಗಿನ ಭೋಗಗಳನ್ನು (ಭಗವತ್ಸ್ವರೂಪದಿಂದ ಅಭಿನ್ನವಾದವುಗಳಲ್ಲ), ಭುಂಜತೇ— ಭೋಗಿಸುತ್ತಾರೆ. ಕಥಂಚನ— ಹೇಗೂ ಎಲ್ಲಿಯೂ (ಯಾವ ಪ್ರಕಾರದಿಂದಲೂ), ಆನಂದಾದೀನ್— (ಭಗವತ್ಸ್ವರೂಪಭೂತಭೋಗಗಳ-ನ್ನಾಗಲಿ, ಆತನಿಗೆ, ಮೀಸಲಾದ ಲಕ್ಷ್ಮ್ಯಾದಿಗಳನ್ನಾಗಲೀ, ಮುಕ್ತರ ಆನಂದ-ಕ್ಕಿಂತ ಅತಿವಿಲಕ್ಷಣವೂ ಅತಿಶಯವೂ ಆದ) ಶ್ರೀಹರಿಯ ಆನಂದಾದಿಗಳನ್ನು, ನ— ಅಲ್ಲವೇ ಅಲ್ಲ (ಹೊಂದುವುದೇ ಇಲ್ಲ). '*ಚಿದ್ರೂಪಾನ್, ಪ್ರಾಕೃತಾಂಶ್ಚಾಪಿ ವಿನಾ ಭೋಗಾಂಸ್ತುಕಾಂಶ್ಚನ*'— ಅಪ್ರಾಕೃತ ಮತ್ತು ಪ್ರಾಕೃತ (ಶುದ್ಧಸತ್ವಾತ್ಮಕ) ಭೋಗಗಳನ್ನು ಅನುಭವಿಸುತ್ತಾರೆ. ಆದರೆ ಎಲ್ಲರೂ ಎಲ್ಲವನ್ನೂ ಅಲ್ಲ.

**ಇದ್ದ ಮುಕ್ತಿಗಳಲ್ಲಿ ಭೇದವುಂಟೆಂಬುದು**
**ಸಿದ್ಧ ಸಕಲವಾದಿಗಳಿಗೂ**
**ಶಬ್ದಶಕ್ತಿಯಿಂದ ಯಿದರೊಳು ಭೇದ ತಾ ಬಂತಾಗಿ**
**ಬಿದ್ದುಹೋಯಿತು ಪರಸಿದ್ಧಾಂತ** ||೪||

**ಅರ್ಥ:** ಇದ್ದ ಮುಕ್ತಿಗಳಲ್ಲಿ— ಹೀಗಿರುವ ವಿವಿಧ ಮುಕ್ತಿಗಳಲ್ಲಿ ಭೇದ-ವುಂಟೆಂಬುದು— ಭೇದವಿರುತ್ತದೆಂಬುದು, ಸಕಲ ವಾದಿಗಳಿಗೂ— ಎಲ್ಲ ವಾದಿ-ಗಳಿಗೂ, ಸಿದ್ಧ— ಸಿದ್ಧವೇ ಆಗುತ್ತದೆ (ಆಗಿದೆ); (ಏಕೆಂದರೆ) ಶಬ್ದಶಕ್ತಿಯಿಂದ

—(ಸಾಲೋಕ್ಯಾದಿ) ಶಬ್ದಗಳ ಶಕ್ತ್ಯರ್ಥದಿಂದ (ಯೌಗಿಕಾರ್ಥ), ಇದರೊಳು —ವಿವಿಧ ಮುಕ್ತ್ಯವಸ್ಥೆಗಳಲ್ಲಿ, ಭೇದ ತಾ ಬಂತಾಗಿ—ಭೇದವು ತಾನಾಗಿಯೇ ಪ್ರಾಪ್ತವಾಗುವುದರಿಂದ, ಪರಸಿದ್ಧಾಂತ—ಐಕ್ಯವನ್ನು ಹೇಳುವ (ಜೀವ-ಬ್ರಹ್ಮೈಕ್ಯವನ್ನು ಹೇಳುವ) ಸಿದ್ಧಾಂತವು (ಮಾಯಾವಾದಮತವು), ಬಿದ್ದು ಹೋಯಿತು—ನಷ್ಟವಾಯಿತು (ಸುಳ್ಳಾಯಿತು—ಮುರಿದುಬಿತ್ತು).

**ವಿಶೇಷಾಂಶ: 'ಶಕ್ತ್ಯರ್ಥ'**ದ ವಿವರಣೆಯನ್ನು ಪದ (೧೪)ರ ವಿಶೇಷಾಂಶ-ಭಾಗದಲ್ಲಿ ನೋಡಿಕೊಳ್ಳಬಹುದು. ಸಾಲೋಕ್ಯಾದಿ ಶಬ್ದಗಳ ಶಕ್ತ್ಯರ್ಥದಿಂದ ಸಿದ್ಧವಾಗುವ ಭೇದವನ್ನು ಮುಂದಿನ ನುಡಿಗಳಿಂದ ವಿವರಿಸುತ್ತಾರೆ.

**ಸಾಲೋಕ್ಯ ಹರಿಯ ಲೋಕದೊಳಗೆ ತುಂಬಿಪ್ಪುದು**
**ಆ ಲೋಕದ ಹತ್ತಿರ ಸುತ್ತಮುತ್ತ**
**ಪಾಲಸಾಗರದಲ್ಲಿ ಸುಖಿಸುವ ಜೀವರ**
**ಸಾಲಿಗೆ ಸಾಮೀಪ್ಯ ಮುಕ್ತಿ ಕಾಣಿರೋ** ॥೫॥

**ಅರ್ಥ:** ಹರಿಯ ಸಾಲೋಕ್ಯ—ಹರಿಯ ಲೋಕದಲ್ಲಿರುವುದೆಂಬ ಮುಕ್ತಿಯು, ಲೋಕದೊಳು—ವೈಕುಂಠಲೋಕದಲ್ಲಿ, ತುಂಬಿಪ್ಪುದು—ಹೋಗಿ ವಾಸಿಸು-ವುದು; ಆ ಲೋಕದ—ವೈಕುಂಠಲೋಕದ, ಹತ್ತಿರ—ಸಮೀಪದಲ್ಲಿ, ಸುತ್ತ-ಮುತ್ತ—ಅದರ ಸುತ್ತಲಿರುವ ಸ್ಥಾನಗಳಲ್ಲಿ, (ಅಥವಾ) ಪಾಲಸಾಗರದಲ್ಲಿ—ಶ್ವೇತದ್ವೀಪದ ಸುತ್ತಲಿರುವ ಕ್ಷೀರಸಾಗರದಲ್ಲಿ, ಸುಖಿಸುವ—ಕ್ರೀಡಿಸಿ ಆನಂದಿ-ಸುವ, ಜೀವರ—ಮುಕ್ತಜೀವರ, ಸಾಲಿಗೆ—ಪಂಙ್ತ್ತಿಗೆ (ಸಮೂಹಕ್ಕೆ), ಸಾಮೀಪ್ಯ ಮುಕ್ತಿಕಾಣಿರೋ—ಸಾಮೀಪ್ಯವೆಂಬ ಮುಕ್ತಿಯೆಂದು ತಿಳಿಯಿರಿ.

**ವಿಶೇಷಾಂಶ:** ಶ್ರೀಹರಿಯು ಸರ್ವಗತನು. ಆತನ ಸಂದರ್ಶನದಿಂದ ಆನಂದಿಸುತ್ತ, ಮುಕ್ತರು ವಾಸಿಸುವ ಸ್ಥಳಗಳೆಲ್ಲವೂ ಸಲೋಕಗಳು—ಅದನ್ನು ಹೊಂದುವುದೇ ಸಾಲೋಕ್ಯವು. ಹೀಗಿದ್ದರೂ ವೈಕುಂಠ, ಶ್ವೇತದ್ವೀಪ ಮತ್ತು ಅನಂತಾಸನಗಳೆಂಬ ಮುಕ್ತರಿಗಾಗಿಯೇ ಮೀಸಲಾಗಿರುವ ಲೋಕಗಳನ್ನು ಹೊಂದಿ ಅಲ್ಲಿ ವಾಸಿಸುವುದು ಮುಖ್ಯವಾಗಿ **'ಸಾಲೋಕ್ಯ'**ವೆನಿಸುವುದು. ಈ ಸ್ಥಾನಗಳ ಸುತ್ತಲಿರುವ ಕ್ಷೀರಸಾಗರ ಮೊದಲಾದ ಸಮೀಪಪ್ರದೇಶಗಳಲ್ಲಿ ವಿಹರಿಸಿಕೊಂಡಿರುವುದು **ಸಾಮೀಪ್ಯಮುಕ್ತಿಯು.** 'ಮುಖ್ಯಸಾಲೋಕ್ಯ' ಮುಕ್ತಿ-ಯನ್ನು ಹೊಂದಿದವರಕಿಂತ, ವೈಕುಂಠಾದಿ ಲೋಕಗಳಲ್ಲಿಯೇ ಶ್ರೀಹರಿಯ ರಾಜಧಾನಿಗೆ (ಶ್ರೀಹರಿಪುರಕ್ಕೆ) ಸಮೀಪ ಸಮೀಪದ ಸ್ಥಾನಗಳನ್ನು ಹೊಂದು-

ವುದನ್ನೂ 'ಮುಖ್ಯಸಾಮೀಪ್ಯ'ವೆಂದು ತಿಳಿಯಬಹುದು. ಸಾಲೋಕ್ಯ-ವೆಂಬುದು, ಪೂರ್ವೋಕ್ತವಿವಕ್ಷೆಯಿಂದ, ಎಲ್ಲ ಮುಕ್ತರಿಗೂ ಇದೆ. ಶ್ರೀಹರಿಯ ದೇಹವನ್ನು ಪ್ರವೇಶಿಸುವ **ಸಾಯುಜ್ಯಮುಕ್ತರಕಿಂತ** ತಾರತಮ್ಯದಲ್ಲಿ ಕೆಳಗಿ-ನವರು, ನಾನಾ ಸ್ಥಾನವಿಶೇಷಗಳಲ್ಲಿ ಆನಂದದಿಂದ ವಿಹರಿಸಿಕೊಂಡಿರುತ್ತಾರೆ. ಎಲ್ಲ ಮುಕ್ತರಿಗೂ ಶ್ವೇತದ್ವೀಪದಲ್ಲಿರುವ ಶ್ರೀನಾರಾಯಣನ ದರ್ಶನವಾದ ನಂತರವೇ ಅವರವರ ಸ್ಥಾನಗಳು ದೊರೆಯುತ್ತವೆ. ಅಲ್ಲಿದ್ದು ಸ್ವೇಚ್ಛೆಯಿಂದ ವಿಹರಿಸುತ್ತ ಸ್ವಸ್ವರೂಪಾನಂದವನ್ನು ಅನುಭವಿಸುತ್ತಾರೆ.

***'ಬಹುನಾತ್ರ ಕಿಮುಕ್ತೇನ ಯಾವಚ್ಛ್ವೇತಂ ನ ಗಚ್ಛತಿ***
***ಯೋಗೀ ತಾವನ್ನ ಮುಕ್ತಸ್ಸ್ಯಾತ್'***

ಇತ್ಯಾದಿ ವಾಕ್ಯಗಳು 'ಅತ್ರ—ಮುಕ್ತರು ಹೊಂದುವ ಸ್ಥಾನ ವಿಷಯದಲ್ಲಿ, ಬಹುನಾ ಉಕ್ತೇನ ಕಿಂ—ಹೆಚ್ಚು ಹೇಳುವುದರಿಂದೇನು? ಯಾವತ್—ಎಲ್ಲಿಯವರೆಗೆ, ಯೋಗೀ—ಧ್ಯಾನಂಗತನಾದ ಮುಕ್ತನು, ಶ್ವೇತಂ ನ ಗಚ್ಛತಿ—ಶ್ವೇತದ್ವೀಪಕ್ಕೆ ಹೋಗಿ ನಾರಾಯಣನ ದರ್ಶನವನ್ನು ಪಡೆಯುವುದಿಲ್ಲವೋ, ತಾವತ್—ಅಲ್ಲಿಯವರೆಗೆ, ಮುಕ್ತಃ ನ ಸ್ಯಾತ್—ಮುಕ್ತನೇ ಅಲ್ಲ (ಈ ನಂತರವೇ ತನ್ನ ನಿರ್ದಿಷ್ಟ ಸ್ಥಾನದಲ್ಲಿದ್ದು ಸುಖಿಸುವನೆಂದರ್ಥ)' ಎಂದು ಸ್ಪಷ್ಟವಾಗಿ ಹೇಳುತ್ತವೆ. ಜೀವರಿಗೆ ಅವರ ತಾರತಮ್ಯಾನುಸಾರವಾಗಿ ಮುಕ್ತ-ಸ್ಥಾನಗಳು ಹೇಳಲ್ಪಟ್ಟಿವೆ.

*'ಆತ್ಮೇತ್ಯೇವ ಪರಂ ದೇವಮುಪಾಸ್ಯ ಹರಿಮವ್ಯಯಮ್।*
*ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ॥*
*ಅತ್ರೈವ ಚ ಸ್ಥಿತಿಸ್ತೇಷಾಮಂತರಿಕ್ಷೇ ತು ಕೇಚನ।*
*ಕೇಚಿತ್ಸತ್ಯೇ ಮಹಾಜ್ಞಾನಾಃ ಗಚ್ಛಂತಿ ಕ್ಷೀರಸಾಗರಮ್॥'*

ಎಂಬ ಭಾಷ್ಯೋದಾಹೃತ ಪ್ರಮಾಣಗಳು ಈ ವಿವರಗಳನ್ನು ತಿಳಿಸುತ್ತವೆ.

**ಅರ್ಥ:** ಅವ್ಯಯಂ—ನಿರ್ವಿಕಾರನಾದ (ಅನಾದಿನಿತ್ಯನಾದ), ಪರಂ ದೇವಂ—ಸರ್ವೋತ್ತಮನೂ ಸೃಷ್ಟ್ಯಾದಿ ಕ್ರೀಡಾವಿಶಿಷ್ಟನೂ ಆದ, ಹರಿಂ—ಶ್ರೀಹರಿಯನ್ನು, ಆತ್ಮಾ ಇತ್ಯೇವ—**ಆತ್ಮಾ** ಎಂಬ ಒಂದು ಗುಣದಿಂದಲೇ (ಮಮ ಸ್ವಾಮಿ—ಸರ್ವಸ್ವಾಮಿ ಎಂಬ ಒಂದು ಗುಣದಿಂದ), ಉಪಾಸ್ಯ—ಉಪಾಸನೆ ಮಾಡಿ, ಕೇಚಿತ್—ಕೆಲವರು (ಏಕ ಗುಣೋಪಾಸಕರು) (ಬಹು-ಗುಣಗಳಿಂದ ಭಗವಂತನನ್ನು ಉಪಾಸಿಸುವ ಬ್ರಹ್ಮಾದಿಗಳು ಸಹ ಈ **'ಆತ್ಮ'**

ಗುಣವನ್ನು ಬಿಡದೇ ಉಪಾಸಿಸುತ್ತಾರೆಂಬುದನ್ನು ಮರೆಯಲಾಗದು); ಅತ್ರೈವ —ಈ ಭೂಲೋಕದಲ್ಲಿಯೇ, ಮುಚ್ಯಂತೇ—ಮುಕ್ತರಾಗಿ ವಾಸಿಸುತ್ತಾರೆ; (ಇವರಿಗೆ ಕದಾಚನ—ಎಂದೂ, ನ ಉತ್ಕ್ರಾಮಂತಿ—ಬ್ರಹ್ಮನಾಡೀದ್ವಾರಾ ದೇಹತ್ಯಾಗವೆಂಬುದಿಲ್ಲ; (ದೇವತೆಗಳಿಗೆ, ಅಂಶದಿಂದ ಮನುಷ್ಯದೇಹದಲ್ಲಿದ್ದಾಗ ಬ್ರಹ್ಮನಾಡೀ ದ್ವಾರಾ ಉತ್ಕ್ರಮಣವೆಂಬುದುಂಟು—ಅನ್ಯಥಾ ಸ್ವೋತ್ತಮರಲ್ಲಿ ಲಯ ಹೊಂದುವುದರಿಂದ ಮುಕ್ತರಾಗುತ್ತಾರೆ); ತೇಷಾಂ—ಈ ಏಕಗುಣೋಪಾಸಕರಿಗೆ, ಅತ್ರೈವ ಸ್ಥಿತಿಃ—ಭೂಲೋಕದಲ್ಲಿಯೇ ನಿತ್ಯವಾಸವು; ಕೇಚನ—ಇವರಿಂದ ಉತ್ತಮರಾದ ಕೆಲವರು, ಅಂತರಿಕ್ಷೇ—ಅಂತರಿಕ್ಷಲೋಕದಲ್ಲಿಯೂ, ಕೇಚಿತ್—ಅವರಿಗಿಂತ ಉತ್ತಮರು, ಸತ್ಯಲೋಕೇ —ಸತ್ಯಲೋಕದಲ್ಲಿಯೂ (ಸತ್ಯಲೋಕದವರೆಗಿನ ಮೇಲಿನ ಲೋಕಗಳಲ್ಲಿಯೂ ಇರುವವರು); ಮಹಾಜ್ಞಾನಾಃ—ಕೆಲವು ಮಹಾಜ್ಞಾನಿಗಳು (ಸಾಮೀಪ್ಯಮುಕ್ತಿಗೆ ಅರ್ಹರಾದವರು), ಕ್ಷೀರಸಾಗರಂ—ಕ್ಷೀರಸಮುದ್ರವನ್ನು (ಶ್ವೇತದ್ವೀಪಕ್ಕೆ ಸಮೀಪವಾದ ಸ್ಥಾನಗಳನ್ನೂ), ಗಚ್ಛಂತಿ—ಹೊಂದುತ್ತಾರೆ. ತಾರತಮ್ಯಾನುಸಾರವಾಗಿ (ಜ್ಞಾನಾಧಿಕ್ಯವನ್ನನುಸರಿಸಿ ಸಾಮೀಪ್ಯಾದಿ ಮುಕ್ತಿಗಳು ಲಭಿಸುವುದೆಂದು ತಿಳಿಯಬೇಕು.

*'ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ ಸಮೀಪಗಾಃ।*
*ಸಾಲೋಕ್ಯಂ ಚ ಸರೂಪತ್ವಂ ಸಾಮೀಪ್ಯಂ ಯೋಗಮೇವ ಚ॥*

ಎಂಬುದು ಈ ವಿಷಯಕ್ಕೆ ಪ್ರಮಾಣವು.

**ಶ್ರೀವತ್ಸಕೌಸ್ತುಭಹೊರತಾಗಿ ಹರಿಯಂತೆ**
**ಆವಾಗ ಕರಚತುಷ್ಟಯದಲ್ಲಿ**
**ಪಾವನಚಕ್ರಾದಿಗಳ ಧರಿಸಿಕೊಂಡಾಡುವ ಮುಕ್ತ-**
**ಜೀವರಿಗೆ ಸಾರೂಪ್ಯ ಸಿರಿಕಾಣೆರೋ ॥೬॥**

**ಅರ್ಥ:** ಶ್ರೀವತ್ಸಕೌಸ್ತಭ—ಶ್ರೀವತ್ಸ ಚಿಹ್ನೆ ಮತ್ತು ಕೌಸ್ತುಭರತ್ನಗಳನ್ನು, ಹೊರತಾಗಿ—ಬಿಟ್ಟು, ಹರಿಯಂತೆ—ಶ್ರೀಹರಿಯಂತೆ, ಆವಾಗ—ಮುಕ್ತಿಯಲ್ಲಿ (ಯಾವಾಗಲೂ), ಕರಚತುಷ್ಟಯದಲ್ಲಿ—ನಾಲ್ಕು ಕೈಗಳಲ್ಲಿ, ಪಾವನಚಕ್ರಾದಿಗಳ—ಪವಿತ್ರವಾದ ಚಕ್ರ ಮೊದಲಾದವುಗಳನ್ನು (ಶಂಖ, ಚಕ್ರ, ಗದಾ, ಪದ್ಮಗಳನ್ನು), ಧರಿಸಿಕೊಂಡಾಡುವ—ಧರಿಸಿಕೊಂಡು ಸಂಚರಿಸುವ (ಅಥವಾ

ಆ ಚಿನ್ಹೆಗಳನ್ನು ಧರಿಸಿ, ಚಕ್ರಾದಿಧಾರಕನಾದ ತಮ್ಮ ಸ್ವಾಮಿಯನ್ನು ಸದಾ ಸ್ತುತಿಸುವ), ಮುಕ್ತಜೀವರಿಗೆ—ಮುಕ್ತರಿಗೆ, ಸಾರೂಪ್ಯ ಸಿರಿಕಾಣೆರೋ—ಸಾರೂಪ್ಯಮುಕ್ತಿಯೆಂಬ ಮಹಾಭಾಗ್ಯವುಂಟೆಂದು ತಿಳಿಯಿರಿ.

**ವಿಶೇಷಾಂಶ:** ಸಾರೂಪ್ಯಮುಕ್ತರು, ಶ್ರೀಹರಿಯ ವಿಶಿಷ್ಟಲಾಂಛನಗಳಾದ ಶ್ರೀವತ್ಸ ಮತ್ತು ಕೌಸ್ತುಭಗಳ ವಿನಾ, ಚತುರ್ಭುಜತ್ವಾದಿ ಇತರ ಅಂಶಗಳಲ್ಲಿ, ಶ್ರೀಹರಿಗೆ ಸಮಾನವಾದ (ಸದೃಶವಾದ) ರೂಪವುಳ್ಳವರೆಂದು ಹೇಳಲಾಗಿದೆ.

**ಸಾರೂಪ್ಯವೆಂಬುದು ಸಕಲರಿಗು ಸರಿಯೆಂದು**
**ಮೂರು ಮುಕುತಿಯಿಂದ್ಹೊರಗಿಪ್ಪರ**
**ಸಾರೂಪ್ಯಮುಕ್ತರೆಂದು ಪಿರಿಯರು ಕರೆವರು**
**ಬೇರೆಬೇರವರಿಗಿರವು ಗಡ** ॥೭॥

**ಅರ್ಥ:** ಸಾರೂಪ್ಯವೆಂಬುದು—(ಚತುರ್ಭುಜಾದಿ ಶ್ರೀಹರಿಸದೃಶ ದೇಹವುಳ್ಳವರೆಂಬ) ಸಾರೂಪ್ಯವು, ಸಕಲರಿಗು—ಎಲ್ಲ ಮುಕ್ತರಿಗೂ (ವೈಕುಂಠಾದಿ ಲೋಕಗಳ ಶ್ರೀಭಾಗದಲ್ಲಿರುವುದು ಮತ್ತು ಅಲ್ಲಿಯೂ ಶ್ರೀಹರಿಪುರಕ್ಕೆ ಸಮೀಪವಾದ ಸ್ಥಾನಗಳಲ್ಲಿರುವುದೆಂಬ ಮುಖ್ಯಸಾಲೋಕ್ಯ, ಸಾಮೀಪ್ಯ ಮತ್ತು ಸಾಯುಜ್ಯಮುಕ್ತಿಯನ್ನು ಹೊಂದಿದ ಎಲ್ಲ ಮುಕ್ತರಿಗೂ), ಸರಿಯೆಂದು—ಸಮವೆಂಬ ಕಾರಣದಿಂದ (ಸರ್ವಸಾಧಾರಣವಾದ್ದರಿಂದ), ಮೂರು ಮುಕುತಿಯಿಂದ ಹೊರಗಿಪ್ಪವರ—ಭೂಮ್ಯಂತರಿಕ್ಷಸತ್ಯಲೋಕಾದಿಗಳಲ್ಲಿರುವ **ಸಾಲೋಕ್ಯಮುಕ್ತಿ**, ಕ್ಷೀರಸಾಗರಾದಿ ಸುತ್ತಲಿನ ಸಮೀಪಸ್ಥಾನಗಳಲ್ಲಿರುವ **ಸಾಮೀಪ್ಯಮುಕ್ತಿ** ಮತ್ತು ಅತ್ಯುತ್ತಮವಾದ ಶ್ರೀಹರಿದೇಹಪ್ರವೇಶವೆಂಬ **ಸಾಯುಜ್ಯಮುಕ್ತಿ**, ಹೀಗಿರುವ ಮೂರು ಮುಕ್ತಿಗಳ ಹೊರಗಿರುವ (ಎಂದರೆ, ಈ ಮೂರು ಪ್ರಕಾರದ ಮುಕ್ತಿಯಿಲ್ಲದವರನ್ನು, ಸಾರೂಪ್ಯಮುಕ್ತರೆಂದು—ಸಾರೂಪ್ಯಮುಕ್ತಿಯನ್ನು ಹೊಂದಿದವರೆಂದು, ಪಿರಿಯರು—ಹಿರಿಯರು (ಜ್ಞಾನಿಗಳು), ಕರೆವರು—ಹೇಳುತ್ತಾರೆ; ಅವರಿಗೆ—ಹೀಗಿರುವ ಚತುರ್ವಿಧಮುಕ್ತರಿಗೆ, ಬೇರೆ ಬೇರೆ ಇರವು ಗಡ—ಬೇರೆ ಬೇರೆ ಸ್ಥಾನಗಳಲ್ಲಿರುವಿಕೆಯು ಶಾಸ್ತ್ರಪ್ರಸಿದ್ಧವೇ ಇದೆ.

**ವಿಶೇಷಾಂಶ:** ಈ ಪದದ ೪-೫ನೇ ನುಡಿಗಳ ವಿಶೇಷಾಂಶ ಭಾಗದಲ್ಲಿ ವಿಸ್ತರಿಸಲಾದ ಪ್ರಮೇಯಗಳಿಂದ, ಸಾರೂಪ್ಯಮುಕ್ತರೆಂದು ಯಾರು ನಿರ್ದೇಶಿಸಲ್ಪಡುತ್ತಾರೆ ಮತ್ತು ಏಕೆಂಬುದನ್ನು ತಿಳಿಯಬಹುದಾಗಿದೆ. ಅದನ್ನೇ ಈ

ನುಡಿಯಲ್ಲಿ ಸ್ಪಷ್ಟಗೊಳಿಸಿದ್ದಾರೆ. ಸಾರೂಪ್ಯವೆಂಬುದು ಸರ್ವಮುಕ್ತರಿಗೆ ಸಮವೆಂದು ತೋರುವ ಅರ್ಥದಲ್ಲಿ ಅಡಗಿರುವ ಈ ವಿಶೇಷವನ್ನು ಗಮನಿಸಬೇಕಾದುದು ಅತ್ಯವಶ್ಯಕ. ಅನ್ಯಥಾ, ಏಕಗುಣೋಪಾಸಕರಾದ, ತೃಣವೃಷಾದಿ ಸ್ವರೂಪದ ಜೀವರಿಗೆ ಸಹ ಚತುರ್ಭುಜ, ಚಕ್ರಾದಿಧಾರಣಗಳನ್ನು ತಿಳಿಯಬೇಕಾಗುತ್ತದೆಂಬ ಅನುಪಪತ್ತಿಯನ್ನು ಗಮನಿಸಬೇಕು.

**ಮೂರು ಶಾಕವ ಮಾಡಿ ಲವಣವ ಕೂಡಿದರೂ**
**ಮೂರು ಶಾಕವೆಂದು ಕರೆಯರ್ಸೆ**
**ಬೇರೆ ಬೇರೆ ಬಡಿಸಿದರೂ ಲವಣವೆನಿಪುದು ಈ-**
**ಪರಿಯಲ್ಲಿ ಸಾರೂಪ್ಯದ ಮುಕ್ತರಿಗೂ** **॥೮॥**

**ಅರ್ಥ:** ಮೂರು ಶಾಕವ ಮಾಡಿ—ಮೂರು ಪಲ್ಯೆಗಳನ್ನು ಮಾಡಿ, ಲವಣವ ಕೂಡಿದರೂ—(ಅವು ಮೂರು) ಉಪ್ಪಿನೊಡನೆ ಸೇರಿದರೂ, (ಎಲ್ಲದರಲ್ಲಿ ಉಪ್ಪು ಇದ್ದರೂ), ಮೂರು ಶಾಕವೆಂದು—ಮೂರು ಪ್ರತ್ಯೇಕ-ಪಲ್ಯೆಗಳೆಂದು, ಕರೆವರ್ಸೆ—ಕರೆಯುವರಷ್ಟೆ; ಬೇರೆ ಬೇರೆ ಬಡಿಸಿದರೂ —ಒಂದೊಂದನ್ನೂ ಪ್ರತ್ಯೇಕವಾಗಿ ಬಡಿಸಿದರೂ, ಲವಣವೆನಿಪುದು—ಉಪ್ಪಿರುವುದೆಂದೇ ಹೇಳಲಾಗುತ್ತದೆ; ಈ ಪರಿಯಲ್ಲಿ—ಇದೇ ರೀತಿಯಲ್ಲಿ (ಹೀಗೆಯೇ) ಸಾರೂಪ್ಯಮುಕ್ತರಿಗೂ—ಸಾರೂಪ್ಯಮುಕ್ತಿಯನ್ನು ಹೊಂದಿದ ಮುಕ್ತರಿಗೂ, (ಸಾಯುಜ್ಯ, ಸಾಮೀಪ್ಯ, ಸಾಲೋಕ್ಯಮುಕ್ತಿ ಹೊಂದಿದವರಿಗೂ, ಸಾರೂಪ್ಯವೆಂಬುದು ಇದ್ದೇ ಇದೆಯೆಂದು (ಸರ್ವಸಾಧಾರಣವೆಂದು) ತಿಳಿಯಬೇಕು.

**ಶ್ರೀಲೋಲನಾಜ್ಞೆಯಿಂದ ಸತ್ಯಾದಿಲೋಕಗಳಲ್ಲಿ**
**ನೆಲಸಿರ್ದ ಸಾರೂಪ್ಯದ ಮುಕ್ತರಿಗೂ**
**ಆಲಸ್ಯ ಹಸಿ ತೃಷೆ ಕಾಲಕರ್ಮದ ಕೋ-**
**ಟಲೆಗಳೊಮ್ಮವು ಗಡ** **॥೯॥**

**ಅರ್ಥ:** ಶ್ರೀಲೋಲನಾಜ್ಞೆಯಿಂದ—ನಾರಾಯಣನ ಆಜ್ಞೆಯಿಂದ, ಸತ್ಯಾದಿ-ಲೋಕಗಳಲ್ಲಿ—ಸತ್ಯಲೋಕವೇ ಮೊದಲಾದ ಸ್ಥಾನಗಳಲ್ಲಿ, ನೆಲಸಿರ್ದ—ಬಂದು ವಾಸಿಸುವ, ಸಾರೂಪ್ಯದ ಮುಕ್ತರಿಗೂ—ಸಾರೂಪ್ಯಮುಕ್ತರಿಗೂ, ಆಲಸ್ಯ, ಹಸಿ ತೃಷೆ ಕಾಲ ಕರ್ಮದ ಕೋಟಲೆಗಳು—ಆಲಸ್ಯ, ಹಸಿವು,

ಬಾಯಾರಿಕೆ, ಕಾಲ ಕರ್ಮಾದಿ ಪೀಡೆಗಳು (ಉಪದ್ರವಗಳು), ಒಮ್ಮೆವು ಗಡ— ಹತ್ತಿರ ಸುಳಿಯವೆಂಬುದು ಸಿದ್ಧವೇ ಸರಿ. (ಸತ್ಯಾದಿಲೋಕಗಳಲ್ಲಿರುವ ಇತರ ಮುಕ್ತರಂತೆ, ಈ ಉಪದ್ರವ ರಾಹಿತ್ಯವು ಸಮಾನವೇ ಸರಿ. ಸಾರೂಪ್ಯವು ಇತರರಿಗೂ ಸಮಾನವಾಗಿರುವಂತೆ, ಉಪದ್ರವರಾಹಿತ್ಯವು, ಸತ್ಯಲೋಕಕ್ಕೆ ಬಂದರೂ, ಸಾರೂಪ್ಯ ಮುಕ್ತರಿಗೆ ಇದ್ದೇ ಇರುತ್ತದೆಂಬಲ್ಲಿ ಸಹ ಮೇಲಿನ ಶಾಕ-ಲವಣ ದೃಷ್ಟಾಂತವು ಅನ್ವಯಿಸುತ್ತದೆ.

**ವಿಶೇಷಾಂಶ:** (೧) ಲನೇ ನುಡಿಯಲ್ಲಿ 'ಈ ಪರಿಯಲ್ಲಿ ಸಾರೂಪ್ಯ ಮುಕ್ತರಿಗೂ' ಎಂಬುದನ್ನು, ೯ನೇ ನುಡಿಯಲ್ಲಿರುವ, 'ಶ್ರೀಲೋಲನಾಜ್ಞೆ-ಯಿಂದ ಸತ್ಯಾದಿಲೋಕಗಳಲ್ಲಿ ನೆಲೆಸಿರ್ದ ಸಾರೂಪ್ಯದ ಮುಕ್ತರಿಗೂ' ಎಂಬು-ದರೊಂದಿಗೆ ಓದಿಕೊಂಡು ಅನ್ವಯ ಪೂರ್ತಿಮಾಡಿಕೊಳ್ಳಬಹುದು. ಆಗ, ಸಾರೂಪ್ಯಮುಕ್ತಿಯು ಆ ಮುಕ್ತಿಗೆ ಅಧಿಕಾರಿಗಳಾದವರು, ಎಲ್ಲಿದ್ದರೂ (ವೈಕುಂಠದಲ್ಲಿರಲಿ, ಕ್ಷೀರಸಮುದ್ರಾದಿ ಸಮೀಪದ ಸುತ್ತಲಿನ ಸ್ಥಾನಗಳಲ್ಲಿರಲಿ) ಚತುರ್ಭುಜಾದಿ ಸಮಾನರೂಪತ್ವವು, ಸಮವೆಂದು, ಅದೇ 'ಶಾಕ-ಲವಣ' ದೃಷ್ಟಾಂತದಿಂದ (ಈ ಪರಿಯಲ್ಲಿ— ಇದೇ ರೀತಿಯಲ್ಲಿ) ತಿಳಿಯಬಹು-ದೆಂದರ್ಥವಾಗುತ್ತದೆ. ಹೀಗೆ ಅನ್ವಯಮಾಡಿಕೊಂಡಾಗ, ೯ನೇ ನುಡಿಯ, 'ಆಲಸ್ಯ, ಹಸಿ, ತೃಷೆ'— ಇತ್ಯಾದಿ ಉತ್ತರಾರ್ಧವು, ಗುಣಸಂಗರಾಹಿತ್ಯದಿಂದ ದೋಷದೂರರೆಂಬ ಸಮಾನಧರ್ಮವು ಸರ್ವಮುಕ್ತರಿಗೆ ತಿಳಿಯ-ಬೇಕೆಂದರ್ಥವಾಗುತ್ತದೆ.

(೨) ಮನುಷ್ಯೋತ್ತಮರಿಂದ ಸಹಿತರಾದ ಮೇಲಿನ ಮುಕ್ತಿಯೋಗ್ಯರನ್ನು ಮಾತ್ರ, ತೆಗೆದುಕೊಂಡರೆ, ಸಾರೂಪ್ಯವೆಂಬುದು ಸಾಲೋಕ್ಯ, ಸಾಮೀಪ್ಯ, ಸಾಯುಜ್ಯಮುಕ್ತರಿಗೂ, ಉಂಟೆಂದು (ಸಾಧಾರಣವೆಂದು) ತಿಳಿಯುವುದರಲ್ಲಿ ಯಾವ ಅನುಪಪತ್ತಿಯೂ ಇಲ್ಲ. ಆಗ, ಸಾಲೋಕ್ಯವೆಂಬುದಕ್ಕೆ (ಏಕಗುಣೋ-ಪಾಸಕರಾದಿ ತೃಣಜೀವರು ವ್ಯಾವೃತ್ತರಾಗುವುದರಿಂದ), ಮುಕ್ತರು ಎಲ್ಲಿದ್ದರೂ ಅದನ್ನೇ ಸಾಲೋಕ್ಯವೆಂದೂ, ವಿಶೇಷವಾಗಿ ವೈಕುಂಠಲೋಕವೆಂಬ ಸಮಾನ ಸ್ಥಾನಪ್ರಾಪ್ತಿಯೆಂದೂ ತಿಳಿಯುವುದರಿಂದ ಯಾವ ವಿರೋಧವೂ ಇಲ್ಲ. ಈ ಚತುರ್ವಿಧಮುಕ್ತಿ ವಿಷಯದಲ್ಲಿ ಪ್ರಾಪ್ತವಾಗಬಹುದಾದ ಸೂಕ್ಷ್ಮತರ ಸಂಶಯ-ಗಳನ್ನು ಮಹಾತ್ಮರಿಂದ (ಜ್ಞಾನಿಶ್ರೇಷ್ಠರಿಂದ)ತಿಳಿದು ಪರಿಹರಿಸಿಕೊಳ್ಳಬೇಕಾಗು-ತ್ತದೆಂದು ಹೇಳದೆ ಗತ್ಯಂತರವಿಲ್ಲ.

## ಪದ ೨೪

ರಾಗ-ಕಾಂಬೋಧಿ; ತಾಳ-ಝಂಪೆ

**ದಿವ್ಯಭೋಗಂಗಳ ಲೀಲೆಯಿಂದುಂಬರು**
**ದಿವ್ಯಗೀತವ ಪಾಡುವರು॥**
**ಗಂಧಪರಿಮಳಗಳ ಪೂಸುವರು**
**ದಿವ್ಯನರನಾರಿಯರಲ್ಲಿ ॥೧॥**

**ಅರ್ಥ:** ಅಲ್ಲಿ—ಮುಕ್ತಿಯಲ್ಲಿ, ನರನಾರಿಯರು—ಪುರುಷರು, ಸ್ತ್ರೀಯರು, ಲೀಲೆಯಿಂದ—ಅನಾಯಾಸವಾಗಿ, ದಿವ್ಯಭೋಗಂಗಳ—ಲೋಕವಿಲಕ್ಷಣ ಭೋಗಗಳನ್ನು, ಉಂಬರು—ಭೋಗಿಸುತ್ತಾರೆ; ದಿವ್ಯಗೀತವ—ಶ್ರೇಷ್ಠಗಾನವನ್ನು, ಪಾಡುವರು—ಹಾಡುತ್ತಾರೆ; ದಿವ್ಯಗಂಧಪರಿಮಳಗಳ—ದಿವ್ಯಗಂಧಸುವಾಸನೆಗಳನ್ನು, ಪೂಸುವರು—ಮೂಸಿನೋಡುವರು ಮತ್ತು ಲೇಪಿಸಿಕೊಳ್ಳುವರು.

**ವಿಶೇಷಾಂಶ:** ಮುಕ್ತರು ದಿವ್ಯದೇಹಿಗಳು. (ಲೋಕದಲ್ಲಿ ಕಾಣಲಾಗದ) ಲೋಕವಿಲಕ್ಷಣವಾದ ದೇಹವುಳ್ಳವರು. ಅವರ ಸ್ವರೂಪವೇ ಅವರ ದೇಹವು —ಅದು ಚಿದಾನಂದಾತ್ಮಕವು. ಆ ದೇಹದಿಂದ ವಿವಿಧ ಭೋಗಗಳನ್ನು ಅನುಭವಿಸುತ್ತಾರೆ. 'ನಾನು ಅನುಭವಿಸುತ್ತೇನೆ' ಎಂಬ ಜ್ಞಾನವುಳ್ಳವರಾಗಿಯೇ ಇರುತ್ತಾರೆ. ಜ್ಞೇಯವಸ್ತುಗಳಿಲ್ಲದಿದ್ದರೆ ಜ್ಞಾನವೆಂಬುದಿಲ್ಲ. ಜ್ಞಾನವಿಲ್ಲೆಂದರೆ ಸ್ವರೂಪವಿಲ್ಲೆಂದೇ ಅರ್ಥ. ಸ್ವರೂಪನಾಶ ಅಥವಾ ಶೂನ್ಯತ್ವವು ಪುರುಷಾರ್ಥವಾಗಲಾರದು.

*'ವಿಷ್ಣೋರ್ಜ್ಞಾನಾದಿಕಂ ಮೋಕ್ಷಸ್ತದಭಾವೇ ಕುತಃ ಸುಖಮ್।*
*ಜ್ಞೇಯಾಭಾವಾನ್ನ ಹಿ ಜ್ಞಾನಂ ಜ್ಞಾನಾಭಾವೇ ಹಿ ಶೂನ್ಯತಾ॥*
*ತಸ್ಮಾತ್ ಜ್ಞೇಯಯುತೋ ಮೋಕ್ಷಃ ಸುಖರೂಪತ್ವತಃ ಸದಾ॥'* (ಬ್ರಹ್ಮತರ್ಕ)

ಎಂದರೆ, ವಿಷ್ಣುಜ್ಞಾನ, ಜೀವಜ್ಞಾನ, ವಿಷಯಜ್ಞಾನಾದಿಗಳಿಂದ ಯುಕ್ತನಾಗಿರುವುದೇ ಮೋಕ್ಷವು; ಜ್ಞೇಯಗಳಾದ (ತಿಳಿಯಲ್ಪಡುವ ವಸ್ತುಗಳಾದ ವಿಷ್ಣು ಮೊದಲಾದ ವಸ್ತುಗಳೇ ಇಲ್ಲದಿದ್ದರೆ, ಜ್ಞಾನವೆಂಬುದಿಲ್ಲ. **ಜ್ಞಾನಾಭಾವವೇ ಶೂನ್ಯತ್ವವು;** ಆತ್ಮನೇ ಇಲ್ಲವೆಂದರೆ, ಯಾರಿಗೆ ಸುಖ? ಎಂಬುದಕ್ಕೆ ಉತ್ತರವಿಲ್ಲ. ಮೋಕ್ಷವಾದರೋ ಸದಾ ಸುಖರೂಪವಾದ್ದರಿಂದ, ಸುಖವನ್ನು ಗ್ರಹಿಸುವ ಆತ್ಮನಿರುವನೆಂದು ಒಪ್ಪಲೇಬೇಕು. ಆ ಕಾರಣದಿಂದ ಮುಕ್ತಿಯಲ್ಲಿ,

ವಿಷ್ಣು, ಜೀವ, ಭೋಗ್ಯವಸ್ತುಗಳು, ಎಲ್ಲವೂ ಉಂಟೆಂದು ಅಂಗೀಕರಿಸಲೇ ಬೇಕು.

*'ನ ಚ ಸರ್ವಾಜ್ಞಾನಂ ಪುರುಷಾರ್ಥಃ।*

*ಮಗ್ನಸ್ಯ ಹಿ ಪರೇSಜ್ಞಾನೇ ಕಿಂ ನ ದುಃಖತರಂ ಭವೇತ್'* (ಮೋಕ್ಷಧರ್ಮ)

ಸರ್ವವಿಷಯಕ ಅಜ್ಞಾನವು ಪುರುಷಾರ್ಥವಲ್ಲ; ಇಷ್ಟು ಮಾತ್ರವಲ್ಲ; ಅಜ್ಞಾನದಲ್ಲಿ ಮುಳುಗಿದವನಿಗೆ ಆಗದಿರುವ ದುಃಖವಾವುದು? ದುಃಖ-ಮಯವೇ ಆದ್ದರಿಂದ, ಅಜ್ಞಾನವು ಅನರ್ಥಕರವೂ ಆಗಿದೆ. ಆದ್ದರಿಂದ ಮುಕ್ತರಿಗೆ ದಿವ್ಯದೇಹಗಳೂ, ಅದರಿಂದ ದಿವ್ಯಭೋಗಗಳೂ ಉಂಟು.

**ಜ್ಯೋತಿರ್ಮಯವಾದ ಹೆಣ್ಣುಗಂಡುಗಳ ಪ್ರಾ-**
**ಕೃತ ದೇಹಂಗಳಲ್ಲಿಹವು**
**ಪ್ರೀತಿಯಿಂದೊಮ್ಮೊಮ್ಮೆ ಅದರೊಳು ಪೊಕ್ಕು ನಾನಾ**
**ಕೃತಿಯಲ್ಲಿ ಸುಖಿಸುವರು ॥೨॥**

**ಅರ್ಥ:** ಜ್ಯೋತಿರ್ಮಯವಾದ—ಪ್ರಕಾಶಮಾನವಾದ (ಶುದ್ಧ ಸತ್ವಾತ್ಮಕ-ವಾದ), ಹೆಣ್ಣುಗಂಡುಗಳ, ಪ್ರಾಕೃತದೇಹಗಳು—ತೇಜೋವಿಶಿಷ್ಟಶುದ್ಧಸತ್ವಾ-ತ್ಮಕ ದೇಹಗಳು, ಅಲ್ಲಿಹವು—ಮುಕ್ತಿಯಲ್ಲುಂಟು; ಪ್ರೀತಿಯಿಂದ ಒಮ್ಮೊಮ್ಮೆ—ಸಂತೋಷದಿಂದ ಒಂದೊಂದು ಕಾಲದಲ್ಲಿ, ಅದರೊಳು—ಆ ಪ್ರಾಕೃತದೇಹ-ದಲ್ಲಿ, ಪೊಕ್ಕು—ಪ್ರವೇಶಿಸಿ, ನಾನಾ ಆಕೃತಿಯಲ್ಲಿ—ನಾನಾ ರೂಪಗಳಿಂದ, ಸುಖಿಸುವರು—ವಿಹರಿಸುತ್ತಾರೆ.

**ವಿಶೇಷಾಂಶ: 'ಓಂ ಅಣುಶ್ಚ ಓಂ'** ಎಂಬ ಸೂತ್ರದಲ್ಲಿ ಜೀವ ಸ್ವರೂಪವು ಅಣುಮಾತ್ರವೆಂದು ನಿರ್ಣಯಿಸಲಾಗಿದೆ. ಅಣುಮಾತ್ರ ದೇಹದಿಂದ, ಮೋಕ್ಷದಲ್ಲಿ ಉಂಟೆಂದು ಹೇಳಲಾಗುವ ನಾನಾ ಭೋಗಗಳು ಹೇಗೆ ಕೂಡುವುದೆಂಬ ಸಂಶಯಕ್ಕೆ ಅವಕಾಶವಿಲ್ಲ. ಏಕೆಂದರೆ,

*'ಅಲ್ಪಂ ತೇಜಃ ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ।*

*ತಥಾ ಚ ಸುಮಹತ್ತೇಜಃ ಕರೋತಿ ಭಗವಾನ್ ಮಹತ್।*

*ಅತೋ ನವತರಂ ಚೈತತ್ ಬ್ರಹ್ಮಾದೀನಾಂ ಕರೋತ್ಯಜಃ॥'* (ಬೃ.ಭಾ.)

'ಸಂಸಾರಾವಸ್ಥೆಯಲ್ಲಿ, ಜೀವನು ಅಣುರೂಪನೂ ಅಲ್ಪಶಕ್ತಿಯುತನೂ ಆಗಿರುವನು; ಹೀಗಿದ್ದರೂ, ಮೋಕ್ಷದಲ್ಲಿ, ಶ್ರೀಹರಿಯು ತನ್ನ ಅಚಿಂತ್ಯ ಸಾಮರ್ಥ್ಯದಿಂದ ಅಣುಸ್ವರೂಪಕ್ಕೆ ವೃದ್ಧಿಯನ್ನೂ, ಅಲ್ಪಶಕ್ತಿಗೆ ಮಹಾ

ಸಾಮರ್ಥ್ಯವನ್ನೂ ಕೊಡುತ್ತಾನೆ; ಇತರ ಜೀವರಿಂದ ಅಧಿಕವಾದ ರೂಪ ಸಾಮರ್ಥ್ಯಗಳಿಂದ ಬ್ರಹ್ಮಾದಿ ಮುಕ್ತರನ್ನು ಹೊಸಬನೋ ಎಂಬಂತೆ (ನವತರಂ) ಅನುಗ್ರಹಿಸುತ್ತಾನೆ; ಸ್ವರೂಪದೇಹಗಳಿಂದಲೇ ಮುಕ್ತರು ನಾನಾ ಭೋಗಗಳನ್ನು ಅನುಭವಿಸುವಂತೆ ಮಾಡುತ್ತಾನೆ' ಎಂದೂ, ಮತ್ತು

*'ಸ್ವೇಚ್ಛಯಾ ವಾ ಶರೀರಾಣಿ ತೇಜೋರೂಪಾಣಿ ಕಾನಿಚಿತ್।*

*ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ॥'* (ಭಾಷ್ಯ)

—'ಮುಕ್ತರು ತಮ್ಮ ಇಚ್ಛಾನುಸಾರವಾಗಿ ತೇಜೋವಿಶಿಷ್ಟಗಳಾದ (ಶುದ್ಧ ಸತ್ವಾತ್ಮಕ) ಕೆಲವು ದೇಹಗಳನ್ನು ತೆಗೆದುಕೊಂಡು (ನಾವು ಜಾಗ್ರತಾವಸ್ಥೆಯಲ್ಲಿ ಹೇಗೋ ಹಾಗೆ), ಆ ದೇಹಗಳಿಂದ ಭೋಗಗಳನ್ನು ಹೊಂದಿ, ಸ್ವೇಚ್ಛೆಯಿಂದಲೇ ಅವುಗಳನ್ನು ತ್ಯಜಿಸುತ್ತಾರೆ' ಎಂದೂ ಪ್ರಮಾಣಗಳು ಹೇಳುತ್ತವೆ.

**ಮುಕ್ತರ ಭೋಗಕ್ಕೆ ತಕ್ಕ ಫಲಂಗಳ**
**ಹೊತ್ತು ಹೊತ್ತಿಲಿ ಕೊಡುತಿಪ್ಪ**
**ನಿತ್ಯಾಪ್ರಾಕೃತವಾದ ಚಿತ್ರ ವೃಕ್ಷಗಳಲ್ಲಿ**
**ಸುತ್ತುಮುತ್ತಲೊಪ್ಪಿಹವು ॥೩॥**

**ಅರ್ಥ:** ಮುಕ್ತರ ಭೋಗಕ್ಕೆ—ಮುಕ್ತರು ಭೋಗಿಸಲಿಕ್ಕಾಗಿ, ಹೊತ್ತು ಹೊತ್ತಿಲಿ—ಇಚ್ಛಿತಕಾಲದಲ್ಲಿ, ತಕ್ಕ ಫಲಂಗಳ—(ಇಚ್ಛಿತ) ಫಲಾದಿ ವಸ್ತುಗಳನ್ನು, ಕೊಡುತಿಪ್ಪ—ಕೊಡುತ್ತಿರುವ (ಒದಗಿಸುವ), ನಿತ್ಯಾಪ್ರಾಕೃತವಾದ—ನಿತ್ಯನಿರ್ವಿಕಾರಗಳಾದ (ವೈಕುಂಠನಗರಿಯಲ್ಲಿ ಅಪ್ರಾಕೃತವೂ, ವೈಕುಂಠಲೋಕದ ಇತರತ್ರ ಶುದ್ಧಸತ್ವಾತ್ಮಕವೂ ಆದ), ಚಿತ್ರವೃಕ್ಷಗಳು—ನಾನಾ ದಿವ್ಯವೃಕ್ಷಗಳು, ಅಲ್ಲಿ—ವೈಕುಂಠದಲ್ಲಿ, ಸುತ್ತಮುತ್ತಲೊಪ್ಪಿಹವು—ಎಲ್ಲಕಡೆಗಳಲ್ಲಿವೆ.

**ನಿತ್ಯನಿರ್ದುಃಖಸುಖಸ್ವರೂಪರಾಗಿ**
**ಸುತ್ತ ಸುಳಿವರು ಲೀಲೆಯಲ್ಲಿ**
**ನಿತ್ಯಾಪ್ರಾಕೃತಫಲಂಗಳು ಅವರ್ಗೆ ಸುಖವ-**
**ನಿತ್ತು ಮುನ್ನಿನಂದದಲ್ಲಿಹವು ॥೪॥**

**ಅರ್ಥ:** ನಿತ್ಯನಿರ್ದುಃಖಸುಖಸ್ವರೂಪರಾಗಿ—ದುಃಖಸಂಪರ್ಕವಿಲ್ಲದ ನಿತ್ಯಾನಂದಸ್ವರೂಪರಾದ ಮುಕ್ತರು, ಲೀಲೆಯಲ್ಲಿ—ವಿಹಾರಕ್ಕಾಗಿ, ಸುತ್ತ—ಆ ವೃಕ್ಷಗಳ ಸುತ್ತಲೂ, ಸುಳಿವರು—ಸಂಚರಿಸುತ್ತಾರೆ; ನಿತ್ಯಾಪ್ರಾಕೃತಫಲಂಗಳು

—(ಆ ವೃಕ್ಷಗಳ) ಎಲ್ಲ ಋತುಗಳಲ್ಲಿ ದೊರೆಯುವ ಎಲ್ಲ ಅಪ್ರಾಕೃತಫಲಗಳು, ಅವರ್ಗೆ—ಆ ಮುಕ್ತರಿಗೆ, ಸುಖವನಿತ್ತು—ಸಂತೋಷವನ್ನುಂಟು ಮಾಡಿಯೂ, ಮುನ್ನಿನಂದದಲ್ಲಿಹವು—ಮೊದಲಿನಂತೆ (ಫಲಭರಿತವಾಗಿಯೇ) ಇರುತ್ತವೆ.

**ಇದು ಚಿತ್ರವಲ್ಲ ತುಂಡಿಸಿ ಶಾಕಂಗಳ ಮಾಡಿ**
**ಕುದಿಸಿ ವಿಪ್ರರಿಗುಣಿಸಿದ**
**ಚದುರ ವಾತಾಪಿ ತಮ್ಮಣ್ಣ ಕರೆದಾಗ**
**ಮೊದಲ ಹಾಗೆ ಬಾಹ ಕಂಡ್ಯ** ॥೫॥

**ಅರ್ಥ:** ಇದು—ಮುಕ್ತಲೋಕದ ವೃಕ್ಷಗಳು ಹೀಗಿರುತ್ತವೆಂಬುದು, ಚಿತ್ರ-ವಲ್ಲ—ಆಶ್ಚರ್ಯವಲ್ಲ; ತುಂಡಿಸಿ—ಹೆಚ್ಚಿ (ತುಂಡು ಮಾಡಿ), ಶಾಕಂಗಳ ಮಾಡಿ—ಕಾಯಿಪಲ್ಯೆಯಂತೆ ಉಪಯೋಗಿಸಿ, ಕುದಿಸಿ—ಬೇಯಿಸಿ, ವಿಪ್ರರಿ-ಗುಣಿಸಿದ—ಬ್ರಾಹ್ಮಣರಿಗೆ ಬಡಿಸಿ ಊಟ ಮಾಡಿಸಿದ, ಚದುರ ವಾತಾಪಿ—ಚಮತ್ಕಾರವಾದ ಬುದ್ಧಿಯುಳ್ಳ ವಾತಾಪಿಯು, ತಮ್ಮಣ್ಣ—ತನ್ನ ಅಣ್ಣ **'ಇಲ್ವಲ'**ನು, ಕರೆದಾಗ—'ಬಾ' ಎಂದು ಕೂಗಿದಾಗ, ಮೊದಲ ಹಾಗೆ—ಮೊದಲಿನಂತೆ ದೇಹವುಳ್ಳವನಾಗಿ, ಬಾಹ ಕಂಡ್ಯ—(ವಿಪ್ರರ ಉದರವನ್ನು ಸೀಳಿಕೊಂಡು) ಹೊರಗೆ ಬರುತ್ತಿದ್ದನೆಂಬುದನ್ನು ತಿಳಿಯೆಯಾ!

**ವಿಶೇಷಾಂಶ:** (೧) ವೈಕುಂಠಲೋಕದಲ್ಲಿ ಮುಕ್ತರು ಫಲಪುಷ್ಪಾದಿಗಳನ್ನು ಭೋಗಿಸುವ ಪ್ರಕಾರ, ಶುದ್ಧ ಸತ್ವಾತ್ಮಕವಾದ ಆ ವಸ್ತುಗಳು ಸಿದ್ಧವಾಗುವ ಬಗೆಗಳ ಬಗ್ಗೆ ಪದ(೧೦)ರ ೪ನೇ ನುಡಿಯ ವಿಶೇಷಾಂಶಭಾಗವನ್ನು ಇಲ್ಲಿ ಓದಿಕೊಳ್ಳಬಹುದು.

(೨) *'ಜಕ್ಷನ್ ಕ್ರೀಡನ್ ರಮಮಾಣಃ'* ಇತ್ಯಾದಿ ಶ್ರುತಿವಾಕ್ಯಗಳು, ಮುಕ್ತರು ನಾನಾ ಭೋಗಗಳಿಂದ ಆನಂದಿಸುವರೆಂದು ಹೇಳುತ್ತವೆ.

*ವರಪಾರಿಭದ್ರಕಸುಕಲ್ಪತರುವ್ರಜಪಾರಿಜಾತಹರಿಚಂದನವತ್।*
*ಸಹಿತಂ ಸಮಾದಿಪದತಾನನಗೈಃ ಪರಿಭೂಷಯಂತಿ ತದಹೋ ಋತವಃ॥*

ಮತ್ತು

*'ಪ್ರಿಯಮೇವ ಸಾಧಯತಿ ನಿತ್ಯಮಹೋ ಸ ವಿಮುಕ್ತಿಮಾನಿತಿ ವಿಮುಕ್ತಿಪದಾಂ॥'*

ಹಾಗೂ

*'ಯಂ ಯಂ ಸುಖೀ ಕಾಮಯತೇऽರ್ಥಮತ್ರ*
*ಸಂಕಲ್ಪಮಾತ್ರಾತ್ಸಕಲೋऽಪಿ ಸ ಸ್ಯಾತ್।*
*ಇತ್ಯೇವ ವೇದಾ ಅಪಿ ವೇದಯಂತಿ ಮುಕ್ತಿಂ ತತಃ ಕೋ ವಿಭವಾತಿರೇಕಃ॥*

ಎಂಬ ಸುಮಧ್ವವಿಜಯದ ವಾಕ್ಯಗಳು ಈ ಪ್ರಮೇಯಗಳನ್ನೇ ನಿರೂಪಿಸುತ್ತವೆ. ಈ ವಾಕ್ಯಗಳ ತಾತ್ಪರ್ಯಾರ್ಥವು ಹೀಗಿದೆ: 'ಶ್ರೇಷ್ಠವಾದ ಪಾರಿಭದ್ರಕ, ಕಲ್ಪವೃಕ್ಷ, ಪಾರಿಜಾತ, ಹರಿಚಂದನ, ಸಂತಾನ ಮೊದಲಾದ ವೃಕ್ಷ ಸಮೂಹಗಳಿಂದ ಶೋಭಿಸುವ ವೈಕುಂಠದ ವನಗಳನ್ನು ಎಲ್ಲ ಋತುಗಳೂ (ವಸಂತಾದಿಋತುಗಳು) ತಮ್ಮ ತಮ್ಮ ಕಾಲೋಚಿತಫಲಪುಷ್ಪಾದಿಗಳನ್ನು, ನಿತ್ಯವೂ, ಕೊಡುತ್ತಾ, ಸೇವಿಸುತ್ತವೆ.' 'ಹಿಮ, ಶೀತ, ಮಳೆ, ಬಿಸಿಲು ಮೊದಲಾದ ದೋಷಗಳು ಋತುಗಳಿಗೆ ವೈಕುಂಠದಲ್ಲಿಲ್ಲ; ಮುಕ್ತರಿಗೆ ನಿತ್ಯವೂ ಪ್ರಿಯವನ್ನೇ ಸಾಧಿಸುವ ಈ ಋತುಗಳೂ ಮುಕ್ತಋತುಗಳೇ—ಸಕಲ ದೋಷರಹಿತವಾದವುಗಳೇ, (ಋತುಧರ್ಮಗಳಿಗೆ ನಿಯಾಮಕರಾದ ದೇವತೆಗಳೂ ನಿರ್ದೋಷರೇ)' 'ಮುಕ್ತನು ಏನೇನನ್ನು ಇಚ್ಛಿಸುತ್ತಾನೋ, ಅದೆಲ್ಲವೂ ಸಂಕಲ್ಪಮಾತ್ರದಿಂದ (ಯತ್ನದ ಆವಶ್ಯಕತೆಯಿಲ್ಲದೆಯೇ, ಸಿದ್ಧವಾಗುತ್ತದೆ; ವೇದವೂ ಹೀಗೆಂದೇ ಮುಕ್ತಿಯನ್ನು ನಿರೂಪಿಸುತ್ತದೆ; ಆದ್ದರಿಂದ, ದೋಷಕ್ಕಿಂತ ಅತಿಶಯವಾದ ವೈಭವವಿಲ್ಲ! ಮುಕ್ತರ ವಿಹಾರಾದಿಗಳ ವರ್ಣನೆಯು, ಶ್ರೀಮದ್ಭಾಗವತದಲ್ಲಿಯೂ, ಇದೇ ಪ್ರಕಾರವಾಗಿರುವುದನ್ನು ಕಾಣುತ್ತೇವೆ. ಇದು ವೇದೋಕ್ತವೂ ಆಗಿದೆ. ಸಾರಾಂಶವೇನೆಂದರೆ, ಮುಕ್ತರ ಭೋಗ ಪ್ರಕಾರವು ಲೋಕವಿಲಕ್ಷಣವಾದುದು—ಅಸಂಭಾವಿತವೆಂಬ ಶಂಕೆಯು ಯುಕ್ತವಲ್ಲ.)

(೩) ವಾತಾಪಿ ಮತ್ತು ಇಲ್ವಲರು ವಿಪ್ರಚಿತ್ತಿ ಎಂಬ ದೈತ್ಯನ ಮಕ್ಕಳು. ಇಂದ್ರನಂಥ ಪುತ್ರನನ್ನು ಕೊಡಬೇಕೆಂದು ಬ್ರಾಹ್ಮಣರನ್ನು ಕೇಳಿಕೊಂಡರು. ಅದು ನಡೆಯಲಿಲ್ಲ. ಆಗಿನಿಂದ ಬ್ರಾಹ್ಮಣರನ್ನು ದ್ವೇಷಿಸಲು ಆರಂಭಿಸಿದರು. ಇಲ್ವಲನು, ವಾತಾಪಿಯನ್ನು ಒಂದು ಮೇಕೆಯನ್ನಾಗಿ ಮಾಡಿ, ಅದನ್ನು ಕೊಂದು, ಮಾಂಸವನ್ನು ಬೇಯಿಸಿ, ಬ್ರಾಹ್ಮಣರಿಗೆ ಉಣಬಡಿಸಿ, ಅವರು ಉಂಡ ಮೇಲೆ **'ಹೇ ವಾತಾಪಿ, ಬಾ'** ಎಂದು ಕೂಗುತ್ತಿದ್ದನು. ಆ ಕೂಡಲೆ ಬ್ರಾಹ್ಮಣರ ಉದರವನ್ನು ಸೀಳಿಕೊಂಡು, ವಾತಾಪಿಯು, ಮೊದಲಿದ್ದಂತೆ ಹೊರಗೆ ಬರುತ್ತಿದ್ದನು. ಬ್ರಾಹ್ಮಣರು ಸಾಯುತ್ತಿದ್ದರು. ಒಂದು ಬಾರಿ ಅಗಸ್ತ್ಯಋಷಿಯು ಇವರ ಬಳಿಗೆ ಬಂದನು. ಇವರು ರಾಜರಾದ್ದರಿಂದ, ಧನಸಹಾಯವನ್ನು ಪಡೆಯಲು ಬಂದಿದ್ದರು. ಆಗ ಇಲ್ವಲನು ಎಂದಿನಂತೆ, ವಾತಾಪಿಯನ್ನು ಅಗಸ್ತ್ಯರ ಹೊಟ್ಟೆಯಲ್ಲಿ ಸೇರುವಂತೆ ಮಾಡಿ, ಭೋಜನಾನಂತರ ವಾತಾಪಿಯನ್ನು ಕೂಗಿ ಕರೆದನು. ಜ್ಞಾನಿಗಳಾದ ಅಗಸ್ತ್ಯರು,

**'ವಾತಾಪೀ ಜೀರ್ಣೋ ಭವ'** ಎಂದರು. ವಾತಾಪಿಯು ಹೊರಗೆ ಬರಲೇ ಇಲ್ಲ. ಅಲ್ಲಿಯೇ ಜೀರ್ಣನಾಗಿಹೋದನು. ಆಗ ತಮ್ಮನನ್ನು ಕಳೆದುಕೊಂಡ ಇಲ್ವಲನು ದುಃಖಿತನಾಗಿ, ಕ್ಷಮೆ ಬೇಡಿಕೊಂಡನು; ಅಂದಿನಿಂದ ಬ್ರಹ್ಮದ್ವೇಷ-ವನ್ನು ಬಿಟ್ಟನು. ಈ ಉಪಮಾನವನ್ನು ಕೊಟ್ಟು, ಮುಕ್ತಲೋಕದ ವೃಕ್ಷಗಳು, ಮುಕ್ತರು ತಮ್ಮನ್ನು ಹೇಗೆ—ಎಷ್ಟು ಭೋಗಿಸಿದರೂ ಮೊದಲಿನಂತೆಯೇ ಇರುತ್ತವೆಂಬುದು, ಆಶ್ಚರ್ಯವೇನಲ್ಲವೆಂದು ತೋರಿಸುತ್ತಾರೆ.

### ಶ್ಲೋಕ ೨೬

**ಭ್ರಾಜಿಷ್ಣುಭಿರ್ಯಃಪರಿತೋ ವಿರಾಜತೇ**
**ಲಸದ್ವಿಮಾನಾವಲಿಭಿರ್ಮಹಾತ್ಮನಾಮ್।**
**ವಿದ್ಯೋತಮಾನಪ್ರಮದೋತ್ತಮಾಭಿಃ**
**ಸವಿದ್ಯುದಭ್ರಾವಳಿಭಿರ್ಯಥಾ ನಭಃ॥**

**ಅರ್ಥ:** (ವೈಕುಂಠವು) ಮಹಾತ್ಮನಾಂ—ಮಹಾತ್ಮರಾದ—ಮುಕ್ತರ, ಪರಿತಃ—ಸುತ್ತಲೂ, ಭ್ರಾಜಿಷ್ಣುಭಿಃ—ವಿಶೇಷವಾಗಿ ಪ್ರಕಾಶಿಸುವ, ವಿದ್ಯೋತಮಾನ-ಪ್ರಮದೋತ್ತಮಾಭಿಃ—ಸುಂದರ ಯುವತಿಶ್ರೇಷ್ಠರಿಂದ ಶೋಭಿಸುವ, ವಿಮಾನಾವಲಿಭಿಃ—ಮಿಂಚುವ ವಿಮಾನಸಮೂಹಗಳಿಂದ, ವಿರಾಜತೇ—ವಿರಾಜಿಸುತ್ತದೆ (ಅಲಂಕೃತವಾಗಿದೆ); (ಹೇಗೆಂದರೆ), ಸವಿದ್ಯುದಭ್ರಾವಳಿಭಿಃ—ಮಿಂಚಿನಿಂದ ಕೂಡಿದ ಮೇಘಸಮೂಹಗಳಿಂದ, ಯಥಾ ನಭಃ—ಆಕಾಶದಂತೆ.

### ಪದ ೨೫

ರಾಗ-ಗೌಳಿಪಂತು; ತಾಳ-ರೂಪಕ

**ಒಪ್ಪುವ ವಿಮಾನವನೇರಿ ಮೆರೆವರು ಕಂ-**
**ದರ್ಪನ ಕೇಳಿಯಲ್ಲಿಹರು**
**ತಪ್ಪರು ಧರ್ಮಮಾರ್ಗವನಧರ್ಮಕ್ಕೊಳಗಾಗ-**
**ದಿಪ್ಪರು ಅವರ್ಗೆ ಸ್ವಭಾವ ॥೧॥**

**ಅರ್ಥ:** (ಮುಕ್ತದಂಪತಿಗಳು) ಒಪ್ಪುವ—ಅಂದವಾದ, ವಿಮಾನವನು—ವಿಮಾನವನ್ನು, ಏರಿ—ಹತ್ತಿ, ಮೆರೆವರು—ಸುಖದಿಂದ ಸಂಚರಿಸುತ್ತಾರೆ; ಕಂದರ್ಪನ ಕೇಳಿಯಲ್ಲಿಹರು—ರತಿಕ್ರೀಡೆಗಳಲ್ಲಿಯೂ ತೊಡಗುವರು; ಧರ್ಮ

ಮಾರ್ಗವನು — ಧರ್ಮಮಾರ್ಗವನ್ನು, ತಪ್ಪರು — ಬಿಡರು; ಅಧರ್ಮಕ್ಕೆ ಒಳ-ಗಾಗದಿಪ್ಪರು — ಅಧರ್ಮಕ್ಕೆ ಬೀಳರು; ಅವರ್ಗೆ — ಅವರಿಗೆ, (ಹೀಗೆ ಧರ್ಮ-ಮಾರ್ಗದಲ್ಲಿಯೇ ಇರುವುದು), ಸ್ವಭಾವ — ಸಹಜವಾದುದು (ಸ್ವಭಾವ-ದಿಂದಲೇ ಸಿದ್ಧ).

**ಚಿತ್ರಬರೆದಿದ್ದ ಹೆಣ್ಣಗಣ್ಣಂತೆ ಅ-**
**ನ್ಯಸ್ತ್ರೀಯರಲ್ಲಿ ಮುಕ್ತರಿಗೆ**
**ಚಿತ್ತವೆರಗದು ತಮ್ಮ ತಮ್ಮ ಸ್ತ್ರೀಯರೊ-**
**ಳರ್ಥಿಯ ಮಾಡುವರ್ಕೆಸೆ ॥೨॥**

**ಅರ್ಥ:** ಚಿತ್ರಬರೆದಿದ್ದ — ಚಿತ್ರದಲ್ಲಿ ಬರೆದಿರುವ, ಹೆಣ್ಣಗಣ್ಣಂತೆ — ಹೆಣ್ಣಿನ ನೋಟದಂತೆ (ಸ್ತ್ರೀಚಿತ್ರವನ್ನು ನೋಡುವ ಸಾಮಾನ್ಯವಿವೇಕಿಯೂ ಅದರಲ್ಲಿ ಭೋಗಾಸಕ್ತಿಯನ್ನು ಹೊಂದದಿರುವಂತೆ), ಮುಕ್ತರಿಗೆ — ಮುಕ್ತಜೀವರಿಗೆ, ಅನ್ಯ ಸ್ತ್ರೀಯರಲ್ಲಿ — ಅನ್ಯಸ್ತ್ರೀವಿಷಯದಲ್ಲಿ, ಚಿತ್ತವೆರಗದು — ಮನಸ್ಸು ಆಸಕ್ತವಾಗುವು-ದಿಲ್ಲ. ತಮ್ಮ ತಮ್ಮ ಸ್ತ್ರೀಯರೊಳು — ಸ್ವಪತ್ನಿಯರಲ್ಲಿ ಮಾತ್ರ, ಅರ್ಥಿಯ — ಪ್ರೇಮವನ್ನು, ಮಾಡುವರ್ಕೆಸೆ — ಮಾಡುವರಲ್ಲವೇ?

**ತಾಯ ಸೊಬಗ ಮಕ್ಕಳು ಕಂಡಕಂಡಾಗ**
**ನ್ಯಾಯಪಥವನವರ್ಬಿಡುವರೆ**
**ಸ್ತ್ರೀಯಿಂದ ಮಿಂಚುವ ಮಗಳ ಕಂಡರೆ ಪಿತ**
**ಕಾಯಜಶರಕೊಳಗಹನೆ ॥೩॥**

**ಅರ್ಥ:** (ಮುಕ್ತರು — ನಿಯತಪತ್ನಿಯರಲ್ಲಿ ಮಾತ್ರ ಪ್ರೇಮಿಗಳೆಂಬುದೇನೂ ಆಶ್ಚರ್ಯವಲ್ಲವೆಂದು ಲೌಕಿಕದೃಷ್ಟಾಂತಗಳಿಂದ ಸಾಧಿಸುತ್ತಾರೆ); ಮಕ್ಕಳು — ಪುತ್ರರು, ತಾಯ ಸೊಬಗ ಕಂಡಕಂಡಾಗ — ತಮ್ಮ ತಾಯಿಯ ಸೌಂದರ್ಯ-ವನ್ನು ಕಂಡಾಗಲೆಲ್ಲಾ, ಅವರು — ಆ ಪುತ್ರರು, ನ್ಯಾಯಪಥವನು — ಧರ್ಮ-ಮಾರ್ಗವನ್ನು, ಬಿಡುವರೆ — ತ್ಯಜಿಸುವರೇ (ಭೋಗಬುದ್ಧಿಯನ್ನು ತಾಳು-ವರೇ? ಸರ್ವಥಾ ಇಲ್ಲ); ಮಿಂಚುವ ಮಗಳ ಕಂಡರೆ — ಕಾಂತಿಯುಕ್ತಳಾದ ಮಗಳನ್ನು ನೋಡಿ, ಸ್ತ್ರೀಯಿಂದ — ಆ ಸ್ತ್ರೀಯಿಂದ (ಮಗಳ ದರ್ಶನದಿಂದ), ಕಾಯಜಶರಕೆ — ಮನ್ಮಥನ ಬಾಣಕ್ಕೆ, ಪಿತ — ತಂದೆಯು, ಒಳಗಹನೆ — ವಶನಾಗುವನೇ? (ಇಲ್ಲ).

**ಚೆಲುವ ತಂಗಿಯ ಕಂಡರೊಡಹುಟ್ಟಿದವರ್ಮಾನ-**
**ವಳುಕಾದಿಹದೆ ಪಾಪಪಥಕೆ**
**ಕಲಿಗೊಳಗಾದವರೀಮಾರ್ಗದಲ್ಲಿರೆ ನಿ-**
**ರ್ಮುಕ್ತರಿಗೆ ಮೋಸವಹುದೇ** ॥೪॥

**ಅರ್ಥ:** ಚೆಲುವ ತಂಗಿಯ—ಸುಂದರಿಯಾದ ತಂಗಿಯನ್ನು, ಕಂಡರೆ—ನೋಡಿದರೆ, ಒಡಹುಟ್ಟಿದವರ—ಸಹೋದರರ, ಮಾನವು—ಮರ್ಯಾದಾ ಬುದ್ಧಿಯು ಅಥವಾ ಮನಸ್ಸು, ಪಾಪಪಥಕೆ—(ತಂಗಿಯ ವಿಷಯಕ್ಕೆ ದುರಿಚ್ಛೆಯನ್ನು ತಾಳುವುದೆಂಬ) ದುರ್ಮಾರ್ಗಕ್ಕೆ, ಅಳುಕಾದಿಹದೆ—ಅಳುಕದಿರುವುದೇ (ಚುಚ್ಚಿ ವ್ಯಥೆಗೊಳಿಸುವುದಿಲ್ಲವೇ); ಕಲಿಗೊಳಗಾದವರು—(ಒಂದು ವೇಳೆ) ದುಷ್ಟಕಲಿಗೆ ವಶರಾದ ದುರ್ಜನರು, ಈ ಮಾರ್ಗದಲ್ಲಿರೆ—(ಸ್ತ್ರೀ-ಮಾತ್ರದಿಂದ ಮೋಹಿತರಾಗಿ) ದುರ್ಮಾರ್ಗಿಗಳಾದರೆ, ನಿರ್ಮುಕ್ತರಿಗೆ—(ಪ್ರಕೃತಿಬಂಧನದಿಂದ) ಪೂರ್ಣ ಮುಕ್ತರಾದವರಿಗೆ, ಮೋಸವಹುದೇ—ಇಂಥ ವಿವಂಚನೆಯು ಸಾಧ್ಯವೇ? (ಸ್ತ್ರೀ ಸೌಂದರ್ಯಕ್ಕೆ ಮರುಳಾಗುವರೇ—ಸಾಧ್ಯವೇ ಇಲ್ಲ). **ಅಥವಾ** ಕಲಿಗೊಳಗಾದವರೂ ಸಹ, ತಾಯಿ, ತಂಗಿ, ಮಗಳ ವಿಷಯಕ್ಕೆ ದುರಿಚ್ಛೆಯನ್ನು ಹೊಂದದಿರುವಾಗ ಮುಕ್ತರ ವಿಷಯಕ್ಕೆ ಹೇಳಲೇನಿದೆ?

**ವಿಶೇಷಾಂಶ:** (೧) *'ಯಥಾ ಕಾಮಂ ಚರತಿ ಯಥಾ ಕಾಮಂ ಪಿಬತಿ ಯಥಾ ಕಾಮಂ ರಮತೇ ಯಥಾಕಾಮಮುಪರಮತೇ'* (ತೈತ್ತಿರೀಯ) ಶ್ರುತಿಯು 'ಮುಕ್ತನು ತನ್ನ ಇಚ್ಛಾನುಸಾರವಾಗಿ ಸಂಚರಿಸುತ್ತಾನೆ. ಸುಖಗಳನ್ನು ಭೋಗಿಸುತ್ತಾನೆ. ಕ್ರೀಡಿಸುತ್ತಾನೆ, ವಿರಮಿಸುತ್ತಾನೆ' ಎಂದು ಹೇಳುತ್ತದೆ. ಹೀಗಿದ್ದರೂ ಮುಕ್ತರಿಗೆ ಅಯೋಗ್ಯವಾದ ಇಚ್ಛೆಗಳೇ ಹುಟ್ಟುವುದಿಲ್ಲ. ಧರ್ಮಮಾರ್ಗದಲ್ಲಿಯೇ ಪ್ರವೃತ್ತಿಸುವುದು ಅವರ ಸ್ವಭಾವ. ಇದಕ್ಕಾಗಿ ಅವರು ಯತ್ನಮಾಡಬೇಕಾದ್ದಿಲ್ಲ. ಅವರು ವಿಧ್ಯತಿಕ್ರಮಭಯದಿಂದ ಧರ್ಮಮಾರ್ಗಾನುವರ್ತಿಗಳಲ್ಲ, ಅವರಿಗೆ ವಿಧಿನಿಷೇಧಗಳೆಂಬುದೇ ಇಲ್ಲ. *'ನ ಚಾ ಯೋಗ್ಯಂ ವಿ ಮುಕ್ತೋಽಪಿ ಪ್ರಾಪ್ನುಯಾನ್ನ ಚ ಕಾಮಯೇತ್'* (ಭಾಷ್ಯ) ಎಂಬಲ್ಲಿ ಮುಕ್ತರು ತಮಗೆ ಯೋಗ್ಯವಲ್ಲದ್ದನ್ನು (ಸ್ವೋತ್ತಮರ ಭೋಗಗಳು ಮತ್ತು ಆನಂದವಿಶೇಷಗಳನ್ನು) ಎಂದೂ ಹೊಂದುವುದಿಲ್ಲ ಮತ್ತು ಎಂದೂ ಆಶಿಸುವುದಿಲ್ಲವೆಂದೂ ಹೇಳಲಾಗಿದೆ.

(೨) '.....ಸ್ವಾಯೋಗ್ಯೇಚ್ಛಾತ್ರ ನೋ ಭವೇತ್
*ಯೋಗ್ಯೇಚ್ಛಾ ನ ವಿನಿಹನ್ಯೇತ ನಿತ್ಯಾನಂದಸ್ತತೋತ್ರ ಹಿ*
*ಮೋದತೇ ಕರ್ಹಿಚಿತ್ಕೇಚಿತ್ ಸ್ತ್ರೀಭಿರ್ಯಾನೇ ಗೃಹೇ ವನೇ।*
*ಯಥಾಸ್ವರೂಪವ್ಯಕ್ತಿಸ್ಯಾದ್ಭೋಜ್ಯೈಕ್ಯೇಪಿ ಸುಖಾದಿನಾ॥*
*ರತ್ಯಂತ ಉಭಯೇಚ್ಛೈಕ್ಯಾದ್ರೇತೋದ್ರಾವಸುಖಂ ತಥಾ।*
*ಉತ್ಸರ್ಗಾ ನೈವ ಜಾಯಂತೇ ಶುಕ್ಲಮೂತ್ರವಿಡಾದಿನಾಮ್॥*
*ಭೋಗ ಆಲೌಕಿಕಾಸ್ತೇಷಾಂ ಸಂತಿ ಲೋಕವಿಲಕ್ಷಣಾಃ।*
*ಲೋಕೇಽಪಿ ಬರ್ಹಿಣಾದೀನಾಂ ಭೋಗಾಲೋಕವಿಲಕ್ಷಣಾಃ॥*
*ವಿದ್ಧಿ ಪಕ್ಷೋಷ್ಮಣಾಂ ಕ್ವಾಪಿ ಕ್ವಚಿದ್ದೃಷ್ಟ್ಯಾಸ್ಮೃತೇರಪಿ।*
*ದೃಶ್ಯಂತೇ ಕಿಮುವಕ್ತವ್ಯಂ ಸರ್ವಲೋಕವಿಲಕ್ಷಣೇ।*
*ವೈಲಕ್ಷಣ್ಯಂ ಹಿ ಭೋಗಾನಾಂ ರಹಸ್ಯಮಿದಮೀರಿತಮ್॥'*

ಎಂದು (ವಿಷ್ಣುರಹಸ್ಯದಲ್ಲಿ), ಮುಕ್ತರ ಭೋಗವು ಲೋಕವಿಲಕ್ಷಣವೆಂದು ವರ್ಣಿತವಾಗಿದೆ.

**ಈ ಶ್ಲೋಕಗಳ ತಾತ್ಪರ್ಯಾರ್ಥವು ಹೀಗಿದೆ:** ಮುಕ್ತಲೋಕದಲ್ಲಿ ಯಾರಿಗೂ ಅಯೋಗ್ಯವಾದ ಇಚ್ಛೆಯೇ ಹುಟ್ಟುವುದಿಲ್ಲ—ಯೋಗ್ಯವಾದ ಇಚ್ಛೆಗಳು ಪೂರ್ಣವಾಗದಿರುವುದಿಲ್ಲ. ಈ ಕಾರಣದಿಂದ ಮುಕ್ತರು ನಿತ್ಯಾನಂದವುಳ್ಳವರು. ಚಿದ್ರೂಪರಾದ ಮುಕ್ತರು ಕೆಲವು ವೇಳೆ ಶುದ್ಧಸತ್ವಾತ್ಮಕ ದೇಹಗಳನ್ನು ಸ್ವೀಕರಿಸಿ, ಕೆಲವರು, ಸ್ತ್ರೀಯರಿಂದ (ಸದೃಶದೇಹವನ್ನು ಸ್ವೀಕರಿಸಿದ ಸ್ತ್ರೀಯರಿಂದ) ಯಾನಗಳಲ್ಲಿ, ವನದಲ್ಲಿ, ಗೃಹಗಳಲ್ಲಿ ಆನಂದದಿಂದ ವಿಹರಿಸುತ್ತಾರೆ. ಸ್ತ್ರೀಪುರುಷರು ಪರಸ್ಪರ ಭೋಜ್ಯರಾಗಿದ್ದರೂ (ಒಬ್ಬರು ಮತ್ತೊಬ್ಬರನ್ನು ಭೋಗಿಸುತ್ತಿದ್ದರೂ) ಭೋಗಾವಸಾನದಲ್ಲಿ ಉಭಯರ ಇಚ್ಛೈಕ್ಯದಿಂದ ತೃಪ್ತಿಗೊಂಡು, ರೇತೋತ್ಸರ್ಜನದ ಸುಖವನ್ನು ಪಡೆಯುತ್ತಾರೆ; ಮಲ-ಮೂತ್ರ-ರೇತಸ್ಸುಗಳ ಉತ್ಸರ್ಜನವೆಂಬುದು ಮುಕ್ತರಿಗಿಲ್ಲ—ಅವರ ಭೋಗವು ಲೋಕ ವಿಲಕ್ಷಣವು. ಲೋಕದಲ್ಲಿ ಸಹ, ನವಿಲು ಮೊದಲಾದ ಕೆಲವು ಪ್ರಾಣಿಗಳು ವಿಲಕ್ಷಣಭೋಗಪ್ರಕಾರವುಳ್ಳವಾಗಿವೆ. ರೆಕ್ಕೆಗಳ ಕಾವಿನಿಂದ, ದೃಷ್ಟಿಯಿಂದ, ಸ್ಮರಣೆಯಿಂದ ಸಹ ರತಿಸುಖವನ್ನು ಪಡೆಯುತ್ತವೆ. ಹೀಗಿರಲು, ಸರ್ವಲೋಕ ವಿಲಕ್ಷಣವಾದ ವೈಕುಂಠದಲ್ಲಿ ಹೇಳತಕ್ಕದ್ದೇನು—ಮುಕ್ತರ ಭೋಗರಹಸ್ಯವನ್ನು ಕಿಂಚಿತ್ ವಿವರಿಸಿರುವೆನು.

(೩) ಶ್ರೀಹರಿಯ ಅನುಗ್ರಹದಿಂದ ತಾನು ಕಂಡ ವೈಕುಂಠವನ್ನು ಚತುರ್ಮುಖನು ವರ್ಣಿಸುತ್ತಾನೆ:

*'ವೈಮಾನಿಕಾಃ ಸಲಲನಾಶ್ಚರಿತಾನಿ ಯತ್ರ ಗಾಯಂತಿ ಲೋಕಶಮಲ ಕ್ಷಪಣಾನಿ ಭರ್ತುಃ'*— (ಭಾಗವತ).

**ಅರ್ಥ:** ಯತ್ರ—ಯಾವ ವೈಕುಂಠದಲ್ಲಿ, ಸಲಲನಾಃ—ತಮ್ಮ ನಿಯತ ಪತ್ನಿಯರಿಂದ ಸಹಿತರಾದ, ವೈಮಾನಿಕಾಃ—ವಿಮಾನಗಳಲ್ಲಿ ಸಂಚರಿಸುವ ಮುಕ್ತ ಪುರುಷರು, ಲೋಕಶಮಲಕ್ಷಪಣಾನಿ—ಸಂಸಾರಿಗಳ ಸಕಲ ಪಾಪಗಳನ್ನು ನಾಶ ಮಾಡಲು ಸಮರ್ಥಗಳಾದ, ಭರ್ತುಃಚರಿತಾನಿ—ತಮ್ಮ ಸ್ವಾಮಿಯಾದ ಶ್ರೀಹರಿಯ ಚರಿತ್ರೆಗಳನ್ನು (ಮಹಿಮೆಗಳನ್ನು), ಗಾಯಂತಿ—ಗಾನಮಾಡುತ್ತಾರೆಯೋ, ಇತ್ಯಾದಿ ಮುಕ್ತರ ಆನಂದವಿಹಾರವನ್ನು ವರ್ಣಿಸುತ್ತದೆ. ಮುಕ್ತರ ರತಿಕ್ರೀಡೆಯ ಪಾವಿತ್ರ್ಯವನ್ನು ಶ್ರೀಸುಮಧ್ವವಿಜಯವು ಹೀಗೆ ನಿರ್ಣಯಿಸಿ ಹೇಳುತ್ತದೆ:

*'ಸುಖಸಂವಿದಾತ್ಮ ಕತಯಾ ವಪುಷಾಂ*
*ಸುರಭಿತ್ವಮೇವ ಬಹಿರಂತರಪಿ।*
*ಹರಿಧಾಮ್ನಿ ದಂಪತಿಗಣಸ್ಯ ತತೋ*
*ನನು ಮಾನ್ಯತೇऽಪಿ ಮುನಿಭಿಃಸುರತಮ್॥'*

**ಅರ್ಥ:** (ದಂಪತಿಗಳ ರತಿಕ್ರೀಡೆಯು ಶ್ರಮಾದಿರಹಿತವಾದುದು. ಅವರಲ್ಲಿ ವಿರಹವ್ಯಥೆಗೆ ಅವಕಾಶವೇ ಇಲ್ಲ; ಕಲಹಗಳೆಂಬ ಹೆಸರೇ ಇಲ್ಲ. ಇತ್ಯಾದಿ ಹೇಳಿ), ಮಾತ್ಸರ್ಯಾದಿ ಸಕಲ ದೋಷರಹಿತವಾದ, ಹರಿಧಾಮ್ನಿ—ವೈಕುಂಠದಲ್ಲಿ, ದಂಪತಿಗಣಸ್ಯ—ದಂಪತಿಗಳ ಸಮೂಹದ, ವಪುಷಾಂ—ಶರೀರಗಳಿಗೆ, ಬಹಿರಂತರಪಿ—ಒಳಗೆ ಹೊರಗೆ ಸಹ, ಸುರಭಿತ್ವಮೇವ—ಸುಗಂಧತ್ವವೇ (ಇರುತ್ತದೆ), ಸುಖ ಸಂವಿದಾತ್ಮಕತಯಾ—ಜ್ಞಾನಾನಂದಸ್ವರೂಪತ್ವದಿಂದ (ಸುರಭಿತ್ವವೇ; ದುರ್ಗಂಧಾದಿ ದೋಷಲೇಶವೂ ಇಲ್ಲ), ತತಃ—ಈ ಕಾರಣದಿಂದ, ಸುರತಂ—ಮುಕ್ತರ ರತಿಕ್ರೀಡೆಯು, ಮುನಿಭಿರಪಿ—ಬ್ರಹ್ಮಾದಿ ಜ್ಞಾನಿಗಳಿಂದ ಸಹ, ಮಾನ್ಯತೇ ನನು—ಗೌರವಿಸಲ್ಪಡುತ್ತದಷ್ಟೆ.

**ಶ್ಲೋಕ ೨೭**

**"ಆನಂದಾನ್ಮಂದಮಂದಾ ದದತಿ ಹಿ ಮರುತಃ ಕುಂದಮಂದಾರನಂದ್ಯಾವರ್ತಾಮೋದಾನ್ ದಧಾನಾಃ ಮೃದುಪದಮುದಿತೋದ್ಗೀತಕೈಃಸುಂದರೀಣಾಂ**

**ವೃಂದೈರಾವಂದ್ಯಮುಕ್ತೇಂದ್ವಹಿಮಗುಮದನಾಹೀಂದ್ರದೇವೇಂದ್ರಸೇವ್ಯೇ**
**ಮೌಕುಂದೇ ಮಂದಿರೇಽಸ್ಮಿನ್ನವಿರತಮುದಯನ್ಮೋದಿನಾಂ ದೇವದೇವ"**

ಶ್ರೀಹರಿವಾಯುಸ್ತುತಿಯಲ್ಲಿನ ಶ್ಲೋಕವಿದು.

**ಅರ್ಥ:** ದೇವದೇವ—ಹೇ ದೇವಶ್ರೇಷ್ಠನಾದ ವಾಯುದೇವ! ಮೃದು-ಪದಂ—ಮಂದಗಮನವುಳ್ಳ (ಅಥವಾ ಮೃದುಶಬ್ದಗಳುಳ್ಳ), ಉದಿತೋದ್ಗೀತಕೈಃ—ಹಾಡಲ್ಪಡುವ ಉತ್ಕೃಷ್ಟಗಾನವುಳ್ಳ, ಸುಂದರೀಣಾಂ ವೃಂದೈಃ—ಸುಂದರಿಯರ ಸಮೂಹಗಳಿಂದ (ಸ್ವಭಾರ್ಯರು ಮತ್ತು ಸೇವಕಿಯರಿಂದ), ಆವಂದ್ಯ-ಮುಕ್ತೇಂ ದ್ವಹಿಮಗುಮದನಾಹೀಂದ್ರದೇವೇಂದ್ರಸೇವ್ಯೇ—ಭಕ್ತಿಪೂರ್ವಕವಂದ್ಯ-ರಾದ ಮುಕ್ತಚಂದ್ರ (ಇಂದು) ಸೂರ್ಯ (ಅಹಿಮಗು—ಉಷ್ಣಕಿರಣಗಳುಳ್ಳ), ಮನ್ಮಥ (ಮದನ), ಶೇಷದೇವ (ಅಹೀಂದ್ರ), ಇಂದ್ರ (ದೇವೇಂದ್ರ), ಇವರು-ಗಳಿಂದ, ಆದರದಿಂದ ಸೇವಿತವಾದ, ಅಸ್ಮಿನ್ ಮೌಕುಂದೇ ಮಂದಿರೇ—ಈ ಮುಕುಂದನ ಮಂದಿರದಲ್ಲಿ (ವೈಕುಂಠದಲ್ಲಿ), ಮಂದಮಂದಾಃ—ಮೆಲ್ಲಗೆ ಬೀಸುವ, ಕುಂದ ಮಂದಾರನಂದ್ಯಾವರ್ತಾಮೋದಾನ್—ಜಾಜಿ, ಮಂದಾರ, ನಂದ್ಯಾವರ್ತ ಮೊದಲಾದ ಪುಷ್ಪಗಳ ಪರಿಮಳಗಂಧಗಳನ್ನು, ದಧಾನಾಃ—ಹೊತ್ತು ತರುವ, ಮರುತಃ—ಗಾಳಿಗಳು (ವಾಯುಪ್ರವಾಹಗಳು), ಅವಿರತಂ—ನಿರಂತರವೂ, ಉದಯನ್ಮೋದಿನಾಂ—ಉಕ್ಕುತ್ತಿರುವ ಆನಂದವುಳ್ಳ ಮುಕ್ತರಿಗೆ, ಆನಂದಾನ್—ಭೋಗವಿಶೇಷಗಳನ್ನು, ದದತಿ ಹಿ—ಒದಗಿಸುತ್ತ-ವೆಂಬುದು ಸಿದ್ಧ.

**ಪದ ೨೬**

ರಾಗ-ಪಂತುವರಾಳಿ; ತಾಳ-ಆಟ

**ಕುಂದಮಂದರಮಲ್ಲಿಗೆ ನಂದ್ಯಾವರ್ತರ-**
**ವಿಂದಗಳೆಸೆವ ಸೌರಭದ**
**ಗಂಧವಾಹನಲ್ಲಿ ಬೀಸೆ ಮುಕ್ತರಿಗೆ ನಿತ್ಯಾ-**
**ನಂದದ ಸುಖವೀವ** ॥೧॥

**ಅರ್ಥ:** ಕುಂದಮಂದರಮಲ್ಲಿಗೆ ನಂದ್ಯಾವರ್ತರವಿಂದಗಳು—ಜಾಜಿ, ಮಂದಾರ, ಮಲ್ಲಿಗೆ, ನಂದಿಬಟ್ಟಲು, ಕಮಲಾದಿ ಪುಷ್ಪಗಳು, ಎಸೆವ—ಬೀರುವ (ಅಥವಾ ಅರವಿಂದಾದಿಗಳ, ಎಸೆವ—ಶ್ರೇಷ್ಠವಾದ), ಸೌರಭದ

—ಪರಿಮಳದ, ಗಂಧವಾಹನು—ಗಂಧವನ್ನು ಹೊತ್ತು ತರುವ ವಾಯು (ಸುವಾಸಿತ ಮಂದಮಾರುತನು), ಅಲ್ಲಿ—ಮುಕ್ತರು ವಿಹರಿಸುವ ಸ್ಥಾನದಲ್ಲಿ, ಬೀಸೆ—ಬೀಸುತ್ತಾ, ಮುಕ್ತರಿಗೆ—ವೈಕುಂಠದ ಪ್ರಜೆಗಳಿಗೆ, ನಿತ್ಯಾನಂದದ ಸುಖವೀವ—ನಿತ್ಯಾನಂದದ (ಸ್ವರೂಪಾನಂದದ) ಭೋಗಕ್ಕೆ ನಿಮಿತ್ತ-ನಾಗುವನು.

**ವಿಶೇಷಾಂಶ:** ಮುಕ್ತರ ವಿಷಯಭೋಗವು, ಸ್ವರೂಪಸಿದ್ಧವಾದ ಅವರ ಆನಂದದ, ಅಭಿವ್ಯಕ್ತಿಮಾತ್ರವು. ಭೋಗದಿಂದ ಆನಂದವಲ್ಲ; ಕಿಂತು ಆನಂದೋದ್ರೇಕದಿಂದ ಭೋಗವು; ಮಂದಮಾರುತಾದಿ ವಿಷಯಗಳು ಆನಂದಾತಿಶಯದ ವ್ಯಕ್ತಿಗೆ ನಿಮಿತ್ತ ಮಾತ್ರ.

**ಚಂದನದ ರಸವ ಪೂಸಿದವನ ಮೈಯೊಳು**
**ಹೊಂದಿದ ಮೊದಲಾಶೈತ್ಯವನೇ**
**ಮಂದಮಾರುತ ಬಂದು ವ್ಯಕ್ತವ ಮಾಡಿಪ್ಪ**
**ಚಂದದ ಮುಕ್ತರ ಭೋಗಂಗಳಿಗೇ ॥೨॥**

**ಅರ್ಥ:** ಚಂದನದ ರಸವ—ಸುಗಂಧಸಾರವನ್ನು (ಅಥವಾ ತೆಳ್ಳಗಿನ ಗಂಧೋದಕವನ್ನು), ಪೂಸಿದವನ—ಲೇಪಿಸಿಕೊಂಡಂತಿರುವ ಮುಕ್ತನ, ಮೈಯೊಳು ಹೊಂದಿದ—ದೇಹದಲ್ಲಿ (ಸ್ವಾಭಾವಿಕವಾಗಿಯೇ) ಇರುವ, ಮೊದಲ—ಮೊದಲಿನ (ಮೊದಲೇ ಇರುವ), ಆ ಶೈತ್ಯವನೇ—ಆ ತಂಪನ್ನೇ, ಮಂದಮಾರುತ ಬಂದು—ಮಂದವಾಯುವು ಬೀಸಿ, ವ್ಯಕ್ತಮಾಡಿಪ್ಪ—ಸುವ್ಯಕ್ತ ಪಡಿಸುವನು; (ಏಕೆಂದರೆ) ಚಂದದ ಮುಕ್ತರ ಭೋಗಂಗಳಿಗೇ—ವಿಲಕ್ಷಣ-ರಾದ, (ಚಂದದ—ಸುಂದರವಾದ, ಮಂಗಳಸ್ವರೂಪರಾದ) ಮುಕ್ತರ ಸುಖಾತಿ-ಶಯಕ್ಕಾಗಿಯೇ.

**ವಿಶೇಷಾಂಶ:** *'ವಪುಷಾಂ ಸುರಭಿತ್ವಮೇವ ಬಹಿರಂತರಪಿ'* ಎಂಬಲ್ಲಿ ಮುಕ್ತರ ದೇಹಗಳಿಗೆ, ಒಳಗೆ ಹೊರಗೆ ಸಹ, ನಿತ್ಯಸುರಭಿತ್ವ (ಸುಗಂಧತ್ವ) ವೆಂದು ಹೇಳಲಾಗಿದೆ. ಹಿಂದಿನ ಪದದ ವಿಶೇಷಾಂಶಭಾಗವನ್ನು ಇಲ್ಲಿ ನೋಡಬಹುದು.

**ಮತ್ತನರ್ತನದಂತೆ ಸಂತೋಷ ನೃಪಗೆ**
**ಭೃತ್ಯನ ಕೈಲಾಗಿನಂತೆ**

**ಮುಕ್ತರ ಲೀಲೆಗಳಪ್ಪಂತೆ ಹರಿಯ**
**ಚಿತ್ರಚರಿತನ ಲೀಲೆಗಳೂ** **॥೩॥**

**ಅರ್ಥ:** ಮತ್ತನರ್ತನದಂತೆ— ಮದಿಸಿದವನ ನೃತ್ಯದಂತೆ, ನೃಪಗೆ— ರಾಜನಿಗೆ, ಭೃತ್ಯನ ಕೈಲಾಗಿನಂತೆ— ಸೇವಕನು ಹಸ್ತಲಾಘವ ಕೊಟ್ಟು ಕರೆದೊಯ್ಯುವಂತೆ (ರಾಜನನ್ನು ಗೌರವಿಸಿ ಬರಮಾಡಿಕೊಳ್ಳುವಂತೆ), ಸಂತೋಷ— ಸಂತೋಷಕರವು (ಆನಂದದ ಅಭಿವ್ಯಕ್ತಿಗೆ, ನೃತ್ಯ, ಮಂದಮಾರುತಾದಿಗಳು ನಿಮಿತ್ತಮಾತ್ರ); ಮುಕ್ತರ ಲೀಲೆಗಳು, ಅಪ್ಪಂತೆ— ಮುಕ್ತರಲೀಲೆಗಳು (ಆನಂದಾಭಿವ್ಯಕ್ತಿಯ ಸಾಧನಗಳು ಮಾತ್ರ) ಆಗುವಂತೆ, ಚಿತ್ರಚರಿತನ— ವಿಚಿತ್ರಮಹಿಮನಾದ ಶ್ರೀಹರಿಯ, ಲೀಲೆಗಳೂ— ಲೀಲೆಗಳೂ ಸಹ (ಆತನ ಪೂರ್ಣಾನಂದದ ಅಭಿವ್ಯಕ್ತಿಗೆ ನಿಮಿತ್ತ ಮಾತ್ರ.)

**ವಿಶೇಷಾಂಶ:**

*'ಸೃಷ್ಟ್ಯಾದಿಕಂ ಹರೇರ್ನೈವ ಪ್ರಯೋಜನಮಪೇಕ್ಷ್ಯತು।*
*ಕುರುತೇ ಕೇವಲಾನಂದಾದ್ಯಥಾ ಮತ್ತಸ್ಯ ನರ್ತನಮ್॥*
*ಪೂರ್ಣಾನಂದಸ್ಯ ತಸ್ಯೇಹ ಪ್ರಯೋಜನಮತಿಃ ಕುತಃ।*
*ಮುಕ್ತಾ ಅಪ್ಯಾಪ್ತಕಾಮಾಸ್ಯುಃ ಕಿಮು ತಸ್ಯಾಖಿಲಾತ್ಮನಃ॥'* (ನಾರಾಯಣಸಂಹಿತಾ)

ಎಂಬ ಪ್ರಮಾಣವಾಕ್ಯವು ಈ ಪ್ರಮೇಯವನ್ನೇ ನಿರೂಪಿಸುತ್ತದೆ. ಇದರ ಭಾವಾರ್ಥವೇನೆಂದರೆ: ಶ್ರೀಹರಿಯು ಜಗತ್ತಿನ ಸೃಷ್ಟ್ಯಾದಿಗಳನ್ನು ಸ್ವಪ್ರಯೋಜನಕ್ಕಾಗಿ ಮಾಡುವುದೇ ಇಲ್ಲ; ಮತ್ತನ ನರ್ತನದಂತೆ ಆನಂದೋದ್ರೇಕದಿಂದ ಮಾಡುತ್ತಾನೆ; ಶ್ರೀಹರಿಯು ಪೂರ್ಣಾನಂದನಾಗಿರುವಾಗ ಯಾವುದೊಂದು ಬಗೆಯ ಪ್ರಯೋಜನದ ಉದ್ದೇಶವಿರಲು ಅವಕಾಶವೆಲ್ಲಿದೆ? ಮುಕ್ತಜೀವರು ಸಹ ಆಪ್ತಕಾಮರಾಗಿರುವಾಗ ಮುಕ್ತಾಮುಕ್ತರ (ಸಮಸ್ತರ) ಒಡೆಯನಾದ ಶ್ರೀಹರಿಯು ಆಪ್ತಕಾಮನೆಂದು ಹೇಳತಕ್ಕದ್ದೇನಿದೆ? **'ಲೋಕವತ್ತು ಲೀಲಾಕೈವಲ್ಯಂ'** ಎಂಬ (ಸೂತ್ರವು) ಈ ಪ್ರಮೇಯವನ್ನು ನಿರ್ಣಯಿಸುತ್ತದೆ.

**ನಿತ್ಯತೃಪ್ತನು ಕೃತಕೃತ್ಯನಚ್ಯುತ ಗಡ**
**ಮುಕ್ತರೆಲ್ಲ ಪ್ರಕಾಮರು ಗಡ**
**ಇಂತಿವರಾಟವ ಅಂತಶ್ರುತಿಪಥವನಾ**
**ವ್ಯರ್ಥವ ಮಾಡದವ ಜಾಣ** **॥೪॥**

**ಅರ್ಥ:** ಅಚ್ಯುತ—ಶ್ರೀಹರಿಯು, ನಿತ್ಯತೃಪ್ತನು—ನಿತ್ಯ ಸಂತುಷ್ಟನೂ, ಕೃತಕೃತ್ಯನು ಗಡ—ಪೂರ್ಣಕಾಮನೂ ಅಲ್ಲವೇ! ಮುಕ್ತರೆಲ್ಲ—ಎಲ್ಲ ಮುಕ್ತರೂ, ಪ್ರಕಾಮರು ಗಡ—(ಇಚ್ಛಿತ ಸರ್ವಸ್ವವನ್ನು ತತ್ಕಾಲದಲ್ಲಿ ಪಡೆಯುವ) ಪೂರ್ಣಕಾಮರೂ ಆಗಿರುವರು; ಇಂತಿವರಾಟವ—ಹೀಗಿರುವ ಮುಕ್ತಕ್ರೀಡೆಗಳನ್ನೂ, ಅಂತಶ್ರುತಿಪಥವನು—ಹೀಗೆಂದು ಹೇಳುವ ಆ ಪ್ರಸಿದ್ಧವೇದನಿರೂಪಣೆಯನ್ನೂ (ಅಥವಾ ಹೀಗಿರುವ ಮುಕ್ತಿಯನ್ನು ಪಡೆಯಲು ವೇದವು ವಿಧಿಸುವ ಮಾರ್ಗವನ್ನು), ವ್ಯರ್ಥವ ಮಾಡದವ ಜಾಣ—ವ್ಯರ್ಥಗೊಳಿಸದವನೇ ವಿವೇಕಿಯು. (ಜೀವ ಬ್ರಹ್ಮೈಕ್ಯವನ್ನೇ ಮುಕ್ತಿಯೆಂದು ತಿಳಿಯುವವನು ಈ ವೇದವಾಕ್ಯಗಳನ್ನು ವ್ಯರ್ಥಗೊಳಿಸುವ ಅವಿವೇಕಿಯೇ ಸರಿ.)

**ಆದರಿಂದ ನಿತ್ಯಾನಂದ ತಪ್ಪದು**
**ಒದಗಿದ ವಿಷಯರಾಶಿಗಳಾ**
**ಮದನನಯ್ಯನ ಪುರದಿ ನೆಲಸಿರ್ದ ಮುಕ್ತರ**
**ಮುದದಿಂ ಸೇವಿಪರೈಸೆ** **॥೫॥**

**ಅರ್ಥ:** ಆದರಿಂದ—(ಮುಕ್ತರಿಗೆ, ಸುಗಂಧಮಾರುತ ಮೊದಲಾದವು) ಇಲ್ಲವೆಂಬ ಕಾರಣದಿಂದ, ನಿತ್ಯಾನಂದ—ನಿತ್ಯಾನಂದವು, ತಪ್ಪದು—ತಪ್ಪುವುದಿಲ್ಲ (ಕೊರತೆಯಿಲ್ಲ—ಆನಂದಭರಿತರಾಗಿಯೇ ಇರುತ್ತಾರೆ); ವದಗಿದ—ಆಯಾ ಕಾಲದಲ್ಲಿ ಒದಗುವ, ವಿಷಯರಾಶಿಗಳು—ಭೋಗ್ಯವಸ್ತು ಸಮೂಹಗಳು, ಆ ಮದನನಯ್ಯನ—ಕಾಮಪಿತನಾದ ಶ್ರೀಕೃಷ್ಣನ, ಪುರದಿ—ವೈಕುಂಠಪುರಿಯಲ್ಲಿ, ನೆಲಸಿರ್ದ—ವಾಸವಾಗಿರುವ, ಮುಕ್ತರ—ಮುಕ್ತರನ್ನು, ಮುದದಿಂದ ಸೇವಿಪರೈಸೆ—ಸಂತೋಷದಿಂದ (ತಮ್ಮ ಸೇವೆಯನ್ನು ಮಾತ್ರ ಸಲ್ಲಿಸುತ್ತವೆ) ಸೇವಿಸುತ್ತವೆಂದು ಸಿದ್ಧವಾಗುವುದಿಲ್ಲವೇ?

**ವಿಶೇಷಾಂಶ:** ಫಲ, ಪುಷ್ಪ, ಮಂದಮಾರುತಾದಿ ಸಕಲವೂ ಶ್ರೀಹರಿಪುರದಲ್ಲಿ ಅಪ್ರಾಕೃತಗಳೇ ಆಗಿರುವುದರಿಂದ, ಅವು ಇಚ್ಛಾಪೂರ್ವಕ (ಸಂತೋಷದಿಂದ) ಮುಕ್ತರನ್ನು ಸೇವಿಸಿ, ಆದರಿಂದ ತಾವೂ ಆನಂದಿಸುತ್ತವೆಂದು ತಿಳಿಯಬೇಕು. ಆ ಎಲ್ಲವೂ, ದೋಷರಹಿತ ಮುಕ್ತಸ್ವರೂಪಗಳೇ ಆಗಿವೆ.

ಪದ (೨೪)ರ ೫ನೇ ನುಡಿಯ ವಿಶೇಷಾಂಶ(೨)ನ್ನು ಇಲ್ಲಿ ನೋಡಬಹುದು.

## ಪದ ೨೭

ರಾಗ-ಕೇದಾರಗೌಳ; ತಾಳ-ರೂಪಕ

**ಅರ ಎಂದು ಣ್ಯ ಎಂದು ಅಲ್ಲಿ ಸುಧೆಸಾಗರ**
**ಎರಡೆಂದೆಂದಿಪ್ಪವು ಗಡ**
**ಸರಸಲೀಲೆಯಿಂದಲದರ ರಸವನು ಮು-**
**ಕ್ತರು ಬಂದಾಸ್ವಾದಿಸುವರು ಗಡ** ॥೧॥

**ಅರ್ಥ:** ಅರ ಎಂದು ಣ್ಯ ಎಂದು—'ಅರ' ಮತ್ತು 'ಣ್ಯ' ಎಂಬ ಹೆಸರಿನ, ಸುಧೆಸಾಗರ ಎರಡು—ಎರಡು ಅಮೃತ ಸಮುದ್ರಗಳು, ಅಲ್ಲಿ—ಮುಕ್ತಲೋಕದಲ್ಲಿ (ಶ್ವೇತದ್ವೀಪದಲ್ಲಿ), ಎಂದೆಂದಿಪ್ಪವು, ಗಡ—ಸರ್ವದಾ ಇರುವುವೆಂಬುದು ಶ್ರುತಿ ಪ್ರಸಿದ್ಧ; ಸರಸಲೀಲೆಯಿಂದಲಿ—ಸಂತೋಷದಿಂದ ಕ್ರೀಡಿಸುತ್ತ, ಮುಕ್ತರು ಬಂದು—ಮುಕ್ತರು (ಅಮೃತಸಮುದ್ರಗಳಿಗೆ) ಬಂದು, ಅದರ ರಸವನು—ಅದರ ಜಲವನ್ನು (ಜಲರೂಪದ ಅಮೃತವನ್ನು), ಆಸ್ವಾದಿಸುವರು ಗಡ—ಕುಡಿದು ಹರ್ಷಿಸುವರಲ್ಲವೇ!

**ವಿಶೇಷಾಂಶ:** *'ಅರಶ್ಚ ಹ ವೈ ಣ್ಯಶ್ಚಾರ್ಣವೌ ಬ್ರಹ್ಮಲೋಕೇ'* ಎಂಬ ಛಾಂದೋಗ್ಯೋಪನಿಷದ್ವಾಕ್ಯವನ್ನು ವಿವರಿಸುತ್ತ, ಶ್ರೀಮಧ್ವಾಚಾರ್ಯರು, ಸೂತ್ರಭಾಷ್ಯದಲ್ಲಿ, *'ಅರಶ್ಚ ವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತ ಪ್ರದೌ ದ್ವೌ'* ಎಂದು ಹೇಳಿರುವರು. ಎಂದರೆ, **'ಅರ** ಮತ್ತು **ಣ್ಯ'** ಎಂಬ ಹೆಸರುಳ್ಳ ಎರಡು ಅಮೃತಸಮುದ್ರಗಳು ವಿಷ್ಣುಲೋಕದಲ್ಲಿರುತ್ತವೆ; ಎಲ್ಲ ಮುಕ್ತರಿಗೆ ಇವು ಪ್ರಿಯವಾಗಿವೆ—ಅವರ ಅಭೀಷ್ಟಗಳನ್ನು ಪೂರ್ಣಗೊಳಿಸುತ್ತವೆ.

**ಒಂದಶ್ವತ್ಥಾವಲಿ! ಚಂದದಮೃತವೋ!**
**ಎಂದೆಂದು ಕರವುತಿಪ್ಪುದು ಗಡ**
**ಬಂದದನೊಮ್ಮೊಮ್ಮೆ ಮುಕ್ತರು ತಮ್ಮ ಮನ**
**ಬಂದಂತೆ ಸವಿಯುತಿಪ್ಪುದು ಗಡ** ॥೨॥

**ಅರ್ಥ:** ಒಂದಶ್ವತ್ಥಾವಲಿ—ಅಶ್ವತ್ಥವೃಕ್ಷಗಳ ಅನೇಕಗುಂಪೋ! (ಅಶ್ವತ್ಥವಕ್ಷಗಳ ತೋಪೋ!), ಚಂದದಮೃತವೋ—ಮನೋಹರವಾದ ಅಮೃತವೋ (ಸುಧಾಸಮುದ್ರವೋ!) ಎಂದೆಂದು—ಸದಾ, ಕರವುತಿಪ್ಪದು ಗಡ—(ಮುಕ್ತರನ್ನು) ಆಹ್ವಾನಿಸುತ್ತಿರುವುವು (ಯಾವುದಾದರೊಂದು ವಿಹಾರಸ್ಥಾನವು ಮುಕ್ತ-

ರನ್ನು ಆಕರ್ಷಿಸುತ್ತದೆ); ಬಂದು—ಮುಕ್ತರು ಅಲ್ಲಿಗೆ ಬಂದು, ಅದನೊಮ್ಮೊಮ್ಮೆ—ಅದನ್ನು ಒಂದೊಂದು ಕಾಲದಲ್ಲಿ (ತಮ್ಮ ಇಚ್ಛೆಬಂದಾಗ ಆ ಅಶ್ವತ್ಥವನಕ್ಕೋ ಸುಧಾಸಮುದ್ರಕ್ಕೋ ಬಂದು), ತಮ್ಮ ಮನಬಂದಂತೆ—ತಮ್ಮ ಇಚ್ಛೆಯಂತೆ, ಸವಿಯುತಿಪ್ಪುದು ಗಡ—(ಮುಕ್ತರ ಗುಂಪು) ಕ್ರೀಡಿಸುತ್ತಿರುವುದು!

**ವಿಶೇಷಾಂಶ:** ಪದ (೨೦)ರ ವಿಶೇಷಾಂಶವನ್ನು ಇಲ್ಲಿ ಗಮನಿಸಬಹುದು.

**ಶುದ್ಧಪ್ರಾಕೃತವಾದ ಷಡ್ವಿಧರಸವುಳ್ಳ**
**ಸ್ವಾದ್ವನ್ನಗಳ ಕೊಡುತಿಪ್ಪ**
**ಹೃದ್ಯನದಿಗಳು ಸುತ್ತಪರಿವವು**
**ಪದ್ಮನಾಭನ ಪುರದೊಳಗೆ** ॥೩॥

**ಅರ್ಥ:** ಶುದ್ಧಪ್ರಾಕೃತವಾದ—ಶುದ್ಧಸತ್ವಾತ್ಮಕವಾದ, ಷಡ್ವಿಧರಸವುಳ್ಳ ಷಡ್ರಸೋಪೇತವಾದ, ಸ್ವಾದ್ವನ್ನಗಳ-ದಿವ್ಯರುಚಿಯುಳ್ಳ ಭೋಜ್ಯವಸ್ತುಗಳನ್ನು, ಕೊಡುತಿಪ್ಪ—ಒದಗಿಸುವ, ಹೃದ್ಯನದಿಗಳು—ಮನೋಹರವಾದ ನದಿಗಳು, ಪದ್ಮನಾಭನ ಪುರದೊಳಗೆ—ವೈಕುಂಠಪುರದಲ್ಲಿ, ಸುತ್ತಪರಿವವು—ಸುತ್ತಲೂ ಹರಿಯುತ್ತಿರುತ್ತವೆ.

**ವಿಶೇಷಾಂಶ:** (೧) ಅಸಂಖ್ಯಾತ ರಾಜಗೃಹಗಳಿಂದ ಶೋಭಿಸುವ, ಶ್ರೀವೈಕುಂಠನಾಮಕನಾದ ಶ್ರೀಹರಿಯ ಆವಾಸವಾದ ನಗರಿಯು ಲಕ್ಷ್ಮ್ಯಾತ್ಮಕವಾದುದು; ಅದರ ಸುತ್ತಲೂ ಇರುವ ಶ್ರೀಭಾಗದ ವೈಕುಂಠಲೋಕದ ಪ್ರಜೆಗಳಿಗೆ ಷಡ್ರಸೋಪೇತವಾದ ಆಹಾರವಸ್ತುಗಳನ್ನು ಒದಗಿಸುವ ನದಿಗಳು, ಶ್ರೀಹರಿಯ ಆವಾಸದ (ನಗರಿಯ) ಸುತ್ತಲೂ ಹೊರಭಾಗದಲ್ಲಿ ಪ್ರವಹಿಸುತ್ತವೆಂದು ತಿಳಿಯಬೇಕು. ಈ ಹಿಂದೆ ಈ ಪ್ರಮೇಯವು ಬಹುಪ್ರಮಾಣಗಳಿಂದ ಸಾಧಿಸಿರುವುದನ್ನು ಗಮನದಲ್ಲಿಡಬೇಕು.

(೨) ಮಧುರ (ಸಿಹಿ), ಆಮ್ಲ (ಹುಳಿ), ಲವಣ (ಉಪ್ಪು), ಕಟು (ಖಾರ), ಕಷಾಯ (ಒಗರು), ತಿಕ್ತ (ಕಹಿ) ಎಂದು ರಸಗಳು ಆರು ವಿಧ, ಇವುಗಳ ನಾನಾಪ್ರಕಾರದ ಮಿಶ್ರಣದಿಂದ ಏರ್ಪಡುವ ರಸವಿಶೇಷಗಳು ಅಸಂಖ್ಯ.

**ಸರ್ಪಿಪಾಯಸವೆಂಬ ಕರ್ದಮಂಗಳು ಕೂಡಿ**
**ಒಪ್ಪುವ ಭಕ್ಷ್ಯಭೋಜ್ಯಗಳ**
**ತೋರ್ಪವಮೃತಾನ್ನಾದಿಗಳಲಿ ಪರಿವವು ಅದ-**
**ನೊಪ್ಪುಗೊಂಬುವರು ಲೀಲೆಯಿಂದ** ॥೪॥

**ಅರ್ಥ:** (ಆ ನದಿಗಳು) ಸರ್ಪಿಪಾಯಸವೆಂಬ—ತುಪ್ಪಹಾಲುಸಂಬಂಧಿ, ಕರ್ದಮಂಗಳು ಕೂಡಿ—ರಸಪ್ರವಾಹಗಳು ಸೇರಿ, ಒಪ್ಪುವ ಭಕ್ಷ್ಯಭೋಜ್ಯಗಳ—ಮನಮೆಚ್ಚುವ ಭಕ್ಷ್ಯಭೋಜ್ಯಗಳನ್ನು, ತೋರ್ಪವು—(ಸಿದ್ಧಗೊಳಿಸಿ) ತೋರಿ-ಸುತ್ತವೆ; ಅಮೃತಾನ್ನಾದಿಗಳಲಿ—ಅಮೃತನಿರ್ಮಿತ ಅನ್ನಾದಿಗಳಂತೆ (ಅಮೃತ-ದಂತೆ ರುಚಿಕರವಾದ ಅನ್ನಾದಿಗಳ ರೂಪದಿಂದ), ಪರಿವವು—ಹರಿಯುತ್ತವೆ; ಅದನ—ಅವುಗಳನ್ನು, ಲೀಲೆಯಿಂದ—ಸಂತೋಷದಿಂದ (ಕ್ರೀಡಾರ್ಥವಾಗಿ), ಒಪ್ಪುಗೊಂಬರು—ಮೆಚ್ಚಿ ಸ್ವೀಕರಿಸುತ್ತಾರೆ. (ಕರ್ದಮ—ಅಷ್ಟು ನೀರೂ ಅಷ್ಟುಗಟ್ಟಿಯೂ ಅಲ್ಲದೆ ರಸಾಯನದಂತಿರುವುದು).

**ವಾಪಿಕೂಪತಟಾಕಂಗಳಲ್ಲಿಹವು ನಾ-**
**ನಾಫಲವೆರಸಿದ ತರುಗಳು**
**ತೋಪುಗಳಿಹವು ಅಲ್ಲಿಯೂ ಒಮ್ಮೊಮ್ಮೆ ಪ-**
**ರಿಪರಿಯಲಿ ಕ್ರೀಡೆಯಾಡುವರು** ॥೫॥

**ಅರ್ಥ:** ವಾಪಿಕೂಪತಟಾಕಂಗಳಲ್ಲಿ—ವಾಪಿ (ಇಳಿದು ತುಂಬುವ ಭಾವಿ), ಕೂಪ (ಸೇದುವ ಭಾವಿ), ತಟಾಕ (ಕೆರೆ) ಮುಂತಾದವುಗಳ ಸಮೀಪದಲ್ಲಿ, ನಾನಾಫಲವೆರಸಿದ—ವಿವಿಧ ಫಲಗಳನ್ನು ಹೊತ್ತಿರುವ, ತರುಗಳು—ವೃಕ್ಷಗಳು, ಇಹವು—ಇರುತ್ತವೆ; ತೋಪುಗಳಿಹವು—ವೃಕ್ಷಸಮೂಹಗಳಿವೆ; ಅಲ್ಲಿಯೂ—ಆ ತೋಪುಗಳಲ್ಲಿಯೂ, ಒಮ್ಮೊಮ್ಮೆ—ಒಂದೊಂದು ವೇಳೆ, ಪರಿಪರಿಯಲಿ—ನಾನಾವಿಧವಾಗಿ, ಕ್ರೀಡೆಯಾಡುವರು—(ಮುಕ್ತರು) ಆಟ-ವಾಡಿ ನಲಿಯುತ್ತಾರೆ.

**ನಿತ್ಯಾಪ್ರಾಕೃತವಾದ ಚತುರ್ವಿಧಾನ್ನಂಗಳ**
**ತುತ್ತನೊಮ್ಮೊಮ್ಮೆ ಸವಿವರು**
**ಸತ್ತಿಗೆವಿಡಿವರು ಚಾಮರಂಗಳನಲ್ಲಿ**
**ಭೃತ್ಯರವರಿಗೆ ಬೀಸುವರು** ॥೬॥

**ಅರ್ಥ:** ನಿತ್ಯಾಪ್ರಾಕೃತವಾದ—ನಿತ್ಯವೂ ಅಪ್ರಾಕೃತವೂ ಆದ, ಚತುರ್ವಿ-ಧಾನ್ನಂಗಳ—ಭಕ್ಷ್ಯ (ಅಗಿದು ತಿನ್ನುವ), ಭೋಜ್ಯ (ಹಾಗೆಯೇ ಉಣಬಹು-ದಾದ), ಲೇಹ್ಯ (ನಾಲಿಗೆಯಿಂದ ಸವರಿಕೊಳ್ಳುವ), ಪೇಯ(ಕುಡಿಯುವ) ಗಳೆಂಬ ನಾಲ್ಕು ಬಗೆಯ ಆಹಾರವಸ್ತುಗಳುಳ್ಳ, ತುತ್ತನು—ಊಟವನ್ನು,

ಒಮ್ಮೊಮ್ಮೆ—ಒಂದೊಂದು ವೇಳೆ, ಸವಿವರು—ಉಂಡು ಹರ್ಷಿಸುವರು; ಅಲ್ಲಿ—ಆ ವೈಕುಂಠಲೋಕದಲ್ಲಿ, ಅವರಿಗೆ—ಆ ಮುಕ್ತರಿಗೆ, ಭೃತ್ಯರು—ಸೇವಕರು, ಚಾಮರಂಗಳನು—ಚಾಮರಗಳನ್ನು, ಬೀಸುವರು—ಬೀಸುತ್ತಾರೆ; ಸತ್ತಿಗೆವಿಡಿವರು—ಉದ್ದವಾದ ಉಟ್ಟವಸ್ತ್ರಗಳನ್ನು ಎತ್ತಿ ಹಿಡಿದು ಹಿಂಬಾಲಿಸುತ್ತಾರೆ. (ಇದೊಂದು ರಾಜಗೌರವವು.)

**ವಿಶೇಷಾಂಶ:** ಫಲಪುಷ್ಪವೃಕ್ಷಾದಿ ಆಕಾರದ ಮುಕ್ತಜೀವರು ಅಣುಸ್ವರೂಪರಾದರೂ, ಶ್ರೀಹರಿಯ ಅಚಿಂತ್ಯಶಕ್ತಿಯಿಂದ ವೃದ್ಧಿಗೊಂಡು (ಅವರಲ್ಲಿ ಉತ್ತಮರು ಸ್ವೋತ್ತಮರ ಸೇವೆಗಾಗಿ ವೈಕುಂಠಾದಿಗಳ ಶ್ರೀಭಾಗದಲ್ಲಿ ಸಹ ಇದ್ದು), ಸ್ವೋತ್ತಮ ಮುಕ್ತರನ್ನು ಸೇವಿಸುವ ಪ್ರಕಾರವು ಇಲ್ಲಿ ವರ್ಣಿತವಾಗಿದೆ. ಪದ (೨೪)ರ ೨ನೇ ನುಡಿಯ ವಿಶೇಷಾಂಶಭಾಗವನ್ನು ಇಲ್ಲಿ ನೋಡಬಹುದು.

**ಮಕ್ಕಳೆತ್ತಿಕೊಂಬ ತಾಯಸುಖದಿಂದ**
**ಉಕ್ಕುವಂತಲ್ಲಿ ಸೇವಿಪರು**
**ಭಕ್ತಿಭರಿತ ಚಿತ್ತವುಬ್ಬಿಕೊಂಬುದರ**
**ಸೌಖ್ಯಾಬ್ಧಿತುಳುಕುವದೈಸೆ ॥೭॥**

**ಅರ್ಥ:** ಮಕ್ಕಳೆತ್ತಿಕೊಂಬ—ಮಕ್ಕಳನ್ನು ಎತ್ತಿಕೊಳ್ಳುವ, ತಾಯಸುಖದಿಂದ—ಮಾತೃಪ್ರೇಮದಿಂದ, ಉಕ್ಕುವಂತೆ—ಉಬ್ಬುವಂತೆ (ಅತಿಶಯ ಸುಖವನ್ನು ಹೊಂದುವಂತೆ), ಅಲ್ಲಿ—ವೈಕುಂಠದಲ್ಲಿ, ಸೇವಿಪರು—(ಆ ಬೃತ್ಯರು) ಸೇವಿಸುತ್ತಾರೆ; ಭಕ್ತಿಭರಿತಚಿತ್ತ—ಭಕ್ತಿಯಿಂದ ಪೂರ್ಣವಾದ (ಇವರ) ಮನಸ್ಸು, ಉಬ್ಬಿಕೊಂಬುದರ—ಹಿಗ್ಗುವುದರ, ಸೌಖ್ಯಾಬ್ಧಿ—ಆನಂದಸಾಗರವು, ತುಳುಕುವದೈಸೆ—ತುಂಬಿಹರಿಯುವುದಿಲ್ಲವೇ?

**ವಿಶೇಷಾಂಶ:** ತಾಯಿಯು ಮಕ್ಕಳನ್ನು, ಪ್ರೀತಿಯಿಂದ ಎತ್ತಿಕೊಳ್ಳುವುದೇ ಮೊದಲಾದ ರೀತಿಯಿಂದ ಸೇವಿಸಿದರೆ ಮಕ್ಕಳ ಆನಂದವು ಉಕ್ಕಿ ಹರಿಯುವಂತೆ, ಭೃತ್ಯರು ಸ್ವೋತ್ತಮರ ಸೇವೆಯಿಂದ ಆನಂದಾತಿಶಯವನ್ನೇ ಹೊಂದುವರಲ್ಲದೇ, ಸೇವಕತನದ ದೋಷಗಳು ಕಿಂಚಿತ್ತಾದರೂ ಇಲ್ಲವೆನ್ನುತ್ತಾರೆ.

**ಪಾಲುಂಬ ಸುಖದಿಂದ ಸಕ್ಕರೆಗೂಡಿದ**
**ಪಾಲ ಸುಖಿಪ ಸುಖ ಮೇಲು**
**ಲೋಲಾಕ್ಷಿಯರ ನೋಳ್ಪ ಸುಖದಿಂದ ಮತ್ತವರಂಗ-**
**ದಾಲಿಂಗನದ ಸುಖಮೇಲು ॥೮॥**

**ಅರ್ಥ:** ಪಾಲುಂಬ ಸುಖದಿಂದ—ಬರೇ ಹಾಲುಕುಡಿಯುವ ಸುಖಕ್ಕಿಂತ, ಸಕ್ಕರೆಗೂಡಿದ ಪಾಲ—ಸಕ್ಕರೆ ಸೇರಿಸಿದ ಹಾಲನ್ನು, ಸುಖಿಪ ಸುಖ—ಭೋಗಿಸುವ (ಕುಡಿಯುವ) ಸುಖವು, ಮೇಲು—ಉತ್ತಮ; ಲೋಲಾಕ್ಷಿಯರ—ಚಂಚಲಾಕ್ಷಿಯರನ್ನು (ಸುಂದರಸ್ತ್ರೀಯರನ್ನು), ನೋಳ್ಪ ಸುಖದಿಂದ—ನೋಡುವ ಸುಖಕ್ಕಿಂತ, ಮತ್ತೆ ಅವರಂಗದ—ಇನ್ನೂ ದೇಹದ, ಆಲಿಂಗನದ ಸುಖಮೇಲು—ಆಲಿಂಗನಸುಖವು ಅಧಿಕವಾದುದು.

**ಇಂತು ಮಹತ್ತರಸುಖ ಮೇಲು ಮುಕ್ತಿಯೊಳು**
**ಅಂತರಂತರದಿ ಸೇವಿಪರ**
**ಸಂತೋಷತಾರತಮ್ಯದಲ್ಲಿ ಇಂಪಾದ-**
**ರಂತೆ ತೋರಿದ ಹಯವದನ** ॥೯॥

**ಅರ್ಥ:** ಇಂತು—ಹೀಗೆಯೇ, ಮುಕ್ತಿಯೊಳು—ಮುಕ್ತಿಯಲ್ಲಿ, ಮಹತ್ತರ ಸುಖಮೇಲು—(ಕೆಳಗಿನವರಿಗಿಂತ) ಉತ್ತಮರ ಸುಖವು ಅಧಿಕವಾದುದು; ಅಂತರಂತರದಿ—ತಾರತಮ್ಯದಿಂದ, ಸೇವಿಪರ—(ಅವರನ್ನು) ಸೇವಿಸುವವರ, ಸಂತೋಷ—ಸುಖವು (ಕಡಿಮೆಯಾದುದು); ತಾರತಮ್ಯದಲ್ಲಿ—(ಸಂತೋಷ ಶಬ್ದವನ್ನು ಆವೃತ್ತಿಮಾಡಿಕೊಂಡು) ಆನಂದತಾರತಮ್ಯದಲ್ಲಿರುವ, ಇಂಪ—ಸೊಬಗನ್ನು (ಯುಕ್ತಿಯುಕ್ತವಾದ ಯಾಥಾರ್ಥ್ಯವನ್ನು), ಹಯವದನ—(ನನ್ನ ಉಪಾಸ್ಯಮೂರ್ತಿ) ಹಯವದನನು, (ಮುಕ್ತಿಯಲ್ಲಿ) ಅದರಂತೆ—ಹೀಗೆ ಇರುವುದನ್ನು, ತೋರಿದ—ತಿಳಿಸಿಕೊಟ್ಟನು (ಪ್ರೇರಿಸಿ ನುಡಿಸಿರುವನು).

**ವೈಕುಂಠಲೋಕವೆಂಬ ಪುರದ ಕಥೆಯ ಪ-**
**ರಾಕುವಿಟ್ಟು ಕೇಳ್ವ ಜನರ**
**ಶ್ರೀಕಾಂತಕಾವನೆಂಬಲ್ಲಿ ಮೊದಲ ಸಂಧಿ**
**ಈ ಕಾವ್ಯದೊಳಗೆ ಮುಗಿಯಿತು** ॥೧೦॥

**ಅರ್ಥ:** ವೈಕುಂಠಲೋಕವೆಂಬ ಪುರದ ಕಥೆಯ—(ವೈಕುಂಠಲೋಕದಲ್ಲಿರುವುದರಿಂದ) ವೈಕುಂಠಲೋಕವೆಂದು ಕರೆಯಲ್ಪಡುವ, ವೈಕುಂಠಪುರಿಯ ಮಹಿಮಾವರ್ಣನೆಯನ್ನು, ಪರಾಕುವಿಟ್ಟು—ದೂರದಿಂದ ಗೌರವಿಸಿ ಪೂಜ್ಯಬುದ್ಧಿಯಿಂದ, ಕೇಳ್ವ—ಕೇಳಿ ನಿಷ್ಠೆಯನ್ನು ಹೊಂದುವ, ಜನರ—ಮನುಷ್ಯರನ್ನು, ಶ್ರೀಕಾಂತ—ಲಕ್ಷ್ಮೀಪತಿಯು, ಕಾವನೆಂಬಲ್ಲಿ—ರಕ್ಷಿಸುತ್ತಾನೆಂಬಲ್ಲಿಗೆ,

ಈ ಕಾವ್ಯದೊಳಗೆ—ಈ ಕಾವ್ಯದಲ್ಲಿ, ಮೊದಲಸಂಧಿ—ಮೊದಲನೆಯ ಸಂಧಿಯು, ಮುಗಿಯಿತು—ಪೂರ್ಣವಾಯಿತು.

**ಶ್ರೀಧರ ಹಯವದನರಾಯನ** ದಯದಿಂದ
**ವಾದಿರಾಜೇಂದ್ರ ರಚಿಸಿದ**
ಈ ದಿವ್ಯಕಾವ್ಯದಿ ಮುಕ್ತಿಯೇರುವ
ಮೊದಲಸಂಧಿ ಪೊಸಗೆ

**ಅರ್ಥ:** ಶ್ರೀಧರ—ಲಕ್ಷ್ಮೀವಕ್ಷನಾದ, **ಹಯವದನರಾಯನ**—ಶ್ರೀಹಯಗ್ರೀವಸ್ವಾಮಿಯ, ದಯದಿಂದ—ಕೃಪೆಯಿಂದ, ವಾದಿರಾಜೇಂದ್ರ ರಚಿಸಿದ—ವಾದಿರಾಜನೆಂಬ ಯತಿಶ್ರೇಷ್ಠನು ವಿರಚಿಸಿದ, ಈ ದಿವ್ಯಕಾವ್ಯದಿ—ಈ ಶ್ರೇಷ್ಠ ಕಾವ್ಯದಲ್ಲಿ, ಮುಕ್ತಿಯೇರುವ—ಮುಕ್ತಿಗೆ ಹತ್ತುವ (ಮುಕ್ತಿಸೋಪಾನದಂತಿರುವ), ರಮ್ಯವಾದ—ಮನೋಹರವಾದ (ಶ್ರವಣದಿಂದಲೇ ಆನಂದವನ್ನೀಯುವ) ಮೊದಲಸಂಧಿ—ಒಂದನೇ ಸಂಧಿಯು, ಪೊಸಗೆ—ಸೊಗಸಿತು (ಶೋಭಿಸಿತು).

* * * * * *

||ಶ್ರೀಹಯವದನಾಯ ನಮಃ||

||ಶ್ರೀವಾದಿರಾಜಗುರುಭ್ಯೋನಮಃ||

# * ತತ್ವಸಾರ *

## ೨. ಲಯಸಂಧಿ

***ಇದು ಪುಣ್ಯಕಥೆ ಲೋಕಕ್ಕಿದು ಮುಕುತಿಯ ಪಥ***
***ಇದ ಕೇಳುವವನೆ ಕೃತಾರ್ಥ ||ಪಲ್ಲವಿ||***

ಸೂಚನೆ: [ಇದರ ಅರ್ಥವನ್ನು ಮೊದಲನೆಯ ಸಂಧಿಯ ಆರಂಭದಲ್ಲಿ ನೋಡಬಹುದು. ಇದೇ ಪಲ್ಲವಿಯು, ಮುಂದಿನ ಎಲ್ಲ ಸಂಧಿಗಳ ಆರಂಭ-ದಲ್ಲಿಯೂ ಇದೆ. ಇದು ಇಡೀ ಕಾವ್ಯದ ಪಲ್ಲವಿಯು.]

### ಶ್ಲೋಕ ೧

***ಸ ಏವ ಭೂಯೋ ನಿಜವೀರ್ಯಚೋದಿತಾಂ***
***ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಮ್।***
***ಅನಾಮರೂಪಾತ್ಮನಿ ರೂಪನಾಮನೀ***
***ವಿಧಿತ್ಸಮಾನೋಽನುಸಸಾರ ಶಾಸ್ತ್ರಕೃತ್||*** (ಭಾಗವತ)

**ಅರ್ಥ:** ಸ ಏವ—ಆ ಪರಮಪುರುಷನೇ, ಭೂಯಃ—ಪುನಃ, ನಿಜ-ವೀರ್ಯಚೋದಿತಾಂ—ಸ್ವಸಾಮರ್ಥ್ಯದಿಂದ ಪ್ರೇರಿತವಾದ, ಸ್ವಜೀವ ಮಾಯಾಂ—ತನ್ನ ಅಧೀನರಾದ ಜೀವರನ್ನು ತನ್ನ ಇಚ್ಛೆಯಿಂದಲೇ ಬಂಧಿಸುವ, ಪ್ರಕೃತಿಂ—ಜಡಪ್ರಕೃತಿಯನ್ನೂ, ಸಿಸೃಕ್ಷತೀಂ—ಸೃಷ್ಟಿಯಲ್ಲಿ ಇಚ್ಛೆಯನ್ನು ಹೊಂದಿದ ಲಕ್ಷ್ಮೀದೇವಿಯನ್ನೂ, ಅನಾಮರೂಪಾತ್ಮನಿ—ಪ್ರಾಕೃತನಾಮರೂಪಗಳಿಲ್ಲದ ತನ್ನಲ್ಲಿ ಮತ್ತು ತನ್ನಲ್ಲಿ ಆಶ್ರಯಹೊಂದಿರುವ ನಾಮರೂಪಗಳಿಲ್ಲದ ಜಗತ್ತನ್ನೂ, ರೂಪನಾಮನೀ—ರೂಪನಾಮಗಳುಳ್ಳದ್ದನ್ನಾಗಿ (ಪ್ರಳಯಕಾಲದಲ್ಲಿ ತನ್ನ ಉದರದಲ್ಲಿ ಸೇರಿಸಲ್ಪಟ್ಟ ಜಗತ್ತನ್ನು ರೂಪನಾಮಗಳನ್ನಿತ್ತು ಪ್ರಕಟಗೊಳಿಸಿ), ವಿಧಿತ್ಸಮಾನಃ—ಮಾಡಬೇಕೆಂಬ ಇಚ್ಛೆಯಿಂದ, ಶಾಸ್ತ್ರಕೃತ್—ಸರ್ವನಿಯಾಮಕ ನಾದ ಶ್ರೀಹರಿಯು, ಅನುಸಸಾರ—ಹೊಂದಿದನು. (ಉಭಯ ಪ್ರಕೃತಿಗಳಲ್ಲಿ ತನ್ನ ಶಕ್ತಿಯನ್ನು ಸ್ಥಾಪಿಸಿ ಸೃಷ್ಟಿಗೆ ಅವಕಾಶವನ್ನುಂಟುಮಾಡಿದನು.)

## ಪದ ೧

ರಾಗ-ಶುದ್ಧವರಾಳಿ; ತಾಳ-ರೂಪಕ

**ಜೀವರಾತುಮ ದೇಹರೂಪದಿಂದ ಘಟಿತಾಗಿ**
**ಜೀವಮಾಯೆ ಗಡ ಪ್ರಕೃತಿ**
**ದೇವನ ನಿಜಶಕ್ತಿಯಿಂದ ಕೂಡಿ ತನ್ನಡೆ-**
**ಸುವಂತಿದ ನಡೆಸುವ ಗಡ** ॥೧॥

**ಅರ್ಥ:** ಜೀವರಾತುಮ—ಜೀವರ ಆತ್ಮವು (ಸ್ವರೂಪವು), ದೇಹರೂಪದಿಂದ ಘಟಿತಾಗಿ—ದೇಹವೆಂಬ ಪ್ರಕೃತಿಯಿಂದ (ಪ್ರಾಕೃತದೇಹದೊಂದಿಗೆ) ಸಂಬಂಧಹೊಂದಿರುವುದರಿಂದ, ಪ್ರಕೃತಿ—ಪ್ರಕೃತಿಯು, ಜೀವಮಾಯೆ ಗಡ —ಜೀವನನ್ನು ಮೋಹಗೊಳಿಸುತ್ತದೆಯಷ್ಟೆ (ಬೇರೇನೂ ಇಲ್ಲ); ದೇವನ—ಶ್ರೀಹರಿಯ, ನಿಜಶಕ್ತಿಯಿಂದ ಕೂಡಿ—ಸ್ವತಂತ್ರಶಕ್ತಿಯಿಂದ ಪ್ರೇರಿತಳಾಗಿ, ತನ್ನಡೆಸುವಂತೆ—ತನ್ನನ್ನು ನಡೆಸುವಂತೆ (ಆತನ ಪ್ರೇರಣಾನುಸಾರವಾಗಿ), ಇದ—ಈ ಜೀವಸಮೂಹವನ್ನು, ನಡೆಸುವ ಗಡ—ನಡೆಸುವಳೆಂಬುದು ಸತ್ಯ (ಎಲ್ಲಕ್ಕೂ ಶ್ರೀಹರಿಯೇ ಲಕ್ಷ್ಮೀದ್ವಾರಾ ಸ್ವತಂತ್ರಕಾರಣನು).

**ಸೃಷ್ಟಿಸಿ ನಾರಾಯಣ ಬೊಮ್ಮಾದಿಗಳ ಉ-**
**ತ್ಕೃಷ್ಟ ಸತ್ಯಾದಿಲೋಕದಲಿ**
**ಪಟ್ಟವ ಕಟ್ಟಿ ಸಕಲ ಸೃಷ್ಟ್ಯಾದಿಗಳ**
**ಕೊಟ್ಟು ಪಾಲಿಸಿದ ಲೀಲೆಯಲಿ** ॥೨॥

**ಅರ್ಥ:** ನಾರಾಯಣ—ಶ್ರೀನಾರಾಯಣನು, ಬೊಮ್ಮಾದಿಗಳ—ಬ್ರಹ್ಮಾದಿಜೀವರನ್ನು, ಸೃಷ್ಟಿಸಿ—ಹುಟ್ಟಿಸಿ, ಉತ್ಕೃಷ್ಟಸತ್ಯಾದಿ ಲೋಕದಲಿ—ಶ್ರೇಷ್ಠವಾದ ಸತ್ಯಲೋಕವೇ ಮೊದಲಾದ ಲೋಕಗಳಲ್ಲಿ, ಪಟ್ಟವ ಕಟ್ಟಿ—ಅಧಿಪತಿಗಳನ್ನಾಗಿ ಪಟ್ಟಾಭಿಷೇಕಮಾಡಿ, ಸಕಲ ಸೃಷ್ಟ್ಯಾದಿಗಳ ಕೊಟ್ಟು—ಸೃಷ್ಟಿಮಾಡುವ ಮೊದಲಾದ ಅಧಿಕಾರಗಳನ್ನು ಕೊಟ್ಟು—ಅವರಿಗೆ ಕೊಟ್ಟು (ಆ ಅಧಿಕಾರಿಗಳ ನಿರ್ವಹಣೆಗೆ ಅವಶ್ಯಕವಾದ ಸಾಮರ್ಥ್ಯವನ್ನು), ಅವರಲ್ಲಿಟ್ಟು—ಒಂದೊಂದು ರೂಪದಿಂದ ತಾನೇ ಅವರಲ್ಲಿ ನಿಂತು—(ಶ್ರೀಹರಿಯ ಸಾಮರ್ಥ್ಯವು ಆತನಿಂದ ಅತ್ಯಂತ ಅಭಿನ್ನವಾದುದೇ), ಲೀಲೆಯಲಿ—ಲೀಲೆಯಿಂದ, ಪಾಲಿಸಿದ—(ಆ ಎಲ್ಲರನ್ನೂ) ರಕ್ಷಿಸುತ್ತಾನೆ.

**ವಿಶೇಷಾಂಶ:** (೧) ***'ಬಂಧಕೋ ಭವಪಾಶೇನ ಮೋಚಕಶ್ಚ ಸ ಏವ ಹಿ'***— ಎಂದರೆ, 'ಜನನಮರಣರೂಪದ ಸಂಸಾರವೆಂಬ ಪಾಶದಿಂದ ಕಟ್ಟು-ವವನೂ, ಅದರಿಂದ ಬಿಡುಗಡೆ ಮಾಡುವವನೂ ಆ ಶ್ರೀಹರಿಯೇ ಸರಿ' ಎಂದು ಶ್ರುತಿಯು ಹೇಳುತ್ತದೆ. ಜೀವರನ್ನು ಬಂಧಿಸಿರುವ ಜಡಪ್ರಕೃತಿಯೂ, ತದಭಿಮಾನಿ ಲಕ್ಷ್ಮೀದೇವಿಯೂ ಸಹ ಶ್ರೀಹರಿಯ ಅಧೀನರು. ಜಗತ್ತಿನ ಸೃಷ್ಟಿ ಸ್ಥಿತಿಲಯಾದಿಗಳು ಪ್ರಕೃತಿಯಿಂದಲೇ ಆಗುತ್ತವೆಂದು **'ನಿರೀಶ್ವರಸಾಂಖ್ಯ'**ರು ಹೇಳುತ್ತಾರೆ. ಈಶ್ವರಾನುಗ್ರಹೀತವಾದ (ಆತನ ಸಹಾಯವುಳ್ಳ) ಪ್ರಕೃತಿಯೇ ಕಾರಣವೆಂದು **'ಸೇಶ್ವರಸಾಂಖ್ಯ'**ರು ಹೇಳುತ್ತಾರೆ. ಈ ಉಭಯಸಾಂಖ್ಯ ಮತಗಳೂ ಗ್ರಾಹ್ಯಗಳಲ್ಲ. ಈಶ್ವರನು ಸ್ವತಂತ್ರನಲ್ಲದಿದ್ದರೆ, ಅವನು **'ಈಶ್ವರ'**ನೇ ಅಲ್ಲ. ಈಶ್ವರನನ್ನು ಒಪ್ಪದ ನಿರೀಶ್ವರಸಾಂಖ್ಯರು, ಇಚ್ಛಾಪೂರ್ವಕಪ್ರವೃತ್ತಿಸುವ ಶಕ್ತಿಯೇ ಇಲ್ಲದ ಜಡಪ್ರಕೃತಿಗೆ ಜಗತ್ಕರ್ತೃತ್ವವನ್ನು ಹೇಳುವುದು ಸರ್ವಥಾ ಕೂಡುವುದಿಲ್ಲ. **ಸೇಶ್ವರಸಾಂಖ್ಯರು** ಈಶ್ವರನನ್ನು ಒಪ್ಪಿಯೂ ಆತನಿಗೆ ಸ್ವಾತಂತ್ರ್ಯವನ್ನು ಒಪ್ಪದಿದ್ದರೆ, ಅದೂ ಅಶೋಭನವೇ— ಅವನು **'ಈಶ್ವರ'**ನೂ ಅಲ್ಲ. ಸ್ವತಂತ್ರನೆಂದರೆ, ಪ್ರಕೃತಿಯು (ಜಡಪ್ರಕೃತಿ ಮತ್ತು ಅದರ ಅಭಿಮಾನಿ-ಯಾದ ಲಕ್ಷ್ಮೀದೇವಿ ಸಹ) ಆತನ ಅಧೀನವೆಂದಾಯಿತು. ಅನಾದಿಕಾಲದಿಂದ ಜೀವರನ್ನು ಬಂಧಿಸಿರುವ ಪ್ರಕೃತಿಯ (ಉಭಯಪ್ರಕೃತಿಗಳ ಪ್ರಕೃತ್ಯಭಿಮಾನಿ ಲಕ್ಷ್ಮೀದೇವಿಯೂ ಪ್ರಕೃತಿಶಬ್ದವಾಚ್ಯಳೇ) ಬಂಧಕಶಕ್ತಿಯೂ ಈಶ್ವರ ಅಧೀನ-ವೆಂದೇ ಸಿದ್ಧವಾಯಿತು. ಬಂಧಕನೇ ಮೋಚಕನೂ ಆಗಿರಬೇಕೆಂಬುದು ಲೋಕಾನುಭವಸಿದ್ಧ. ಬಂಧಿಸುವನೊಬ್ಬನಾದರೆ ಬಿಡಿಸುವವನು ಮತ್ತೊಬ್ಬ-ನಾಗಲಾರನು. ಹಾಗಾದರೆ ಲೋಕದಲ್ಲಿ ಯಾವ ವ್ಯವಸ್ಥೆಯೂ ಇಲ್ಲದೆ ಎಲ್ಲವೂ ಅಸ್ತವ್ಯಸ್ತ(chaos)ವಾಗಬೇಕಾಗುವುದು. ಬಂಧಕನಾದ ಶ್ರೀಹರಿಯು, ಜೀವ-ರನ್ನು ಬಂಧನದಿಂದ ಮೋಚನೆ ಮಾಡಲು, ಮೋಚನೆಗೆ ಬೇಕಾದ ಅರ್ಹತೆ-ಯನ್ನು ತಂದುಕೊಡಲು, ಅವರಿಂದ ಯೋಗ್ಯಸಾಧನೆಗಳನ್ನು ಮಾಡಿಸಿಯೇ ಮೋಚನೆಮಾಡುತ್ತಾನೆ (ಮುಕ್ತರನ್ನಾಗಿಸುತ್ತಾನೆ). ಹಾಗಲ್ಲದಿದ್ದರೆ, ಅವನಿಗೆ ವೈಷಮ್ಯಾದಿ ದೋಷಗಳಿಗೆ ಅವಕಾಶವಾಗುತ್ತದೆ. ಜೀವರಿಗೆ ಶ್ರೀಹರಿಯು ಬಂಧವನ್ನುಂಟುಮಾಡಿದ್ದೇಕೆಂಬ ಪ್ರಶ್ನೆಯೂ ಯುಕ್ತವಲ್ಲ. ಪ್ರಕೃತಿಯ ಈ ಬಂಧಕಶಕ್ತಿಯು ಆತನ ಇಚ್ಛಾಧೀನವೆಂಬುದು ಸತ್ಯವಾದರೂ, ಬಂಧನವು ಅನಾದಿಯಾದುದಕ್ಕೆ ಮೊದಲೆಂಬುದು ಎಲ್ಲಿ ಬಂತು? ಆದದ್ದರಿಂದ ಮೊದಲು

ಬಂಧಿಸಿದ್ದೇಕೆಂಬ ಪ್ರಶ್ನೆಗೆ ಅವಕಾಶವಿಲ್ಲ. ಮೊದಲಿಲ್ಲದ ಕಾಲದಿಂದ ಹೀಗಿರುವ ಜೀವರನ್ನು ಬಂಧನದಿಂದ ಮೋಚನೆಮಾಡಿ ಅವರ ಸ್ವರೂಪಸ್ಥಿತಿಯನ್ನು ಹೊಂದಿಸುವುದೇ ಸೃಷ್ಟ್ಯಾದಿ ಭಗವದ್ವ್ಯಾಪಾರಗಳ ಪ್ರಯೋಜನವು. **'ಮುಕ್ತಿರ್ಹಿತ್ವಾಽನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ'**—'ತನ್ನ ಸ್ವರೂಪವನ್ನು ಮುಚ್ಚಿರುವ ಅಸ್ವಾಭಾವಿಕದೇಹಗಳನ್ನು (ರೂಪಗಳನ್ನು) ತೊರೆದು, ಸ್ವಸ್ವರೂಪದ ಪೂರ್ಣಾವಿರ್ಭಾವವನ್ನು ಹೊಂದುವುದೇ ಮುಕ್ತಿಯು' ಎಂಬುದಾಗಿ ಶ್ರೀಮದ್-ಭಾಗವತವೂ ಹೇಳುತ್ತದೆ. ಶ್ರೀಹರಿಯ ಅಖಂಡಸ್ವಾತಂತ್ರ್ಯವನ್ನು ವರ್ಣಿಸಿ, ಗ್ರಂಥಕರ್ತರು, ಈ ಪ್ರಮೇಯವನ್ನೇ ಸಾಧಿಸುವರು.

(೨) ಬ್ರಹ್ಮಾದಿ ದೇವತೆಗಳಿಗೆ ಸೃಷ್ಟ್ಯಾದಿ ಅಧಿಕಾರಗಳನ್ನು ಕೊಟ್ಟನೆಂದರೆ, ಆ ಅಧಿಕಾರಗಳನ್ನು ನಿರ್ವಹಿಸುವ ತನ್ನ ಸ್ವತಂತ್ರಶಕ್ತಿಯನ್ನು ಅವರಲ್ಲಿಟ್ಟನೆಂದರ್ಥ. ಚತುರ್ಮುಖನಿಂದಾಗುವ ಸೃಷ್ಟಿಯನ್ನೂ ಅವನ ದ್ವಾರಾ ಶ್ರೀಹರಿಯೇ ಮಾಡುತ್ತಾನೆ—ಶಿವನಲ್ಲಿದ್ದು ಲಯಗೊಳಿಸುವವನೂ ಆತನೇ. ಅಷ್ಟೇಕೆ! ಸರ್ವಯೋನಿಗಳಲ್ಲಿರುವ ಸರ್ವಪ್ರಾಣಿಗಳ ಉತ್ಪತ್ತ್ಯಾದಿಗಳಿಗೂ ಆತನೇ ಸ್ವತಂತ್ರಕಾರಣನು. ***'ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ'*** ಇತ್ಯಾದಿ ಪ್ರಮಾಣವಾಕ್ಯಗಳು, ಬ್ರಹ್ಮ-ಶಿವಾದಿಗಳಲ್ಲಿ ತನ್ನಾಮಕನಾಗಿ ತದಾಕಾರನಾಗಿದ್ದು ಪ್ರವೃತ್ತಿಸುವ ಸ್ವತಂತ್ರ ಪ್ರಭುವೆಂದು ಹೇಳುತ್ತವೆ.

*'ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ।*
*ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ॥'*—(ಗೀತಾ)

ಎಂಬಲ್ಲಿ, 'ಎಲ್ಲ ಯೋನಿಗಳಲ್ಲಿ (ದೇಹಸಂಬಂಧರೂಪದ) ಜನ್ಮಪಡೆಯುವ ಎಲ್ಲ ಪ್ರಾಣಿಗಳ ಉತ್ಪತ್ತಿಗೂ ಲಕ್ಷ್ಮೀದೇವಿಯೇ ತಾಯಿಯು, ನಾನೇ ಬೀಜಪ್ರದನಾದ ತಂದೆಯು' ಎಂದು ಶ್ರೀಕೃಷ್ಣನೇ ಹೇಳಿದ್ದಾನೆ.

**ಅವತರಿಸಿ ಭೂಮಿಯ ಭಾರವನಿಳುಹಿದ**
**ಭುವನಪಾವನಚರಿತ ಭವ್ಯ**
**ತವೆಯಾದ ಸುಖಂಗಳ ತನ್ನವರಿಗೆ ಕೊಟ್ಟು**
**ಜವನ ಬಾಧೆಗಳ ಬಿಡಿಸಿದ ॥೩॥**

**ಅರ್ಥ:** ಅವತರಿಸಿ—(ರಾಮ, ಕೃಷ್ಣಾದಿರೂಪಗಳಿಂದ) ಪ್ರಾದುರ್ಭವಿಸಿ, ಭೂಮಿಯ ಭಾರವನು—ಭೂಭಾರವನ್ನು, ಇಳುಹಿದ—ಇಳಿಸಿದನು (ಪರಿಹರಿಸಿದನು); ಭುವನಪಾವನಚರಿತ—ಜಗತ್ತನ್ನು (ಸುಪ್ರಜೆಗಳನ್ನು) ಪವಿತ್ರ-

ಗೊಳಿಸುವ ಚರಿತ್ರೆಯುಳ್ಳವನು; ಭವ್ಯ—ಮಹದೈಶ್ವರ್ಯಪೂರ್ಣನು; ತನ್ನ-ವರಿಗೆ—ತನ್ನ ಭಕ್ತರಿಗೆ, ತವೆಯಾದ ಸುಖಂಗಳ—ಕಲ್ಪನಾತೀತಗಳಾದ (ಉತ್ಕೃಷ್ಟ—ದಿವ್ಯಲೋಕವಿಲಕ್ಷಣ) ಭೋಗಗಳನ್ನು, ಕೊಟ್ಟು—ಅನುಗ್ರಹಿಸಿ, ಜವನ ಬಾಧೆಗಳ—ಯಮಬಾಧೆಗಳನ್ನು (ಮೃತ್ಯು-ದುಃಖಾದಿಗಳನ್ನು), ಬಿಡಿ-ಸಿದ—ತೊಲಗಿಸಿದನು.

**ವಿಶೇಷಾಂಶ:** ತನ್ನ ಎಲ್ಲ ಅವತಾರಗಳ ಉದ್ದೇಶವನ್ನು ಶ್ರೀಕೃಷ್ಣನು ಗೀತೆ-ಯಲ್ಲಿ ಹೀಗೆ ನಿರೂಪಿಸಿರುವನು:

*'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।*
*ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್॥*

*ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।*
*ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥'*

**ಅರ್ಥ:** 'ಧರ್ಮಗ್ಲಾನಿ (ಕುಂದು-ಹ್ರಾಸ-ಪೀಡೆ) ಮತ್ತು ಅಧರ್ಮದ ಉತ್ಥಾನ (ವೃದ್ಧಿ—ತಲೆಯೆತ್ತಿ ಮೆರೆಯುವುದು), ಈ ಎರಡು (ಯುಗ—ದ್ವಂದ್ವ), ಯಾವ ಯಾವ ಕಾಲದಲ್ಲಿ ಸಂಭವಿಸುವುದೋ, ಆಗೆಲ್ಲಾ, ಸಜ್ಜನರನ್ನು ರಕ್ಷಿಸಲಿಕ್ಕೂ, ದುಷ್ಟರನ್ನು ನಾಶಮಾಡುವುದಕ್ಕೂ ನಾನು ಅವತರಿಸುತ್ತೇನೆ'—ಹೀಗಿರುವ ಶ್ರೀಹರಿಯ ಅವತಾರಲೀಲೆಗಳಿಂದ, ಆತನ ಸ್ವಾತಂತ್ರ್ಯಾದಿ ಮಹಿಮೆಗಳನ್ನು ತಿಳಿಯುವುದೂ ಮುಕ್ತಿಗೆ ಸಾಧನವೆಂದು ಈ ನುಡಿಯಿಂದ ಜ್ಞಾಪಿಸುತ್ತಾರೆ.

**ಭಕ್ತ ಜನರ ಪೊರೆದ ದೈತ್ಯರ ಮುರಿದ ಸ-**
**ರ್ವತ್ರ ಶ್ರುತಿವಿಧಾನವನೊರೆದ**
**ಹಸ್ತೀಂದ್ರವರದ ದುರಿತರಾಶಿಗಳ ತರಿದ**
**ಕೀರ್ತಿಯಂ ಮೆರೆದಿಷ್ಟವ ಕರೆದ ॥೪॥**

ಸೂಚನೆ: ಹಿಂದಿನ ನುಡಿಯ ಭಾವವನ್ನು ಸ್ಪಷ್ಟಗೊಳಿಸುತ್ತಾರೆ.

**ಅರ್ಥ:** ಭಕ್ತಜನರ ಪೊರೆದ—ಸದ್ಭಕ್ತರನ್ನು ರಕ್ಷಿಸಿದನು; ಸರ್ವತ್ರ—ಎಲ್ಲೆಲ್ಲಿಯೂ (ಜಗತ್ತಿನಲ್ಲಿ), ಶ್ರುತಿವಿಧಾನವನು—ವೇದಮಾರ್ಗವನ್ನು, ಒರೆದ—ಬೋಧಿಸಿದನು (ವೇದಧರ್ಮವನ್ನು ಸ್ಥಾಪಿಸಿದನು); ದೈತ್ಯರ ಮುರಿದ—ರಾಕ್ಷಸರನ್ನು ಸಂಹರಿಸಿದನು. ಹಸ್ತೀಂದ್ರವರದ—ಗಜೇಂದ್ರವರದನು, ದುರಿತ-ರಾಶಿಗಳ—(ಭಕ್ತರ) ಪಾಪರಾಶಿಗಳನ್ನು, ತರಿದ—ಕಿತ್ತೆಸೆದನು (ನಿರ್ಮೂಲ-

ಗೊಳಿಸಿದನು); ಕೀರ್ತಿಯಂ—ತನ್ನ ಯಶಸ್ಸನ್ನು (ಪ್ರಭಾವವನ್ನು), ಮೆರೆದು —ಬೀರಿ (ಜಗತ್ತಿನಲ್ಲಿ ಪ್ರಸರಿಸಿ), ಇಷ್ಟವ ಕರೆದ— (ಭಕ್ತರ) ಅಭೀಷ್ಟಗಳನ್ನು ಪೂರೈಸಿದನು (ಯಥೇಷ್ಟವಾಗಿ ಸುರಿದನು).

**ಕೊಳಕಂಗಿಗಳ ಕಳೆದು ಚೆಲುವ ಚಿನ್ನಾಂಬರದ**
**ಹೊಳವಂಗಿಗಳ ತೊಡುವಂತೆ**
**ಜಲಜಾಕ್ಷ ಮಾಡುವ ಲಯದ ಲೀಲೆಯು ಮುಕ್ತಿ-**
**ಫಲವೀವುದರಿಂ ಬಣ್ಣಿಪೆನು ॥೫॥**

**ಅರ್ಥ:** ಕೊಳಕಂಗಿಗಳ ಕಳೆದು—ಹಳೇವಸ್ತ್ರಗಳನ್ನು ತೊರೆದು, ಚೆಲುವ ಚಿನ್ನಾಂಬರದ—ಸುಂದರವಾದ ಸುವರ್ಣ(ಜರತಾರಿ)ಮಯವಾದ, ಹೊಳವಂ-ಗಿಗಳ—ಮಿರುಗುವ ವಸ್ತ್ರಗಳನ್ನು, (ಸುವರ್ಣಬಟ್ಟೆಯಿಂದ ನಿರ್ಮಿತವಾದ ಅಂಗಿಗಳನ್ನು), ತೊಡುವಂತೆ—ಧರಿಸುವಂತೆ, ಜಲಜಾಕ್ಷ—ಪುಂಡರೀಕಾಕ್ಷನು (ಶ್ರೀಹರಿಯು), ಮಾಡುವ—ನಡೆಸುವ, ಲಯದ ಲೀಲೆಯು—ಜಗತ್ಪ್ರಳಯದ ಆತನ ಲೀಲೆಯು, ಮುಕ್ತಿ ಫಲವೀವುದರಿಂ—(ಸಾಧನಪರಿಪೂರ್ತಿಯಾದ ಜೀವರಿಗೆ) ಮೋಕ್ಷರೂಪದ ಫಲವನ್ನು ಕೊಡುವುದರಿಂದ, (ಕೊಡುವುದಕ್ಕಾಗಿ ಎಂಬ ಮಹಿಮೆಯನ್ನು ತಿಳಿಸುವುದರಿಂದ), ಬಣ್ಣಿಪೆನು—ವರ್ಣಿಸುತ್ತೇನೆ.

**ವಿಶೇಷಾಂಶ:** *'ಏವಮೇವಾಯಮಾತ್ಮಾ ಇದಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾ ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ಪಿತ್ರ್ಯಂ ವಾ ಗಾಂಧರ್ವಂ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾ ಅನ್ಯೇಷಾಂ ಭೂತಾನಾಂ'* (ಋಗ್ವೇದ) ಎಂಬಲ್ಲಿ, ಶ್ರೀಹರಿಯ ಮುಕ್ತಿಪ್ರಧಾನಮಹಿಮೆಯು ವರ್ಣಿತವಾಗಿದೆ. ಇದರ ಅರ್ಥ: ಏವಮೇವ—ಹೀಗೆಯೇ (ಸ್ವರ್ಣಕಾರನು ಬಂಗಾರವನ್ನು ಪುಟಕ್ಕೆ ಹಾಕಿ ಶುದ್ಧಗೊಳಿಸಿ, ಅದರಿಂದ ಕಂಠಭೂಷಣಾದಿ ರೂಪಗಳನ್ನು ಮಾಡುವಂತೆ); ಅಯಮಾತ್ಮಾ—ಈ ಪರಮಾತ್ಮನು, ಇದಂ ಶರೀರಂ—ಈ ಶರೀರವನ್ನು, ನಿಹತ್ಯ—ನಾಶಗೊಳಿಸಿ (ಜೀವನಿಗೆ ಪ್ರಾಕೃತದೇಹ ಸಂಬಂಧವನ್ನು ತಪ್ಪಿಸಿ); ಅವಿದ್ಯಾಂ ಗಮಯಿತ್ವಾ—ಅವಿದ್ಯೆಯನ್ನು ಹೋಗ-ಲಾಡಿಸಿ (ಅವಿದ್ಯೆಯ ತೆರೆಯನ್ನು ಸರಿಸಿ), ಅನ್ಯತ್ ನವತರಂ—ಬೇರೆ ನೂತನವಾದ, ಕಲ್ಯಾಣತರಂ ರೂಪಂ—ಮಂಗಳಕರವಾದ (ಪ್ರಕೃತಿಸಂಬಂಧ-ರಹಿತವಾದ) ರೂಪವನ್ನು, ಕುರುತೇ—ಮಾಡುತ್ತಾನೆ (ಹೊಂದಿಸುತ್ತಾನೆ); ಪಿತ್ರ್ಯಂ ವಾ—ಪಿತೃ ಜೀವನಿಗೆ ಪಿತೃಸ್ವರೂಪವನ್ನು, *ಗಾಂಧರ್ವಂ ವಾ ದೈವಂ*

*ವಾ, ಪ್ರಾಜಾಪತ್ಯಂ ವಾ, ಬ್ರಾಹ್ಮಂ ವಾ, ಅನ್ಯೇಷಾಂ ಭೂತಾನಾಂ*— ಗಂಧರ್ವ, ದೇವ, ಪ್ರಜಾಪತಿ, ಬ್ರಹ್ಮ (ಚತುರ್ಮುಖ), ಮತ್ತು ಮನುಷ್ಯೋತ್ತಮರೇ ಮೊದಲಾದ ಇತರ ಎಲ್ಲರಿಗೂ ಅವರವರ ಸ್ವರೂಪದೇಹಗಳನ್ನು, ಕುರುತೇ — ಹೊಂದಿಸಿ ಮುಕ್ತರನ್ನಾಗಿ ಮಾಡುತ್ತಾನೆ. ಈ ಶ್ರುತ್ಯರ್ಥವನ್ನೇ ಸ್ಮೃತಿವಾಕ್ಯಗಳು ಸ್ಪಷ್ಟಗೊಳಿಸುತ್ತಾ ಹೀಗೆ ಹೇಳುತ್ತವೆ:

*'ಇದಂ ಶರೀರಂ ಭೂತೇಷು ವಿಲಾಪಯತಿ ಕೇಶವಃ।*
*ಅವಿದ್ಯಾಂ ಚೈವ ಜೀವಸ್ಯ ಗಮಯೇತ್ ಜ್ಞಾನಸರ್ಜನಾತ್॥*
*ಸ್ವರ್ಣಕಾರೋ ಯಥಾ ಸ್ವರ್ಣಮಲಮಗ್ನೌ ನಿಹತ್ಯ ಚ।*
*ಶುದ್ಧೇನ ತೇನ ಚಾತ್ಮೇಷ್ಟಂ ಕುರುತೇ ರೂಪಮಂಜಸಾ॥*
*ಏವಂ ಸ ಭಗವಾನ್ ವಿಷ್ಣುಃ ಜೀವಸ್ವರ್ಣಸ್ಯ ಯನ್ಮಲಮ್।*
*ಅವಿದ್ಯಾಕಾಮಕರ್ಮಾದ್ಯಮಾತ್ಮಾಗ್ನೌ ನಾಶ್ಯ ಸರ್ವಕೃತ್॥*
*ಸ್ವೇಚ್ಛಯಾ ಕುರುತೇ ರೂಪಂ ಯದ್ಯೋಗ್ಯಂ ಯಸ್ಯ ಮುಕ್ತಿಗಮ್।*
*ಪಿತೃಜೀವಸ್ಯ ಪಿತ್ರ್ಯಂ ಸ ಗಾಂಧರ್ವಂ ತಸ್ಯ ಚೈವ ಹಿ॥*
*ದೈವಂ ತು ದೇವಜೀವಸ್ಯ ಪ್ರಾಜಾಪತ್ಯಂ ಪ್ರಜಾಪತೇಃ।*
*ಬ್ರಹ್ಮಣೋ ಬ್ರಾಹ್ಮಮೇವೇತಿ ನಿತ್ಯಾನಂದಸ್ವರೂಪಕಮ್॥*
*ನ ಯೋಗ್ಯತಾಂ ವಿನಾಕ್ವಾಪಿ....'* ಇತ್ಯಾದಿ

ಸರ್ವಕರ್ತನಾದ ಶ್ರೀಹರಿಯು ಜೀವರಿಗೆ ಸ್ವಸ್ವರೂಪಗಳನ್ನು ಹೊಂದಿಸುವುದಕ್ಕಾಗಿಯೇ ಪ್ರಳಯದಿಂದ ಸೃಷ್ಟಿಯನ್ನು ಉಪಸಂಹಾರಗೊಳಿಸುತ್ತಾನೆ.

**ಜಗವ ಪಾಲಿಸಿ ಮತ್ತೀಜಗದೀಶ ಜೀವರ್ಗೆ**
**ಬಗೆಬಗೆಯ ಗತಿಗಳ ಕೊಡಲು**
**ಮಗನ ನೂರುವರ್ಷ ಮುಗಿಯಲು ಮುನ್ನಿರ್ದಂತೆ**
**ಭಗವಾನ್ ಲಯಕೆ ಮನವಿತ್ತ** **॥೬॥**

**ಅರ್ಥ:** ಜಗವ ಪಾಲಿಸಿ— ಜಗತ್ತನ್ನು ರಕ್ಷಿಸಿ (ಜೀವರಿಂದ ಯಥಾಯೋಗ್ಯಸಾಧನಗಳನ್ನು ಮಾಡಿಸಿ), ಮತ್ತೆ— ಪುನಃ, ಈ ಜಗದೀಶ— ಜಗದೊಡೆಯನಾದ ಈ ಶ್ರೀಹರಿಯು, ಜೀವರ್ಗೆ— ಜೀವರುಗಳಿಗೆ, ಬಗೆಬಗೆಯ ಗತಿಗಳ— ವಿವಿಧ (ಸ್ವಯೋಗ್ಯ) ಗತಿಗಳನ್ನು, ಕೊಡಲು— ಹೊಂದಿಸುವುದಕ್ಕಾಗಿ, ಮಗನ — (ತನ್ನಿಂದಲೇ ಮೊದಲು ಹುಟ್ಟಿದ) ಚತುರ್ಮುಖನ, ನೂರುವರ್ಷ— ನೂರುವರ್ಷಗಳ ಕಾಲವು, ಮುಗಿಯಲು— ಮುಗಿಯುತ್ತಿರಲು, ಮುನ್ನಿರ್ದಂತೆ

—ಸೃಷ್ಟಿಪೂರ್ವದಲ್ಲಿದ್ದಂತೆ, ಲಯಕೆ—ಪ್ರಳಯಕಾಲಪ್ರವೃತ್ತಿಗೆ, ಭಗವಾನ್ ಷಡ್ಗುಣೈಶ್ವರ್ಯ ಪೂರ್ಣನಾದ ಶ್ರೀಹರಿಯು, ಮನವಿತ್ತ—ಸಂಕಲ್ಪಿಸಿದನು (ಮನಸ್ಸುಮಾಡಿದನು).

**ವಿಶೇಷಾಂಶ:** (೧) ದೇವಮಾನದ ೧೨,೦೦೦ ವರ್ಷಗಳು, ಮನುಷ್ಯ ಗಣನೆಯಂತೆ ೪೩,೨೦,೦೦೦ ವರ್ಷಗಳಾಗುತ್ತವೆ. ಇದು, ಕೃತ, ತ್ರೇತ, ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳು ಒಂದಾವರ್ತಿ ಸುತ್ತುವ ಕಾಲ ಅಥವಾ ಒಂದು ಮಹಾಯುಗವೆನಿಸುತ್ತದೆ. ೧೦೦೦ ಮಹಾಯುಗಗಳ ಕಾಲವು ಬ್ರಹ್ಮದೇವನ ಒಂದು ಹಗಲು. ಇಷ್ಟೇ ಕಾಲಾವಧಿಯುಳ್ಳದ್ದು ಬ್ರಹ್ಮದೇವನ ರಾತ್ರಿ. ಹಗಲುರಾತ್ರಿಗಳು ಸೇರಿ ಒಂದು ದಿನ. ಇಂತಿರುವ ೩೬೦ ದಿನಗಳಿಗೆ ಬ್ರಹ್ಮನ ಒಂದು ವರ್ಷ. ಹೀಗಿರುವ ೧೦೦ ವರ್ಷಗಳು ಬ್ರಹ್ಮನ ಆಯುರ್ಮಾನ. ಆಗ ಮಹಾಪ್ರಳಯವಾಗುವುದು. ಇಡೀ ಬ್ರಹ್ಮಾಂಡವು ಲಯಗೊಳ್ಳುತ್ತದೆ. **'ಪ್ರಾಕೃತಿಕಲಯ'**ವೆಂದೂ ಕರೆಯಲಾಗುತ್ತದೆ. ಬ್ರಹ್ಮದೇವನ ಪ್ರತಿ ಹಗಲು ಕಳೆದೊಡನೆ, ಭೂ, ಅಂತರಿಕ್ಷ ಮತ್ತು ಸ್ವರ್ಗಗಳೆಂಬ ಮೂರು ಲೋಕಗಳು ನಾಶವಾಗುತ್ತವೆ. ಇದನ್ನು **'ದೈನಂದಿನ-ಲಯ'**ವೆಂದು ಕರೆಯಲಾಗುತ್ತದೆ. ಬ್ರಹ್ಮದೇವನ ಪ್ರತಿಹಗಲಿನಲ್ಲಿ ೧೪ ಮನುಗಳು ಆಗಿಹೋಗುತ್ತಾರೆ. ಒಬ್ಬರಾದ ಮೇಲೊಬ್ಬರಂತೆ (ಸಮಾನವಾದ ಕಾಲದಲ್ಲಿ) ಅಧಿಕಾರಾರೂಢರಾಗಿರುತ್ತಾರೆ. ಪ್ರತಿ ಮನ್ವಂತರ (ಮನುವಿನ ಕಾಲಾವಧಿ) ಆದೊಡನೆ ಜಲಪ್ರಳಯವಾಗುತ್ತದೆ—ಎಲ್ಲ ಪ್ರಾಣಿಗಳು (ಭೂಮಿಯಲ್ಲಿರತಕ್ಕವು) ನಾಶವಾಗುತ್ತವೆ. ಇದನ್ನು **'ಮನ್ವಂತರ ಪ್ರಳಯ'**ವೆನ್ನುವರು. ಯುಗಪ್ರಳಯದಲ್ಲಿ ವಿಷಮಾವಸ್ಥೆಗಳು ದುರ್ಧರಪರಿಸ್ಥಿತಿಗಳೇರ್ಪಡುತ್ತವೆ. ನಿತ್ಯವೂ ಅಸಂಖ್ಯಾತಪ್ರಾಣಿಗಳು ನಷ್ಟದೇಹಿಗಳಾಗುತ್ತಾರೆ —ಇದೂ ಒಂದು ಪ್ರಕಾರದ ಪ್ರಳಯವೇ. ಲಿಂಗದೇಹಗಳು ಭಂಗವಾಗುವುದನ್ನು **'ಆತ್ಯಂತಿಕಪ್ರಳಯ'**ವೆಂದೂ ಹೇಳುತ್ತಾರೆ. ಬಾಹ್ಯ ಜಗತ್ತಿನ ಸಂಬಂಧವೇ ಇಲ್ಲದ ಅಸಂಪ್ರಜ್ಞಾತಸಮಾಧಿಯೆಂಬ ಅವಸ್ಥಾವಿಶೇಷವನ್ನು ಹೊಂದುವುದನ್ನೂ ಸಹ, ಒಂದು ದೃಷ್ಟಿಯಿಂದ ಆತ್ಯಂತಿಕಲಯವೆಂದೇ ನಿರೂಪಿಸುವುದು ಉಂಟು.

*'ನಿತ್ಯೋ ನೈಮಿತ್ತಿಕಶ್ಚೈವ ತಥಾ ಪ್ರಾಕೃತಿಕೋ ಲಯಃ।*
*ಆತ್ಯಂತಿಕಶ್ಚ ಕಥಿತಃ ಕಾಲಸ್ಯ ಗತಿರೀದೃಶೀ॥'*—(ಭಾಗವತ)
ಎಂಬಲ್ಲಿ, ಈ ನಾನಾ ಪ್ರಕಾರದ ಲಯಗಳ ವಿವರಣೆಯಿದೆ.

(೨) ಪ್ರಾಕೃತಿಕಲಯದ ನಂತರವೇ, ಮುಕ್ತರಾಗುವ ಎಲ್ಲ ಜೀವರಿಗೆ ಲಿಂಗದೇಹಭಂಗದಿಂದ ಸ್ವರೂಪಸ್ಥಿತಿರೂಪದ ಮುಕ್ತಿಯು ಲಭಿಸುವುದು. ಹೀಗೆ **'ಲಯವು'** ಮುಕ್ತಿಕಾರಣವಾಗಿರುವುದರಿಂದ (ಅದಿಲ್ಲದೆ ಮುಕ್ತಿಯಿಲ್ಲವಾದ್ದರಿಂದ), ಲಯವನ್ನು ಈ ಸಂಧಿಯಲ್ಲಿ ವರ್ಣಿಸುತ್ತಾರೆ.

ಶ್ರೀನಾರಾಯಣನು, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಗಳೆಂಬ, ತನ್ನ ನಾಲ್ಕು ರೂಪಗಳಿಂದ ಜಗತ್ಸಂಬಂಧವಾದ ಸಕಲ ವ್ಯಾಪಾರಗಳನ್ನು ಲೀಲೆಯಿಂದ ನಡೆಸುತ್ತಾನೆ. **ವಾಸುದೇವನು** ಮೋಕ್ಷದಾತನು. **ಸಂಕರ್ಷಣನು** ಲಯಕರ್ತನು. **ಪ್ರದ್ಯುಮ್ನನು** ಸೃಷ್ಟಿಕರ್ತನು, **ಅನಿರುದ್ಧನು** ಸ್ಥಿತಿಕರ್ತನು (ಜಗದ್ರಕ್ಷಕನು). ಈ ಕ್ರಮದಿಂದಲೇ ಮೂಲರೂಪದಿಂದ, ಈ ರೂಪಗಳು ಒಂದಾದಮೇಲೊಂದರಂತೆ ಪ್ರಕಟವಾಗುತ್ತವೆ. ಇದೇ ಕ್ರಮದಿಂದ ಈ ಕಾವ್ಯದ ಸಂಧಿಗಳೂ ಪ್ರವೃತ್ತವಾಗಿವೆ.

*'ಇತ್ಥಂ ವಿಚಿಂತ್ಯ ಪರಮಸ್ಯ ತು ವಾಸುದೇವ*
*ನಾಮಾ ಬಭೂವ ನಿಜಮುಕ್ತಿ ಪದಪ್ರದಾತಾ।'*
*ತಸ್ಯಾಜ್ಞಯೈವ ನಿಯತಾऽಥ ರಮಾऽಪಿ ರೂಪಂ*
*ಬಭ್ರೇ ದ್ವಿತೀಯಮಪಿ ಯತ್ಪ್ರವದಂತಿ ಮಾಯಾಮ್॥*
*ಸಂಕರ್ಷಣಶ್ಚ ಸ ಬಭೂವ ಪುನಸ್ಸುನಿತ್ಯಃಸಂಹಾರಕಾರಣವಪುಸ್ತದನುಜ್ಞಯೈವ।*
*ದೇವೀ ಜಯೇತ್ಯನುಬಲಭೂವ ಸ ಸೃಷ್ಟಿಹೇತೋಃ*
*ಪ್ರದ್ಯುಮ್ನತಾಮುಪಗತಃಕೃತಿತಾಂ ಚ ದೇವೀ॥*
*ಸ್ಥಿತ್ಯೈ ಪುನಸ್ಸ ಭಗವಾನನಿರುದ್ಧನಾಮಾ*
*ದೇವೀ ಚ ಶಾಂತಿರಭವಚ್ಛರದಾಂ ಸಹಸ್ರಮ್॥* (ತಾತ್ಪರ್ಯ ನಿರ್ಣಯ)

ಎಂದು ವಾಸುದೇವಾದಿ ಚತುರ್ವ್ಯೂಹದ ಅವತಾರಗಳು ನಿರೂಪಿತವಾಗಿದೆ. ಈ ಶ್ಲೋಕಗಳ ತಾತ್ಪರ್ಯಾರ್ಥವು ಹೀಗಿದೆ— "ಹೀಗೆ ಸೃಷ್ಟಿಮಾಡುವೆನೆಂದು ಇಚ್ಛಿಸಿದ ಶ್ರೀಹರಿಯು, **ವಾಸುದೇವ**ರೂಪವನ್ನು ಹೊಂದಿದನು. ಈ ರೂಪದಿಂದ ಜೀವರಿಗೆ ಮುಕ್ತಿಪ್ರದನು. ಆತನ ಆಜ್ಞೆಯಿಂದ ಶ್ರೀರಮಾದೇವಿಯಾದರೂ **'ಮಾಯಾ'** ಎಂಬ ಎರಡನೆಯ ರೂಪವನ್ನು ಧರಿಸಿದಳು; ಪುನಃ ಶ್ರೀಹರಿಯು ಪ್ರಳಯಕಾರಣವಾದ **ಸಂಕರ್ಷಣ**ನಾಮಕ ರೂಪವನ್ನು ಪ್ರಕಟಿಸಿದನು. ರಮಾದೇವಿಯು, **'ಜಯಾ'** ನಾಮಕ ರೂಪವನ್ನು ಶ್ರೀಹರಿಯಾಜ್ಞೆಯಿಂದಲೇ (ಶ್ರೀಹರಿಯಂತೆ ಸ್ವೇಚ್ಛೆಯಿಂದ ಸ್ವತಂತ್ರಳಾಗಿ ಅಲ್ಲ) ಧರಿಸಿದಳು;

ಮುಂದೆ ನಾರಾಯಣನು ಸೃಷ್ಟ್ಯರ್ಥವಾಗಿ ಪ್ರದ್ಯುಮ್ನರೂಪವನ್ನೂ, ದೇವಿಯು **'ಕೃತೀ'**ನಾಮಕ ರೂಪವನ್ನೂ ಸ್ವೀಕರಿಸಿದರು; ಪುನಃ ಸ್ಥಿತಿಕಾರಣವಾದ **ಅನಿರುದ್ಧರೂಪ**ವನ್ನು ನಾರಾಯಣನು ಹೊಂದಿದನು. ದೇವಿಯು **'ಶಾಂತಿ'** ನಾಮಕಳಾದಳು." ತಾತ್ಪರ್ಯನಿರ್ಣಯದಲ್ಲಿ ಶ್ರೀಮಧ್ವಾಚಾರ್ಯರು ಮುಂದೆ ಈ ರೂಪಗಳ ಮಹಿಮೆಗಳನ್ನು ವಿಸ್ತರಿಸುತ್ತಾ—

*'ನಿರ್ದೇಹಕಾನ್ ಸ ಭಗವಾನನಿರುದ್ಧನಾಮಾ*
*ಜೀವಾನ್ಸ್ವಕರ್ಮಸಹಿತಾನುದರೇ ನಿವೇಶ್ಯ।*
*ಚಕ್ರೇಽಥದೇಹಸಹಿತಾನ್.....'*

ಎಂಬಲ್ಲಿ, ಅನಿರುದ್ಧನು ಸ್ವಕರ್ಮಸಹಿತರಾದ ದೇಹರಹಿತಜೀವರನ್ನು ತನ್ನ ಉದರದಲ್ಲಿ ತೆಗೆದುಕೊಂಡು, ದೇಹಸಹಿತರನ್ನಾಗಿ ಮಾಡಿದನೆಂದು ಹೇಳಿರು-ವರು. ಇದರಿಂದ ಅನಿರುದ್ಧನೇ ಸೃಷ್ಟಿಕರ್ತನೆಂದೂ, ಪ್ರದ್ಯುಮ್ನನು ಸೃಷ್ಟಿ ಕಾರಣನೆಂದು ಹಿಂದೆ ಹೇಳಿದುದು ಹೇಗೆಂಬ ಸಂಶಯವೂ ಪ್ರಾಪ್ತವಾಗುತ್ತದೆ. ಇದರ ಪರಿಹಾರವನ್ನು ಶ್ರೀವಾದಿರಾಜರೇ ತಮ್ಮ ಭಾವಪ್ರಕಾಶಿಕೆಯಲ್ಲಿ ಮಾಡಿರುವರು.

*'ಬ್ರಹ್ಮಾಂಡಾಂತಃ ಸ್ತ್ರೀಪುರುಷಸಾಪೇಕ್ಷಾಸೃಷ್ಟಿಃಪ್ರದ್ಯುಮ್ನಾತ್, ಕಾಮಾಂತ-ರ್ಯಾಮೀ ಸ ಭಗವಾನ್ ಮಿಥೋ ರಾಗಂ ಜನಯಿತ್ವಾ ಪುಂಭ್ಯಃ ಸ್ತ್ರೀಷು ಸಂತಾನಪರಂಪರಾಂ ಸೃಜತಿ ತದಾ ಅನಿರುದ್ಧಸ್ತು ತಾನ್ ಪಾಲಯತಿ ಅನಿರುದ್ಧಸ್ತು ಅನಂತಾನಂತಜೀವಾನಾಂ ಸ್ವಶಕ್ತ್ಯೈವ ಸ್ತ್ರೀನಿರಪೇಕ್ಷಾಂ ಪ್ರಕೃತ್ಯಂಶನಿರ್ಮಿತಲಿಂಗದೇಹಮಾತ್ರಾವರಕಸೂಕ್ಷ್ಮ ಸೂಕ್ಷ್ಮದೇಹರೂಪಾಂ ಸೃಷ್ಟಿಂ ಸ್ವದೇಹಾಂತರೇವ ಕರೋತಿ ಅನಿರುದ್ಧೇನ ಕ್ರಿಯಮಾಣಾ ಸೃಷ್ಟಿರತಿ ಸೂಕ್ಷ್ಮತ್ವಾತ್ ಪ್ರಾಕ್ ನ ಗಣಿತಾ'* ಎಂದರೆ, 'ಬ್ರಹ್ಮಾಂಡದೊಳಗಿನ ಸ್ತ್ರೀ-ಪುರುಷರಿಂದಾಗುವ ಸೃಷ್ಟಿಯು ಪ್ರದ್ಯುಮ್ನನಿಂದಾಗುತ್ತದೆ. ಪ್ರದ್ಯುಮ್ನನು ಸ್ತ್ರೀ-ಪುರುಷರಲ್ಲಿ, ಕಾಮಾಂತರ್ಯಾಮಿಯಾಗಿದ್ದು, ಪರಸ್ಪರ ರಾಗವನ್ನು ಹುಟ್ಟಿಸಿ, ಪುರುಷರಿಂದ ಸ್ತ್ರೀಯರಲ್ಲಿ ಸಂತಾನಪರಂಪರೆಯನ್ನು ಸೃಷ್ಟಿಸುತ್ತಾನೆ; ಆಗ ಅನಿರುದ್ಧನೇ ಹುಟ್ಟಿದ ಪ್ರಜೆಗಳನ್ನು ರಕ್ಷಿಸುತ್ತಾನೆ; ಅನಿರುದ್ಧನು ಸೃಷ್ಟಿಯಲ್ಲಿ ಬರುವ ಜೀವರಿಗೆ ಅವರ ಕರ್ಮಾನುಸಾರವಾಗಿ, ಲಿಂಗದೇಹದ ಮೇಲಿನ ಸೂಕ್ಷ್ಮದೇಹವನ್ನು (ಅವರನ್ನು ತನ್ನ ಉದರದಲ್ಲಿಟ್ಟುಕೊಂಡು) ಹೊಂದಿಸು-

ತ್ತಾನೆ. ಹೀಗೆ ಅನಿರುದ್ಧನಿಂದ ಮಾಡಲ್ಪಡುವ ಅತಿಸೂಕ್ಷ್ಮವಾದ ಸೃಷ್ಟಿಯು, ಮುಂದಿನ **'ನಿರ್ದೇಹಕಾನ್'** ಎಂಬ ಶ್ಲೋಕಭಾಗದಲ್ಲಿ ಪ್ರಸಕ್ತವಾಗಿದೆ.' ಸಾಧನಯೋಗ್ಯವಾದ ಸ್ಥೂಲದೇಹದಾನರೂಪದ ಸೃಷ್ಟಿಯು ಪ್ರದ್ಯುಮ್ನ-ನಿಂದಲೇ ಎಂಬುದು ಸ್ಪಷ್ಟ. ಮೃತ್ಯುವು ಮೊದಲೇ ಸಿದ್ಧ—ಹೆಡತಲೆಯ ಮೃತ್ಯುವಿದ್ದೇ ಜನ್ಮವು. ಅಂತೆಯೇ ಸಂಕರ್ಷಣನ ನಂತರವೇ ಪ್ರದ್ಯುಮ್ನನ ಅವತಾರವು. *ಏವಂ ಚ,* ಚತುರ್ವ್ಯೂಹದ ಅದ್ಭುತಮಹಿಮೆಗಳನ್ನು ವರ್ಣಿಸು-ವುದೇ ಈ ಕಾವ್ಯದ ಗುರಿಯೆಂದು ತಿಳಿಯಬಹುದಾಗಿದೆ. ಆದ್ದರಿಂದಲೇ **'ಮೋಕ್ಷಸಂಧಿ, ಲಯಸಂಧಿ, ಸೃಷ್ಟಿಸಂಧಿ, ಸ್ಥಿತಿಸಂಧಿ'**ಗಳೆಂಬ ಕ್ರಮದಿಂದ ಪ್ರವೃತ್ತವಾಗಿದೆ ಈ ಕಾವ್ಯ.

### ಶ್ಲೋಕ ೨

***ನಷ್ಟೇ ಲೋಕೇ ದ್ವಿಪರಾರ್ಧಾವಸಾನೇ।***
***ಮಹಾಭೂತೇಷ್ವಾದಿಭೂತಂ ಗತೇಷು॥***
***ವ್ಯಕ್ತೇಽವ್ಯಕ್ತಂ ಕಾಲವೇಗೇನ ನೀತೇ।***
***ಭವಾನೇಕಃಶಿಷ್ಯತೇಽಶೇಷಸಂಜ್ಞಃ॥*** (ಭಾಗವತ)

**ಅರ್ಥ:** ದ್ವಿಪರಾರ್ಧಾವಸಾನೇ—ಎರಡು ಪರಾರ್ಧಗಳೆಂಬ (ಪರಾರ್ಧ—ಬ್ರಹ್ಮದೇವನ ೫೦ ವರ್ಷಗಳ ಕಾಲ) ಬ್ರಹ್ಮನ ಆಯುಷ್ಯವು ಮುಗಿಯಲು, ಲೋಕೇ—ಜಗತ್ತು, ನಷ್ಟೇ (ಸತಿ)—ನಾಶಹೊಂದುತ್ತಿರಲು, ಮಹಾಭೂತೇಷು—ಪೃಥಿವ್ಯಾದಿ ಪಂಚಮಹಾಭೂತಗಳು, ಆದಿಭೂತಂ—ಅಹಂಕಾರತತ್ವವನ್ನು (ಪಂಚಭೂತಗಳ ಉತ್ಪತ್ತಿಗೆ ಕಾರಣವಾದ ಅಹಂಕಾರತತ್ವವು **'ಆದಿಭೂತ'**-ವೆಂದು ಕರೆಯಲ್ಪಡುತ್ತದೆ), ಗತೇಷು—ಸೇರುತ್ತಿರಲು, ವ್ಯಕ್ತೇ—(ಅಹಂಕಾರ-ತತ್ವವು ಮಹತ್ತತ್ವದಲ್ಲಿ ಸೇರಲು) ಆ ಮಹತ್ತತ್ವವು, ಕಾಲವೇಗೇನ—ಕಾಲ-ನಿಯಾಮಕ ಶ್ರೀಹರಿಯ ಸಾಮರ್ಥ್ಯದಿಂದ, ಅವ್ಯಕ್ತಂ—ಪ್ರಧಾನವನ್ನು (ಮೂಲ ಪ್ರಕೃತಿಯನ್ನು), ನೀತೇ (ಸತಿ)—ಹೊಂದಿಸಲ್ಪಡುತ್ತಿರಲು, ಅಶೇಷ-ಸಂಜ್ಞಃ—ಸರ್ವನಾಮಗಳಿಂದ ಪ್ರತಿಪಾದ್ಯನಾದ *(ನಾಮಾನಿ ಸರ್ವಾಣಿ ಯಮಾವಿಶಂತಿ)*, ಭವಾನ್ ಏಕಃ—ನೀನೊಬ್ಬನೇ (ನಿನ್ನ ಮೂಲರೂಪವು-ಮಾತ್ರ), ಶಿಷ್ಯತೇ—ಉಳಿಯುತ್ತದೆ (ಎಂದಿನಂತೆ ನಿತ್ಯಜಾಗ್ರತನಾಗಿ ಆನಂದ-ಪೂರ್ಣವಾಗಿ ಉಳಿಯುವಿ).

## ಪದ ೨

ರಾಗ-ಚೌಳಿ; ತಾಳ-ರೂಪಕ

**ಪಾತಾಳ ಮೊದಲಾದ ಲೋಕಂಗಳೆಲ್ಲ**
**ವಾತಸಖನಿಂದಲೇ ಸುಡಿಸಿ**
**ಭೂತಪಂಚಕ ಮೊದಲಾದ ತತ್ವಂಗಳ ಶ್ರೀ-**
**ನಾಥ ಸಂಹರಿಸಿದಾಕ್ಷಣದಿ** ॥೧॥

**ಅರ್ಥ:** ಪಾತಾಳ ಮೊದಲಾದ ಲೋಕಂಗಳೆಲ್ಲ—ಪಾತಾಳಾದಿ ೧೪ ಲೋಕಗಳೆಲ್ಲವನ್ನೂ, ವಾತಸಖನಿಂದಲೇ—ಅಗ್ನಿಯಿಂದಲೇ, ಸುಡಿಸಿ—ದಹನ ಮಾಡಿಸಿ, ಭೂತಪಂಚಕ ಮೊದಲಾದ—ಪೃಥಿವ್ಯಾದಿ ಪಂಚಮಹಾಭೂತಗಳೇ ಮೊದಲಾದ, ತತ್ವಗಳ—ತತ್ವಗಳನ್ನು, ಶ್ರೀನಾಥ—ಲಕ್ಷ್ಮೀಪತಿಯು, ಸಂಹರಿಸಿದಾಕ್ಷಣದಿ—ನಷ್ಟಗೊಳಿಸಿದ ನಂತರ (ಮುಂದಿನ ನುಡಿಯಿಂದ ಅನ್ವಯವಾಗುತ್ತದೆ).

**ಮೂರು ಗುಣಂಗಳ ಮೂಲರೂಪದಿ ಕೂಡಿ**
**ಸೇರಿಸಿ ಸರ್ವಜೀವರನು**
**ಕಾರಣಪುರುಷ ತನ್ನ ಕುಕ್ಷಿಯೊಳಗಿಟ್ಟು**
**ಶ್ರೀರಮಣಿಗೆ ಸುಖವಿತ್ತು** ॥೨॥

**ಅರ್ಥ:** ಮೂರುಗುಣಂಗಳ—(ಸತ್ವ, ರಜ, ತಮಗಳೆಂಬ) ಮೂರು ಗುಣಗಳನ್ನು, ಮೂಲರೂಪದಿ ಕೂಡಿ ಸೇರಿಸಿ—ಮೂಲಪ್ರಕೃತಿಯಲ್ಲಿ ಒಟ್ಟಾಗಿ ಲೀನಗೊಳಿಸಿ, ಸರ್ವಜೀವರನು—ಎಲ್ಲಾ ಜೀವರನ್ನು, ಕಾರಣಪುರುಷ—ಲಯಕರ್ತನಾದ ಶ್ರೀಹರಿಯು, ತನ್ನ ಕುಕ್ಷಿಯೊಳಗಿಟ್ಟು—ತನ್ನ ಉದರದಲ್ಲಿಟ್ಟು ಕೊಂಡು, ಶ್ರೀರಮಣಿಗೆ—ಮಹಾಲಕ್ಷ್ಮೀದೇವಿಗೆ, ಸುಖವಿತ್ತು—(ಆಲಿಂಗನ) ಸುಖವನಿತ್ತು (ಮಲಗುವನು).

**ವಿಶೇಷಾಂಶ:** (೧) ಲೋಕಗಳು ೧೪ (ಬ್ರಹ್ಮಾಂಡದ ೧೪ ವಿಭಾಗಗಳು); ಭೂಲೋಕ, ಅಂತರಿಕ್ಷ, ಸ್ವರ್ಗ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕ, ಇವು ೭ ಮತ್ತು ಭೂಮಿಯ ಕೆಳಗಿರುವ, ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಳ, ಇವು ೭—ಹೀಗೆ ಒಟ್ಟು ೧೪ ಲೋಕಗಳು. ಎಲ್ಲಕ್ಕೂ ಮೇಲಿನದು ಸತ್ಯಲೋಕ—ಅದು ಬ್ರಹ್ಮದೇವನ ಲೋಕ.

(೨) ತತ್ವಗಳು ೨೪—ಪೃಥಿವೀ, ಜಲ, ಅಗ್ನಿ, ವಾಯು, ಆಕಾಶಗಳೆಂಬ **ಪಂಚಮಹಾಭೂತಗಳು;** ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ **ಪಂಚತನ್ಮಾತ್ರಾಗಳು;** ಹಸ್ತ, ಪಾದ, ವಾಕ್, ಪಾಯು, ಉಪಸ್ಥಗಳೆಂಬ **ಪಂಚಕರ್ಮೇಂದ್ರಿಯಗಳು;** ಚಕ್ಷು, ಶ್ರೋತ್ರ, ತ್ವಕ್, ಘ್ರಾಣ, ರಸನಗಳೆಂಬ **ಪಂಚಜ್ಞಾನೇಂದ್ರಿಯಗಳು;** ಮನಸ್ಸು, ಅಹಂಕಾರ, ಮಹತ್, ಅವ್ಯಕ್ತಗಳು ನಾಲ್ಕು, ಹೀಗೆ ಒಟ್ಟು ೨೪ ತತ್ವಗಳು. ಪ್ರಳಯಕಾಲದಲ್ಲಿ ಪ್ರತಿಯೊಂದು ತತ್ವವೂ ತನ್ನ ಉತ್ಪತ್ತಿಗೆ ಕಾರಣವಾದ ತತ್ವದಲ್ಲಿ ಲಯಹೊಂದುತ್ತದೆ—ಅದು ತನಗೆ ಕಾರಣವಾದ ತತ್ವದಲ್ಲಿ ಸೇರುತ್ತದೆ. ಹೀಗೆ ೨೨ ತತ್ವಗಳೂ ೨೩ನೇ **ಮಹತ್ತತ್ವ**ದಲ್ಲಿ ಸೇರುತ್ತವೆ. ಇದು ಬ್ರಹ್ಮದೇವನ ದೇಹ—ಬ್ರಹ್ಮನು ಅದಕ್ಕೆ ಅಭಿಮಾನಿಯು; ಇತರ ತತ್ವಗಳ ಅಭಿಮಾನಿದೇವತೆಗಳೆಲ್ಲರೂ, ಮೇಲೆ ಮೇಲಿನ ತತ್ವಾಭಿಮಾನಿಗಳ ದ್ವಾರಾ ಬ್ರಹ್ಮದೇವನಲ್ಲಿ ಬಂದು ಸೇರುತ್ತಾರೆ. ಎಲ್ಲರನ್ನೂ ತನ್ನಲ್ಲಿಟ್ಟುಕೊಂಡ ಬ್ರಹ್ಮನು, ಲಕ್ಷ್ಮೀ (ಅವ್ಯಕ್ತ) ದ್ವಾರಾ ಶ್ರೀಹರಿಯ ಉದರವನ್ನು ಪ್ರವೇಶಿಸುತ್ತಾನೆ. ಶ್ರೀಹರಿಯು ಎಲ್ಲವನ್ನೂ ತನ್ನ ಉದರದಲ್ಲಿ ಧರಿಸಿ, ಪೂರ್ಣಾನಂದನಾದ ತಾನು ಲಕ್ಷ್ಮೀದೇವಿಯನ್ನು ಆಲಂಗಿಸಿ ಪ್ರಳಯಕಾಲದಲ್ಲಿ ಪವಡಿಸುತ್ತಾನೆ.

(೩) ***'ಆಸೀದುದಾರಗುಣವಾರಿಧಿರಪ್ರಮೇಯೋ ನಾರಾಯಣಃ ಪರತಮಃ ಪರಮಾತ್ಮಏಕಃ। ಸಂಶಾಂತಸಂವಿದಖಿಲಂ ಜಠರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಚಾಗ್ರೇ'*** —(ತಾತ್ಪರ್ಯನಿರ್ಣಯ)

**ಅರ್ಥ:** ಅಗ್ರೇ—ಸೃಷ್ಟಿಪೂರ್ವದಲ್ಲಿ (ಪ್ರಳಯಕಾಲದಲ್ಲಿ), ಸಂಶಾಂತಸಂವಿತ್—ಅನಾದಿನಿತ್ಯವಾದ ವೇದವನ್ನು ತನ್ನ ಹೃದಯದಲ್ಲಿಟ್ಟುಕೊಂಡು, ಸ್ವರತೋಽಪಿ—ಸ್ವರಮಣನಾದರೂ (ಸ್ವಸ್ವರೂಪಾನಂದವನ್ನೇ ನಿತ್ಯದಲ್ಲಿ ಅನುಭವಿಸುವವನಾದರೂ), ಲಕ್ಷ್ಮೀಭುಜಾಂತರಗತಃ—(ಲಕ್ಷ್ಮೀದೇವಿಗೆ ಆನಂದಾತಿಶಯದ ಅಭಿವ್ಯಕ್ತಿಗಾಗಿ) ಲಕ್ಷ್ಮೀದೇವಿಯನ್ನು ಆಲಂಗಿಸಿಕೊಂಡು, ಅಖಿಲಂ ಜಠರೇ ನಿಧಾಯ—ಸಕಲಚೇತನಾಚೇತನಾತ್ಮಕ ಜಗತ್ತನ್ನು ತನ್ನ ಉದರದಲ್ಲಿಟ್ಟುಕೊಂಡು, ಉದಾರಗುಣವಾರಿಧಿಃ—ಉತ್ಕೃಷ್ಟಗುಣವಾರಿಧಿಃ—ಉತ್ಕೃಷ್ಟಗುಣಸಮುದ್ರನೂ, ಅಪ್ರಮೇಯಃ—ಯಾವ ಪ್ರಮಾಣಗಳಿಂದಲೂ ಪೂರ್ಣವಾಗಿ ತಿಳಿಯಲಾಗದವನೂ, ಪರಮಾತ್—ಲಕ್ಷ್ಮೀದೇವಿಗಿಂತಲೂ, ಪರತಮಃ —ಅನಂತಮಡಿಉತ್ಕೃಷ್ಟನೂ, ಸ ಏಕಃ—ಸ್ವತಂತ್ರನೂ ಆದ, ನಾರಾಯಣಃ—

ನಾರಾಯಣನು, ಆಸೀತ್—ಇರುತ್ತಿದ್ದನು. **'ಶ್ರೀರಮಣಿಗೆ ಸುಖವಿತ್ತು'** ಎಂಬ ಶಬ್ದಗಳಿಂದ ಈ ರಹಸ್ಯಪ್ರಮೇಯವನ್ನು ಸೂಚಿಸಿರುವರು.

**ಇಂಥಾ ಮಹಾತತ್ವವಾಳ್ದ ದೇಹವಿರಲು**
**ಚಿತ್ರಜೀವರ ಮೊತ್ತಗಳನೂ**
**ಪೊತ್ತಿಹ ಸತ್ಯಲೋಕದ ಬೊಮ್ಮ ವಿರಜೆಯ**
**ತೀರ್ಥಸ್ನಾನಕೆ ಸಲ್ಲನಲ್ಲಾ!** ॥೩॥

**ಅರ್ಥ:** ಇಂಥಾ—ಈ ವಿಧ ಮಹಿಮೆಯುಳ್ಳ, ಮಹಾತತ್ವವಾಳ್ದ—ಮಹತ್ತತ್ವವನ್ನು ಆಳುವ, ದೇಹವಿರಲು—ದೇಹವಿದ್ದು, ಚಿತ್ರಜೀವರ—ವಿವಿಧ ಜೀವರ, ಮೊತ್ತಗಳನೂ—ಎಲ್ಲ ಸಮೂಹಗಳನ್ನೂ, ಪೊತ್ತಿಹ—ಧರಿಸಿದ (ತನ್ನಲ್ಲಿಟ್ಟುಕೊಂಡ), ಸತ್ಯಲೋಕದ ಬೊಮ್ಮ—ಚತುರ್ಮುಖ ಬ್ರಹ್ಮನು, ವಿರಜೆಯ—ವಿರಜಾನದಿಯ, ತೀರ್ಥಸ್ನಾನಕೆ—ಪವಿತ್ರಸ್ನಾನಕ್ಕೆ (ಅದರಿಂದ ಲಿಂಗಭಂಗವನ್ನು ದೊರಕಿಸಲು) ಸಲ್ಲನಲ್ಲಾ—ಸಮರ್ಥನಲ್ಲವಲ್ಲ! (ತಾನೂ, ತನ್ನಲ್ಲಿರುವ ಇತರ ಜೀವರನ್ನೂ ವಿರಜಾಸ್ನಾನದಿಂದ ಲಿಂಗದೇಹರಹಿತರನ್ನಾಗಿ ಮಾಡಿಕೊಳ್ಳಲು ಅರ್ಹನಲ್ಲ—ಆ ಸ್ವಾತಂತ್ರ್ಯವು ಆತನಿಗಿಲ್ಲ).

**ವಿಶೇಷಾಂಶ:** ಎಲ್ಲ ಜೀವರನ್ನು ತನ್ನಲ್ಲಿಟ್ಟುಕೊಂಡು, ಲಕ್ಷ್ಮೀದ್ವಾರಾ ನಾರಾಯಣನ ಉದರವನ್ನು ಪ್ರವೇಶಿಸುವ ಬ್ರಹ್ಮನೂ ಸಲಿಂಗಿಯೇ ಆಗಿದ್ದಾನೆ. ಆತನ ಲಿಂಗದೇಹವು, ದಗ್ಧವಸ್ತ್ರದಂತೆ ಕಾರ್ಯಸಮರ್ಥವಲ್ಲದಿದ್ದರೂ, ಆತನಿಗೂ ಶ್ರೀಹರಿಯಿಂದಲೇ ಲಿಂಗಭಂಗವಾಗಬೇಕು.

**ಅದರಿಂದ ಇಪ್ಪತ್ತು ಮೂರು ತತ್ವಂಗಳ**
**ಅಧಿಪತಿಗಳ ಕೂಡಿಕೊಂಡು**
**ಮೊದಲ ತತ್ವವನ್ನು ಮೂಲರೂಪದಿ ಕೂಡಿ**
**ಮದನನಯ್ಯಗೆ ತುತ್ತನಿತ್ತ** ॥೪॥

**ಅರ್ಥ:** ಅದರಿಂದ—ಈ ಕಾರಣದಿಂದ, ಇಪ್ಪತ್ತುಮೂರು ತತ್ವಂಗಳ—ಇಪ್ಪತ್ತುಮೂರು ತತ್ವಗಳ, ಅಧಿಪತಿಗಳ—(ತನ್ನ ಸಹಿತ) ನಿಯಾಮಕರನ್ನು (ಅಭಿಮಾನಿದೇವತೆಗಳನ್ನು), ಕೂಡಿಕೊಂಡು—ಸೇರಿಕೊಂಡು, ಮೊದಲತತ್ವ—ಮೊದಲಿನ ಮಹತ್ತತ್ವವನ್ನು, (ತನ್ನ) ಮೂಲರೂಪದಿ ಕೂಡಿ—ತನ್ನ ಉತ್ಪತ್ತಿಗೆ ಕಾರಣವಾದ ತತ್ವದಲ್ಲಿ ಲಯಚಿಂತನೆ ಮಾಡಿ, (ಎಲ್ಲ ತತ್ವಾಭಿ-

ಮಾನಿಗಳಿಂದ ಸಹಿತವಾದ ತನ್ನ ಮೂಲರೂಪದಿಂದ ಸಹಿತನಾಗಿ, ಲಕ್ಷ್ಮೀ-ದ್ವಾರಾ), ಮದನನಯ್ಯಗೆ— **ಪ್ರದ್ಯುಮ್ನನಾಮಕ ಹರಿಗೆ,** ತುತ್ತನಿತ್ತ— ಉಣ್ಣುವ ತುತ್ತಾದನು (ತುತ್ತಾಗಿ ತನ್ನನ್ನೇ ತೆತ್ತುಕೊಂಡನು).

**ಹಿಂದೆ ಬೊಮ್ಮನ ಸೃಜಿಸಿ ಅವನಂಗವಾಗಲೇ**
**ತಿಂದರೆ ತುತ್ತು ಕುಂದುವುದು**
**ಎಂದುದಾಸೀನ ಮಾಡಿದ ಶ್ರೀಕೃಷ್ಣ**
**ಇಂದು ಭುಂಜಿಸಿ ತೇಗುತಿರ್ದ ।।೫।।**

**ಅರ್ಥ:** ಹಿಂದೆ— ಸೃಷ್ಟಿಕಾಲದಲ್ಲಿ (ಸೃಷ್ಟಿಕಾರಣನಾದ ಈ ಪ್ರದ್ಯುಮ್ನನು), ಬೊಮ್ಮನ— ಬ್ರಹ್ಮನನ್ನು, ಸೃಜಿಸಿ— ಸೃಷ್ಟಿಮಾಡಿ, ಅವನಂಗವ— ಅವನ ದೇಹ-ವನ್ನು, ಆಗಲೇ— ಸೃಷ್ಟಿಸಿದ ಕೂಡಲೆ, ತಿಂದರೆ— ತಿಂದುಬಿಟ್ಟರೆ, ತುತ್ತು ಕುಂದು-ವುದು ಎಂದು— ತುತ್ತು ಚಿಕ್ಕದಾಗುವುದೆಂದು (ದೊಡ್ಡತುತ್ತಾಗಲೆಂದು), ಉದಾ-ಸೀನಮಾಡಿದ— ತಿನ್ನದೇ ಉಪೇಕ್ಷೆಮಾಡಿದ, ಶ್ರೀಕೃಷ್ಣ— ಶ್ರೀಹರಿಯು, ಇಂದು — ಈಗ (ಪ್ರಳಯಕಾಲದಲ್ಲಿ), ಭುಂಜಿಸಿ— ತಿಂದು, ತೇಗುತಿರ್ದ— ತೃಪ್ತ-ನಾಗುತ್ತಿರುವನು.

**ವಿಶೇಷಾಂಶ:** ೪-೫ನೇ ನುಡಿಗಳಿಂದ ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರತಿಪಾದಿಸಲಾಗಿರುವ ಶ್ರೀಹರಿಮಹಿಮೆಯನ್ನು ನಿರೂಪಿಸಿರುವರು. ಪ್ರಳಯ-ಕಾಲದಲ್ಲಿ ಸರ್ವವನ್ನು ಭಕ್ಷಿಸಿ ತನ್ನ ಉದರದಲ್ಲಿಟ್ಟುಕೊಳ್ಳುವ ಅಚಿಂತ್ಯಾದ್ಭುತ ಮಹಿಮೆಯದು. *'ಸ ಐಕ್ಷತ ಯದಿ ಹ ವಾವ ಇಮಮಭಿಮಂಸ್ಯೇ ಕನೀಯೋಽನ್ನಂ ಕರಿಷ್ಯೇ ಇತಿ ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ ಯದಿದಂ ಕಿಂ ಚರ್ಚೋ ಯಜೂಂಷಿ ಸಾಮಾನಿ ಛಂದಾಂಸಿ ಯಜ್ಞಾನ್ ಪ್ರಜಾಃ ಪಶೂನ್ ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂವಾ ಅತ್ತೀತಿ ತದದಿತೇರದಿತಿತ್ವಂ'* (ಅಶ್ವಮೇಧಬ್ರಾಹ್ಮಣ).

**ತಾತ್ಪರ್ಯಾರ್ಥ:** ಶ್ರೀಹರಿಯು ಬ್ರಹ್ಮನನ್ನು ಸೃಷ್ಟಿಸಿದೊಡನೆ ಹೀಗೆ ಯೋಚಿಸಿದನು. 'ಈಗಲೇ ಈ ಬ್ರಹ್ಮನನ್ನು ತಿಂದು ಮುಗಿಸಿದರೆ ನನ್ನ ಅನ್ನವು (ಆಹಾರವು) ಸ್ವಲ್ಪವೇ ಆಗುತ್ತದೆ; ಯಥೇಷ್ಟವನ್ನಾಗಿ ಮಾಡಿಕೊಳ್ಳಲು, ಈತ-ನನ್ನು ಸರಸ್ವತಿಯೊಂದಿಗೆ ಕೂಡಿಸುತ್ತೇನೆ; ಅವರಿಬ್ಬರಿಂದ, ಋಗ್ವೇದ, ಯಜುರ್ವೇದ, ಸಾಮವೇದ, ಗಾಯತ್ರ್ಯಾದಿ ಛಂದಸ್ಸು, ಯಜ್ಞ ಇವುಗಳ

ಅಭಿಮಾನಿದೇವತೆಗಳನ್ನೂ, ಪ್ರಜೆಗಳನ್ನೂ, ಪಶುಗಳನ್ನೂ ಬಹುವಾಗಿ ಸೃಷ್ಟಿ ಮಾಡಿಸಿ, ಬ್ರಹ್ಮನು ಸೃಷ್ಟಿಸುವ ಸರ್ವವನ್ನೂ ಪ್ರಳಯಕಾಲದಲ್ಲಿ ತಿನ್ನುತ್ತೇನೆ; ಅದರಂತೆ ಕಲ್ಪಾಂತ್ಯದಲ್ಲಿ ಸರ್ವವನ್ನೂ ತಿಂದನು. ಹೀಗೆ ಎಲ್ಲವನ್ನು ತಿನ್ನುವುದರಿಂದ **'ಅದಿತಿ'** ಎನಿಸುತ್ತಾನೆ, ಬ್ರಹ್ಮನನ್ನು ಸೃಷ್ಟಿಸಿದ ನಂತರ, ಸೃಷ್ಟಿಯನ್ನು ಆತನ ದ್ವಾರಾ ಮುಂದರಿಸಿ, ಸೃಷ್ಟಿಯ ಉದ್ದೇಶವಾದ ಜೀವರ ಸ್ವಗತಿಗಳನ್ನು ಸಾಧಿಸಿ, ನಂತರವೇ ಎಲ್ಲವನ್ನೂ ಲಯಗೊಳಿಸುವೆನೆಂಬ ಸಂಕಲ್ಪವು ಸೃಷ್ಟಿಸುವಾಗಲೇ ಇದ್ದಿತೆಂಬ ಸತ್ಯಸಂಕಲ್ಪನೆಂಬ ಮಹಿಮೆಯನ್ನು ಈ ಶ್ರುತಿಯು ಶ್ರೀಹರಿಗೆ ಹೇಳುತ್ತದೆ. ಸೃಷ್ಟ್ಯಾದಿ ಭಗವದ್ವ್ಯಾಪಾರಗಳು (ಆಯಾ ಕಾಲದಲ್ಲಿ) ಮನಬಂದಂತೆ ವರ್ತಿಸುವ ಉನ್ಮತ್ತನಂತಲ್ಲವೆಂದೂ ತಿಳಿಸುತ್ತದೆ.

**ಸಪ್ತದ್ವೀಪಗಳಲ್ಲಿ ಸುತ್ತ ಮುತ್ತಲಿಹ**
**ಭಕ್ತರಾಶಿಗೆ ಲೆಕ್ಕವಿಲ್ಲ**
**ಅರ್ಥಿಯ ಭಕ್ಷ್ಯಕ್ಕೆ ತಕ್ಕ ಧಾನ್ಯಂಗಳ**
**ಮೊತ್ತಪರ್ವತವ ತಂದಿತ್ತ** **॥೬॥**

**ಅರ್ಥ:** ಸಪ್ತದ್ವೀಪಗಳಲ್ಲಿ—ಜಂಬೂ ಮೊದಲಾದ ಏಳು ದ್ವೀಪಗಳಲ್ಲಿ (ಪೃಥ್ವಿಯಲ್ಲಿ), ಸುತ್ತಮುತ್ತಲಿಹ—ಸರ್ವತ್ರ ಇರುವ, ಭಕ್ತರಾಶಿಗೆ—ಅನ್ನರಾಶಿಗೆ (ಜೀವರಾಶಿಗೆ—ಆ ಎಲ್ಲರೂ ಪ್ರಳಯಕಾಲಕ್ಕೆ ಶ್ರೀಹರಿಗೆ) ಯೋಗ್ಯವಾದ ಅರ್ಥಿಯ ಭಕ್ಷ್ಯಕ್ಕೆ ತಕ್ಕ ಧಾನ್ಯಂಗಳ—(ಜೀವರೂಪ) ಧಾನ್ಯಗಳ; ಮೊತ್ತಪರ್ವತವ—ಒಟ್ಟುಗೂಡಿಸಿದ ರಾಶಿಯನ್ನು, ತಂದಿತ್ತ—(ಬ್ರಹ್ಮದೇವನು) ತಂದೊದಗಿಸಿದನು. (ಪ್ರಳಯಕಾಲಕ್ಕೆ ಎಲ್ಲ ಜೀವರು ನಾನಾ ಮಾರ್ಗಗಳಿಂದ ಬಂದು ಬ್ರಹ್ಮನನ್ನೇ ಸೇರುವರು).

**ವಿಶೇಷಾಂಶ:** (೧) ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರಗಳೆಂಬುವೇ **ಏಳು ದ್ವೀಪಗಳು.**

(೨) ಮಹಾಪ್ರಳಯಕಾಲಕ್ಕೆ ಎಲ್ಲ ಮುಕ್ತಿಯೋಗ್ಯರೂ ಬ್ರಹ್ಮದೇವನನ್ನು ಹೊಂದುತ್ತಾರೆ. ಆ ಒಳಗೆ ಸಾಧನಪೂರ್ತಿಯಾದ ಜೀವರು (ಪ್ರತೀಕಾಲಂಬರು-ಅಪ್ರತೀಕಾಲಂಬನರು ತಮತಮಗೆ ಯೋಗ್ಯವಾದ ಮಹರಾದಿ ಲೋಕಗಳಲ್ಲಿ ಅಥವಾ ಅಮುಕ್ತವೈಕುಂಠಾದಿಗಳಲ್ಲಿ) ಸ್ವಯೋಗ್ಯಸ್ಥಾನಗಳಲ್ಲಿ ಸುಖದಿಂದ ವಾಸವಾಗಿರುವರು. ಆ ಸ್ಥಾನಗಳನ್ನು ಅರ್ಚಿರಾದಿ ಮಾರ್ಗಗಳಿಂದ ಹೊಂದಿರುತ್ತಾರೆ. ನಂತರ ಪ್ರಳಯಕಾಲಕ್ಕೆ ಎಲ್ಲರೂ ಬ್ರಹ್ಮನನ್ನು ಬಂದು

ಸೇರುವ ಮಾರ್ಗವು ಗರುಡ-ಶೇಷ ಮಾರ್ಗಗಳೆಂದು ಎರಡು ಪ್ರಕಾರವಾಗಿರುತ್ತದೆ.

ಗಂಧರ್ವರು, ಸಿದ್ಧರು, ಚಾರಣರು, ಕುಬೇರನಲ್ಲಿಯೂ; ಅಶ್ವಿನೀದೇವತೆಗಳು ಗಂಗಾದಿನದ್ಯಭಿಮಾನಿ ದೇವತೆಗಳು ವರುಣನಲ್ಲಿಯೂ; ಕುಬೇರವರುಣರು ಸೋಮನಲ್ಲಿಯೂ; ಸೋಮ ಮತ್ತು ವಿಷ್ವಕ್ಸೇನ ಮೊದಲಾದವರು ಅನಿರುದ್ಧನಲ್ಲಿಯೂ; ಅನಿರುದ್ಧ ಮತ್ತು ಸನಕಾದಿಗಳು ಕಾಮನಲ್ಲಿಯೂ; ಕಾಮನು ವಾರುಣಿಯಲ್ಲಿಯೂ; ಆಕೆಯು ಶೇಷನಲ್ಲಿಯೂ ಬಂದು ಸೇರುವರು. ಇದು **ಶೇಷಮಾರ್ಗವು.** ನಿರ್ಋತಿ, ಪಿತೃದೇವತೆಗಳು ಮತ್ತು ದೇಹದಿಂದ ಉತ್ಕ್ರಮಣಹೊಂದಿದ ವರ್ಣಾಶ್ರಮಾಚಾರ ನಿರತರಾದ **ಮನುಷ್ಯರು ಯಮಧರ್ಮನಲ್ಲಿಯೂ;** ಯಮಧರ್ಮ, ವೈವಸ್ವತಾದಿ ಮನುಗಳು ಮತ್ತು ಪ್ರಿಯವ್ರತಾದಿ ರಾಜರು ಸ್ವಾಯಂಭುವ ಮನುವಿನಲ್ಲಿಯೂ; ಉಳಿದ ಇತರ ದೇವತೆಗಳು ಅಗ್ನಿಯಲ್ಲಿಯೂ; ಅಗ್ನಿಯು ಸೂರ್ಯನಲ್ಲಿಯೂ; ಋಭುಗಳು ಧರಾದೇವಿಯಲ್ಲಿಯೂ; ಸಾಧ್ಯರು ಮತ್ತು ವಿನಾಯಕರು ಗಣಪತಿಯಲ್ಲಿಯೂ; ಗಣಪತಿ, ಧರಾದೇವಿ ಮತ್ತು ಸೂರ್ಯರು ಬೃಹಸ್ಪತಿಯಲ್ಲಿಯೂ; ಭೃಗು ಮೊದಲಾದ ಋಷಿಗಳು ಮತ್ತು ಪ್ರಜಾಪತಿಗಳು ದಕ್ಷಪ್ರಜೇಶ್ವರನಲ್ಲಿಯೂ; ದಕ್ಷ ಬೃಹಸ್ಪತಿ ಸ್ವಾಯಂಭುವ ಮನು ಮತ್ತು ಮರುದ್ಗಣಗಳು ಇಂದ್ರನಲ್ಲಿಯೂ; ಇಂದ್ರನು ಸೌಪರ್ಣಿಯಲ್ಲಿಯೂ; ಆಕೆಯು ಗರುಡನಲ್ಲಿಯೂ ಬಂದು ಸೇರುವರು. ಇದು **ಗರುಡಮಾರ್ಗವು**. ನಂತರ ಗರುಡಶೇಷರಿಬ್ಬರೂ ಸರಸ್ವತಿಯಲ್ಲಿ, ಆಕೆಯು ಬ್ರಹ್ಮನಲ್ಲಿಯೂ, ಬ್ರಹ್ಮನು ಲಕ್ಷ್ಮೀ ದ್ವಾರಾ ಪರಮಾತ್ಮನಲ್ಲಿಯೂ ಪ್ರವೇಶಿಸುವರು. ಸಕಲ ಸ್ತ್ರೀಯರೂ ತಂತಮ್ಮ ಪತಿಗಳಲ್ಲಿ ಸೇರಿಯೇ ಬರುವರು. ಭಾರತೀ ಮುಖ್ಯಪ್ರಾಣರಿಗೆ ಸರಸ್ವತೀ ಬ್ರಹ್ಮರಾದ ನಂತರವೂ, ಪಾರ್ವತೀ (ಉಮಾ) ರುದ್ರರಿಗೆ ವಾರುಣೀಶೇಷಜನ್ಮದಿಂದಲೂ ಮುಕ್ತಿಯು. ಆದ್ದರಿಂದ ಈ ಕಲ್ಪದಲ್ಲಿ ಮುಕ್ತರಾಗುವವರನ್ನು ಮಾತ್ರ ಇಲ್ಲಿ ಹೇಳಲಾಗಿದೆ. ಉಮಾರುದ್ರರು ಭಾರತೀಮುಖ್ಯಪ್ರಾಣರನ್ನು ಹೊಂದಿದನಂತರ ಲಕ್ಷ್ಮೀದ್ವಾರಾ ಪರಮಾತ್ಮನ ಉದರಪ್ರವೇಶ ಮಾಡುವರೆಂದು ತಿಳಿಯಬೇಕು.

**ನಾನಾ ಫಲಂಗಳು ನಾನಾ ಭಕ್ಷ್ಯಂಗಳು**
**ನಾನಾ ವಿಧದ ಶಾಕಂಗಳನು**

**ನಾನಾ ಕಂದಮೂಲಫಲಂಗಳು ಶ್ರೀಕೃಷ್ಣನ**
**ಸ್ವಾನಂದಕಂದೊದಗಿದವು ॥೭॥**

**ಅರ್ಥ:** ನಾನಾ ಫಲಂಗಳು—(ಹೀಗೆ ಶ್ರೀಹರಿಯ ಭೋಜನಕ್ಕೆ ಬ್ರಹ್ಮನು ಒದಗಿಸಿದ—ವಸ್ತುಸಮುದಾಯವು) ವಿವಿಧಫಲಗಳು, ನಾನಾ ಭಕ್ಷ್ಯಂಗಳು—ಬಹುವಿಧ ಭಕ್ಷ್ಯಗಳು, ನಾನಾವಿಧದ ಶಾಕಂಗಳನು—ಬಹುಪರಿಯ ಶಾಕಗಳು (ಪಲ್ಯೆ ಮೊದಲಾದವು), ನಾನಾಕಂದಮೂಲಫಲಂಗಳು—ವಿವಿಧಕಂದ-ಮೂಲಫಲಗಳು (ಹೀಗೆ ಎಲ್ಲವೂ) ಅಂದು, ಶ್ರೀಕೃಷ್ಣನ—ಪ್ರಳಯಕಾಲದಲ್ಲಿ ಶ್ರೀಹರಿಯ, ಸ್ವಾನಂದಕೆ—ಸ್ವರೂಪಾನಂದದ ಭೋಗಕ್ಕೆ, ಒದಗಿದವು—(ನಿಮಿತ್ತರೂಪದಿಂದ) ಬಂದು ಸೇರಿದವು (ಬ್ರಹ್ಮದೇವನಿಂದ ಒದಗಿಸಲ್ಪಟ್ಟವು).

**ಶ್ರುತಿ ೧**

***ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ।***
***ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ॥*** (ಕಾಠಕೋಪನಿಷದ್ವಾಕ್ಯ)

**ಅರ್ಥ:** ಯಸ್ಯ—ಯಾವ ಶ್ರೀಹರಿಗೆ, ಬ್ರಹ್ಮ—ಚತುರ್ಮುಖನು, ಕ್ಷತ್ರಂ ಚ—ಮುಖ್ಯಪ್ರಾಣನೂ, ಉಭೇ—ಇಬ್ಬರೂ, ಓದನಃ—ಅನ್ನವು, ಭವತಃ—ಆಗುವರೋ, ಯಸ್ಯ—ಯಾವ ಶ್ರೀಹರಿಗೆ, ಮೃತ್ಯುಃ—ರುದ್ರದೇವನು, ಉಪಸೇಚನಂ—ರುಚಿಗಾಗಿ ಸೇವಿಸುವ ಕಾಯಿಪಲ್ಯೆಯೋ ಅಥವಾ ಉಪ್ಪಿನ-ಕಾಯಿಯೋ, ಸಃ—ಅಂಥ ಶ್ರೀಹರಿಯು, ಯತ್ರ—ಎಲ್ಲಿ, ಇತ್ಥಾ—ಈ ಪ್ರಕಾರದಿಂದ (ಇಂಥ ಮಹಿಮೆಯುಳ್ಳವನಾಗಿರುವನೆಂದು), ಕಃ ವೇದ—ಯಾವನು ತಿಳಿಯುವನು? (ಯಾರೂ ಆತನ ಮಹಿಮೆಯನ್ನು ಪೂರ್ಣ-ವಾಗಿ ತಿಳಿಯಲಾರರು).

**ಪದ ೩**

ರಾಗ-ಸೌರಾಷ್ಟ್ರ; ತಾಳ-ಆದಿ

**ಹೆಡತಲೆಯ ಮೃತ್ಯುವೇ ಅಡಿಗಡಿಗೆ ತುಪ್ಪವಾಯಿ-**
**ತೊಡಲೊಂದೊಂದೆಂಬುದೆ ತುತ್ತುಗಳಾದವು**
**ಬಡತನವಿಲ್ಲದ ಜಗದೊಡೆಯನಿತ್ತುಮಾರಾಡಿ**
**ಬಡಿಸಿದಂತೆ ಭಂಜಿಸುವ ಗಡ ॥೧॥**

**ಅರ್ಥ:** ಹೆಡತಲೆಯ—(ಕಬಳಿಸಲು ಸಿದ್ಧವಾಗಿ) ತಲೆಯ ಹಿಂದೆ ನಿಂತಿ-ರುವ, ಮೃತ್ಯುವೇ—ಮೃತ್ಯುದೇವತೆಯೇ, ಅಡಿಗಡಿಗೆ—ಹೆಜ್ಜೆಹೆಜ್ಜೆಗೆ (ತುತ್ತು

ತುತ್ತಿಗೆ), ತುಪ್ಪವಾಯಿತು—(ರುಚಿಕರವಾದ) ತುಪ್ಪದಂತಾಯಿತು; ಒಡಲೊಂದೊಂದೆಂಬುದೆ—(ಪ್ರತಿಜೀವರ) ಒಂದೊಂದು ದೇಹವೆಂಬುದೇ, ತುತ್ತುಗಳಾದವು—(ಶ್ರೀಹರಿಯು ಪ್ರಳಯಕಾಲದ ಉಣ್ಣುವ ಅನ್ನದ) ತುತ್ತುಗಳಾದವು; ಬಡತನವಿಲ್ಲದ—(ಆಹಾರದ ಕೊರತೆಯಿಲ್ಲದ) ಪೂರ್ಣೈಶ್ವರ್ಯಯುತನಾದ, ಜಗದೊಡೆಯನು—ಜಗತ್ಪತಿಯಾದ ಶ್ರೀಹರಿಯು, ಇತ್ತು—(ತನಗೆ) ಕೊಟ್ಟು, ಮಾರಾಡಿ ಬಡಿಸಿದಂತೆ—ರಮಿಸಿ (ರಂಬಿಸಿ—ಮುದ್ದುಮಾಡಿ) ಉಣಿಸುವ ಮಗುವಿನಂತೆ (ಸಂತೋಷದಿಂದ ಉಣಿಸಿದಂತೆ), ಭುಂಜಿಸುವ ಗಡ—ನುಂಗುತ್ತಾನೆ, ಏನಾಶ್ಚರ್ಯ!

**ಮಧುಕೈಟಭರೆಂಬ ಕೊಬ್ಬಿದ ದಾನವರ**
**ಮೈಯೊಳಗಿಪ್ಪ ರೂಪರಸದ**
**ಗಂಧಭರಿತಮೇದದಿಂದ ಮಾಡಿದ ಸೇವೆಗೆ**
**ಶ್ರೀಧರಗೆ ಸ್ವಾದುವಾದ ಮಾಂಸವಾಯಿತು ॥೨॥**

**ಅರ್ಥ:** ಮಧುಕೈಟಭರೆಂಬ—ಮಧು ಮತ್ತು ಕೈಟಭ ಎಂಬ ಹೆಸರಿನ, ಕೊಬ್ಬಿನ—ಮದಿಸಿದ, ದಾನವರ—ದೈತ್ಯರ, ಮೈಯೊಳಗಿಪ್ಪ—ದೇಹದಲ್ಲಿರುವ, ರೂಪರಸದ—ರೂಪರಸಗಳುಳ್ಳ, ಗಂಧಭರಿತ—ಗಂಧಪೂರ್ಣವಾದ, ಮೇದದಿಂದ—ಮೇದಸ್ಸಿನಿಂದ, ಮಾಡಿದ ಸೇವೆಗೆ—ಸಲ್ಲಿಸಿದ ಪೂಜೆಯಲ್ಲಿ, ಶ್ರೀಧರಗೆ—ಶ್ರೀಲಕ್ಷ್ಮೀಪತಿಗೆ, ಸ್ವಾದುವಾದ—ರುಚಿಯಾದ, ಮಾಂಸವಾಯಿತು—ಮಾಂಸದಂತೆ (ದಿವ್ಯಭೋಜನ) ಆಯಿತು.

**ವಿಶೇಷಾಂಶ:** ಶ್ರೀಹರಿಯು ಸರ್ವಭಕ್ಷಕನು. ಆದರೂ ಭಕ್ಷಣದಿಂದ ಉಂಟಾಗಬೇಕಾದ ಸುಖವಿಲ್ಲ—ಸ್ವರೂಪಸುಖಭೋಗದಿಂದಲೇ ನಿತ್ಯಪೂರ್ಣಸುಖಿಯು, ಭಕ್ಷಣಕ್ರಿಯೆಯೂ ಆನಂದದಿಂದಲೇ—ಭಕ್ಷಿಸುವುದೂ ವಸ್ತುಗತ ಸ್ವಸ್ವರೂಪಾತ್ಮಕರಸವನ್ನೇ.

**ಏಳುಕೋಟಿಯೋಜನಪ್ರಮಾಣದಿ ಬೆಳೆದು ತ-**
**ನ್ನೊಳಗೆ ನಾನಾವಿಧ ಪ್ರಾಣಿಗಳ ತುಂಬಿರ್ದ**
**ಕಲಿಮಲವ ಕಳೆವ ಇಳೆಯ ನಮ್ಮಚ್ಯುತಗೆ**
**ಪೊಳೆವ ಪುಣ್ಯ ಮಾಂಸವಾಯಿತು ॥೩॥**

**ಅರ್ಥ:** ಏಳುಕೋಟಿಯೋಜನಪ್ರಮಾಣದಿ ಬೆಳೆದು—ಏಳುಕೋಟಿ ಯೋಜನಪ್ರಮಾಣದ ರೂಪವನ್ನು ತಾಳಿ, ತನ್ನೊಳಗೆ—ತನ್ನ ಉದರದಲ್ಲಿ, ನಾನಾವಿಧ ಪ್ರಾಣಿಗಳ—ವಿವಿಧ ಜೀವರಾಶಿಗಳನ್ನು, ತುಂಬಿರ್ದ—ತುಂಬಿ-ಕೊಂಡಿರುವ, ಇಳೆಯ—ಲೋಕದ (ಪೃಥ್ವಿಯಲ್ಲಿರುವ ಸಕಲರ), ಕಲಿಮಲವ—ದೋಷಗಳನ್ನು (ಪಾಪರೂಪದ ಮಲವನ್ನು), ಕಳೆವ—ಪರಿಹರಿಸಿ ಶುದ್ಧ-ಗೊಳಿಸುವ, ನಮ್ಮ ಅಚ್ಯುತಗೆ—ನಮ್ಮ ಶ್ರೀಹರಿಗೆ, ಪೊಳೆವ ಪುಣ್ಯ—ಶುಭಕರ್ಮವೇ (ಅಥವಾ ವಿರಾಜಿಸುವ ಜ್ಞಾನಾನಂದಾದಿಗಳೇ), ಮಾಂಸ-ವಾಯಿತು—ಆಹಾರವಾಯಿತು.

**ವಿಶೇಷಾಂಶ:** (೧) ಪ್ರಳಯಕಾಲದಲ್ಲಿ ಎಲ್ಲವನ್ನೂ ತನ್ನಲ್ಲಿಟ್ಟುಕೊಂಡು, ತನ್ನನ್ನೇ ಶ್ರೀಹರಿಗೆ ಅನ್ನವನ್ನಾಗಿ ಅರ್ಪಿಸಿದ ಬ್ರಹ್ಮದೇವನ ಶುಭಕರ್ಮವೇ, ಶ್ರೇಷ್ಠ ಆಹಾರವು. ಸರ್ವರ ಸರ್ವಶುಭಕರ್ಮಗಳನ್ನೂ ಶ್ರೀಹರಿಯು ಆದರ-ದಿಂದ ಸ್ವೀಕರಿಸಿ ಭೋಗಿಸುವನು. ವಸ್ತುಗತ ಭಗವದ್ರೂಪಗಳ—**ಸ್ವಬಿಂಬದ ಹಾಗೂ ಮೂಲರೂಪದ ಐಕ್ಯಚಿಂತನೆಯೇ ಅರ್ಪಣವು.**

(೨) ಸಕಲ ದೋಷದೂರನೂ, ಅನ್ಯತ್ರ ಇರುವ ಸರ್ವದೋಷಗಳನ್ನು ಪರಿಹರಿಸುವವನೂ ಆದ ಅಚ್ಯುತನಿಗೆ ಅಶುಭಭೋಗದ ಸಂಭವವೇ ಇಲ್ಲ. ಪ್ರಾಣಿದೇಹಗತ ಮಾಂಸಮಜ್ಜಾದಿಗಳಲ್ಲಿರುವ ವಿಷ್ಣುರೂಪಗಳು ಮಾಂಸಾದಿ-ನಾಮವಾಚ್ಯಚಿದಾತ್ಮಕ ರೂಪಗಳು. ಸ್ಥಿತಿಕಾಲದಲ್ಲಿ, ಜೀವರಿಗೆ ಅವರವರ ಗತಿ-ಪ್ರದನಾಗಲು, ಅಧ್ಯಾತ್ಮಗತಬಹುರೂಪಗಳಿಂದ ಅವರಲ್ಲಿ ಕ್ರೀಡಿಸಿ, ಪ್ರಳಯ ಕಾಲದಲ್ಲಿ, ಆ ಉದ್ದೇಶಪೂರ್ಣವಾದುದರಿಂದಲೋ ಎಂಬಂತೆ, ತೃಪ್ತನಾದವ-ನಂತೆ ತೋರಿ, ತನ್ನ ಅನಂತರೂಪಗಳನ್ನು, ಇಚ್ಛಾಮಾತ್ರದಿಂದ ಮೂಲರೂಪ-ದಲ್ಲಿ ಐಕ್ಯಗೊಳಿಸುತ್ತಾನೆ. ಇದೇ ಶ್ರೀಹರಿಯ ಭೋಜನ. ನಿತ್ಯತೃಪ್ತನಾದ ತಾನು ಪ್ರಳಯಕಾಲದಲ್ಲಿ ಎಲ್ಲವನ್ನೂ ತಿಂದು ತೇಗುತ್ತಾನೆ—ಆಶ್ಚರ್ಯ!

*'ಮಜ್ಜಾಸು ಸ್ಥಿತಃ ಸ ಮಜ್ಜಾಖ್ಯೋ ಮದಂ ಜನಯತೀತಿ ಹ।*
*ಪ್ರಮಾಣಂ ಸಾರಯೇದ್ಯಸ್ಮಾನ್ಮಾಂಸಾಖ್ಯೋ ಮಾಂಸಸಂಸ್ಥಿತಃ॥'*

ಎಂಬ (ಐತರೇಯಭಾಷ್ಯ) ಭಾಗದಲ್ಲಿ, ಮದವನ್ನು ಹುಟ್ಟಿಸುತ್ತ, ಮಜ್ಜಾದಲ್ಲಿ-ರುವ **ವಿಷ್ಣುವು 'ಮಜ್ಜಾ'** ಎಂದು ಕರೆಯಲ್ಪಡುತ್ತಾನೆ; ಪ್ರಮಾಣಗಳನ್ನು (ವೇದಾದಿಗಳನ್ನು) ಪ್ರವರ್ತಿಸುವನಾದ್ದರಿಂದ **'ಮಾಂಸ'**ನೆಂಬ ಹೆಸರುಳ್ಳವನು

ಮಾಂಸದಲ್ಲಿರುತ್ತಾನೆಂದು ಹೇಳಲಾಗಿರುವುದನ್ನು ತದನುಸಾರವಾಗಿ ತಿಳಿಯ-ಬೇಕು. **'ಆತ್ಮನ ಏವಾನುಸವನಂ ಅಂಜಸಾ ವ್ಯತಿರೇಕೇಣ ಅನುಬೋ-ಭೂಯಮಾನಾಶೇಷ ಪುರುಷಾರ್ಥಸ್ವರೂಪಸ್ಯ'** ಇತ್ಯಾದಿ ಭಾಗವತವಾಕ್ಯ-ಗಳೂ ಶ್ರೀಹರಿಯನ್ನು ಅಶೇಷಪುರುಷಾರ್ಥಸ್ವರೂಪನೆಂದೂ ಸ್ವಸ್ವರೂಪಾ-ನಂದವನ್ನು ಸಂತತ ಅನುಭವಿಸುವವನೆಂದೂ ಹೇಳುತ್ತವೆ.

(೩) ಗರುಡಶೇಷಮಾರ್ಗಗಳಿಂದ ಬಂದು ಬ್ರಹ್ಮನನ್ನು ಸೇರಿದ ಸರ್ವ-ರನ್ನೂ, ಸಕಲ ಜಗತ್ತನ್ನೂ ತನ್ನುದರದಲ್ಲಿಟ್ಟು ಮಲಗುವ ಶ್ರೀಹರಿಯು, ಏಳು ಕೋಟಿಯೋಜನ ಪರಿಮಿತ ಬಾಲರೂಪದಿಂದ ವಟಪತ್ರದ ಮೇಲೆ ಶಯನ ಮಾಡುವನು. ಹಿಂದಿನ ಪದದ ೬ನೇ ನುಡಿಯ ವಿಶೇಷ ಭಾಗದ ಪ್ರಮೇಯ-ವನ್ನು ಸಹ ಒಳಗೊಂಡ ಶ್ರೀಪುರಂದರದಾಸರ ಮಕ್ಕಳು ಗುರುರಾಯರು **(ಗುರು ಪುರಂದರವಿಟ್ಠಲದಾಸರು)** ಅಂದಿರುವ ಮಾತುಗಳು ಮನನೀಯ-ವಾಗಿದೆ. ಅದು ಹೀಗಿದೆ:

*ಉತ್ತಮರಲಿ ನೀಚರ ಲಯ ದೇವತೆಗಳಿಗೆ*
*ಧನಪವಿಷ್ವಕ್ಸೇನಗೆ ವರುಣ*
*ವರುಣಗೆ ಚಂದ್ರ ಚಂದ್ರಗೆ ಅನಿರುದ್ಧ*
*ಅನಿರುದ್ಧ ಸನಕಾದಿಗಳಿಗೆ ಕಾಮ*
*ಕಾಮಗೆ ವಾರುಣಿ ವಾರುಣಿಗೆ ಶೇಷ*

ಇದು **ಶೇಷಮಾರ್ಗವು॥** ಅವಶಿಷ್ಟದೇವತೆಗಗ್ನಿ ಅಗ್ನಿಗೆ ಆದಿತ್ಯ। ಸೂರ್ಯ-ಗಾಕಾಶ ಪೃಥಿವಿಗಭಿಮಾನಿಗೆ ಗುರು। **ಪುರುಷೋತ್ತಮರು** ಸರ್ವಪಿತರು। ನಿರ್ಋತಿಗೆ ಯಮನು ಯಮ ಕೆಲವು ಮನುಗಳು। ಪ್ರಿಯವ್ರತನಿಗೆ ಸ್ವಾಯಂ-ಭುವ ಭೃಗ್ವಾದಿಗೆ। ದಕ್ಷ ಸ್ವಾಯಂಭು ದಕ್ಷ ಗುರುಮರುತರಿಗೆ ಇಂದ್ರ। ಇಂದ್ರಗೆ ಸೌಪರಣಿ ಸೌಪರಣಿಗೆ ಗರುಡ **ಗರುಡಮಾರ್ಗ**ವಿದು॥ ಗರುಡ ಶೇಷಗೆ ವಾಣಿ ವಾಣಿಗೆ ಚತುರ್ಮುಖನು। ಆತಗೆ ಪುನ್ನಾಮಕಬೊಮ್ಮ ಆತಗೆ ಕಾಲಬೊಮ್ಮ। ಪುನ್ನಾಮಕಗೆ ಸಿರಿದೇವಿ ಸಿರಿದೇವಿಗೆ ಅಚ್ಯುತನ ಅತಿಸಾಮೀಪ್ಯದಿ ಲಯವು। ಬೊಮ್ಮಾದಿಗಳನು ಅವ್ಯಾಕೃತದ ವಿರಜೆಯಲ್ಲಿ ಮುಳುಗಿಸಿ ಲಿಂಗಶರೀರ ಭಂಗವನ್ನು ಮಾಡಿ। ಉದರದೊಳಿಟ್ಟುಕೊಂಡು ಪ್ರಳಯೋದಕದಿ। ಸಿರಿಯಾಗೆ ವಟಪತ್ರವಾಗೆ। **ಏಳುಕೋಟಿಯೋಜನಮಿತಬಾಲಕನಾಗಿ ದುರ್ಗೆ** ತಮವ್ಯಾಪಿಸೆ ಆಲದೆಲೆಯ ಮೇಲೆ **ಗುರುಪುರಂದರವಿಠಲ** ಪವಡಿಸಲು॥ ಇತ್ಯಾದಿ.

**ಪದ ೪**

ರಾಗ-ಗೌಳಿಪಂತು; ತಾಳ-ರೂಪಕ

**ದೇವ ಪೂರ್ವದೇವ ಉಪದೇವ ಭೂಮಿ**
**ದೇವ ದಾನವ ವಿವರವನೆಲ್ಲ**
**ಜೀವರ ಪಾವನವಿಲ್ಲದ ದಿವ್ಯದೇಹಂಗಳ**
**ಭಾವನೆಯ ಕೊಟ್ಟು ಬಾಹ್ಯವಿಷಯವಾಯಿತು ॥೧॥**

**ಅರ್ಥ:** ದೇವ—ದೇವತೆಗಳು, ಪೂರ್ವದೇವ—ದೈತ್ಯರು, ಉಪದೇವ—ಗಂಧರ್ವರು, ಭೂಮಿದೇವ—ಬ್ರಾಹ್ಮಣರು, ದಾನವ—ದಾನವರು, ವಿವರ-ವನೆಲ್ಲ—(ಹೀಗೆ ವಿವಿಧಜೀವರಾಶಿಗಳ) ವಿಸ್ತಾರವನ್ನೆಲ್ಲ, ಪಾವನವಿಲ್ಲದ ಜೀವರ—(ಪ್ರಕೃತಿಯಿಂದ ಆಚ್ಛಾದಿತರಾದ) ಅತ ಏವ ಅಪವಿತ್ರರಾದ ಜೀವರುಗಳ, ದಿವ್ಯದೇಹಂಗಳ ಭಾವನೆಯ ಕೊಟ್ಟು—ಶುದ್ಧಸ್ವರೂಪಗಳನ್ನು ಆವಿರ್ಭಾವ-ಗೊಳಿಸಿ (ಪ್ರಾಕೃತ ಹೊದ್ದಿಕೆಗಳನ್ನು ತೊಲಗಿಸಿ, ಪಾವನಗೊಳಿಸಿ), ಬಾಹ್ಯ ವಿಷಯವಾಯಿತು—(ಶ್ರೀಹರಿಯ ಮೂಲರೂಪವು) ಜೀವಸ್ವರೂಪಗಳಿಂದ ಭಿನ್ನವಾಗಿಯೇ (ಬಾಹ್ಯ—ಪೃಥಕ್ಕಾಗಿ) ವಿರಾಜಿಸಿತು. **ಅಥವಾ** ಜೀವರಿಗೆ ಸ್ವ-ಸ್ವರೂಪಗಳನಿತ್ತ ಶ್ರೀಹರಿಗೆ, ಜೀವಸಮೂಹವು ತನ್ನಿಂದ ಭಿನ್ನವಾಗಿ (ತನ್ನ ಹೊರಗೆ) ಜ್ಞಾನವಿಷಯವಾಗಿಯೇ ಉಳಿಯಿತು—ಸರ್ವಜ್ಞನಾದ ಶ್ರೀಹರಿಯು ಪ್ರಳಯಕಾಲದಲ್ಲಿ ಸಹ ಆ ಎಲ್ಲವನ್ನೂ ನೋಡುತ್ತಲೇ ಇರುವನು.

**ಏಳು ಸಾಗರದೊಳು ತುಂಬಿರ್ದ ಜೀವರ**
**ಜಾಲಂಗಳಿಗೆ ಲೆಕ್ಕವಿಲ್ಲ**
**ಸಾಲಾಗಿ ವನವನದಿ ಸಂಚರಿಸುವ ಮೃಗಗಳ**
**ನೋವನಾರು ಬಣ್ಣಿಪರು ॥೨॥**

**ಅರ್ಥ:** ಏಳುಸಾಗರದೊಳು—ಸಪ್ತಸಮುದ್ರಗಳಲ್ಲಿ, ತುಂಬಿರ್ದ—ತುಂಬಿ-ರುವ, ಜೀವರ ಜಾಲಂಗಳಿಗೆ—ಪ್ರಾಣಿಸಮೂಹಗಳಿಗೆ, ಲೆಕ್ಕವಿಲ್ಲ—ಗಣನೆ-ಯಿಲ್ಲ (ಅಸಂಖ್ಯಾತವಾಗಿವೆ); ಸಾಲಾಗಿ—ಸಾಲುಸಾಲಾಗಿ, ವನವನದಿ—ಪ್ರತಿಅರಣ್ಯದಲ್ಲಿ, ಸಂಚರಿಸುವ—ತಿರುಗುವ (ಸುತ್ತುವ), ಮೃಗಗಳ—ಮೃಗ-ಗಳ, ನೋವನು—ದುಃಖವನ್ನು, ಆರು ಬಣ್ಣಿಪರು—ಯಾರು ವಿವರಿಸು-ವರು? (ಸಾಧ್ಯವಿಲ್ಲ) ಪ್ರಾಕೃತ ದೇಹವಿಯೋಗಕಾಲದಲ್ಲಿ ಸಕಲ ಪ್ರಾಣಿಗಳು

ಅನುಭವಿಸುವ ವೇದನೆಯನ್ನು, ಬಣ್ಣಿಪರು ಆರು—ಯಾರು ವರ್ಣಿಸಲು ಸಮರ್ಥರು?

**ಆದಿಪುರುಷನಿಂತು ತನ್ನ ಭೋಜನಕೆ**
**ಸಾಧನವಾದ ದ್ರವ್ಯಗಳ**
**ಶ್ರೀದೇವಿಯರೆ ಸ್ವಯಂಪಾಕಿಯಾಗಿರಲು**
**ಎದೆಕಿಚ್ಚಿನ ಜ್ವಾಲೆಯಲ್ಲಿ** **॥೩॥**

**ಅರ್ಥ:** ಇಂತು—ಹೀಗೆ, ಆದಿಪುರುಷನು—ಶ್ರೀಹರಿಯು, ತನ್ನ ಭೋಜನಕೆ—ತನ್ನ ಊಟಕ್ಕೆ, ಸಾಧನವಾದ ದ್ರವ್ಯಗಳ—ಉಪಕರಣವಸ್ತುಗಳನ್ನು, ಶ್ರೀದೇವಿಯರೆ—ಮಹಾಲಕ್ಷ್ಮೀದೇವಿಯೇ, ಸ್ವಯಂಪಾಕಿಯಾಗಿರಲು—ಸಾಕ್ಷಾತ್ ಅಡಿಗೆಯವಳಾಗಿ ಸಿದ್ಧಗೊಳಿಸುತ್ತಿರಲು, ಎದೆಕಿಚ್ಚಿನ ಜ್ವಾಲೆಯಲ್ಲಿ—ಉತ್ಕಟ ಪ್ರೇಮರೂಪದ ಅಗ್ನಿಯಲ್ಲಿ, (ಮುಂದೆ ೫ನೇ ನುಡಿಯಿಂದ ವಾಕ್ಯಪೂರ್ತಿಯಾಗುತ್ತದೆ).

**ಲವಣೇಕ್ಷುಮದ್ಯಸರ್ಪಿದಧಿಕ್ಷೀರ ರ-**
**ಸವ ಕೂಡಿ ಹೇಮಾಂಡವೆಂಬ**
**ತವೆಯದ ಭಾಂಡದೊಳಿಟ್ಟು ಪಾಕವ ಮಾಡಿ**
**ತವಕದಿಂದೊಂದೆ ತುತ್ತಿನಲಿ** **॥೪॥**

**ಅರ್ಥ:** ಲವಣೇಕ್ಷುಮದ್ಯಸರ್ಪಿದಧಿಕ್ಷೀರರಸವ ಕೂಡಿ—ಲವಣ, ಇಕ್ಷು, ಸುರೆ, ಘೃತ, ದಧಿ, ಕ್ಷೀರಗಳೆಂಬ ಆರು ದ್ರವ(ಜಲ)ಗಳಿಂದ ಕೂಡಿಸಿ, ಹೇಮಾಂಡವೆಂಬ—ಸುವರ್ಣಾತ್ಮಕಬ್ರಹ್ಮಾಂಡವೆಂಬ, ತವೆಯದ ಭಾಂಡದೊಳಿಟ್ಟು—(ಅಗಲವಾದ) ಪಾತ್ರೆಯಲ್ಲಿ ಹಾಕಿ, ಪಾಕವ ಮಾಡಿ—ಬೇಯಿಸಿ (ಪ್ರಳಯಕಾಲದಲ್ಲಿ, ೧ನೇ ನುಡಿಯಲ್ಲಿ ಹೇಳಿದ ಎಲ್ಲ ಪ್ರಾಣಿಗಳನ್ನೂ ಪಾಕಮಾಡಿ), ತವಕದಿಂದ—ಲಗುಬಗೆಯಿಂದ (ಪ್ರೀತಿಯಿಂದ), ಒಂದೇ ತುತ್ತಿನಲಿ—ಒಂದು ತುತ್ತುಮಾಡಿ ಬಡಿಸಿದುದನ್ನು, (ಮುಂದಿನ ನುಡಿಯ **'ಭುಂಜಿಸಿದ'** ಎಂಬುದರಿಂದ ಅನ್ವಯ).

**ಭುವನವ್ಯಾಪ್ತವಾದ ಸ್ಥೂಲದೇಹದ ಬಾಯ**
**ವಿವರದಿ ತೆರೆದು ಭುಂಜಿಸಿದ**
**ಪವನ ತನ್ನಯ್ಯನುಂಬ ಸಂಭ್ರಮಕೆ ದೇಹ**
**ಬೆವರದಂತೆ ಅಡಿಗಡಿಗೆ ಬೀಸೆ** **॥೫॥**

**ಅರ್ಥ:** ಭುವನವ್ಯಾಪ್ತವಾದ— ಬ್ರಹ್ಮಾಂಡವನ್ನೂ ವ್ಯಾಪಿಸಿದ, ಸ್ಥೂಲ ದೇಹದ ಬಾಯ— ದೊಡ್ಡದೇಹದ (ವ್ಯಾಪ್ತರೂಪದ) ಬಾಯನ್ನು, ತೆರೆದು— ತೆಗೆದು, ವಿವರದಿ— (ಅದರ) ಗೂಡಿನಲ್ಲಿ, ಭುಂಜಿಸಿದ— ನುಂಗಿದನು (ಅಥವಾ ಬಾಯ ವಿವರದಿ ತೆರೆದು— ಬಾಯನ್ನು ಅಗಲವಾಗಿ ತೆಗೆದು, ಭುಂಜಿಸಿದ); ಪವನ— ವಾಯುದೇವನು, ತನ್ನಯ್ಯ— ತನ್ನ ತಂದೆಯು, ಉಂಬ ಸಂಭ್ರಮಕೆ — ಉಣ್ಣುವ ಭರದಿಂದ, ದೇಹ— ಆತನ ದೇಹವು, ಬೆವರದಂತೆ— ಬೆವರು ಬರದಂತೆ (ಆಯಾಸವಾಗದಿರಲೆಂಬಂತೆ), ಅಡಿಗಡಿಗೆ— ಮೇಲಿಂದ ಮೇಲೆ, ಬೀಸೆ— ಗಾಳಿ ಹಾಕುತ್ತಿರಲು; (ಮುಂದಿನ ನುಡಿಯಿಂದ ಅನ್ವಯವು).

**ನವಸಿದ್ಧಾನ್ನವ ಜಾಲವೆಂಬ ಪಾನೀ**
**ಯವನು ಕೊಂಡಾಚಮನವ ಮಾಡಿ**
**ಇದು ಜೀರ್ಣವಪ್ಪಂತೆ ಸ್ವರ್ಣದಜಾಂಡವನೆ**
**ಭಸ್ಮಮಾಡಿ ಮತ್ತೆ ಸೇವಿಸಿದ ॥೬॥**

**ಅರ್ಥ:** ನವಸಿದ್ಧಾನ್ನವ— ಆಗತಾನೆ ಸಿದ್ಧಗೊಳಿಸಿದ ಅನ್ನವನ್ನೂ, ಜಾಲ-ವೆಂಬ ಪಾನೀಯವನು— ಶುದ್ಧೋದಸಮುದ್ರ ಜಲವನ್ನೂ **(ಅಥವಾ ಮಾಯಾ** (ಅವಿದ್ಯೆ)ಯೆಂಬ ನೀರನ್ನು), ಕೊಂಡು ಸ್ವೀಕರಿಸಿ ಆಚಮನವ ಮಾಡಿ— (ನಂತರ) ಆಚಮನಮಾಡಿ, ಇದು— ಉಂಡ ಅನ್ನವು, ಜೀರ್ಣವಪ್ಪಂತೆ ಜೀರ್ಣವಾಗುವಂತೆ, ಸ್ವರ್ಣದಜಾಂಡವನೆ— ಸುವರ್ಣಬ್ರಹ್ಮಾಂಡವನ್ನು, ಭಸ್ಮ ಮಾಡಿ— ಸುಟ್ಟು ಬೂದಿಯನ್ನಾಗಿ ಮಾಡಿ, ಮತ್ತೆ ಸೇವಿಸಿದ— (ಆ ಭಸ್ಮವನ್ನು) ಆಮೇಲೆ ನುಂಗಿದನು.

**ಕುದಿವ ಬಾಹ್ಯೋದಕವೆಂಬ ಕಷಾಯವ**
**ಮುದದಿಂದ ಕೊಂಡು ತೇಗುತಲಿ**
**ಪದುಮೆಯೊಡನೆ ಇನ್ನು ಪವಡಿಸಬೇಕೆಂದು**
**ಬುಧಜನಬಂಧು ಬಯಸಿದ ॥೭॥**

**ಅರ್ಥ:** ಕುದಿವ— ಕಾದ (ಕುದಿಯುತ್ತಿರುವ), ಬಾಹ್ಯೋದಕವೆಂಬ— ಬ್ರಹ್ಮಾಂಡದ ಹೊರಗಿರುವ (ಆವರಣರೂಪದ) ಜಲವೆಂಬ, ಕಷಾಯವ— ಕಷಾಯವನ್ನು, ಮುದದಿಂದ— ಸಂತೋಷದಿಂದ, ಕೊಂಡು— ಕುಡಿದು, ತೇಗುತಲಿ— ತೇಗುತ್ತ (ತೃಪ್ತನಂತೆ ತೋರುತ್ತ), ಪದುಮೆಯೊಡನೆ— ಲಕ್ಷ್ಮೀ-

ದೇವಿಯೊಂದಿಗೆ, ಇನ್ನು—ನಂತರ, ಪವಡಿಸಬೇಕೆಂದು—ಮಲಗಬೇಕೆಂದು, ಬುಧಜನಬಂಧು—ಜ್ಞಾನಿಗಳ ನಿಜಬಂಧುವಾದ ಶ್ರೀಹರಿಯು, ಬಯಸಿದ—ಇಚ್ಛಿಸಿದನು.

**ವಿಶೇಷಾಂಶ:** (೧) ಶ್ರೀಹರಿಯ ಭೋಜನವು ಅತ್ಯದ್ಭುತವಾದುದು. ಅನಂತಜೀವರಾಶಿಗಳ ಸಮೇತವಾದ ಬ್ರಹ್ಮಾಂಡವನ್ನೂ ಅದರ ಆವರಣಗಳನ್ನೂ ತಿಂದುತೇಗುವುದು ಆಶ್ಚರ್ಯವಲ್ಲವೇ! ಇವುಗಳೇ ಭೋಜ್ಯವಸ್ತುಗಳು—ಶ್ರೀದೇವಿಯೇ ಭೋಜನವನ್ನು ಸಿದ್ಧಗೊಳಿಸುವ ಅಡುಗೆಯವಳು. ಸಿದ್ಧಗೊಳಿಸುವ ಕ್ರಮ, ಅದಕ್ಕಾಗಿ ಉಪಯೋಗಿಸುವ ಆಕೆಯ ಉದ್ರಿಕ್ತಪ್ರೇಮರೂಪದ ಅಗ್ನಿ, ಅತಿವಿಲಕ್ಷಣಗಳಾದ ಪಾನೀಯ, ಭಸ್ಮಸೇವನೆ, ಕಷಾಯಾದಿಗಳು ರಮಾನಾರಾಯಣರ ದಿವ್ಯಪ್ರಳಯಲೀಲೆಯನ್ನು ಲೌಕಿಕಕ್ರಮದಿಂದ ನಿರೂಪಿಸುತ್ತವೆ—ಅವರೀರ್ವರ ಅಲೌಕಿಕದಾಂಪತ್ಯದ ಜ್ಞಾನಾರ್ಥವಾಗಿ.

(೨) ಪ್ರಳಯಕಾಲವೆಂಬುದು ಶ್ರೀಹರಿಗೆ ರಾತ್ರಿಯಿದ್ದಂತೆ; ರಾತ್ರಿಯೇ ಅಲ್ಲ. ಮಲಗಬೇಕೆಂದು ಇಚ್ಛಿಸುವುದು ಶ್ರಮಪರಿಹಾರಕ್ಕಲ್ಲ—ಸೃಷ್ಟಿ, ಸ್ಥಿತಿ ಲಯಾದಿಗಳನ್ನು ಇಚ್ಛಾಮಾತ್ರದಿಂದ ಲೀಲೆಗಾಗಿ ನಡೆಸಿದ ಶ್ರೀಹರಿಗೆ ಶ್ರಮವೆಲ್ಲಿಂದ ಬಂತು! ಸಕಲ ದೋಷದೂರನಿಗೆ ಶ್ರಮಾದಿದೋಷಗಳು ಸರ್ವಥಾ ಇಲ್ಲವೇ ಇಲ್ಲ. ರಮೆಯೊಂದಿಗೆ ಪವಡಿಸಲು ಬಯಸಿದ್ದು ಆಕೆಯಿಂದ ಸುಖವನ್ನು ಹೊಂದಲಿಕ್ಕಲ್ಲ; ಆಕೆಗೆ ಸುಖಪ್ರದನಾಗಲು. ಸ್ವರಮಣನಾದ ಶ್ರೀಹರಿಗೆ ರಮೆಯಿಂದ ಸುಖವೇ? ಶ್ರೀಹರಿಯ ಈ ಪ್ರಕಾರದ ಪ್ರವೃತ್ತಿಯು, ಮುಂದೆ ಸೃಷ್ಟರಾಗುವ ಬ್ರಹ್ಮಾದಿಜೀವರ ಪ್ರವೃತ್ತಿಸೂಚಕವು—ನಿಯಾಮಕ ವ್ಯಾಪಾರವು ಸತ್ವಸತ್ವಮಹಾಸತ್ವಮಯವಾದ ದೇಹವುಳ್ಳ ಬ್ರಹ್ಮದೇವನು, ತನ್ನ ದೇಹವು ಕಶ್ಮಲಶೂನ್ಯವಾಗಿದ್ದರೂ, ಮಲವನ್ನು ಸ್ವೇಚ್ಛೆಯಿಂದ ನಿರ್ಮಿಸಿ ಪ್ರಾತಃಕಾಲದಲ್ಲಿ ಮಲವಿಸರ್ಜನೆ ಶೌಚಾದಿಗಳನ್ನು ಮಾಡಿ, ಮುಂದೆ ಸೃಷ್ಟರಾಗುವ ಪ್ರಜೆಗಳಿಗೆ ಸಂಪ್ರದಾಯವನ್ನು ವಿಧಿಸುವಂತೆ.

(೩) 'ಸ್ಥೂಲದೇಹದ ಬಾಯ ವಿವರದಿ' ಎಂಬಲ್ಲಿ ಸ್ಥೂಲಶಬ್ದವು, 'ಮಹಾನ್—ದೊಡ್ಡದು—ಅದ್ಭುತವಾದುದು' ಎಂಬರ್ಥವುಳ್ಳದ್ದು. ಪ್ರಾಕೃತದೇಹದ ಮುಖವೆಂದರ್ಥವಲ್ಲ. ಶ್ರೀಹರಿಗೆ, ಎಂದೂ ಯಾವ ಕಾರಣದಿಂದಲೂ ಪ್ರಾಕೃತದೇಹವೆಂಬುದು ಇಲ್ಲವೇ ಇಲ್ಲ. ಆತನ ಅನಂತಾನಂತರೂಪಗಳೆಲ್ಲವೂ ಸಚ್ಚಿದಾನಂದಾತ್ಮಕವಾದವುಗಳೇ.

**ಪದ ೫**

ರಾಗ-ತ್ವರಿತ; ತಾಳ-ಆಟ

**ಒಂದೊಂದು ನಿಮಿಷದಲಿ ಅಂದದಲುಂಡು ತೇಗಿ**
**ಎಂದೆಂದು ನಂದಿಪ ನಮ್ಮ ಮುಕುಂದನೆತ್ತು**
**ವಂದಿಷ್ಟುದುಃಖದಲಿರೆ ಕಾಲ ಸುಡಿಸಿ ಬಲು-**
**ದಂದುಗವನುಂಬ ಜೀವವೃಂದವಿದೆಂತು ॥೧॥**

**ಅರ್ಥ:** ಒಂದೊಂದು ನಿಮಿಷದಲಿ—ಒಂದೊಂದು ಕ್ಷಣದಲ್ಲಿ (ಕಾಲ ವಿಶೇಷದಲ್ಲಿ ಮಾತ್ರ), ಅಂದದಲಿ—ಸಂತೋಷದಿಂದ, ಉಂಡು—ಭೋಜನ-ಮಾಡಿ, ತೇಗಿ—ತೃಪ್ತನಾಗುವ, (ಆದರೂ) ಎಂದೆಂದು—ಸದಾ, ನಂದಿಪ—ತೃಪ್ತನೇ ಆಗಿರುವ (ಆನಂದಪೂರ್ಣನಾದ), ನಮ್ಮ—ನಮ್ಮ ಪ್ರಭು, ಮುಕುಂದನೆತ್ತು—ಶ್ರೀಹರಿಯೆಲ್ಲಿ, ವಂದಿಷ್ಟುದುಃಖದಲಿರೆ—ಅಲ್ಪದುಃಖ-ವಾದರೂ (ಅಲ್ಪವಾದ ಕಾಮಾಲೆ ಆದಮಾತ್ರಕ್ಕೆ), ಕಾಲ ಸುಡಿಸಿ—(ಮೊಸರು ಅರಿಸಿನಗಳನ್ನು ಕಾಲಿಗೆ ಹಚ್ಚಿಸಿಕೊಂಡು) ಕಾಲಿಗೆ ಬರೆಕೊಡಿಸಿಕೊಂಡು; ಬಲುದಂದುಗವನುಂಬ—ಬಹಳ ದುಃಖಪಡುವ; ಜೀವವೃಂದವಿದೆಂತು—ಜೀವಸಮೂಹವೆಲ್ಲಿ! (ಜೀವೇಶ್ವರರಲ್ಲಿ ಅದೆಷ್ಟು ಮಹದಂತರ!)

**ಒಂದೊಂದು ಗುಣಕ್ಕೆ ಲೆಕ್ಕವಿಲ್ಲೆಂಬ ಮಹಿಮೆ ಬಲು**
**ಚಂದವಾಯಿತು ಇಂದಿರೆಯರಸನಲ್ಲಿ**
**ಹಿಂದೆ ಇಂದು ಮುಂದನಂತಕಾಲದಿ ಸೃಷ್ಟಿಸುವ-**
**ಗೊಂದಿಷ್ಟು ಸ್ರಷ್ಟೃತ್ವಗುಣನಂತವಲ್ಲವೇ ॥೨॥**

**ಅರ್ಥ:** ಒಂದೊಂದು ಗುಣಕೆ—(ಶ್ರೀಹರಿಯ ಅನಂತಗುಣಗಳಲ್ಲಿ) ಪ್ರತಿ-ಯೊಂದು ಗುಣಕ್ಕೂ, ಲೆಕ್ಕವಿಲ್ಲೆಂಬ ಮಹಿಮೆ—ಮಿತಿಯಿಲ್ಲವೆಂಬ (ಅನಂತ-ವೆಂಬ) ಮಹಿಮೆ, ಬಲು ಚಂದವಾಯಿತು—ಬಹುಸ್ಪಷ್ಟವಾಯಿತು; ಇಂದಿರೆ-ಯರಸನಲ್ಲಿ—ರಮಾರಮಣನಲ್ಲಿ, ಹಿಂದೆ ಇಂದು ಮುಂದೆ—ಭೂತ, ವರ್ತ-ಮಾನ, ಭವಿಷ್ಯಗಳೆಂಬ, ಅನಂತಕಾಲದಿ—(ಅಪಾರವಾದ—ಆದ್ಯಂತರಹಿತ) ಸರ್ವಕಾಲದಲ್ಲಿ (ಎಂದೆಂದಿಗೂ), ಸೃಷ್ಟಿಸುವಗೆ—ಜಗತ್ತನ್ನು ಸೃಷ್ಟಿಸುವಗೆ ಶ್ರೀಹರಿಗೆ, ಒಂದಿಷ್ಟು ಸ್ರಷ್ಟೃತ್ವಗುಣ—ಈ ಒಂದು ಸೃಷ್ಟಿಯನ್ನು ಮಾಡಿದ-ನೆಂಬ ಸೃಷ್ಟಿಕರ್ತೃತ್ವಗುಣವು, ಅನಂತವಲ್ಲವೇ—(ಪೂರ್ಣ—ಅಪರಿಮಿತ) ನಿತ್ಯವಲ್ಲವೇ!

**ಇದೇ ರೀತಿಯಲ್ಲಿ ರಕ್ಷಕತ್ವ ಶಿಕ್ಷಕತ್ವ ಮೋಕ್ಷ-**
**ಪದದ ದಾತೃತ್ವಾದಿ ಗುಣಗಣವೊಂದೊಂದೇ**
**ಪದುಮನಾಭನ ಬಲಾನಂತವಾಗದೆ ಬಿಡದೆ**
**ಅದುಭುತವಲ್ಲವೆ ನಮ್ಮಿನಯ ನಾಟಕವ ಮಾಡುವ**
**ಮಾಟ ಖಳರೆದೆಯ ಘಾಟಾ** ॥೩॥

**ಅರ್ಥ:** ಇದೇ ರೀತಿಯಲ್ಲಿ—ಈ ರೀತಿಯಿಂದಲೇ, ರಕ್ಷಕತ್ವ ಶಿಕ್ಷಕತ್ವ ಮೋಕ್ಷಪದದ ದಾತೃತ್ವಾದಿ—ಪಾಲಿಸುವುದು, ಶಿಕ್ಷಿಸುವುದು, ಮೋಕ್ಷಸ್ಥಾನ-ವನ್ನು ಕೊಡುವುದು ಮೊದಲಾದ, ಗುಣಗಣ—ಗುಣಸಮೂಹದ, ಒಂದೊಂದೇ—ಒಂದೊಂದು ಗುಣವೂ, ಪದುಮನಾಭನ—ಶ್ರೀಹರಿಯ, ಬಲ —ಸಾಮರ್ಥ್ಯವೂ, ಅನಂತವಾಗದೆ ಬಿಡದೆ—ಅನಂತವೆಂದೇ ಸಿದ್ಧವಾಗುತ್ತದೆ (ತಪ್ಪದೆ ಸಿದ್ಧವಾಗುತ್ತದೆ); ನಮ್ಮ ಇನಯ—ನಮ್ಮ ಸ್ವಾಮಿಯು, ನಾಟಕವ ಮಾಡುವ ಮಾಟ—ಸೃಷ್ಟ್ಯಾದಿರೂಪನಾಟಕವನ್ನಾಡಿ (ವಿವಿಧರೂಪಗಳಿಂದ ನಡೆಸಿ) ತೋರುವ ಸೊಗಸು; ಅದುಭುತವಲ್ಲವೆ—ಆಶ್ಚರ್ಯಕರವಲ್ಲವೇ! ಖಳರೆದೆಯ ಘಾಟಾ ದುರ್ಜನರ ಎದೆಮೆಟ್ಟಿನ ಘಟ್ಟ.

[ಕರ್ತೃತ್ವಾದಿ ಯಾವ ಧರ್ಮಗಳೂ ಇಲ್ಲದ ನಿರ್ವಿಶೇಷವಸ್ತುವೆಂದು ಬ್ರಹ್ಮನನ್ನು ತಿಳಿಯುವ ತಮೋಯೋಗ್ಯರ ಹೃದಯಭೇದಕವಲ್ಲವೇ? ಮತ್ತು ಅದ್ಭುತವಾದ ಸೃಷ್ಟ್ಯಾದಿ ಲೀಲೆಗಳನ್ನು ಗ್ರಹಿಸಲಾಗದೆ ಜ್ಞಾನಿಗಳು ಸಹ ಆಶ್ಚರ್ಯಚಕಿತರಾಗುವರಲ್ಲವೇ? ***'ಮುಹ್ಯಂತಿ ಯಂ ಸೂರಯಃ'*** ಎಂಬಲ್ಲಿ ಹೇಳಿದಂತೆ].

**ವಿಶೇಷಾಂಶ:** ಶ್ರೀಹರಿಯ ದೇಹ ಬೇರೆ—ಗುಣಗಳು ಬೇರೆ. ಅಲ್ಲಿ ಜ್ಞಾನ, ಆನಂದ, ಐಶ್ವರ್ಯ, ಸ್ವಾತಂತ್ರ್ಯ, ಔದಾರ್ಯಾದಿ ಅನಂತಗುಣಗಳೇ ಅವನ ಸ್ವರೂಪ. ಹೀಗಿರುವ ಅನಂತಗುಣಗಳಲ್ಲಿ ಒಂದೊಂದು ಗುಣವೂ ಅನಂತವೇ ಆಗಿದೆ. ಪರಸ್ಪರ ಒಂದೊಂದು ಗುಣಕ್ಕೂ, ಪರಮಾತ್ಮನ ಸ್ವರೂಪಕ್ಕೂ ಅತ್ಯಂತ ಅಭೇದವಿದೆ. ಹೀಗಿದ್ದರೂ ವಿಶೇಷಬಲದಿಂದ, ಶ್ರೀಹರಿಯ ಆನಂದ, ಶ್ರೀಹರಿಯ ಜ್ಞಾನ ಇತ್ಯಾದಿ, ಅವನಿಂದ ಆ ಗುಣಗಳು ಭಿನ್ನವಾಗಿ-ದ್ದಂತೆ ವ್ಯವಹರಿಸಲು ಅವಕಾಶಕೊಡುವ ಸಾಮರ್ಥ್ಯವೂ ಆತನ ಸ್ವರೂಪ-ದಲ್ಲಿಯೇ ಇದೆ. ಇದನ್ನೇ **'ವಿಶೇಷ'**ವೆಂದು ಕರೆಯುವುದು. ಶ್ರೀಹರಿಯು ಪೂರ್ಣಾನಂದ ಸ್ವರೂಪನು—ಆದ್ದರಿಂದಲೇ ನಿತ್ಯತೃಪ್ತನೂ ಆಗಿರುವನು.

ಸೃಷ್ಟಿಕರ್ತೃತ್ವರೂಪದ ಒಂದು ಗುಣವನ್ನು (ಮಹಿಮೆಯನ್ನು) ನಿರೂಪಿಸಿ, ಶ್ರೀಹರಿಯ ಇತರ ಸರ್ವಗುಣಗಳೂ **ಅನಂತ**ವೆಂದು (ಪ್ರತಿಗುಣವೂ ಅನಂತ-ವೆಂದು) ಸಾಧಿಸುವ ಯುಕ್ತಿಚಾತುರ್ಯವನ್ನು ಈ ಪದದಲ್ಲಿ ಕಾಣುತ್ತೇವೆ. ಪ್ರಳಯಕಾಲದಲ್ಲಿ ಮಾತ್ರ ಜಗತ್ತನ್ನು ತಿಂದು ತೇಗಿದರೂ, ಸರ್ವಕಾಲದಲ್ಲಿ ತೃಪ್ತನಾಗಿರುವನು. ಒಂದು ಕಾಲದಲ್ಲಿ ಊಟ ಮಾಡಿದ ಯಾವ ಜೀವನೂ, ಸರ್ವಕಾಲದಲ್ಲಿ ತೃಪ್ತನಾಗಿರಲಾರನು. **'ತೃಪ್ತಿ'**ಯೆಂಬ ಗುಣವು ಶ್ರೀಹರಿಯಲ್ಲಿ ಅನಂತವಾಗಿರುವಂತೆ ಇತರ ಎಲ್ಲ ಗುಣಗಳೂ ಅನಂತವಾಗಿರುವುವು. ಅನಂತ-ಗುಣಗಳು ಸರ್ವಕಾಲದಲ್ಲಿ ಶ್ರೀಹರಿಯಲ್ಲಿ ಸುಸ್ಪಷ್ಟವಾಗಿ ಪೂರ್ಣವಾಗಿಯೇ ಇರುತ್ತವೆ. ಆದರೂ ಕಾಲವಿಶೇಷಗಳಲ್ಲಿ ಮಾತ್ರ, (ಪ್ರಳಯಕಾಲದಲ್ಲಿ ಜಗತ್ತನ್ನು ಭಕ್ಷಣ ಮಾಡುವಂತೆ) ಆ ಗುಣಗಳು ಆತನ ಇಚ್ಛಾನುಸಾರ ಪ್ರಕಟವಾಗುತ್ತವೆ. ಬುದ್ಧಿಮೋಹವನ್ನು (ಮುಕ್ತಿಯೋಗ್ಯರಿಗೆ ಅತ್ಯಂತ ಆಶ್ಚರ್ಯವನ್ನೂ, ತಮೋ-ಯೋಗ್ಯರಿಗೆ ಭ್ರಮ ಜ್ಞಾನವನ್ನು) ಉಂಟುಮಾಡುವ, ತತ್ಫಲವಾಗಿ ಅವರ ಆನಂದಕ್ಕೂ ಸುಖಕ್ಕೂ ಕಾರಣವಾಗುವ, ಶ್ರೀಹರಿಯ ಗುಣಗಳು ಅಲೌಕಿಕವೂ ಆಗಿದೆ.

*'ಪ್ರತ್ಯೇಕಂ ತು ಗುಣಾಃ ಸರ್ವೇ ಸದಾ ಸರ್ವಗುಣಾತ್ಮಕಾಃ।*
*ಗುಣಾಂತರವಿಶೇಷಾಶ್ಚ ಯಥಾ ರೂಪಾಣಿ ತೇ ಗುಣಾಃ॥*
*ಪರಸ್ಪರಮಭಿನ್ನಾಶ್ಚ ಧರ್ಮಾಃಸರ್ವೇಽಪಿ ತದ್ಗತಾಃ।*
*ಜಗತ್ಸೃಷ್ಟ್ಯಾದಿಕರ್ತಾರಃ ಸರ್ವಭೋಗಭುಜೋಽಪಿ ಹಿ॥*
*ಮಹಾಲಕ್ಷ್ಮೀಮುಖಾಂಭೋಜಮಧ್ವಾಸ್ವಾದನತತ್ಪರಾಃ।*
*ನಿತ್ಯವ್ಯಕ್ತಾಗುಣಾಃಸರ್ವೇ ನಿರಪೇಕ್ಷಾಶ್ಚ ಸರ್ವತಃ॥*
*ಸ್ವಸ್ವರೂಪೈಕ ವಿಷಯಾಃ ಶ್ರೀಲಕ್ಷ್ಮೀವಿಷಯಾ ಅಪಿ॥'* (ಸ.ರ.ಮಾ.)

ಎಂಬುದಾಗಿ ಶ್ರೀಹರಿಗುಣಗಳ ವೈಶಿಷ್ಟ್ಯವು ವರ್ಣಿತವಾಗಿದೆ. ತಾತ್ಪರ್ಯ-ವೇನೆಂದರೆ—ಶ್ರೀಹರಿಯ ಪ್ರತಿಯೊಂದು ಗುಣವೂ ಸದಾ ಸರ್ವಗುಣ-ಸ್ವರೂಪವೇ ಆಗಿದೆ. ಇತರ ಎಲ್ಲ ಗುಣಗಳ ವಿಶೇಷಗಳುಳ್ಳದ್ದೂ ಆಗಿದೆ (ಎಲ್ಲ ಗುಣಗಳು ಎಲ್ಲ ಗುಣಗಳ ವಿಶೇಷಗಳನ್ನೂ ಹೊಂದಿದೆ)—ಅನಂತರೂಪಿ-ಯಾದ ಶ್ರೀಹರಿಯ ಒಂದೊಂದು ರೂಪದಲ್ಲಿಯೂ ಅನಂತರೂಪಗಳಿರು-ವಂತೆ. ಎಲ್ಲ ಗುಣಗಳೂ ಸೃಷ್ಟ್ಯಾದಿ ಸರ್ವಕರ್ತೃತ್ವ ಸಾಮರ್ಥ್ಯವುಳ್ಳವು-ಗಳೂ, ಸಕಲಶುಭಭೋಗವುಳ್ಳವೂ ಆಗಿವೆ. ಹೀಗೆ ಶ್ರೀಹರಿಯು ಪೂರ್ಣಾ-ನಂದಸ್ವರೂಪನಾದರೂ, ಪ್ರತಿರೂಪವೂ ಶ್ರೀಮಹಾಲಕ್ಷ್ಮೀಮುಖಪದ್ಮದ

ಮಧುವನ್ನು ಆಸ್ವಾದಿಸುವುದರಲ್ಲಿ ಆಸಕ್ತವಾಗಿವೆ. ಶ್ರೀಹರಿಯ ಎಲ್ಲ ಗುಣಗಳೂ ನಿತ್ಯವ್ಯಕ್ತವಾಗಿದ್ದು ಸರ್ವಪ್ರಕಾರದಿಂದ ನಿರಪೇಕ್ಷಗಳಾಗಿವೆ. ಶ್ರೀಲಕ್ಷ್ಮಿಯು ಭೋಗವಿಷಯಗಳಾದರೂ ವಿಷಯಾಪೇಕ್ಷೆಯಿಲ್ಲದೆ ಭೋಗಪೂರ್ಣವಾಗಿವೆ — ಯಾವುದೊಂದು ರೂಪಕ್ಕೂ ಸ್ವಸ್ವರೂಪದಿಂದ ಭಿನ್ನವಾದ ಅನ್ಯವಿಷಯದ ಅಪೇಕ್ಷೆಯೇ (ಆವಶ್ಯಕತೆಯೇ) ಇಲ್ಲ. ಈ ಮಹಾಪ್ರಮೇಯವು ಈ ಪದ್ಯ-ದಿಂದ ಯುಕ್ತಿಯುಕ್ತವಾಗಿ ಸಾಧಿಸಲಾಗಿದೆ.

## ಪದ ೬

ರಾಗ-ನಾದನಾಮಕ್ರಿಯೆ; ತಾಳ-ರೂಪಕ

**ಏನೇ ಹರಿಣಾಕ್ಷಿ ಮೋಹನೆ ಗಜಗಮನೆ**
**ಧ್ಯಾನವ್ಯಾತಕೇ ನಿನಗೆಂದ**
**ಶ್ರೀನಾಥ ಸತಿಯ ಮೊಗ ನೋಡಿ ನಸುನಕ್ಕು**
**ನಾನಾಪರಿಯಲ್ಲಿ ನುಡಿಸಿದ** ॥೧॥

**ಅರ್ಥ:** ಏನೇ ಹರಿಣಾಕ್ಷಿ—ಹೇ ಜಿಂಕೆಯ ಕಣ್ಣಿನಂತೆ ಚಂಚಲ ನಯನೆ! ಮೋಹನೆ—ಜಗನ್ಮೋಹನಸುಂದರಿ! ಗಜಗಮನೆ—ಹೇ ಗಜದಂತೆ ಗಂಭೀರ-ಗಮನೆ! ಹೇ ಪ್ರಿಯೆ! ನಿನಗೆ ಧ್ಯಾನವ್ಯಾತಕೆ—ಧ್ಯಾನದಿಂದ ನಿನಗೇನಾಗ-ಬೇಕಾದ್ದಿದೆ? (ನಿತ್ಯಮುಕ್ತಳಿಗೆ ಧ್ಯಾನವೇಕೆ) ಎಂದು—ಎಂಬುದಾಗಿ, ಶ್ರೀನಾಥ (ಆಕೆಯನ್ನು ರಮಿಸಲು ಬಯಸಿದ) ನಾರಾಯಣನು, ಸತಿಯ ಮೊಗವ ನೋಡಿ—ಭಾರ್ಯಳ ಮುಖವನ್ನು ದಿಟ್ಟಿಸಿ, ನಸುನಕ್ಕು—ಮಂದಹಾಸವನ್ನು ಬೀರಿ, ನಾನಾ ಪರಿಯಲ್ಲಿ—ವಿವಿಧವಾದ ರೀತಿಯಿಂದ, ನುಡಿಸಿದ—ಪ್ರೇಮ ಸಲ್ಲಾಪಗಳಲ್ಲಿ ತೊಡಗಿಸಿದ.

**ವಿಶೇಷಾಂಶ:** ಪ್ರಳಯಕಾಲದಲ್ಲಿ ಶ್ರೀಲಕ್ಷ್ಮೀದೇವಿಗೆ ಆನಂದವನ್ನು ಉದ್ರೇಕಿಸುವ, ಸ್ವರಮಣನಾದ ಶ್ರೀಹರಿಯ ಚಾತುರ್ಯವನ್ನು ವರ್ಣಿಸು-ತ್ತಾರೆ.

## ಪದ ೭

ರಾಗ-ಪಂತುವರಾಳಿ; ತಾಳ-ರೂಪಕ

**ಒಪ್ಪುವ ತೋಳ್ಗಳೋಳ್ ತೋರ್ಪ ಸುರರ ಹಿಂಡು**
**ತಪ್ಪಿಸಿ ರಮೆಯೆಂತಪ್ಪುವಳು**

**ಕರ್ಪೂರಕರಡಿಗೆಯಂತಿಪ್ಪ ಬಾಯೊಳು ತ-**
**ನ್ನಪ್ಪನಿರಲೆಂತು ಚುಂಬಿಪಳು** ॥೧॥

**ಅರ್ಥ:** ಒಪ್ಪುವ—ಸುಂದರವಾದ, ತೋಳ್ಗಳೋಳ್—ಭುಜಗಳಲ್ಲಿ, ತೋರ್ಪ—ತೋರುತ್ತಲಿರುವ (ಭುಜಗಳನ್ನಾಶ್ರಯಿಸಿ ಅಲ್ಲಿರುವ), ಸುರರ ಹಿಂಡು—ದೇವತೆಗಳ ಸಮೂಹವನ್ನು, ತಪ್ಪಿಸಿ—ಮರೆಮಾಡಿ (ಅವರಿಗೆ ಕಾಣ-ದಂತೆ), ರಮೆಯು—ಲಕ್ಷ್ಮೀದೇವಿಯು, ಎಂತಪ್ಪುವಳು—ತನ್ನ ಕಾಂತನನ್ನು ಹೇಗೆ ಆಲಂಗಿಸುವಳು? ಕರ್ಪೂರಕರಡಿಗೆಯಂತಿಪ್ಪ—ಕರ್ಪೂರದ ಭರಣಿ-ಯಂತಿರುವ, (ಶುದ್ಧವೂ ಸುವಾಸಿತವೂ ಆದ), ಬಾಯೊಳು—ತನ್ನ ಮುಖ-ದಲ್ಲಿ, ತನ್ನಪ್ಪನಿರಲು—ತನ್ನ ತಂದೆ (ಅವತಾರದ ತಂದೆ ವರುಣನು) ಇರುವಾಗ, ಎಂತು ಚುಂಬಿಪಳು—ಹೇಗೆ ಪತಿಯನ್ನು ಚುಂಬಿಸುವಳು? (ಶ್ರೀಲಕ್ಷ್ಮಿಯು ಸರ್ವೋತ್ಕೃಷ್ಟ ಸ್ತ್ರೀ ಗುಣಗಳಿಂದ ಪೂರ್ಣಳು—ನಿರ್ಲಜ್ಜಳಲ್ಲ).

**ಆದರಿಂದ ತನ್ನ ಮೈಯೊಳಿಪ್ಪ ದೇವರ**
**ಉದರದಿ ಕೃಷ್ಣ ಬಚ್ಚಿಡಲು**
**ಉದಧಿಕನ್ನಿಕೆ ತನ್ನ ರತಿಗೆ ಮನವಾದ ನೇ-**
**ಹದ ಬಗೆಗೆ ಮನದಲುಬ್ಬಿದಳು** ॥೨॥

**ಅರ್ಥ:** ಆದರಿಂದ—ಈ ಕಾರಣದಿಂದ, ತನ್ನ ಮೈಯೊಳಿಪ್ಪ—ತನ್ನ ದೇಹ-ವನ್ನಾಶ್ರಯಿಸಿ ಅಲ್ಲಿರುವ, ದೇವರ—ದೇವತೆಗಳೆಲ್ಲರನ್ನೂ, ಕೃಷ್ಣ—ಶ್ರೀಹರಿಯು, ಉದರದಿ—ತನ್ನ ಹೊಟ್ಟೆಯೊಳಗೆ, ಬಚ್ಚಿಡಲು—ಮುಚ್ಚಿಟ್ಟುಕೊಳ್ಳಲು, ಉದಧಿ-ಕನ್ನಿಕೆ—(ಸಮುದ್ರರಾಜನ ಮಗಳಾಗಿ ಅವತರಿಸಿದ) ಶ್ರೀಲಕ್ಷ್ಮೀದೇವಿಯು, ತನ್ನ ರತಿಗೆ—ತನ್ನೊಂದಿಗೆ ಕ್ರೀಡಿಸಲು, ಮನವಾದ—ಮನಸ್ಸು ಮಾಡಿದ, ನೇಹದ ಬಗೆಗೆ—ಪ್ರೇಮದ ಬಗ್ಗೆ, ಮನದಲಿ—ತನ್ನ ಮನಸ್ಸಿನಲ್ಲಿ, ಉಬ್ಬಿದಳು—ಹಿಗ್ಗಿದಳು.

**ಸರಸಿಜಾಸನನಾಗ ವೈಕುಂಠದೊಳಗಿರ್ದ**
**ವಿರಜೆಯಲ್ಲಿ ಮುಕ್ತಿ ಯೋಗ್ಯರನು**
**ಕರೆಸಿಕೊಂಡು ಬಂದು ಮಿಂದು ಮುಕ್ತನಾಗಿ**
**ಹರಿಯುದರವ ಬೇಗ ಪೊಕ್ಕ** ॥೩॥

**ಅರ್ಥ:** ಸರಸಿಜಾಸನನು—ಬ್ರಹ್ಮದೇವನು, ಆಗ—ಆ ಕಾಲದಲ್ಲಿ (ಶ್ರೀ-ಹರಿಯ ಇಂಗಿತವನ್ನು ತಿಳಿದು), ವೈಕುಂಠದೊಳಗಿರ್ದ—ವೈಕುಂಠದ ಸುತ್ತಲೂ

ಇರುವ, ವಿರಜೆಯಲ್ಲಿ—ವಿರಜಾನದಿಯಲ್ಲಿ, ಮುಕ್ತಿಯೋಗ್ಯರನು—(ಸಾಧನಪೂರ್ತಿಯಿಂದ ಮೋಕ್ಷಕ್ಕೆ ಸಿದ್ಧರಾಗಿದ್ದ) ಸುಜೀವರನ್ನು, ಕರೆಸಿಕೊಂಡು—(ವಿರಜಾಸ್ನಾನಕ್ಕೆ ಸಿದ್ಧರಾಗಿರೆಂದು ತಿಳಿಸಿ) ಬರಮಾಡಿಕೊಂಡು, ಬಂದು—(ಅವರೊಂದಿಗೆ) ಬಂದು, ಮಿಂದು—(ವಿರಜಾನದಿಯಲ್ಲಿ) ಸ್ನಾನಮಾಡಿ (ಅಲ್ಲಿ ತಮ್ಮೆಲ್ಲರ ಲಿಂಗದೇಹಗಳನ್ನು ತ್ಯಜಿಸಿ), ಮುಕ್ತನಾಗಿ—ಸ್ವರೂಪಮಾತ್ರದಿಂದ ಸ್ಥಿತನಾಗಿ, ಬೇಗ—ತವಕದಿಂದ, ಹರಿಯುದರವ—ಶ್ರೀಹರಿಯ ಉದರವನ್ನು, ಪೊಕ್ಕು—ಪ್ರವೇಶಿಸಿದನು (ಎಲ್ಲರೊಂದಿಗೆ ಪ್ರವೇಶಿಸಿದನು).

**ತರತರದಿ ಮಿಂಚುವ ತಮ್ಮ ದೇಹಂಗಳ**
**ಶಿರಿಯ ಸೇರಿಸಿ ಶಿರಿವರನ**
**ಪುರಮೂರರೊಳಗಿರ್ದ ಮುಕ್ತರು ಬಂದು ಶ್ರೀ-**
**ಹರಿಯುದರವ ಪೊಕ್ಕರಾಗ** ॥೪॥

**ಅರ್ಥ:** ಆಗ—ಅದೇ ಕಾಲದಲ್ಲಿ, ತರತರದಿ ಮಿಂಚುವ—ನಾನಾವರ್ಣಗಳಿಂದ ಹೊಳೆಯುವ, ತಮ್ಮ ದೇಹಂಗಳ—ತಮ್ಮ ಸ್ವರೂಪದೇಹಗಳ, ಶಿರಿಯ—ಕಾಂತಿಯನ್ನು, ಶಿರಿವರನಸೇರಿಸಿ—ಶ್ರೀಹರಿಯಲ್ಲಿ ಕೂರಿಸಿ (ಪ್ರವೇಶಿಸಿ) **ಅಥವಾ** ಶಿರಿಯ ಸೇರಿಸಿ—ಲಕ್ಷ್ಮೀದ್ವಾರಾ, ಶಿರಿವರನ—ಶ್ರೀಹರಿಯ, ಪುರಮೂರರೊಳಗಿರ್ದ—**ವೈಕುಂಠ, ಅನಂತಾಸನ, ನಾರಾಯಣಪುರ**ಗಳೆಂಬ ತ್ರಿಧಾಮಗಳಲ್ಲಿದ್ದ, ಮುಕ್ತರು—ಎಲ್ಲ ಮುಕ್ತರೂ, ಬಂದು—ಸೇರಿ, ಶ್ರೀಹರಿಯುದರವ—ಶ್ರೀಹರಿಯ ಉದರವನ್ನು, ಪೊಕ್ಕರು—ಪ್ರವೇಶಿಸಿದರು.

**ಎಲ್ಲ ಜೀವರ ತನ್ನ ಕುಕ್ಷಿಯೊಳಗಿಟ್ಟು ಶ್ರೀ-**
**ವಲ್ಲಭನಿದ್ದೆಗೊಳಿಸಿದ**
**ಸಲ್ಲೀಲೆಯಿಂದ ಸತಿಯರೊಡನಾಡುವ**
**ಉಲ್ಲಾಸಗಳ ಕಾಣದಂತೆ** ॥೫॥

**ಅರ್ಥ:** ಎಲ್ಲ ಜೀವರ—ಎಲ್ಲ ಜೀವರನ್ನು, ಶ್ರೀವಲ್ಲಭ—ಆ ಲಕ್ಷ್ಮೀಪತಿಯು, ತನ್ನ ಕುಕ್ಷಿಯೊಳಗಿಟ್ಟು—ತನ್ನ ಉದರದಲ್ಲಿ ಧರಿಸಿ, ಸಲ್ಲೀಲೆಯಿಂದ—ಸ್ವೇಚ್ಛಾವಿಹಾರದಿಂದ, ಸತಿಯರೊಡನಾಡುವ—ಶ್ರೀಲಕ್ಷ್ಮಿಯೊಂದಿಗೆ ಮಾಡುವ, ಉಲ್ಲಾಸಗಳ—ಸಲ್ಲಾಪಾದಿ ಕ್ರೀಡೆಗಳನ್ನು, ಕಾಣದಂತೆ—ತಿಳಿಯದಂತೆ, ನಿದ್ದೆಗೊಳಿಸಿದ—ಬಾಹ್ಯಜ್ಞಾನರಹಿತರನ್ನಾಗಿ ಮಾಡಿದನು.

**ಇಂತು ಮುಕ್ತಾಮುಕ್ತಜೀವರ ತಿಂಥಿಣಿಯ-**
**ನಾಂತು ಶ್ರೀಕಾಂತ ಪವಡಿಸಿ**
**ಕಾಂತೆಯರೊಡನೆ ಸಂತೋಷದಲಿಹ ಕಥೆ**
**ಸಂತತ ನಮ್ಮ ಸಲಹಲಿ** ||೬||

**ಅರ್ಥ:** ಇಂತು—ಹೀಗೆ, ಮುಕ್ತಾಮುಕ್ತಜೀವರ ತಿಂಥಿಣಿಯನು—ಮುಕ್ತರು, ಅಮುಕ್ತರೆಂಬ ಉಭಯವಿಧಜೀವಸಮುದಾಯವನ್ನು, ಆಂತು—ಹೊಂದಿ (ತನ್ನೊಳಗಿಟ್ಟುಕೊಂಡು), ಶ್ರೀಕಾಂತ—ನಾರಾಯಣನು, ಪವಡಿಸಿ—ಮಲಗಿ, ಕಾಂತೆಯರೊಡನೆ—ಶ್ರೀಲಕ್ಷ್ಮೀದೇವಿಯೊಡನೆ, ಸಂತೋಷದಲಿಹ ಕಥೆ—ಆನಂದದಿಂದಿರುವ ಈ ಮಹಿಮೆಯು, ಸಂತತ—ಸರ್ವದಾ, ನಮ್ಮ ಸಲಹಲಿ—ನಮ್ಮನ್ನು ರಕ್ಷಿಸಲಿ.

**ವಿಶೇಷಾಂಶ:** (೧) ಶ್ರೀಮಹಾಲಕ್ಷ್ಮೀದೇವಿಯು ಅಚಿಂತ್ಯಾದ್ಭುತ ಮಹಿಮಳು.
*ಸೃಷ್ಟಿಸ್ಥಿತಿಶ್ಚಸಂಹಾರೋ ನಿಯತಿರ್ಜ್ಞಾನಮಾವೃತಿಃ।*
*ಬಂಧಮೋಕ್ಷಾದಯಃ ಸರ್ವೇ ಮಹಾಭೂತಿಪುರಸ್ಸರಾಃ॥*
*ಅನಾದ್ಯನಂತಕಾಲೇಽಪಿ ಯಥಾಯೋಗ್ಯಂ ಪೃಥಕ್ ಪೃಥಕ್।*
*ಪ್ರಾಪ್ನುವಂತಿ ಮಹಾಲಕ್ಷ್ಮ್ಯಾಃ ಅಪಾಂಗಲವಮಾತ್ರತಃ॥*
*ರುದ್ರೈರ್ವಸುಭಿರಾದಿತ್ಯೈಃವಿಶ್ವೇದೇವೈಸ್ತಥಾಪರೈಃ।*
*ಸರ್ವೈರ್ದೇವೈಸ್ತಥಾ ಸೇವ್ಯಾ ವಿಮುಕ್ತೈರಪ್ಯನೇಕಧಾ॥*
*ಸದಾ ಮುಕ್ತೌ ಚ ಸಂಸಾರೇ ಬಿಭರ್ತ್ಯೇತಾನ್ ಸದಾ ರಮಾ॥* (ಸ.ರ.ಮಾ)
ಎಂಬುದಾಗಿ ಆಕೆಯ ಮಹಿಮೆಯು ವರ್ಣಿತವಾಗಿದೆ.

**ತಾತ್ಪರ್ಯ:** 'ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಮೊದಲಾದ ಮಹೈಶ್ವರ್ಯಾದಿಗಳನ್ನು ಅನಾದ್ಯನಂತಕಾಲದಲ್ಲಿ, ಯಥಾಯೋಗ್ಯವಾಗಿ, ಜೀವರು (ಪ್ರತ್ಯೇಕವಾಗಿ ಬ್ರಹ್ಮಾದಿಗಳೆಲ್ಲರೂ) ಲಕ್ಷ್ಮೀ-ದೇವಿಯ ಅಲ್ಪಕಡೆಗಣ್ಣ ನೋಟಮಾತ್ರದಿಂದ ಹೊಂದುತ್ತಾರೆ; ರುದ್ರರು, ವಸುಗಳು, ಆದಿತ್ಯರು, ವಿಶ್ವೇದೇವತೆಗಳು ಮತ್ತಿತರ ಸಕಲ ದೇವತೆ-ಗಳಿಂದಲೂ ಮಹಾಲಕ್ಷ್ಮಿಯು ಸೇವ್ಯಳಾಗಿದ್ದಾಳೆ; ಮುಕ್ತದೇವತೆಗಳೂ ಆಕೆ-ಯನ್ನು ನಾನಾರೀತಿಯಲ್ಲಿ ಸೇವಿಸುತ್ತಾರೆ. ಈ ಎಲ್ಲರನ್ನು ಸಂಸಾರಾವಸ್ಥೆ-ಯಲ್ಲಿಯೂ, ಮುಕ್ತಿಯಲ್ಲಿ ಸಹ, ಶ್ರೀಲಕ್ಷ್ಮೀದೇವಿಯು ಧರಿಸಿ ರಕ್ಷಿಸುತ್ತಾಳೆ.' ನಿತ್ಯಮುಕ್ತಳೂ ಚಿದಾನಂದದೇಹಳೂ ಆದ ಶ್ರೀಲಕ್ಷ್ಮೀದೇವಿಯ ಭುಜಾದಿ

ಅಂಗಗಳಲ್ಲಿದ್ದು, ಮುಕ್ತದೇವತೆಗಳು ಆಕೆಯನ್ನು ಸೇವಿಸುವರು. ಆ ಎಲ್ಲರನ್ನೂ ಶ್ರೀಹರಿಯು ಪ್ರಳಯಕಾಲದಲ್ಲಿ ತನ್ನ ಉದರದಲ್ಲಿಡುತ್ತಾನೆ. ಮುಕ್ತಲೋಕಗಳು ಸಹ ಉದರಪ್ರವೇಶ ಮಾಡುತ್ತವೆ. ಅವ್ಯಕ್ತಸ್ಥಿತಿಯಲ್ಲಿಡಲ್ಪಟ್ಟು ಸೃಷ್ಟಿಕಾಲ ಪ್ರಾಪ್ತವಾದೊಡನೆ, ತಂತಮ್ಮ ಸ್ಥಾನಗಳಲ್ಲಿ ಪ್ರಕಟವಾಗುತ್ತವೆ.

(೨) ವಿರಜಾನದಿಯ ವಿಷಯದಲ್ಲಿ ೧ನೇ ಸಂಧಿಯ ಪದ ೧೨ರ ೫ನೇ ನುಡಿಯ ವಿಶೇಷಾಂಶ ೩ರಲ್ಲಿ ಕೊಟ್ಟಿರುವ ವಿವರಣೆಯನ್ನು ನೋಡಬೇಕು. ವೈಕುಂಠನಗರದ ಸುತ್ತಲಿರುವ ವಿರಜಾನದಿಯು, ಪ್ರಳಯಕಾಲದಲ್ಲಿ, ಬಾಹ್ಯಾ-ವರಣಗಳ ಸಮೇತ ಬ್ರಹ್ಮಾಂಡವು ಲಯಹೊಂದಲು, ಪ್ರಧಾನ (ಪ್ರಕೃತಿ) ಮತ್ತು ಪರಮಾಕಾಶ (ಅವ್ಯಾಕೃತಾಕಾಶ)ಗಳ ಮಧ್ಯದಲ್ಲಿ ಬರುತ್ತದೆ. ಅಲ್ಲಿ ಸ್ನಾನಮಾಡಿ, ಲಿಂಗದೇಹಗಳನ್ನು ಜೀವರು ತ್ಯಜಿಸುತ್ತಾರೆ. **'ವೈಕುಂಠ-ದೊಳಗಿರ್ದ'** ಎಂಬ ಪದಗಳಿಗೆ, ಲಯಕ್ಕೆ ಪೂರ್ವದಲ್ಲಿ, ವೈಕುಂಠನಗರಿಯ ಸುತ್ತಲೂ (ಶ್ರೀಭಾಗ ವೈಕುಂಠಲೋಕದಲ್ಲಿ) ಇದ್ದುದೆಂಬ ಅರ್ಥವನ್ನು ತಿಳಿಯ-ಬೇಕು. ೧ನೇ ಸಂಧಿಯ ಪ್ರಸಕ್ತ ವಿಶೇಷಾಂಶಭಾಗದಲ್ಲಿ, ಉದಾಹರಿಸಿದ ಶ್ಲೋಕಗಳ ವ್ಯಾಖ್ಯಾನವಾಕ್ಯಗಳು, ಈ ಅಂಶವನ್ನು ಸ್ಪಷ್ಟಗೊಳಿಸುತ್ತವೆ.

*'ಲಯಸಮಯೇ ವೈಕುಂಠಪರಿಘಾತ್ವೇನ ಪೂರ್ವಮಂಡಸ್ಥಿತಲಕ್ಷ್ಮ್ಯಾತ್ಮಕ ವಿರಜಾನದೀ, ವೈಕುಂಠಃಕಲ್ಪಿತೋ ಯೇನ ಲೋಕೋ ಲೋಕನಮಸ್ಕೃತ ಇತಿ ಸೃಷ್ಟಿಕಾಲೇ ವೈಕುಂಠಕಲ್ಪನಾನ್ಯಥಾऽನುಪಪತ್ತ್ಯಾ ನಿತ್ಯತ್ವೇನ ಪ್ರಮಿತಸ್ಯಾಪಿ ವೈಕುಂಠಸ್ಯ ಅವ್ಯಕ್ತರೂಪವಿಲಯಸತ್ವಾತ್ ತಸ್ಯ ಶಕ್ತ್ಯಾತ್ಮಕತಾಪತ್ತ್ಯನಂತರಂ ಪ್ರಧಾನಪರಮಾಕಾಶಯೋರಂತರಾಗಚ್ಛತಿ'* ಎಂಬವೇ ಆ ವಾಕ್ಯಗಳು. ೧ನೇ ಸಂಧಿಯ ೧೭ನೇ ನುಡಿಯಲ್ಲಿ ಹೇಳಿದಂತೆ, ವೈಕುಂಠ ನಗರಿಯ ಹೆಸರು 'ಪರಮವ್ಯೋಮ'ವೆಂದೂ ಕರೆಯಲ್ಪಡುವುದರಿಂದ, ನಿತ್ಯವಾದ ವಿರಜಾನದಿ-ಯನ್ನು, ಸದಾ (ಸೃಷ್ಟಿ, ಪ್ರಳಯಕಾಲಗಳಲ್ಲಿ ಸಹ) ಪ್ರಧಾನಪರಮವ್ಯೋಮಗಳ ಮಧ್ಯದಲ್ಲಿರುವುದೆಂದು ಹೇಳುವುದು, ಸುಸಂಗತವೇ ಆಗಿರುತ್ತದೆ.

(೩) ೫ನೇ ನುಡಿಯಲ್ಲಿ *'ಸತಿಯರೊಡನಾಡುವ'* ಎಂದೂ, ೭ನೇ ನುಡಿ-ಯಲ್ಲಿ *'ಕಾಂತೆಯರೊಡನೆ ಸಂತೋಷದಲಿಹ'* ಎಂದೂ ಪ್ರಯೋಗಿಸಿರುವ ಬಹುವಚನಶಬ್ದಗಳು, ಶ್ರೀಲಕ್ಷ್ಮೀದೇವಿಯು, ಶ್ರೀಹರಿಯೊಡನೆ ವಿವಿಧ ರೂಪ-ಗಳಿಂದ ಕ್ರೀಡಿಸುವಳೆಂಬುದನ್ನು, ಸೂಚಿಸುತ್ತವೆ. ಈ ರಮಾನಾರಾಯಣರ ವಿಹಾರವು ಬ್ರಹ್ಮಾದಿಗಳಿಗೂ ಅಗೋಚರವು-ಅಚಿಂತ್ಯವು-ಅದ್ಭುತವು. ಸ್ವಸ್ತ್ರೀಯ-

ರೊಡನೆ ಕ್ರೀಡಿಸುವ ಪುರುಷರೂ ಸಹ, ಸ್ತ್ರೀಸಹಜಲಜ್ಜೆಯನ್ನು ಗೌರವಿಸಿ, ಏಕಾಂತದಲ್ಲಿಯೇ ವಿಹರಿಸಬೇಕೆಂಬ ನೀತಿಯೂ ಸೂಚಿತವೆಂದು ತಿಳಿಯಬೇಕು.

(೪) ೫ನೇ ನುಡಿಯಲ್ಲಿ **'ನಿದ್ದೆಗೊಳಿಸಿದ'** ಎಂಬುದಕ್ಕೆ ನಿದ್ರಾವಸ್ಥೆಯನ್ನು ಹೊಂದಿಸಿದನೆಂಬ ಅರ್ಥವನ್ನು ಸರ್ವಜೀವರ ವಿಷಯಕವೆಂದು ತಿಳಿಯಕೂಡದು. ಅಮುಕ್ತರು ಮತ್ತು ಮುಂದಿನ ಕಲ್ಪದಲ್ಲಿ ಸೃಷ್ಟಿಗೆ ಬರಲಿರುವ ಜೀವರು (ವಾಯುದೇವರ ವಿನಾ) ಪ್ರಳಯಕಾಲದಲ್ಲಿ ನಿದ್ರಾವಸ್ಥೆಯಲ್ಲಿರುತ್ತಾರೆ. ಮುಕ್ತರೆಲ್ಲರೂ ಧ್ಯಾನಾವಸ್ಥೆಯಲ್ಲಿರುತ್ತಾರೆ. ಏವಂ ಚ, ರಮಾನಾರಾಯಣರ ವಿಹಾರಜ್ಞಾನವು ಯಾರಿಗೂ ಇಲ್ಲ. *ಅತಿರೋಹಿತವಿಜ್ಞಾನಾದ್ವಾಯುರಪ್ಯಮೃತಃ ಸ್ಮೃತಃ। ಏವಂ ಪ್ರಳಯಕಾಲೇಪಿ ಪ್ರತಿಭಾತಪರಾವರಃ॥* ಎಂದರೆ, ವಾಯುದೇವನ ವಿಜ್ಞಾನಕ್ಕೆ ತಿರೋಧಾನವೆಂಬುದೇ ಇಲ್ಲವಾದ್ದರಿಂದ, ವಾಯುದೇವನು, 'ಅಮೃತ'ನೆಂದೇ ಕರೆಯಲ್ಪಡುವನು. ಪ್ರಳಯಕಾಲದಲ್ಲಿ ಸಹ ಪರಾವರವಸ್ತುವಿಷಯಕಜ್ಞಾನವಿದ್ದೇ ಇರುತ್ತದೆ. (ಪರಾವರ ಎಂದರೆ, ಪರ-ರಮಾನಾರಾಯಣರು, ಅವರ-ಕೆಳಗಿನ ಇತರ ತತ್ವಗಳು) ರಮಾನಾರಾಯಣರ ಕ್ರೀಡಾಜ್ಞಾನವಿಲ್ಲದಂತೆ ಮಾಡುವುದೇ 'ನಿದ್ದೆಗೊಳಿಸಿದ' ಎಂಬುದರ ಅರ್ಥ ವಾಯುಬ್ರಹ್ಮರ ವಿಷಯಕ್ಕೆ. ಇತರ ಮುಕ್ತರಿಗೆ ಧ್ಯಾನದಲ್ಲಿರಿಸಿ ಬಾಹ್ಯಜ್ಞಾನವಿಲ್ಲದಂತೆ ಇಡುವುದು, ಅಮುಕ್ತರನ್ನು ನಿದ್ರಾವಸ್ಥೆಯನ್ನು ಹೊಂದಿಸುವುದು, ಎಂಬರ್ಥಗಳನ್ನು ತಿಳಿಯಬೇಕು. ತಾತ್ಪರ್ಯನಿರ್ಣಯದ 'ಸುಷುಪ್ತಿಕಾನ್ ಬ್ರಹ್ಮಾದಿಕಾನ್'ಎಂಬ ವಾಕ್ಯಕ್ಕೆ 'ಬ್ರಹ್ಮನೇ ಆದ್ಯನಾಗಿವುಳ್ಳ, ಇತರ ನಿದ್ರಾವಸ್ಥೆಯಲ್ಲಿದ್ದ ಜೀವರನ್ನು' (ಬ್ರಹ್ಮನನ್ನು ಬಿಟ್ಟು) ಎಂದೇ ಅರ್ಥ.

(೫) ಮುಕ್ತಜೀವಸ್ವರೂಪಗಳೆಲ್ಲವೂ ವಿವಿಧವರ್ಣಗಳುಳ್ಳ ಸುಂದರಾ ಕೃತಿಗಳು. *'ಅರುಣಾಶ್ಮವರ್ಣತನವಸ್ತ ನವಃ ಶುಭಹಾರಸನ್ನಿಭರುಚೋಽತ್ರ ಪರಾಃ।' ಹರಿನೀಲರುಚಯೋಽಪ್ಯಪರಾಃ....'* ಇತ್ಯಾದಿ (ಸುಮಧ್ವವಿಜಯ) ವಾಕ್ಯಗಳು ಈ ಪ್ರಮೇಯವನ್ನು ಸಾಧಿಸುತ್ತವೆ. 'ಕೆಲವರು ಪದ್ಮರಾಗದಂತೆ ಅರುಣವರ್ಣದ ದೇಹವುಳ್ಳವರು, ಕೆಲವರು ಮುತ್ತಿನ ಹಾರದಂತೆ ಶುಭ್ರವರ್ಣದ ಸ್ವರೂಪದೇಹವುಳ್ಳವರು, ಮತ್ತೆ ಕೆಲವರು ಇಂದ್ರನೀಲಮಣಿಯಂತೆ ನೀಲವರ್ಣದ ಕಾಂತಿಯುಳ್ಳವರು' ಎಂದು ಹೇಳಲಾಗಿದೆ. ಈ ಪ್ರಮೇಯವನ್ನು ಸೂಚಿಸಲಿಕ್ಕಾಗಿಯೇ, 'ತರತರದಿ ಮಿಂಚುವ ತಮ್ಮ ದೇಹಂಗಳ' ಎಂದಿದ್ದಾರೆ.

### ಶ್ಲೋಕ ೩

***ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ।***
***ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇಽಚೇತನಾ ಅಪಿ॥***

**ಅರ್ಥ:** ಶ್ರೀರೇವ—ಲಕ್ಷ್ಮೀದೇವಿಯೇ, ವಿಷ್ಣೋಃ ಲೋಕರೂಪೇಣ—ವಿಷ್ಣುಲೋಕಗಳ (ತ್ರಿಧಾಮಗಳ-ಮುಕ್ತಲೋಕಗಳ) ರೂಪದಿಂದ (ಸ್ವರೂಪದಿಂದಲೂ, ಶುದ್ಧಸತ್ವನಿಯಾಮಕರೂಪದಿಂದಲೂ), ಸರ್ವದಾ ತಿಷ್ಠತಿ—ನಿತ್ಯವೂ ಇರುತ್ತಾಳೆ; ಅತಃ—ಆದ್ದರಿಂದ, ವೈಷ್ಣವಾ ಲೋಕಾಃ—ವಿಷ್ಣುಲೋಕಗಳು, ತೇ ಅಚೇತನಾ ಅಪಿ-ಅವು (ಶ್ರೀಹರಿಯ ಅಂತಃಪುರಗಳ ವಿನಹ ಇತರ ಶ್ರೀಭಾಗಗಳು) ಅಚೇತನ (ಶುದ್ಧಸತ್ವಾತ್ಮಕ)ಗಳಾದರೂ, ನಿತ್ಯಾಃ—ನಿತ್ಯಗಳು (ಪ್ರಳಯದಲ್ಲಿಯೂ ಸ್ವರೂಪತಃ ನಾಶಹೊಂದತಕ್ಕವುಗಳಲ್ಲ).

**ವಿಶೇಷಾಂಶ:** ೧ನೇ ಸಂಧಿಯ ೧೦ನೇ ಪದದ ವಿಶೇಷವಿವರಣೆಯನ್ನು ಇಲ್ಲಿ ಓದಿಕೊಳ್ಳಬೇಕು. ಅಲ್ಲಿ ಈ ಪ್ರಮೇಯವು ಪ್ರಸಕ್ತವಾಗಿದ್ದರೂ, ಈ ಲಯಸಂಧಿಯಲ್ಲಿ, ಪ್ರಳಯಕಾಲದಲ್ಲಿ ಸಹ ಮುಕ್ತ ಲೋಕಗಳಿಗೆ ನಾಶವಿಲ್ಲೆಂದು ತಿಳಿಸುವ, ಪ್ರಸಂಗಸಂಗತಿ ಇರುವುದೆಂದು ತಿಳಿಯಬೇಕು.

### ಪದ ೮

ರಾಗ-ಮೇಚಚೌಳಿ; ತಾಳ-ರೂಪಕ

**ಶ್ರೀದೇವಿ ತಾನೆ ತ್ರಿಧಾಮನ ಮನೆಯಾಗಿ**
**ಆದ್ಯಂತಗಳಿಲ್ಲದಂತೆ**
**ಬೋಧಸುಖರೂಪಳಾಗಿಹಳೆಂದು ಪೂರ್ವದ**
**ವೇದಗಳೇ ಓದುತಿಹವೂ** ॥೧॥

**ಅರ್ಥ:** ಶ್ರೀದೇವಿ ತಾನೆ—ಸ್ವಯಂ ಲಕ್ಷ್ಮೀದೇವಿಯೇ, ತ್ರಿಧಾಮನ— ಶ್ರೀಹರಿಯ, ಮನೆಯಾಗಿ—ಗೃಹರೂಪದಿಂದ, ಆದ್ಯಂತಗಳಿಲ್ಲದಂತೆ —ಉತ್ಪತ್ತಿ-ವಿನಾಶಗಳಿಲ್ಲದೆ, ಬೋಧಸುಖರೂಪಳಾಗಿಹಳು—ಜ್ಞಾನಾನಂದಸ್ವರೂಪಳಾಗಿಯೇ ಇರುವಳು, ಎಂದು—ಹೀಗೆಂದು, ಪೂರ್ವದ ವೇದಗಳೇ—ಅನಾದಿ ನಿತ್ಯಗಳಾದ ವೇದಗಳೇ, ಓದುತಿಹವೂ—ಹೇಳುತ್ತಿರುವುವು.

**ಅದರಿಂದ ಹರಿಯ ಮೂರು ಲೋಕಂಗಳಿಗೆ ಲ-**
**ಯದ ಕಿಚ್ಚಿನ ಕೇಡಿಲ್ಲ**

**ಮೊದಲುದಕಗಳೆಲ್ಲ ಪೋದ ಕಾರಣ ಲಕುಮಿ**
**ಉದಧಿಯಾದಳಾಗಚ್ಯುತಗೆ** ॥೨॥

**ಅರ್ಥ:** ಆದರಿಂದ—ಶ್ರುತಿಪ್ರಮಾಣಬಲದಿಂದ, ಹರಿಯ—ಶ್ರೀಪರಮಾತ್ಮನ, ಮೂರು ಲೋಕಂಗಳಿಗೆ—ವೈಕುಂಠ, ಅನಂತಾಸನ, ನಾರಾಯಣಪುರ (ಶ್ವೇತದ್ವೀಪ)ಗಳೆಂಬ ಮೂರು ಲೋಕಗಳಿಗೆ, ಲಯದ ಕಿಚ್ಚಿನ—ಪ್ರಳಯ ಅಗ್ನಿಯ, ಕೇಡಿಲ್ಲ—ಅಪಾಯವಿಲ್ಲ (ನಾಶಭಯವಿಲ್ಲ). ಮೊದಲುದಕಗಳೆಲ್ಲ—ಪ್ರಳಯದಲ್ಲಿ ಲೋಕಗಳನ್ನು ವ್ಯಾಪಿಸಿದ (ಸಂಕರ್ಷಣನ ಮುಖಾಗ್ನಿಯಿಂದ ದಹಿಸಲ್ಪಟ್ಟ ನಂತರ ಸಾಂವರ್ತಕ ಮೇಘಗಳಿಂದ ಶತವರ್ಷಪರ್ಯಂತ ಸುರಿದ ಮಳೆಯ) ನೀರೆಲ್ಲವೂ, ಪೋದ ಕಾರಣ—ನಷ್ಟ ಹೊಂದಿದ ಕಾರಣ, ಲಕುಮಿ—ಶ್ರೀಲಕ್ಷ್ಮೀದೇವಿಯು, ಅಚ್ಯುತಗೆ—ಶ್ರೀಹರಿಗೆ (ಶಯನಾರ್ಥವಾಗಿ), ಉದಧಿಯಾದಳು—ಸಮುದ್ರ(ಜಲರಾಶಿಯ) ರೂಪವನ್ನು ತಾಳಿದಳು.

**ವಿಶೇಷಾಂಶ:** (೧) ಮೂರು ಮುಕ್ತಲೋಕಗಳಲ್ಲಿ ಸದಾ ಪ್ರಕಟನಾಗಿ ಮುಕ್ತರಿಗೆ, ಯಾವ ಸಾಧನಾಪೇಕ್ಷೆಯೂ ಇಲ್ಲದೇ, ದರ್ಶನವೀಯುತ್ತ ಆನಂದಪ್ರದನಾದ್ದರಿಂದ, ಶ್ರೀಹರಿಯು **'ತ್ರಿಧಾಮ'**ನೆಂದು ಕರೆಯಲ್ಪಡುತ್ತಾನೆ.

(೨) ಮೂರು ಮುಕ್ತಲೋಕಗಳ ಮಧ್ಯದಲ್ಲಿರುವ ಶ್ರೀಹರಿಪುರಗಳು (ರಾಜಗೃಹಗಳ ನಗರಿಗಳು) ಲಕ್ಷ್ಮೀಸ್ವರೂಪಗಳೇ ಆಗಿರುವುವು—ಉಳಿದ ಶ್ರೀಭಾಗಗಳೂ ಶುದ್ಧಸತ್ವಾತ್ಮಕಗಳಾಗಿದ್ದು ನಿತ್ಯಗಳೇ ಆಗಿರುತ್ತವೆ. ೧ನೇ ಸಂಧಿಯ ೧೦ನೇ ಪದದ ವಿಶೇಷವಿವರಣೆಯನ್ನು ನೋಡಬೇಕು.

(೩) **'ಶ್ರೀಧಾಮನ ಮನೆಯಾಗಿ'** ಎಂಬುದರಿಂದ, ಶ್ರೀಹರಿಗೃಹಗಳಿಗೂ (ನಗರಿಗಳಿಗೂ) ಅವುಗಳ ಸುತ್ತಲಿರುವ ಲೋಕಗಳಿಗೂ ಇರುವ ವೈಲಕ್ಷಣ್ಯವನ್ನು ಸೂಚಿಸಿರುವರು. *'ಅನಂತಾನಂತರೂಪಾ ಚ ಜ್ಞಾನಾನಂದಾದಿ ರೂಪಿಣೀ'* ಇತ್ಯಾದಿ ಪ್ರಮಾಣವಾಕ್ಯಗಳು, ಲಕ್ಷ್ಮೀದೇವಿಗೆ ಪ್ರಾಕೃತದೇಹ ಪ್ರಾಪ್ತಿಯು ಯಾವ ಕಾಲಕ್ಕೂ ಎಲ್ಲಿಯೂ ಇಲ್ಲವೆಂದು ಸಾರುತ್ತವೆ. ಸೀತಾ, ರುಕ್ಮಿಣೀ, ಸತ್ಯಭಾಮಾ ಇತ್ಯಾದಿ ಆಕೆಯ ಅವತಾರರೂಪಗಳು ಸಹ ಚಿದಾನಂದಾತ್ಮಕವೇ—ಜಡದೇಹಗಳಲ್ಲ.

(೪) *'ಯತ್ರ ವಾಯೂದಪದ್ಮಾದಿರೂಪೇಣ ಪ್ರಕೃತಿಃಸ್ಥಿತಾ'* ಎಂಬ (ಭಾಗವತ) ವಾಕ್ಯವು, ಪ್ರಳಯಕಾಲದಲ್ಲಿ, ವಾಯು-ಉದಕ-ಪದ್ಮಾದಿರೂಪಳಾಗಿ ಶ್ರೀಲಕ್ಷ್ಮಿದೇವಿಯೇ ಇರುವಳೆಂದು ಹೇಳುತ್ತದೆ. *'ಲಕ್ಷ್ಮ್ಯೈವೋದಕ-*

*ರೂಪೇಣ ಶಯ್ಯಾರೂಪೇಣ ಚಾಂಡಜ'* ಎಂದು (ಬ್ರಹ್ಮಾಂಡಪುರಾಣ) ಹೇಳುತ್ತದೆ. 'ಹೇ ಗರುಡ! ಲಕ್ಷ್ಮೀದೇವಿಯೇ ಶ್ರೀಹರಿಗೆ ಉದಕ-ಶಯ್ಯಾ-ರೂಪಗಳಿಂದ ಇರುತ್ತಿದ್ದಳು.'

**ಶ್ಲೋಕ ೪-೫-೬**

**ಸರ್ವಕಾರ್ಯಲಯೇ ಜಾತೇ ಕಾರ್ಯಮಂಭಃ ಕುತೋ ಭವೇತ್**
**ಅಕಾರ್ಯಮಂಭಃಶ್ರೀರೇವೇತ್ಯನುಸಂಧಾಯ ಯೋಗರಾಟ್ ॥೪॥**

**ಸಲಿಲಂ ಶ್ರೀಪ್ರಕೃತ್ಯಾಖ್ಯಂ ತದಾಸೀತ್ಕಿಲ ಕೇವಲಮ್**
**ಅಂಭಸ್ಥ ಚೇತನಾನ್ಯೇತಿ ಶ್ರುತ್ಯರ್ಥಮುದದರ್ಶಯತ್ ॥೫॥**

**ಯಥೈಕಾತ್ಮ್ಯಾನುಭಾವೇನ ವಿಕಲ್ಪರಹಿತಃಸ್ವಯಮ್**
**ಭೂಷಣಾಯುಧಲಿಂಗಾದ್ಯಾ ಧತ್ತೇ ಶಕ್ತೀಃ ಸ್ವಮಾಯಯಾ ॥೬॥**

**ಅರ್ಥ:** ಸರ್ವಕಾರ್ಯಲಯೇ ಜಾತೇ—ಎಲ್ಲ ಕಾರ್ಯರೂಪವಸ್ತುಗಳೂ (ಕಾರಣದಿಂದ ಹುಟ್ಟಿದ್ದು ಕಾರ್ಯ) ಲಯವಾಗುತ್ತಿರಲು, ಕಾರ್ಯಂ ಅಂಭಃ—ಕಾರ್ಯರೂಪವೇ ಆದ ಉದಕವು, ಕುತೋ ಭವೇತ್—ಎಲ್ಲಿ ಬರಬೇಕು (ಎಲ್ಲಿರುವುದು ಸಾಧ್ಯ); ಅಕಾರ್ಯಂ ಅಂಭಃ—ಕಾರ್ಯರೂಪವಲ್ಲದ ಉದಕವು, ಶ್ರೀರೇವ—ಲಕ್ಷ್ಮೀದೇವಿಯೇ, ಇತಿ—ಎಂದು, ಅನುಸಂಧಾಯ—ತಿಳಿದು, ಯೋಗರಾಟ್—ಯೋಗೇಶ್ವರನಾದ (ಅಚಿಂತ್ಯಶಕ್ತಿಯುತನಾದ) ಶ್ರೀಹರಿಯು, (ಉದಕರೂಪಳಾದ ಶ್ರೀದೇವಿಯ ಸೇವೆಯನ್ನು ಸ್ವೀಕರಿಸಿದನು). ॥೪॥

ಶ್ರೀಪ್ರಕೃತ್ಯಾಖ್ಯಂ—**ಶ್ರೀಲಕ್ಷ್ಮೀ** ಎಂಬ ಹೆಸರಿನ, (ಅಥವಾ ಶ್ರೀ ಮತ್ತು ಪ್ರಕೃತಿ ಎಂಬ ಹೆಸರಿನ), ಕೇವಲಂ ಸಲಿಲಂ—ಉದಕವು ಮಾತ್ರ, ತದಾ—ಆ ಪ್ರಳಯಕಾಲದಲ್ಲಿತ್ತು; ಅಂಭಸ್ಥಚೇತನಾ—ಜಲದಲ್ಲಿರುವ ಚೇತನವು, ಅನ್ಯಾ—ಲಕ್ಷ್ಮಿಯೇ (ಉದಕಾಭಿಮಾನಿಗಳೆಂಬ ಇತರ ದೇವತೆಗಳಿಂದ ಭಿನ್ನಳು); ಇತಿ—ಹೀಗೆಂಬ, ಶ್ರುತ್ಯರ್ಥಂ—ಶ್ರುತಿಯ ಅರ್ಥವನ್ನು, ಉದ-ದರ್ಶಯತ್—(ಈ ಪ್ರಳಯಕಾಲದ ಜಲವು) ಉತ್ಕೃಷ್ಟವಾಗಿ (ಸ್ಪಷ್ಟವಾಗಿ) ತೋರಿಸಿತು. ॥೫॥

(ಕೇವಲ ಲಕ್ಷ್ಮೀಸ್ವರೂಪವು ಉದಕರೂಪದಿಂದ ಇರುವುದು ಹೇಗೆಂಬ ಸಂಶಯಬೇಡ—ಹೇಗೆಂದರೆ) ಯಥಾ—ಹೇಗೆ, ಸ್ವಯಂ—ತಾನು, ಸ್ವಮಾ-

ಯಯಾ— ಸ್ವೇಚ್ಛೆಯಿಂದಲೇ, ವಿಕಲ್ಪರಹಿತಃ— ಭೇದರಹಿತನಾಗಿ, ಐಕಾತ್ಮ್ಯಾನುಭಾವೇನ— (ತನ್ನಿಂದ) ಅತ್ಯಂತ ಅಭಿನ್ನಗಳೆಂಬ ಜ್ಞಾನಯುಕ್ತನಾಗಿಯೇ, ಭೂಷಣಾಯುಧ ಲಿಂಗಾಖ್ಯಾಃ— ಆಭರಣ, ಆಯುಧ ಮೊದಲಾದ ಚಿನ್ಹೆಗಳೆಂಬ, ಶಕ್ತೀಃ— (ತನ್ನ) ಶಕ್ತಿವಿಶೇಷಗಳನ್ನು (ತನ್ನ ವಿವಿಧರೂಪಗಳನ್ನು), ಧತ್ತೇ— ಧರಿಸಿರುವನೋ (ಹಾಗೆ ಶ್ರೀಲಕ್ಷ್ಮೀದೇವಿಯೇ ಜಲರೂಪಳೂ ಆಗಿರುವಳೆಂಬುದು ಯುಕ್ತವಾಗುತ್ತದೆ). ಶ್ರೀದೇವಿಯಿಂದ ಅಭಿನ್ನಗಳೆಂಬ ಜ್ಞಾನಯುಕ್ತನಾಗಿಯೇ, ತನ್ನ ಸ್ವರೂಪಾತ್ಮಕಭೂಷಣಾಯುಧಗಳ ಮೇಲೆ ಲಕ್ಷ್ಮ್ಯಾತ್ಮಕ ಭೂಷಣಾಯುಧಗಳನ್ನೂ ಶ್ರೀಹರಿಯು ಧರಿಸಿರುವನು.

## ಪದ ೯

ರಾಗ-ಕಾಂಬೋಧಿ; ತಾಳ-ಝಂಪೆ

**ತತ್ವಗಳಿಗತಿದೂರವಾದ ದೇಶದಲಿ ಜ-**
**ಗತ್ತಿನ ಪ್ರಳಯಕಾಲದಲಿ**
**ಭರ್ತಗೆ ರಮೆ ತಾನೆ ಭೂಷಣಾಯುಧಲಿಂಗ-**
**ವಸ್ತುಮಾಲೆಗಳಾಗಿಹಳು ಗಡ ॥೧॥**

**ಅರ್ಥ:** ತತ್ವಗಳಿಗೆ— ಮಹದಾದಿತತ್ವಗಳ ಮತ್ತು ತತ್ವಾಭಿಮಾನಿಗಳ, ಅತಿದೂರವಾದ ದೇಶದಲಿ— ಯಾವ ಕಾರ್ಯಗಳೂ ಇಲ್ಲದೆಡೆಯಲ್ಲಿ ಸಹ ಮತ್ತು (ಎಲ್ಲ ತತ್ವಗಳು— ಬ್ರಹ್ಮಾಂಡದ ಆವರಣಗಳು ಸಹ— ಮೂಲ ಪ್ರಕೃತಿಯಲ್ಲಿ ಲಯಗೊಂಡು, ತತ್ವಾಭಿಮಾನಿಗಳು ಸ್ವೋತ್ತಮರಲ್ಲಿ ಲೀನರಾಗಿ ಕಾರ್ಯರಹಿತರಾಗಿರುವ) ಜಗತ್ತಿನ ಪ್ರಳಯಕಾಲದಲಿ— ಪ್ರಳಯಕಾಲದಲ್ಲಿಯೂ, ರಮೆ— ಶ್ರೀಲಕ್ಷ್ಮೀದೇವಿಯು, ಭರ್ತಗೆ— ತನ್ನ ಪತಿಯಾದ ನಾರಾಯಣನಿಗೆ, ತಾನೆ— ಸ್ವಯಂ, ಭೂಷಣಾಯುಧಲಿಂಗವಸ್ತು ಮಾಲೆಗಳಾಗಿ— ಆಭರಣ, ಆಯುಧರೂಪದ, ವಸ್ತುಸಮೂಹಗಳಾಗಿ, ಇಹಳು ಗಡ— ಇರುವಳೆಂಬುದು ವೇದ ಪ್ರಸಿದ್ಧವು.

**ವಿಶೇಷಾಂಶ:** ಎಲ್ಲ ದೇಶ ಕಾಲಗಳಲ್ಲಿ ಶ್ರೀದೇವಿಯು, ನಾರಾಯಣನನ್ನು ಆಭರಣ ಆಯುಧ ಮೊದಲಾದ ಸಕಲ ವಸ್ತುರೂಪದಿಂದ ಸೇವಿಸುತ್ತಿರುವಳು. ಬ್ರಹ್ಮಾಂಡ, ಮತ್ತು ಅದರ ವಿಸ್ತಾರವಾದ ಆವರಣಗಳನ್ನು ಅತಿಕ್ರಮಿಸಿದ ಅನಂತವಾದ ಅವ್ಯಾಕೃತಾಕಾಶಪ್ರದೇಶದಲ್ಲಿಯೂ, ತತ್ವಗಳ ಮತ್ತು ತತ್ವಾಭಿಮಾನಿಗಳ ವ್ಯಾಪಾರವೇ ಇಲ್ಲದ ಪ್ರಳಯಕಾಲದಲ್ಲಿಯೂ, ಶ್ರೀಹರಿಗೆ ಬಹು

ಪ್ರಕಾರದಿಂದ ನಿತ್ಯ ಸೇವೆಯನ್ನು ಸಲ್ಲಿಸುತ್ತಿರುವಳು. ಸೃಷ್ಟಿಕಾಲದಲ್ಲಿ ಮತ್ತು ಸಾವರಣಬ್ರಹ್ಮಾಂಡಪ್ರದೇಶದಲ್ಲಿಯಾದರೋ, ತತ್ವಾಭಿಮಾನಿಗಳು ತಮ್ಮಿಂದ ಅಭಿಮನ್ಯವಾದ ತತ್ವಗಳಿಂದ ಶ್ರೀಹರಿಯನ್ನು ಯಥಾಯೋಗ್ಯವಾಗಿ ಸೇವಿಸುತ್ತಾರೆ. (ಕಾಮ, ಅನಿರುದ್ಧಾದಿ ದೇವತೆಗಳು ಚಕ್ರ, ಶಂಖಾದಿ ರೂಪಗಳಿಂದ ಆಯುಧಾದಿಗಳಾಗುವಂತೆ.)

**ಅಂಬುಧಿಯಾದಳೆ ಆಗ ಮಹಲಕುಮಿ**
**ಅಂಬರಾಭರಣವಾಗಿಹಳು**
**ಪೊಂಬಣ್ಣದಾಲದೆಲೆಯು ತಾನಾದಳೇ-**
**ನೆಂಬೆನವಳ ಸಾಹಸವನು** ॥೨॥

**ಅರ್ಥ:** ಆಗ—ಆ ಪ್ರಳಯಕಾಲದಲ್ಲಿ, ಮಹಲಕುಮಿ— ಮಹಾಲಕ್ಷ್ಮೀದೇವಿಯು, ಅಂಬುಧಿಯಾದಳೆ—ಸಮುದ್ರವಾದಳು, ಏನಾಶ್ಚರ್ಯ! ಅಂಬರಾಭರಣವಾಗಿಹಳು—(ಪೀತಾಂಬರಾದಿ) ವಸ್ತ್ರ ಮತ್ತು (ಕಿರೀಟಕುಂಡಲಾದಿ) ಆಭರಣರೂಪಳೂ ಆಗಿರುವಳು; ಪೊಂಬಣ್ಣದಾಲದೆಲೆಯು—ಸುವರ್ಣಕಾಂತಿಯ ವಟಪತ್ರವೂ, ತಾನಾದಳು—ತಾನೇ ಆದಳು, ಏನೆಂಬೆನು—ಎಷ್ಟು ಹೇಳಲಿ, ಅವಳ ಸಾಹಸವನು—ಆಕೆಯ ಶ್ರೀಹರಿಸೇವಾಉತ್ಸಾಹಸಾಮರ್ಥ್ಯ ವಿಶೇಷವನ್ನು!

**ಮಂದಾರಕುಸುಮದ ಮಾಲೆ ತಾನಾದಳು**
**ಗಂಧ ಪರಿಮಳವಾಗಿಹಳು**
**ಮಂದಮಾರುತನಂತೆ ಸುತ್ತಲೂ ಸುಳಿವಳು**
**ಇಂದಿರೆಯಿರವನೇನೆಂಬೇ** ॥೩॥

**ಅರ್ಥ:** ಮಂದಾರಕುಸುಮದ—ಮಂದಾರಪುಷ್ಪದ, ಮಾಲೆ ತಾನಾದಳು —ಹಾರವೂ ತಾನೇ ಆದಳು, ಗಂಧ ಪರಿಮಳವಾಗಿಹಳು—ಗಂಧ ಪರಿಮಳಗಳೂ ಆಗಿರುವಳು; ಮಂದಮಾರುತನಂತೆ—(ಮೃದುಸ್ಪರ್ಶವುಳ್ಳ ವಾಯುವೂ ಆಗಿ) ಗಾಳಿಯಂತೆ, ಸುತ್ತಲೂ ಸುಳಿವಳು—ಶ್ರೀಹರಿಯ ಸುತ್ತಲೂ ಸಂಚರಿಸುವಳು (ಬೀಸುವಳು); ಇಂದಿರೆಯ—ರಮಾದೇವಿಯ, ಇರವನು—(ಪ್ರಳಯಕಾಲದಲ್ಲಿ ಮತ್ತು ಸರ್ವದಾ) ನಾನಾರೂಪದಿಂದ ಶ್ರೀಹರಿಯನ್ನು ಸೇವಿಸುವ ಪ್ರಕಾರವನ್ನು, ಏನೆಂಬೆ—ಹೇಗೆ ವರ್ಣಿಸಲಿ! (ಬಣ್ಣಿಸಲು ಅಸಾಧ್ಯವೇ ಸರಿ).

**ಮುಖವೆಂಬ ಚಂದ್ರಮನ ಸೊಬಗ ಬೀರುವಳಾಗ**
**ಸುಖ ತನ್ನ ವಚನದಿ ಶುಕೋಕ್ತಿಗಳ**
**ಪಿಕನಂತೆ ಪಾಡುವಳು ಪ್ರಾಣನಾಯಕನಿಗೆ**
**ಸಕಲಸಂಭ್ರಮ ತೋರಿದಳು ॥೪॥**

**ಅರ್ಥ:** ಮುಖವೆಂಬ ಚಂದ್ರಮನ—ತನ್ನ ಮುಖವೆಂಬ ಚಂದ್ರನ, ಸೊಬಗ—ಆಹ್ಲಾದಕರ ಸೌಂದರ್ಯವನ್ನು, ಆಗ—ಆ ಕಾಲದಲ್ಲಿ, ಬೀರುವಳು—(ತನ್ನ ಪತಿಯ ಸಂತೋಷಕ್ಕಾಗಿ) ಪೂರ್ಣವಾಗಿ ಪ್ರಕಾಶಗೊಳಿಸುವಳು; ತನ್ನ ವಚನದಿ—ತನ್ನ ಶಬ್ದಗಳಿಂದ (ವೇದಗಳಿಂದ), ಶುಕೋಕ್ತಿಗಳ—(ಶುಕದಂತೆ) ಮಧುರನುಡಿಗಳನ್ನೂ, ಪಿಕನಂತೆ—ಕೋಗಿಲೆಯಂತೆ (ಮಧುರಕಂಠದಿಂದ), ಸುಖ—ಆನಂದದಿಂದ, ಪಾಡುವಳು—ಹಾಡುತ್ತಾಳೆ; ಪ್ರಾಣನಾಯಕಗೆ—ತನ್ನ ಪ್ರಾಣದೊಡೆಯನಿಗೆ, ಸಕಲ—ಸರ್ವ, ಸಂಭ್ರಮತೋರಿದಳು—ಸಂಭ್ರಮಗಳನ್ನು (ವೈಭವಪೂರ್ಣಸೇವೆಗಳನ್ನು ಉತ್ಸಾಹದಿಂದ) ಪ್ರಕಟಿಸಿದಳು.

**ತುಂಬಿ ಸುಳಿವಂತೆ ಕಂಗಳ ನೋಟದಿಂ-**
**ದಂಬುಜಾಕ್ಷನಿಗರ್ತಿಯಿತ್ತು**
**ಬಿಂಬಾಧರದೊಳಿಪ್ಪ ಸುಧೆಯ ರಸವವನಿಗೆ**
**ಚುಂಬಿಸಿಯುಣಿಸಿದಳಾಬಾಲೇ ॥೫॥**

**ಅರ್ಥ:** ತುಂಬಿ ಸುಳಿವಂತೆ—ತುಂಬಿ ಹೊರಡುವಂತೆ, ಕಂಗಳ ನೋಟ ದಿಂದ—ಪ್ರೇಮಪೂರ್ಣದೃಷ್ಟಿಯಿಂದ, ಆ ಬಾಲೇ—ನಿತ್ಯತರುಣಿಯಾದ ಶ್ರೀದೇವಿಯು, ಅಂಬುಜಾಕ್ಷನಿಗೆ—ಶ್ರೀಹರಿಗೆ (ಪುಂಡರೀಕಾಕ್ಷನಾದ ತನ್ನ ರಮಣನಿಗೆ), ಅರ್ತಿಯಿತ್ತು—ಸಂತೋಷವನ್ನುಂಟುಮಾಡುತ್ತಾ, ಬಿಂಬಾಧರದೊಳಿಪ್ಪ—ಕೆಂಪಾದ ಕೋಮಲ ತುಟಿಗಳಲ್ಲಿರುವ, ಸುಧೆಯ ರಸವ—ಅಮೃತರಸವನ್ನು, ಅವನಿಗೆ—ಶ್ರೀಹರಿಗೆ, ಚುಂಬಿಸಿ ಉಣಿಸಿದಳು—ಮುತ್ತಿಡುವಮೂಲಕ ಉಣಿಸಿದಳು.

**ವಿಶೇಷಾಂಶ:** ಶ್ರೀದೇವಿಯು ನಾನಾರೂಪಗಳಿಂದ ತನ್ನ ರಮಣನನ್ನು ಸೇವಿಸುವ ಪ್ರಮೇಯ ವಿಷಯದಲ್ಲಿ ಉದಾಹರಿಸಿರುವ ಪ್ರಮಾಣಗಳನ್ನು ೮ನೇ ಪದ್ಯದ ವಿವರಣೆಯ ಭಾಗದಲ್ಲಿ ನೋಡಬಹುದು.

**ಶ್ಲೋಕ ೭**

**ಅಸಾವೇಕಾರ್ಣವೀ ಭೂತೇ ಮಾಯಾವಟದಳೇ ಪುಮಾನ್।**
**ಜಗತ್ಸ್ವಜಠರೇ ಬಿಭ್ರತ್ತಸ್ಮಿನ್ ಶೇತೇ ಜನಾರ್ದನಃ॥**

**ಅರ್ಥ:** ಅಸೌ ಪುಮಾನ್—ಈ ಪ್ರಳಯಕಾಲದ ಪುರುಷರೂಪನಾದ, ಜನಾರ್ದನಃ—ಶ್ರೀಹರಿಯು, ಏಕಾರ್ಣವೀಭೂತೇ—ವ್ಯಾಪ್ತವಾದ ಪ್ರಳಯೋದಕದಲ್ಲಿರುವ, ಮಾಯಾವಟದಳೇ—ಲಕ್ಷ್ಮ್ಯಾತ್ಮಕವಟಪತ್ರದಲ್ಲಿ, ಜಗತ್—ವಿಶ್ವವನ್ನು, ಸ್ವಜಠರೇ—ತನ್ನ ಉದರದಲ್ಲಿ, ಬಿಭ್ರತ್—ಧರಿಸುವವನಾಗಿ, ತಸ್ಮಿನ್—ಆ ಲಕ್ಷ್ಮ್ಯಾತ್ಮಕ ಜಲರಾಶಿಯಲ್ಲಿ, ಶೇತೇ—ಮಲಗುತ್ತಾನೆ.

**ಪದ ೧೦**

ರಾಗ-ಆಹೇರಿ; ತಾಳ-ಅಟ

**ಭೂಲಕ್ಷ್ಮೀದುರ್ಗೆಯರಲಿ ಸ್ವಾಂತದಿ ಹರಿ**
**ಆಲದೆಲೆಯ ಮೇಲೆ ಮಲಗಿ**
**ಆ ಲಯಾಂಬುಧಿಕಲ್ಲೋಲದಲಿ ಉಯಿ-**
**ಯಾಲೆಯಾಡುವನ ಲೀಲೆಯಲಿ** ॥೧॥

**ಅರ್ಥ:** ಭೂಲಕ್ಷ್ಮೀದುರ್ಗೆಯರಲಿ—ಭೂ, ಶ್ರೀ, ದುರ್ಗಾನಾಮಕ ರೂಪಗಳುಳ್ಳ ಮಹಾಲಕ್ಷ್ಮೀದೇವಿಯೊಂದಿಗೆ, ಸ್ವಾಂತದಿ—ಸಂತೋಷದಿಂದ (ಸ್ವೇಚ್ಛೆಯಿಂದ), ಹರಿ—ಶ್ರೀಹರಿಯು, ಆಲದೆಲೆಯ ಮೇಲೆ—ವಟಪತ್ರದ ಮೇಲೆ, ಮಲಗಿ—ಮಲಗಿಕೊಂಡು, ಆ—ಲಕ್ಷ್ಮೀರೂಪದ, ಲಯಾಂಬುಧಿ—ಪ್ರಳಯ ಸಮುದ್ರದ, ಕಲ್ಲೋಲದಲಿ—ಅಲೆಗಳಲ್ಲಿ, ಉಯಿಯಾಲೆಯಾಡುವನ ಲೀಲೆಯಲಿ—ಉಯ್ಯಾಲೆಯ (ತೂಗುಮಂಚದಲ್ಲಿ) ಕ್ರೀಡೆಯಲ್ಲಿರಲು (ತೂಗಿಕೊಳ್ಳುವವನಂತೆ ವಿಹರಿಸುತ್ತಿರಲು);

**ಒಮ್ಮೆ ದುರ್ಗೆಯಹಳೊಮ್ಮೆ ಭೂಮಿಯಪ್ಪ-**
**ಳೊಮ್ಮೆ ಶ್ರೀದೇವಿಯಾಗಿಹಳು**
**ಇಮ್ಮೈಯೊಳೊಮ್ಮೊಮ್ಮೆ ಪತಿಯಪ್ಪುವಳು ಸುಖ-**
**ಚಿನ್ಮಯಗರ್ತಿಯೇನೇನೆಂಬೆ** ॥೨॥

**ಅರ್ಥ:** ಒಮ್ಮೆ—ಒಂದುವೇಳೆ, ದುರ್ಗೆಯಹಳು—(ಲಕ್ಷ್ಮೀದೇವಿಯು) ದುರ್ಗಾರೂಪದಿಂದಿರುವಳು; ಒಮ್ಮೆ—ಮತ್ತೊಂದುವೇಳೆ, ಭೂಮಿಯಪ್ಪಳು

—ಭೂದೇವಿಯಾಗಿರುವಳು; ಒಮ್ಮೆ—ಮತ್ತೊಂದುವೇಳೆ, ಶ್ರೀದೇವಿಯಾಗಿಹಳು—ಶ್ರೀರೂಪದಿಂದಿರುವಳು; ಒಮ್ಮೊಮ್ಮೆ—ಒಂದೊಂದು ವೇಳೆ, ಇಮ್ಮೈಯೊಳು—ಎರಡು ರೂಪಗಳಿಂದ; ಪತಿಯಪ್ಪುವಳು—ಪತಿಯನ್ನು ಆಲಂಗಿಸುವಳು; ಸುಖಚಿನ್ಮಯಗೆ—ಜ್ಞಾನಾನಂದರೂಪನಿಗೆ (ಶ್ರೀಹರಿಗೆ), ಆರ್ತಿಯ—(ತೋರಿಸುವ) ಪ್ರೇಮವನ್ನು (ಪ್ರೀತಿವಿಶೇಷವನ್ನು), ಏನೇನೆಂಬೆ—ಎಷ್ಟು ಪ್ರಕಾರವೆಂದು ವರ್ಣಿಸಲಿ!

**ಇವಳಪ್ಪಿಕೊಂಬ ಹರಿಯ ವಕ್ಷದ ಗಂಧ**
**ಅವಳುರೋಜದಿ ತೋರುತಿಹುದು**
**ಅವಳ ಚುಂಬಿಸಿದಾಗ ಪತಿಯ ದಂತದ ಘಾಯ**
**ಇವಳಧರದಲೊಪ್ಪುತಿಹುದು** ॥೩॥

ಇವಳಪ್ಪಿಕೊಂಬ—ಲಕ್ಷ್ಮೀದೇವಿಯು ಶ್ರೀಹರಿಯನ್ನು ಆಲಂಗಿಸುವಾಗ, ಹರಿಯ—ಶ್ರೀಹರಿಯ, ವಕ್ಷದ ಗಂಧ—ವಕ್ಷಸ್ಥಳದ ಪರಿಮಳವು, ಅವಳುರೋಜದಿ—ಶ್ರೀಲಕ್ಷ್ಮೀದೇವಿಯ ಸ್ತನಭಾಗದಲ್ಲಿ, ತೋರುತಿಹುದು—ಪ್ರಸರಿಸಿ ಶೋಭಿಸುತ್ತದೆ; ಅವಳ—ಆಕೆಯನ್ನು, ಚುಂಬಿಸುವಾಗ—(ಶ್ರೀಹರಿಯು) ಮುತ್ತಿಡುವಾಗ, ಪತಿಯ—ಶ್ರೀಹರಿಯ, ದಂತದ ಘಾಯ—ಹಲ್ಲುಗಳಿಂದಾದ ಗಾಯವು, ಇವಳ—ಈಕೆಯ, ಅಧರದಲಿ—ತುಟಿಯಲ್ಲಿ, ಒಪ್ಪುತಿಹುದು—(ಪ್ರೇಮದ ವೇಗವನ್ನು ಸೂಚಿಸುತ್ತ) ಶೋಭಿಸುತ್ತದೆ.

**ಅಚ್ಯುತನುದರದಿ ಲಿಂಗದೇಹದ ಕಣ್ಣ**
**ಮುಚ್ಚಿ ಜೀವರು ನಿದ್ರೆಗೈಯೆ**
**ಎಚ್ಚತ್ತಿಹನು ಗಡ ಮುಖ್ಯಪ್ರಾಣನು ಸ್ವಸ್ಥ-**
**ಚಿತ್ತದ ಮುಕ್ತರೊಡನೆ** ॥೪॥

**ಅರ್ಥ:** ಅಚ್ಯುತನ—ಶ್ರೀಹರಿಯ, ಉದರದಿ—ಹೊಟ್ಟೆಯಲ್ಲಿ, ಲಿಂಗ ದೇಹದ ಕಣ್ಣ—ಲಿಂಗದೇಹದಲ್ಲಿರುವ ಕಣ್ಣನ್ನು, ಮುಚ್ಚಿ—ಮುಚ್ಚಿಕೊಂಡು, ಜೀವರು—(ಸೃಜ್ಯರಾದ—ಎಂದರೆ ಮುಂದಿನ ಕಲ್ಪದಲ್ಲಿ ಸೃಷ್ಟಿಯಲ್ಲಿ ಬರಲಿರುವ) ಜೀವರುಗಳು, ನಿದ್ರೆಗೈಯೆ—ನಿದ್ರಾವಸ್ಥೆಯಲ್ಲಿರುತ್ತಿರಲು, ಮುಖ್ಯಪ್ರಾಣನು—ಮುಖ್ಯಪ್ರಾಣದೇವನು, ಸ್ವಸ್ಥಚಿತ್ತದ ಮುಕ್ತರೊಡನೆ—ಧ್ಯಾನಂಗತರಾದ ಮುಕ್ತ ಜೀವರೊಂದಿಗೆ, ಎಚ್ಚತ್ತಿಹನು ಗಡ—ಎಚ್ಚರವಾಗಿಯೇ ಇರುವನು.

**ಪ್ರಲಯೇऽಪಿ ಅವಿಲುಪ್ತ ಬಾಹ್ಯಜ್ಞವೆಂದ-**
**ಖಿಲರೊಳು ಮುಖ್ಯಮಾರುತನ**
**ನೆಲೆಯರಿತು ವಾಯೋರ್ವವ ನಿತ್ಯನೆಂಬ ನಿ-**
**ರ್ಮಲಶ್ರುತಿ ಗರ್ಜಿಸುತಿದೆಕೋ ॥೫॥**

**ಅರ್ಥ:** ಪ್ರಳಯೇऽಪಿ — ಪ್ರಳಯಕಾಲದಲ್ಲಿ ಸಹ, ಅವಿಲುಪ್ತ — ಲೋಪವಾಗದಿರುವ, ಬಾಹ್ಯಜ್ಞವೆಂದ — ಬಾಹ್ಯಸರ್ವವಸ್ತುವಿಷಯಕಜ್ಞಾನವುಳ್ಳವನೆಂದು ಹೇಳುವ, ವಾಯೋರ್ವವ ನಿತ್ಯನೆಂಬ ನಿರ್ಮಲಶ್ರುತಿ — (ವಾಯು — ಓರ್ವವ) 'ವಾಯುವೊಬ್ಬನೇ ನಿತ್ಯನು' ಎಂಬ ಪವಿತ್ರವೇದವಾಕ್ಯವು, (ಅಥವಾ) 'ವಾಯುರ್ವಾವ ನಿತ್ಯಃ' ಎಂಬ ಶ್ರುತಿಯು, [ವಾಯುವೊಬ್ಬನೇ ಪ್ರಳಯಕಾಲದಲ್ಲಿ ಎಂದಿನಂತೆ — ನಿತ್ಯವಿದ್ದಂತೆ ಇರುವನು], ಅಖಿಲರೊಳು — ಸಮಸ್ತಜೀವರ ಮಧ್ಯದಲ್ಲಿ, ಮುಖ್ಯಮಾರುತನ — ಮುಖ್ಯವಾಯುದೇವನ, ನೆಲೆಯರಿತು — ಸ್ವರೂಪವನ್ನು ತಿಳಿದು, ಗರ್ಜಿಸುತಿದೆಕೋ — (ಮುಖ್ಯಪ್ರಾಣನು ಪ್ರಳಯಕಾಲದಲ್ಲಿ ಸಹ ಜಾಗ್ರತನಾಗಿರುವನೆಂದು) ಘೋಷಿಸುತ್ತಿದೆ ನೋಡು.

**ದೇಹಿ ನಿದ್ರಿತನಾಗೆ ಅವನ ದೇಹದೊಳಿರ್ದ**
**ಜೀವರು ನಿದ್ರೈಗೈಯೆ**
**ಹೋಹ ಬಾಹ ಶ್ವಾಸವ ನಡೆಸುವ ಮ-**
**ತ್ತಿಹದಲಯದ ಕಾಲದಲ್ಲಿ ॥೬॥**

**ಅರ್ಥ:** ದೇಹಿ — (ಲಿಂಗದೇಹದಲ್ಲಿರುವ) ಜೀವನು, ನಿದ್ರಿತನಾಗೆ — ನಿದ್ರಾವಸ್ಥೆಯನ್ನು ಹೊಂದಲು, ಅವನ ದೇಹದೊಳಿರ್ದ — ಶ್ರೀಹರಿಯ ಉದರದಲ್ಲಿದ್ದ, ಜೀವರು — ಜೀವರೆಲ್ಲರು, ನಿದ್ರೈಗೈಯೆ — ನಿದ್ದೆಮಾಡುತ್ತಿರಲು, ಹೋಹ ಬಾಹ — ಹೋಗುವ ಬರುವ, ಶ್ವಾಸವ — ಉಸಿರನ್ನು, ಇಹದ — ಜಗತ್ತಿನ, ಲಯದ ಕಾಲದಲ್ಲಿ — ಪ್ರಳಯಕಾಲದಲ್ಲಿ, ನಡೆಸುವ — ನಿಲ್ಲದಂತೆ ನಡೆಸುತ್ತಾನೆ.

**ವಿಶೇಷಾಂಶ:** (೧) *'ಅತಿಸುಂದರಾಃಸುರಭಯಃಪುರುಷಾಃ' 'ಸುಖಸಂವಿದಾತ್ಮಕತಯಾ ವಪುಷಾಂ ಸುರಭಿತ್ವಮೇವ ಬಹಿರಂತರಪಿ'* ಎಂಬ (ಸುಮಧ್ವ ವಿಜಯ) ವಾಕ್ಯಗಳಲ್ಲಿ, 'ವೈಕುಂಠದಲ್ಲಿರುವ ಮುಕ್ತಪುರುಷರು ಪರಮಸುಂದರರು; ಸುಖಜ್ಞಾನಾತ್ಮಕವಾದ ಅವರ ದೇಹಗಳಿಗೆ, ಒಳಹೊರಗೆ ಸಹ ಸುಗಂಧಿತ್ವವೇ' ಎಂದು ಹೇಳಲಾಗಿದೆ. ಹೀಗೆ ಮುಕ್ತರ ದೇಹಗಳೇ ಸ್ವಾಭಾವಿಕಸುಗಂಧಯುಕ್ತವಾಗಿರಲು, ಶ್ರೀಲಕ್ಷ್ಮೀದೇವಿಯು ಸುಗಂಧ-

ಪರಿಮಳದಿಂದೊಪ್ಪುವ ದೇಹವುಳ್ಳವಳೆಂದು ಹೇಳಲೇನು! ಆದರೂ ಶ್ರೀಹರಿಯ ಆಲಿಂಗನದಿಂದ, ಆತನ ವಕ್ಷಸ್ಥಳದ ಸುಗಂಧವು ಆಕೆಯ ಸ್ತನಭಾಗದಲ್ಲಿ ತೋರಿತೆಂದು ವರ್ಣಿಸಿರುವುದು, ಮಹಾಪ್ರಮೇಯ ಸೂಚಕವಾಗಿದೆ. ಮುಕ್ತಜೀವರ ಹಾಗೂ ಶ್ರೀಲಕ್ಷ್ಮೀದೇವಿಯ ಅಪ್ರಾಕೃತದೇಹಗಳು ಸರ್ವಪ್ರಕಾರದಿಂದ ಶ್ರೀಹರಿಯ ಅಧೀನಗಳೇ ಆಗಿವೆ. ಈ ದೇಹಗಳ ಸುಗಂಧಿತ್ವವೂ ಶ್ರೀಹರಿಯ ಅಧೀನವೇ. *'ಸದ್ದೇಹಃಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ। ಜ್ಞಾನ ಜ್ಞಾನಃಸುಖಸುಖಃ ಸ ವಿಷ್ಣುಃ ಪರಮೋಕ್ಷರಃ॥'* ಎಂದು ಶ್ರುತಿಯು, ಶ್ರೀಹರಿಯ ದೇಹವು ಅತ್ಯುತ್ಕೃಷ್ಟವಾದ ಜ್ಞಾನ, ಶಕ್ತಿ, ಸುಖಾದಿಸ್ವರೂಪವೇ ಆಗಿದ್ದು ಉತ್ಕಟವಾದ ಮನೋಹರವಾದ ಪರಿಮಳಗಂಧರೂಪವೂ ಆಗಿದೆಯೆಂದು ಹೇಳುತ್ತದೆ—ಲಕ್ಷ್ಮ್ಯಾದಿಸರ್ವರ, ಸುಖ, ಜ್ಞಾನ, ಶಕ್ತಿ, ಗಂಧಗಳ ನಿತ್ಯತ್ವವನ್ನು ರಕ್ಷಿಸತಕ್ಕದ್ದು ಶ್ರೀಹರಿಯ ಸ್ವರೂಪ.

(೨) ಚುಂಬನದಿಂದ ಶ್ರೀದೇವಿಯ ತುಟಿಗಳಲ್ಲಿ ಘಾಯವಾಯಿತೆಂದು ವರ್ಣಿಸಿರುವುದನ್ನು ಪ್ರೇಮದ ಗಾಢತ್ವ ಮತ್ತು ತೀವ್ರತೆಗಳನ್ನು ತಿಳಿಸಲಿಕ್ಕಾಗಿ ಎಂದು ತಿಳಿಯಬೇಕು. ರಮಾನಾರಾಯಣರ ದೇಹಗಳು, ನಿತ್ಯನಿರ್ವಿಕಾರ ಅಪ್ರಾಕೃತದೇಹಗಳು. ಘಾಯ (ವ್ರಣಾದಿ) ರೂಪವಿಕಾರಕ್ಕೆ ಅವಕಾಶವೇ ಇಲ್ಲ. ಚುಂಬನದಲ್ಲಿರುವ ಪ್ರೇಮದ ತೀವ್ರತೆಯಿಂದ ತುಟಿಗಳಲ್ಲಿ ಘಾಯವಾಗುವುದು ಲೋಕದಲ್ಲಿ ಕಂಡಿಲ್ಲವೇ! ಪ್ರೇಮದ ರಭಸವು ಇಳಿದ ಮೇಲೆ, ಲೋಕದಲ್ಲಿ ಗಾಯದ ನೋವು ತಪ್ಪಿದ್ದಲ್ಲ. ಲೋಕವಿಲಕ್ಷಣತ್ವವನ್ನು ತಿಳಿಸಲಿಕ್ಕಾಗಿಯೇ 'ದಂತದ ಘಾಯ ಒಪ್ಪುತಿಹುದು'—ಶೋಭಿಸುತ್ತದೆಂದು ಹೇಳಿರುವರು.

(೩) ಪ್ರಳಯಕಾಲದಲ್ಲಿ ಸಹ ವಾಯುದೇವನು ***'ಪ್ರತಿಭಾತ ಪರಾವರಃ'*** ಎಂದು ಹೇಳಿದ್ದರಿಂದ, ಆ ಕಾಲದ ರಮಾನಾರಾಯಣರ ಕ್ರೀಡೆಯ ಜ್ಞಾನವೂ, ವಾಯುದೇವನಿಗಿರುವುದೆಂದು ತಿಳಿಯಕೂಡದು. ವಾಯುದೇವನು, ಪ್ರಳಯ ಕಾಲದಲ್ಲಿ ಶ್ರೀಹರಿಯ ಉದರದಲ್ಲಿರುವಾಗ ಸಹ, ಶ್ರೀಹರಿಯ ಪ್ರತ್ಯಕ್ಷವುಳ್ಳವನೆಂಬಲ್ಲಿ ಸಂಶಯವಿಲ್ಲ. ಆದರೆ ಶ್ರೀಹರಿಯ ಸಕಲ ವ್ಯಾಪಾರಗಳ ಜ್ಞಾನವಿರುತ್ತೆಂದಾಗಲಿ (ಈ ವಿಧವಾದ ಪರಿಪೂರ್ಣಜ್ಞಾನವು ಎಂದೂ ಇಲ್ಲವೆಂಬುದೂ ಸ್ಪಷ್ಟವೇ), ರಮೆಯೊಂದಿಗೆ ರಮಿಸುವುದನ್ನು ನೋಡುವನೆಂದಾಗಲಿ ತಿಳಿಯಕೂಡದು. ರಮಾನಾರಾಯಣರ ಏಕಾಂತಕ್ಕೆ ಭಂಗತರುವಂತಹ ಅಪ್ರಿಯ ವ್ಯಾಪಾರವು ವಾಯುದೇವನಿಂದ ಎಂದೂ ಘಟಿಸದು—ಶ್ರೀಹರಿಯು ಆತ-

ನಿಂದ ತನಗೆ ಅಪ್ರಿಯವಾದುದನ್ನು ಎಂದೂ ಮಾಡಿಸುವುದಿಲ್ಲ. ೭ನೇ ಪದದ ವಿಶೇಷಾಂಶ ೪ರಲ್ಲಿ **'ನಿದ್ದೆಗೊಳಿಸಿದ'** ಎಂಬುದರ ಅರ್ಥವಿವರಣೆಯನ್ನು ಇಲ್ಲಿ ನೋಡಿಕೊಳ್ಳಬೇಕು.

(೪) ಪ್ರಳಯಕಾಲದಲ್ಲಿ ಶ್ರೀಹರಿಯ ಉದರದಲ್ಲಿರುವ ಜೀವರ ಪೈಕಿ, ಅಮುಕ್ತರು, ಎಂದರೆ ಸೃಜ್ಯರು—ಮುಂದಿನ ಕಲ್ಪದಲ್ಲಿ ಸೃಷ್ಟಿಗೆ ಬರತಕ್ಕ-ಜೀವರು, ನಿದ್ರಾವಸ್ಥೆಯಲ್ಲಿರುತ್ತಾರೆ. ಅವರಿಗೆ ಸ್ವರೂಪದೇಹದಮೇಲೆ ಲಿಂಗ ದೇಹದ ಕವಚ ಮಾತ್ರವಿದೆ. ಇವರಲ್ಲಿದ್ದು ಶ್ವಾಸೋಚ್ಛ್ವಾಸಗಳನ್ನು ವಾಯು-ದೇವನೇ ನಡೆಸುತ್ತಾನೆ. ಲಿಂಗಭಂಗವನ್ನು ಹೊಂದಿ, ಶ್ರೀಹರಿಯ ಉದರ ಪ್ರವೇಶಮಾಡಿದವರು ಧ್ಯಾನಂಗತರಾಗಿರುವರು. ಅವರಲ್ಲಿ ವಾಯುದೇವರ ವ್ಯಾಪಾರವಿಲ್ಲ. ಯದ್ಯಪಿ, ಸ್ವರೂಪ, ಲಿಂಗ, ಅನಿರುದ್ಧ ಮತ್ತು ಸ್ಥೂಲಗಳೆಂಬ ಪ್ರತಿಜೀವರಿಗೆ ಸ್ಥಿತಿಕಾಲದಲ್ಲಿ (ಸಂಸಾರಾವಸ್ಥೆಯಲ್ಲಿ) ಇರುವ ನಾಲ್ಕು ದೇಹ-ಗಳಲ್ಲಿದ್ದು ಶ್ವಾಸಾದಿ ವ್ಯಾಪಾರಗಳನ್ನು ನಡೆಸುವಾತನು ವಾಯುದೇವನೇ. ಆದರೆ ಲಿಂಗದೇಹವು ಕಳಚಿಹೋದನಂತರ ಸ್ವರೂಪದೇಹಮಾತ್ರವಿರುವಾಗ ಅದರೊಳಗೆ ಆತನ ವ್ಯಾಪಾರವಿಲ್ಲ. *'ವಾಯುರ್ಹಿ ಸರ್ವಜೀವಾನಾಮ-ಭಿಮಾನೀ ನಿಯಾಮಕಃ'*—ಎಂದರೆ, 'ವಾಯುದೇವನು ಸರ್ವಜೀವರ ಅಭಿ-ಮಾನಿಯೂ ನಿಯಾಮಕನೂ ಆಗಿರುವನು' ಎಂಬ ವಾಕ್ಯದಲ್ಲಿ, ಸರ್ವಜೀವ-ರೆಂಬಲ್ಲಿ ಮುಕ್ತಜೀವರು ಸೇರುವುದಿಲ್ಲ. *'ಮುಕ್ತಾ ಏವ ಹಿ ಮುಕ್ತಾನಾಂ ವಿಶಿಷ್ಟಾ ವಿನಿಯಾಮಕಾಃ'* ಎಂಬಲ್ಲಿ ಮುಕ್ತರಿಗೆ ಸ್ವೋತ್ತಮಮುಕ್ತರೇ ನಿಯಾಮಕರೆಂದು ಹೇಳಲಾಗಿದೆ. ವಾಯುದೇವನು ಅಮುಕ್ತವರ್ಗದಲ್ಲಿರುವುದರಿಂದ, ಅಮುಕ್ತರಿಗೇ ವಿನಿಯಾಮಕನೆಂದು ಸಿದ್ಧವಾಗುತ್ತದೆ. ಈ ವಾಕ್ಯದ ವ್ಯಾಖ್ಯಾನವು ಹೀಗಿದೆ: *'ಸಕಲಲಿಂಗದೇಹಾನಾಮಪಿ ಅಹಂಕಾರಪಂಚಭೂತೈಕಾದಶೇಂದ್ರಿಯೈರುಪಚ-ಯಸ್ಯ ಉಕ್ತತ್ವೇನ ಯುಕ್ತಂ ವಾಯೋಃ ಅಶೇಷಸ್ಥೂಲಸೂಕ್ಷ್ಮಶರೀರವಜ್ಜೀ-ವಾಭಿಮಾನಿತ್ವಂ'*—ಇದರ ಭಾವಾರ್ಥ: 'ಎಲ್ಲರ ಲಿಂಗದೇಹಗಳೂ—ಅಹಂಕಾರ, ಪಂಚಭೂತಗಳು, ಏಕಾದಶ ಇಂದ್ರಿಯಗಳೆಂಬ ೧೬ ತತ್ವಾಂಶ-ಗಳಿಂದ (ಷೋಡಶಕಲೆಗಳಿಂದ) ಆದವುಗಳು; ಸೃಷ್ಟಿಕಾಲದಲ್ಲಿ ಈ ಲಿಂಗ-ದೇಹಗಳಿಗೆ ಉಪಚಯವು ಹೇಳಲ್ಪಡುವುದರಿಂದ, (ಈ ಷೋಡಶ ತತ್ವಗಳ ಅಭಿಮಾನಿಗಳಿಗೂ ನಿಯಾಮಕರಾದ) ವಾಯುದೇವನು ಸ್ಥೂಲಸೂಕ್ಷ್ಮ ಶರೀರಗಳುಳ್ಳ ಸಕಲರಿಗೂ ನಿಯಾಮಕನೆಂಬುದು ಯುಕ್ತವೇ ಆಗಿದೆ'

ಅಮುಕ್ತರಾದ ಸರ್ವ (ತ್ರಿವಿಧ ಸರ್ವ) ಜೀವರ, ಸ್ವರೂಪ, ಲಿಂಗ, ಅನಿರುದ್ಧ ಮತ್ತು ಸ್ಥೂಲದೇಹಗಳಲ್ಲಿದ್ದು ಶ್ವಾಸನಿಯಾಮಕನಾಗಿ, ಹಂಸಮಂತ್ರಜಪವನ್ನು ನಿರಂತರವಾಗಿ ನಡೆಸುವ ಅದ್ಭುತಮಹಿಮೆಯು, ಮುಖ್ಯ ಪ್ರಾಣನಿಗಲ್ಲದೆ ಮತ್ತೊಬ್ಬನಿಗಿಲ್ಲ. ಆದ್ದರಿಂದ ಪ್ರಳಯಕಾಲದಲ್ಲಿ ಸಹ ಅಮುಕ್ತಜೀವರಲ್ಲಿ, ಆಗ ಅವರಿಗಿರುವ ದೇಹಗಳಲ್ಲಿದ್ದು ಶ್ವಾಸೋಚ್ಛ್ವಾಸಗಳನ್ನು ನಡೆಸುತ್ತಾನೆಂಬುದು ಸಿದ್ಧವೇ ಸರಿ. ಹರಿಕಥಾಮೃತಸಾರದಲ್ಲಿ ಶ್ರೀಜಗನ್ನಾಥ ದಾಸಾರ್ಯರು ಈ ಪ್ರಮೇಯವನ್ನು ಹೀಗೆ ನಿರೂಪಿಸಿದ್ದಾರೆ:

*ಜೀವಲಿಂಗನಿರುದ್ಧಸ್ಥೂಲಕ-*
*ಳೇವರಗಳಲಿ ವಿಶ್ವತುರಗ-*
*ಗ್ರೀವಮೂಲೇಶಾಚ್ಯುತತ್ರಯಹಂಸಮೂರ್ತಿಗಳ।*
*ಈ ವಿಧ ಚತುಸ್ಥಾನದಲಿ ಶಾಂ-*
*ತೀವರನ ಈರೆರಡು ರೂಪದಿ*
*ಭಾವಿಸುವರೇಕೋನವಿಂಶತಿಮೂರ್ತಿ ಸರ್ವತ್ರ॥*

*ಈ ಶರೀರಚತುಷ್ಟಯಗಳೊಳು*
*ಕೋಶಧಾತುಗಭಾರತಿಪಪ್ರಾ-*
*ಣೇಶ ಇಪ್ಪತ್ತೊಂದುಸಾವಿರದಾರುನೂರೆನಿಪ।*
*ಶ್ವಾಸರೂಪಕಹಂಸ ಭಾಸ್ಕರ-*
*ಭೇಶರೊಳಗಿದ್ದವರ ಕೈವಿಡಿ-*
*ದೀ ಸರೋಜಭವಾಂಡದೊಳು ಸರ್ವತ್ರ ತುಂಬಿಹನು॥*

**ಭಾವಾರ್ಥ:** ಸ್ವರೂಪ, ಲಿಂಗ, ಅನಿರುದ್ಧ, ಸ್ಥೂಲಗಳೆಂದು ನಾಲ್ಕು ದೇಹ-ಗಳು—ಸಂಸಾರಿಜೀವರಿಗೆ; ಇವುಗಳಲ್ಲಿ ಕ್ರಮದಿಂದ, ವಿಶ್ವ—ಹಯಗ್ರೀವ—ನಾರಾಯಣ (ಮೂಲೇಶ) (ಇವು ೩) ಮತ್ತು ಅಚ್ಯುತ, ಅನಂತ, ಗೋವಿಂದ ಎಂಬ ಮೂರು ಮತ್ತು ಹಂಸ (ಹೀಗೆ ೪ರೂಪಗಳು) ಶ್ರೀಹರಿಯ ರೂಪ-ಗಳಿರುವುವು. ಇವು ಏಳುರೂಪಗಳು ಮತ್ತು ಎರೆಡೆರಡುರೂಪಗಳುಳ್ಳ ಅನಿರುದ್ಧನ (೪) ರೂಪಗಳು (ಅನಿರುದ್ಧನಾರಾಯಣ, ಅನಿರುದ್ಧವಾಸುದೇವ; ಅನಿರುದ್ಧಸಂಕರ್ಷಣ, ಅನಿರುದ್ಧಪ್ರದ್ಯುಮ್ನ); ಮತ್ತು ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ ಎಂಬ ೮ ರೂಪ-ಗಳು; **ಒಟ್ಟು ೧೯ ರೂಪಗಳನ್ನು ಚಿಂತಿಸತಕ್ಕದ್ದು.** ಈ ಜೀವಸ್ವರೂಪಾದಿ ನಾಲ್ಕು ದೇಹಗಳಲ್ಲಿಯೂ ಶ್ವಾಸರೂಪದಿಂದ ಹಂಸಜಪಮಾಡುವ ಮುಖ್ಯ

ಪ್ರಾಣನು, ಅನ್ನಮಯಾದಿಕೋಶಗಳಲ್ಲಿಯೂ, ತ್ವಗಾದಿಸಪ್ತಧಾತುಗಳಲ್ಲಿಯೂ ಇರುವನು. ಈ ನಾಲ್ಕು ದೇಹಗಳಲ್ಲಿ ಪ್ರತ್ಯೇಕವಾಗಿ, ದಿನಒಂದಕ್ಕೆ ೨೧,೬೦೦ ಹಂಸಮಂತ್ರ ಜಪಗಳನ್ನು ಮಾಡುತ್ತಾನೆ. **ಮೂಗಿನ ಬಲಹೊಳ್ಳೆಯಲ್ಲಿ ಸೂರ್ಯನೂ ಎಡಹೊಳ್ಳೆಯಲ್ಲಿ ಚಂದ್ರನೂ ಇರುವರು. ಇವರೊಳಗೆ ಮುಖ್ಯಪ್ರಾಣನಿದ್ದು ಹಂಸಮಂತ್ರವನ್ನು ಜಪಿಸುತ್ತಾನೆ. ಮುಖ್ಯಪ್ರಾಣನಲ್ಲಿ ಸಹ ಹಂಸನಾಮಕ ಪರಮಾತ್ಮನೇ ಇದ್ದು ಆತನಿಂದ ಜಪಮಾಡಿಸುತ್ತಾನೆ.** *'ಹಂಸರೂಪೌ ಚ ತೌ ದೇವೌ ಶ್ವಾಸೋಚ್ಛ್ವಾಸಪ್ರವರ್ತಕೌ'* (ಐತರೇಯ-ಭಾಷ್ಯ). ಈ ವಿಧ ಮಹಿಮೋಪೇತನಾದ ಮುಖ್ಯಪ್ರಾಣನು ಬ್ರಹ್ಮಾಂಡದಲ್ಲಿ ಸರ್ವತ್ರ ತುಂಬಿರುವನು.

## ಶ್ಲೋಕ ೮

***ಲಯಸ್ಯ ಹ್ಯಷ್ಟಮೇ ಭಾಗೇ ಸೃಷ್ಟಿಕಾಲ ಉದಾಹೃತಃ।***
***ತತ್ರೈವ ವೇದಸಂಚಾರೋ ಯೋऽನ್ಯಥಾ ವಿಷ್ಣುಬುದ್ಧಿಗಾ॥***

**ಅರ್ಥ:** ಲಯಸ್ಯ—ಪ್ರಳಯಕಾಲದ, ಅಷ್ಟಮೇ ಭಾಗೇ—ಕೊನೆಯ ಎಂಟನೇ ಭಾಗದಲ್ಲಿ, ಸೃಷ್ಟಿಕಾಲಃ—ಸೃಷ್ಟಿಕಾಲವು, ಉದಾಹೃತಃ—(ಎಂದು) ಹೇಳಲ್ಪಡುತ್ತದೆ; ಹಿ—ಹೀಗೆಂಬುದು ವೇದಸಿದ್ಧವು; ತತ್ರೈವ—ಆ ಕಾಲ-ದಲ್ಲಿಯೇ, ವೇದಸಂಚಾರಃ—ವೇದದ ಪ್ರವೃತ್ತಿಯು; ಅನ್ಯಥಾ—ಆ ಎಂಟನೇ ಭಾಗವನ್ನೂ ಬಿಟ್ಟು ಉಳಿದ ಪ್ರಳಯಕಾಲದಲ್ಲಿ, ಯಃ—ಯಾವುದು (ಆ ವೇದವು), ವಿಷ್ಣು ಬುದ್ಧಿಗಾ—ವಿಷ್ಣುಬುದ್ಧಿಸ್ಥಿತವಾಗಿರುವುದು.

**ವಿಶೇಷಾಂಶ:** ವೇದಾಭಿಮಾನಿಯು ಶ್ರೀಲಕ್ಷ್ಮೀದೇವಿ. ವೇದ ಪ್ರವೃತ್ತಿ-ಯೆಂದರೆ, ಶ್ರೀಲಕ್ಷ್ಮೀದೇವಿಯು ಆಗ ಶ್ರೀಹರಿಯನ್ನು ಸ್ತುತಿಸಿ, ಸೃಷ್ಟಿಯಲ್ಲಿ ಪ್ರವೃತ್ತನಾಗೆಂದು ಪ್ರಾರ್ಥಿಸುತ್ತಾಳೆಂದರ್ಥ.

## ಪದ ೧೧

**ಬ್ರಹ್ಮನ ನೂರುವರುಷ ಪ್ರಳಯಮಾನ**
**ತನಗೆಣ್ಭಂಭತ್ತರೇಳೆಯ ಎಂಬ**
**ಸಮರೆ ಹೋಹರೆ ಆದರಿಂ ತುದಿಯಲ್ಲಿ**
**ನಮ್ಮ ದುರ್ಗಮ್ಮಗೆಚ್ಚರಿಕೆ॥**

**ಅರ್ಥ:** ಬ್ರಹ್ಮನ—ಚತುರ್ಮುಖಬ್ರಹ್ಮನ, ನೂರುವರುಷ—ಒಂದು-ನೂರು ವರ್ಷಗಳ ಕಾಲ, ಪ್ರಳಯಮಾನ—ಪ್ರಳಯಕಾಲದ ಪರಿಮಿತಿಯು

(ಅವಧಿಯು), ತನ್ಮಧ್ಯೆ—ಆ ಅವಧಿಯೊಳಗೆ, ಎಂಭತ್ತರೇಳೆಯ—ಎಂಭತ್ತೇಳನೆಯ, ಸಮರೆ—ಅರ್ಧವರ್ಷಕ್ಕೆ ಸಮವಾದ, ಎಂಬ-೮೭॥ ವರ್ಷಗಳೆಂಬ ಕಾಲವು, ಹೋಹರೆ—ಕಳೆದುಹೋಗಲು, ಅದರಿಂ ತುದಿಯಲ್ಲಿ—ಅದರ ಕೊನೆಯಲ್ಲಿ (ಅಷ್ಟೂ ಕಾಲ ಗತಿಸಿದೊಡನೆ), ನಮ್ಮ ದುರ್ಗಮ್ಮಗೆ—ನಮ್ಮ (ಜಗನ್ಮಾತೆಯಾದ) ದುರ್ಗಾರೂಪಳಾದ ಲಕ್ಷ್ಮೀದೇವಿಗೆ, ಎಚ್ಚರಿಕೆ—ಎಚ್ಚರವು (ಎಚ್ಚರಗೊಂಡವಳಂತೆ ಏಳುವಳು).

**ವಿಶೇಷಾಂಶ:** ಈ ಸಂಧಿಯ ಪದ ೧ ನುಡಿ ೬ ವಿಶೇಷಾಂಶ ೧ನೇ ಭಾಗವನ್ನು ನೋಡಿರಿ. ಬ್ರಹ್ಮದೇವನ ಆಯುರ್ಮಾನವಾದ ೧೦೦ವರ್ಷಗಳ ಕಾಲವು **'ಪರ'** ಎಂದು ಕರೆಯಲ್ಪಡುತ್ತದೆ. ಅಷ್ಟೇ ಕಾಲವು (ಆತನ ೧೦೦ ವರ್ಷಗಳಷ್ಟೇ ಕಾಲವು) ಪ್ರಳಯಕಾಲವು. ಇದರ ೧/೮ ಭಾಗ, ಎಂದರೆ ೧೨-೧/೨ ವರ್ಷಗಳು. ೮೭-೧/೨ ವರ್ಷಗಳು ಕಳೆದನಂತರ ಸೃಷ್ಟಿಕಾಲದ ಆರಂಭ. ಆಗ ದುರ್ಗಾರೂಪಳಾದ ಲಕ್ಷ್ಮೀದೇವಿಯು, ಶ್ರೀಹರಿಯನ್ನು ಸ್ತುತಿಸಿ ಸೃಷ್ಟಿಯಲ್ಲಿ ಪ್ರವೃತ್ತನಾಗೆಂದು ಪ್ರಾರ್ಥಿಸುತ್ತಾಳೆ. ಆಗ ಶ್ರೀಹರಿಯು ಯೋಗ ನಿದ್ರೆಯಿಂದ ಎಚ್ಚತ್ತವನಂತೆ ಎದ್ದು, ಸೃಷ್ಟಿಕಾರ್ಯದಲ್ಲಿ ತೊಡಗುತ್ತಾನೆ; ಎಂದರೆ ಜಗತ್ಸೃಷ್ಟಿರೂಪಕ್ರಿಯೆಯನ್ನು ಪ್ರಕಟಿಸುವ ಸಂಕಲ್ಪವನ್ನು ವ್ಯಕ್ತಗೊಳಿಸುತ್ತಾನೆ.

### ಶ್ಲೋಕ ೯-೧೦-೧೧

**ಸ್ವಸೃಷ್ಟಮಿದಮಾಪೀಯ ಶಯಾನಂ ಸಹ ಶಕ್ತಿಭಿಃ।**
**ತದಂತೇ ಬೋಧಯಾಂ ಚಕ್ರುಃ ತಲ್ಲಿಂಗೈಃ ಶ್ರುತಯಃ ಪರಮ್ ॥೯॥**

*ಶ್ರುತಯ ಊಚುಃ।*

**ಜಯ ಜಯ ಜಹ್ಯಜಾಮಜಿತ ದೋಷಗೃಹೀತಗುಣಾಂ**
**ತ್ವಮಸಿ ಯದಾತ್ಮನಾ ಸಮವರುದ್ಧಸಮಸ್ತ ಭಗಃ।**
**ಅಜ ಜಗದೋಕಸಾಮಖಿಲಶಕ್ತ್ಯವಬೋಧಕ ತೇ**
**ಕ್ವಚಿದಜಯಾऽऽತ್ಮನಾऽನುಚರತೋऽನುಚರೇನ್ನಿಗಮಃ ॥೧೦॥**

**ಸ್ವಗುಣಾಚ್ಛಾದಿಕಾತ್ವೇಕಾ ಪರಮಾಚ್ಛಾದಿಕಾಪರಾ।**
**ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ।**
**ವ್ಯಾಘಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ ॥೧೧॥**

**ಅರ್ಥ:** ಸ್ವಸಂಸೃಷ್ಟಂ—ತನ್ನಿಂದ ಸೃಷ್ಟವಾದ, ಇದಂ—ಜಗತ್ತನ್ನು, ಅಪೀಯ—(ಬ್ರಹ್ಮಪ್ರಳಯದಲ್ಲಿ) ಸಂಹರಿಸಿ (ತನ್ನುದರದಲ್ಲಿಟ್ಟುಕೊಂಡು), ಸಹ ಶಕ್ತಿಭಿಃ—ಶಕ್ತಿ ಶಬ್ದವಾಚ್ಯಶ್ರೀಭೂದುರ್ಗಾರೂಪಗಳಿಂದ ಕೂಡಿ, ಶಯಾನಂ—ಮಲಗಿರುವ, ಪರಂ—ಸರ್ವೋತ್ತಮನಾದ ಶ್ರೀಹರಿಯನ್ನು, ತದಂತೇ—ಪ್ರಳಯಕಾಲದ ಕೊನೆಯ ಭಾಗದಲ್ಲಿ, ಶ್ರುತಯಃ—ವೇದಗಳು (ವೇದಾಭಿಮಾನಿ ದುರ್ಗಾದೇವಿಯು, (ಉಷಃಕಾಲದಲ್ಲಿ ಸ್ತುತಿಪಾಠಕರು ರಾಜನನ್ನು ಸ್ತುತಿಸಿ ಎಬ್ಬಿಸುವಂತೆ), ತಲ್ಲಿಂಗೈಃ—ವೇದೋಕ್ತ ಶ್ರೀಹರಿಗುಣಗಳ ಸ್ತೋತ್ರದಿಂದ, ಬೋಧಯಾಂ ಚಕ್ರುಃ—ಸ್ತುತಿಸಿ ಎಬ್ಬಿಸಿದವು. ॥೯॥

**ಶ್ರುತಿಗಳು ಹೇಳಿದವು** (ದುರ್ಗಾದೇವಿಯು ಸ್ತುತಿಸಿದಳು):

ಜಯ ಜಯ—ಹೇ ಹರೇ! ನಿನ್ನ ಉತ್ಕರ್ಷವನ್ನು ಪ್ರಕಟಿಸು, ಅಜಿತ—ಹೇ ಅಜಿತ! ದೋಷಗೃಹೀತಗುಣಾಂ—ಜನನ, ದುಃಖ, ಅಜ್ಞಾನಾದಿದೋಷಗಳಿಂದ ಸುಜೀವರ ಸ್ವರೂಪವನ್ನು ಆಚ್ಛಾದಿಸಿರುವ, ಅಜಾಂ—ಅನಾದಿ ಪ್ರಕೃತಿಯನ್ನು (ಸ್ವಗುಣಾಚ್ಛಾದಿಕಾವನ್ನು ಮತ್ತು ಪರಮಾಚ್ಛಾದಿಕಾವನ್ನು), ಜಹಿ—ನಾಶಮಾಡು (ಕ್ರಮದಿಂದ, ಸಂಹರಿಸು ಮತ್ತು ಅಪಹರಣಮಾಡು); ತ್ವಂ—ನೀನು, ಆತ್ಮನಾ—ಸ್ವತಃ, ಸಮವರುದ್ಧ ಸಮಸ್ತ ಭಗಃ—ಅನಪಗತ (ಮುಚ್ಚಲ್ಪಡದಿರುವ ಚೆನ್ನಾಗಿ ರಕ್ಷಿಸಿ ನಿನ್ನಲ್ಲಿಟ್ಟುಕೊಂಡಿರುವ) ಪೂರ್ಣೈಶ್ವರ್ಯಾದಿ ಗುಣಗಳುಳ್ಳವನು, ಅಸಿ—ಆಗಿರುವಿ; ಅಜ—ಹೇ ವಿಷ್ಣೋ! ಜಗದೋಕಸಾಂ—ಜಗದಾಶ್ರಯಭೂತರಾದ ಶ್ರೀ, ಬ್ರಹ್ಮಾದಿಗಳಿಗೆ, ಅಖಿಲಶಕ್ತ್ಯವಬೋಧಕ—ಅವರ (ಸೃಷ್ಟ್ಯಾದಿಗಳನ್ನು ನಿರ್ವಹಿಸುವ) ಸಮಸ್ತಶಕ್ತಿಯನ್ನು ಅವರಿಗೆ ಪ್ರಧಾನ ಮಾಡುವ ಪ್ರಭೋ! ನಿಗಮಃ—(ಮುಖ್ಯವೃತ್ತಿಯಿಂದ ನಿನ್ನನ್ನೇ ಪ್ರತಿಪಾದಿಸುವ) ತತ್ವನಿಶ್ಚಾಯಕವೇದವು, ಕ್ವಚಿತ್—ಕೆಲವು ವೇಳೆ (ಸೃಷ್ಟಿಯನಂತರ—ಸ್ಥಿತಿಕಾಲದಲ್ಲಿ), ಅಜಯಾ—ಪ್ರಕೃತಿಯಿಂದ, ಮತ್ತು ಆತ್ಮನಾ—ಜೀವನಿಂದ, ಅನುಚರತಃ—ಪ್ರವರ್ತಿಸುವ (ಪ್ರಕೃತಿಪುರುಷರಿಂದ ಕೂಡಿ ನೀನು ವ್ಯವಹರಿಸುವ ಕಾಲದಲ್ಲಿ), ತೇ—ನಿನ್ನನ್ನು (ನಿನ್ನ ಚಿತ್ತವನ್ನು), ಅನುಚರೇತ್—ಅನುಸರಿಸುತ್ತದೆ.

[ವೇದವು ಸ್ಥಿತಿಕಾಲದಲ್ಲಿ ವಿಧಿನಿಷೇಧರೂಪದಿಂದ ಸಹ ಪ್ರವರ್ತಿಸುತ್ತದೆ. ಆದರೆ ಪ್ರಳಯಕಾಲದಲ್ಲಿ ಈ ವಿಧ ಪ್ರವರ್ತನೆಗೆ ವಿಷಯವೇ ಇಲ್ಲದಪ್ರಯುಕ್ತ, ಎಂದರೆ ವಿಧಿನಿಷೇಧಗಳನ್ನು ಪಾಲಿಸಬೇಕಾದ ಜೀವರು ಕ್ರಿಯಾ-

ಶೂನ್ಯರಾಗಿ ನಿದ್ರಾವಸ್ಥೆಯನ್ನು ಹೊಂದಿಸಲ್ಪಟ್ಟು ನಿನ್ನ ಉದರದಲ್ಲಿರುವುದರಿಂದ, ವೇದವು ಕೇವಲ ನಿನ್ನ ಸ್ತುತಿರೂಪವೇ ಆಗಿರುತ್ತದೆ— ಕೇವಲ ಮುಖ್ಯಪ್ರವೃತ್ತಿಯಿಂದ ನಿನ್ನ ಪ್ರತಿಪಾದಕಮಾತ್ರವಾಗಿರುತ್ತದೆ]. ॥೧೦॥

ಸ್ವಗುಣಾಚ್ಛಾದಿಕಾ ತು—(ಪ್ರಕೃತಿ ಎಂಬ ಶಬ್ದದಿಂದ ಕರೆಯಲ್ಪಡುವ ಸ್ವಗುಣಾಚ್ಛಾದಿಕಾ ಎಂಬುದು, ಏಕಾ—ಒಂದು, ಪರಮಾಚ್ಛಾದಿಕಾ ಎಂಬುದು, ಅಪರಾ— ಮತ್ತೊಂದು, (ಹೀಗೆ ಎರಡು ದುಷ್ಟಪ್ರಕೃತಿಗಳು ಪ್ರತಿಜೀವರಲ್ಲಿವೆ); ಸ್ವಗುಣಾಚ್ಛಾದಿಕಾವನ್ನು, ಹತ್ವಾ— ಸಂಹರಿಸಿ, ಪರಮಾಚ್ಛಾದಿಕಾಂ— ಪರಮಾಚ್ಛಾದಿಕಾವನ್ನು, ವ್ಯಾಘಟ್ಯ— ಅಪಸರಣಮಾಡಿ (ದೂರಮಾಡಿ)— ಪರಃಪುರುಷೋತ್ತಮಃ— ಸರ್ವೋತ್ತಮನಾದ ಶ್ರೀಹರಿಯು, ಮೋಕ್ಷಪದವೀಂ— ಮುಕ್ತಿ ಪದವನ್ನು (ಮೋಕ್ಷವನ್ನು— ಸ್ವರೂಪದ ಆವಿರ್ಭಾವವನ್ನು), ದದಾತಿ— ಕೊಡುತ್ತಾನೆ (ಹೊಂದಿಸುತ್ತಾನೆ). ॥೧೧॥

**ವಿಶೇಷಾಂಶ:** ಮುಂದಿನ ಪದ ೧೨ರ ವಿಶೇಷಾಂಶಭಾಗದಲ್ಲಿ ಈ ಶ್ಲೋಕಗಳಲ್ಲಿ ಅಡಕವಾಗಿರುವ ಪ್ರಮೇಯಗಳ ವಿವರಣೆಯನ್ನು ಕೊಡಲಾಗಿದೆ.

## ಪದ ೧೨

ರಾಗ-ಶುದ್ಧವರಾಳಿ; ತಾಳ-ರೂಪಕ

**ಎಂದೆಂದು ನಾಶವಿಲ್ಲದ ಪ್ರಕೃತಿಯು ತಾನೆ ನಿ-**
**ನ್ನಂದವ ಕಾಣಲಾಗಿ**
**ಇಂದ್ವರ್ಕಕೋಟಿಗಳ ಪ್ರಭೆಯು ನಿನ್ನ ತೇಜೋ-**
**ವೃಂದಕ್ಕೆ ಇನ್ನೊಬ್ಬರಿದನೇ** ॥೧॥

**ಅರ್ಥ:** ಎಂದೆಂದು ನಾಶವಿಲ್ಲದ— ನಿತ್ಯನಿರ್ವಿಕಾರಳಾದ, ಪ್ರಕೃತಿಯು— ಶ್ರೀಲಕ್ಷ್ಮೀದೇವಿಯು (ದುರ್ಗಾರೂಪಳು), ತಾನೆ— ಸ್ವಯಂ, ನಿನ್ನಂದವ— ನಿನ್ನ ಪರಿಯನ್ನು (ಯೋಗನಿದ್ರೆಯಲ್ಲಿರುವ ನಿನ್ನನ್ನು), ಕಾಣಲಾಗಿ— ನೋಡಲು, ಇಂದ್ವರ್ಕಕೋಟಿಗಳ ಪ್ರಭೆಯು— ಅನಂತಚಂದ್ರಸೂರ್ಯರಂತಿರುವ ಕಾಂತಿಯುಳ್ಳವನಾಗಿದ್ದಿ; ನಿನ್ನ ತೇಜೋವೃಂದಕ್ಕೆ— ನಿನ್ನ ಕಾಂತಿಪುಂಜಕ್ಕೆ, ಇನ್ನೊಬ್ಬ — ಬೇರೊಬ್ಬನು, ಅರಿದನೇ— ಅಧಿಕನೇ (ಪೂರ್ಣಪ್ರಕಾಶನನ್ನಾಗಿ ಕಂಡಳೆಂದು ಭಾವ).

**ವಿಶೇಷಾಂಶ:** 'ಸೂರ್ಯಕೋಟಿಪ್ರತೀಕಾಶಂ ಚಂದ್ರಕೋಟಿ ಸುಶೀತಲಂ' ಇತ್ಯಾದಿ ಪ್ರಮಾಣವಾಕ್ಯಗಳು, ಶ್ರೀಹರಿಯು, ಸರ್ವದಾ ಸೂರ್ಯಕೋಟಿ-

ಸಮಪ್ರಭನೂ ಶಶಿಕೋಟಿಸಮ ಆಹ್ಲಾದಕ ಕಾಂತಿಯುಳ್ಳವನೂ ಆಗಿರುವನೆಂದು ಹೇಳುತ್ತವೆ. ಲೌಕಿಕವಾಗಿ ಪರಸ್ಪರ ವಿರುದ್ಧಗಳೆಂದು ತಿಳಿಯಲಾಗುವ ಎಲ್ಲ ಧರ್ಮಗಳು ಏಕಕಾಲದಲ್ಲಿ ಶ್ರೀಹರಿಯಲ್ಲಿರುವುವು. ಶ್ರೀಹರಿಯ ಈ ಅಚಿಂತ್ಯಮಹಿಮೆಯನ್ನು, ಜಗನ್ನಾಥದಾಸಾರ್ಯರು ವರ್ಣಿಸುತ್ತಾ,

*'ಶರಣು ಶರಣರ ದೇವ ಶರಣು ಸುರವರಮಾನ್ಯ*
*ಶರಣು ಶಶಿಕೋಟಿ ಲಾವಣ್ಯ। ಲಾವಣ್ಯಮೂರುತಿಯೆ*
*ಶರಣೆಂಬೆ ಸ್ವಾಮಿ ಕರುಣಿಸೋ'*

ಎಂದಿರುವರು.

**ಇವಳ ಕೊಲ್ಲಬೇಡ ಜೀವರ ಕಂಗಳಿಂ**
**ವಿವರಂಗಳಿದ ತೊಲಗಿಸುತ**
**ಅವಳಲ್ಲದಿನ್ನು ಜೀವರ ಕಣ್ಣ ನಿನ್ನ ಮುಚ್ಚು-**
**ವವರ್ಯಾರು ಮೂಜಗದೊಳಗೆ** ॥೨॥

**ಅರ್ಥ:** ಇವಳ—ಈ ಪ್ರಕೃತಿಯನ್ನು (ಪರಮಾಚ್ಛಾದಿಕಾವನ್ನು), ಕೊಲ್ಲಬೇಡ—ಸಂಹರಿಸಬೇಡ; ಜೀವರ ಕಂಗಳಿಂ—ಜೀವರ ಕಣ್ಣುಗಳ ಮುಂದಿನಿಂದ, ವಿವರಂಗಳ—ಪ್ರಸಾರಮಾಡಿರುವ ಆಚ್ಛಾದನೆಗಳನ್ನು (ತೆರೆಯನ್ನು), ಇದ ತೊಲಗಿಸುತ—ದೂರಸಾಗಿಸಿ ಪರಿಹರಿಸು; ಅವಳಲ್ಲದೆ—ಈ ದುಷ್ಟಪ್ರಕೃತಿ (ಪರಮಾಚ್ಛಾದಿಕೆಯಲ್ಲದೇ), ಜೀವರ ಕಣ್ಣ—(ಸುಜೀವರ) ಮುಕ್ತಿಯೋಗ್ಯರ ಕಣ್ಣುಗಳನ್ನು, ನಿನ್ನ ಮುಚ್ಚುವರು—ನಿನ್ನನ್ನು ಕಾಣದಂತೆ ಮುಚ್ಚುವವರು, ಮೂಜಗದೊಳಗೆ—ಜಗತ್ತಿನಲ್ಲಿ, ಇನ್ನು ಯಾರು—ಬೇರೆ ಯಾರಿರುವರು? (ಯಾರೂ ಇಲ್ಲ).

**ಹೀನಜೀವರ ತುಚ್ಛವಜ್ಞಾನಾದಿಗುಣಗಳ-**
**ನನೆತ್ತಿಬಂಧಿಸಬೇಕೋ**
**ಈ ನೀಚಕರ್ಮಕ್ಕೆ ನೀಚತೆ ಸಾಕೆಂದು**
**ತಾನೆ ಜಗದ್ರೂಪಳಾಗಿಹಳೋ** ॥೩॥

**ಅರ್ಥ:** ಹೀನಜೀವರ—ತಮೋಯೋಗ್ಯಜೀವರನ್ನು, ತುಚ್ಛವಜ್ಞಾನಾದಿ—ಹೇಯವಾದ ಅಜ್ಞಾನಾದಿ, ಗುಣಗಳನು ಅನು ಎತ್ತಿ—ದುರ್ಗುಣಗಳನುಸರಿಸಿ ಅಭಿವೃದ್ಧಿಗೊಳಿಸಿ, ಬಂಧಿಸಬೇಕೋ—(ಅವರನ್ನು) ತಮಸ್ಸಿಗೆ ಹಾಕಬೇಕು; **ಅಥವಾ** ಹೀನಜೀವರ—ಅಲ್ಪಯೋಗ್ಯತೆಯ (ಅಸ್ವತಂತ್ರ) ಸುಜೀವರ,

ತುಚ್ಛವಜ್ಞಾನಾದಿಗುಣಗಳನು—ತುಚ್ಛವಾದ (ಅವರ ಸ್ವರೂಪಗುಣಗಳ ಜ್ಞಾನವಾಗದಂತೆ ಮುಚ್ಚಿ ತಡೆದಿರುವ) ಅವಿದ್ಯಾಕಾಮಕರ್ಮಾದಿದೋಷಗಳನ್ನು (ದುರ್ಗುಣಗಳನ್ನು), ಎಂದರೆ, ಇವುಗಳ ಅಭಿಮಾನಿಯಾದ ಸ್ವಗುಣಾಚ್ಛಾದಿಕೆಯೆಂಬ ದುಷ್ಟಪ್ರಕೃತಿಯನ್ನು, ಎತ್ತಿ ಬಂಧಿಸಬೇಕೋ—ಸಂಹರಿಸಿ ತಮಸ್ಸಿಗೆ ಹಾಕಬೇಕು; ಈ ನೀಚ ಕರ್ಮಕ್ಕೆ—ಇಂಥ ನೀಚಕರ್ಮಕ್ಕೆ (ಜೀವರ ಶುದ್ಧಸ್ವರೂಪವನ್ನು ಆಚ್ಛಾದಿಸಿ, ಅದರ ಜ್ಞಾನವಾಗದಂತೆ ಪ್ರತಿಬಂಧಿಸುವ ನೀಚಕರ್ಮಕ್ಕೆ), ನೀಚತೆ ಸಾಕೆಂದು—(ತಾನಾಗಲಿ ಅಮುಖ್ಯಪ್ರಕೃತ್ಯಭಿಮಾನಿಗಳಾದ ಸರಸ್ವತಿ ಮೊದಲಾದ ದೇವಿಯರಾಗಲಿ ಸಲ್ಲರು, ಪರಂತು) ತಮೋಯೋಗ್ಯಚೇತನವೇ ಸಾಕೆಂದು, ತಾನೆ—ಸ್ವಯಂ ಲಕ್ಷ್ಮೀದೇವಿಯು, ಜಗದ್ರೂಪಳಾಗಿಹಳೋ—ಜಗದ್ರೂಪದಿಂದ ಪರಿವರ್ತಿತವಾಗಿರುವ ಪ್ರಕೃತಿತತ್ವಕ್ಕೆ ಮಾತ್ರ ಅಭಿಮಾನಿಯಾಗಿರುವಳು.

**ನಿರವಧಿಕಮಹಿಮೆಯ ನಿನ್ನಾಜ್ಞೆಯಿಂದಲ್ಲಿ**
**ಅರಿಯದೆಚ್ಚರಿಸುವವಳ**
**ಹರಿ ನಿನ್ನ ಮಾಯೆಯ ಕೊಲ್ಲಬೇಡ ಜೀ-**
**ವರ ಕಾಮವ ಕೊಲ್ಲು ಕೊಲ್ಲು** ॥೪॥

**ಅರ್ಥ:** ನಿರವಧಿಕಮಹಿಮೆಯ—ಸರ್ವೋತ್ಕೃಷ್ಟಮಹಿಮೆಯುಳ್ಳ, ನಿನ್ನಾಜ್ಞೆಯಿಂದಲ್ಲಿ—ನಿನ್ನ ಆಜ್ಞೆಯಿಂದಲೇ, ಅರಿಯದೆ—(ಈ ಕಾಲದಲ್ಲಿ ನಿನ್ನ ಇಚ್ಛೆಯು ಹೇಗಿರುವುದೆಂಬುದನ್ನು) ತಿಳಿಯದೇ, ಎಚ್ಚರಿಸುವವಳ—(ಯೋಗನಿದ್ರೆಯಿಂದ) ಎಚ್ಚರಿಸುತ್ತಿರುವ ನನ್ನ (ಪ್ರಾರ್ಥನೆಯಿದು); ಹರಿ—ಹೇ ಶ್ರೀಹರೇ! ನಿನ್ನ ಮಾಯೆಯೆ—(ಸುಜೀವರಿಗೆ ನಿನ್ನನ್ನು ಮರೆಮಾಡಿರುವ, ಪರಮಾಚ್ಛಾದಿಕೆಯೆಂಬ [ನಿನ್ನ ಇಚ್ಛಾಧೀನವಾದ]) ದುಷ್ಟಪ್ರಕೃತಿಯನ್ನು, ಕೊಲ್ಲಬೇಡ—ಸಂಹರಿಸಬೇಡ; ಜೀವರ—ಆ ಜೀವರ, ಕಾಮವ—ಅನಾದಿಕಾಮ ಕರ್ಮಾದಿಗಳ ಅಭಿಮಾನಿಯಾದ ಸ್ವಗುಣಾಚ್ಛಾದಿಕೆಯನ್ನು, ಕೊಲ್ಲು ಕೊಲ್ಲು—ಬಿಡದಲೆ ಕೊಂದು ತಮಸ್ಸಿಗೆ ಕಳುಹಿಸು.

**ಜೀವರ ಕಂಗಳೊಳೆರಡು ಮಾಯೆಗಳಿಹವು**
**ದೇವ ನೀ ಮಾಯದೂರನಲ್ಲೇ**
**ಶ್ರೀವಲ್ಲಭ ಪೂರ್ವಶಕ್ತಿ ಪ್ರೇರಕನೆಂದು**
**ಭಾಮೆ ಗಂಡನ ಕೊಂಡಾಡಿಹಳು** ॥೫॥

**ಅರ್ಥ:** ಜೀವರ—ಪ್ರತಿಜೀವರುಗಳ, ಕಂಗಳೊಳು—ದೃಷ್ಟಿಯಲ್ಲಿ (ನೋಡುವ—ತಿಳಿಯುವ ಶಕ್ತಿಯಲ್ಲಿ), ಎರಡು ಮಾಯೆಗಳು—ಎರಡು ಪ್ರಕೃತಿಗಳು, ಇಹವು—(ತಮ್ಮ ಸ್ವರೂಪವನ್ನೂ, ನಿನ್ನನ್ನೂ ಕಾಣದಂತೆ ಪ್ರತಿಬಂಧಿಸಿಕೊಂಡು) ಇರುವುವು; ದೇವ—ಹೇ ಕ್ರೀಡಾದಿಗುಣವಿಶಿಷ್ಟ! ಪ್ರಭೋ!, ನೀ—ನೀನು, ಮಾಯದೂರನಲ್ಲೇ—ಪ್ರಕೃತಿಯಿಂದ ಆಚ್ಛಾದಿಸಲ್ಪಡಲರ್ಹನೇ? (ಸರ್ವಥಾ ಅಲ್ಲ—ಆ ಪ್ರಕೃತಿಯು ಜೀವನನ್ನು ಆಚ್ಛಾದಿಸಿ ಜೀವನು ನಿನ್ನನ್ನು ಕಾಣದಂತೆ ಮಾಡುತ್ತದೆ. ಇದು ಪರಮಾಚ್ಛಾದಿಕವು, ಸ್ವಗುಣಾಚ್ಛಾದಿಕವೆಂಬ ಇನ್ನೊಂದು ಪ್ರಕೃತಿಯು, ಜೀವನು ಜೀವಸ್ವರೂಪವನ್ನು ತಿಳಿಯದಂತೆ ಆಚ್ಛಾದಿಸುತ್ತದೆ. ಏವಂ ಚ, ಎರಡೂ ಪ್ರಕೃತಿಗಳು ಜೀವಜ್ಞಾನವನ್ನೇ ಪ್ರತಿಬಂಧಿಸುತ್ತವೆ.) ಶ್ರೀವಲ್ಲಭ—ನಾರಾಯಣನು, ಪೂರ್ವಶಕ್ತಿಪ್ರೇರಕನೆಂದು—ಅನಾದಿ ಸರ್ವಶಕ್ತಿಗಳ ಮುಖ್ಯಪ್ರೇರಕನೆಂದು, ಭಾಮೆ—ಶ್ರೀದುರ್ಗಾದೇವಿಯು, ಗಂಡನ—ತನ್ನ ಪತಿಯನ್ನು, ಕೊಂಡಾಡಿದಳು—ಸ್ತುತಿಸಿದಳು.

**ಪಾದವನೊತ್ತುತ ಸಕಲ ವೇದಗಳಿಂದ**
**ಹಾದಿಗಳಾಲೋಚನದಿ**
**ಓದುತ್ತ ಪಾಡುತ್ತ ಪೊಗಳುತಿರಲು ಕಂಡು**
**ಮೋದಿ ಹಯವದನ ಕಣ್ದೆರೆದ** ॥೬॥

**ಅರ್ಥ:** ಪಾದವನು—ಶ್ರೀಹರಿಚರಣಗಳನ್ನು, ಒತ್ತುತ್ತ—ಒತ್ತುತ್ತಾ, ಸಕಲವೇದಗಳಿಂದ—ಸರ್ವವೇದಗಳಲ್ಲಿ, ಹಾದಿಗಳ—ಸ್ತುತಿಸುವ ಮಾರ್ಗಗಳನ್ನು (ಪ್ರಕಾರವಿಶೇಷಗಳನ್ನು) ಆಲೋಚನದಿ—ಆಲೋಚಿಸುತ್ತ, ಓದುತ್ತ ಪಾಡುತ್ತ—(ವೇದೋಕ್ತ ತದನುಕ್ತಮಹಿಮೆಗಳನ್ನು) ಉಚ್ಚರಿಸುತ್ತ, ಗಾನಮಾಡುತ್ತ, ಪೊಗಳುತಿರಲು—ಸ್ತುತಿಸುತ್ತಿರಲು, ಕಂಡು—ಅದನ್ನರಿತು, ಮೋದಿಹಯವದನ—ಆನಂದಪೂರ್ಣನಾದ ಶ್ರೀಹರಿಯು, ಕಣ್ದೆರೆದ—ಕಣ್ಣುಗಳನ್ನು ತೆರೆದನು (ಎಚ್ಚತ್ತವನಂತೆ ಕಣ್ಣುಬಿಟ್ಟನು.)

**ಇಂತು ಲಕ್ಷ್ಮಿಯೊಡನೆ ಪ್ರಳಯದಿ ಮಲಗಿ ಶ್ರೀ-**
**ಕಾಂತನೆಚ್ಚತ್ತನೆಂಬಲ್ಲಿ**
**ಸಂತೋಷವನೀವ ಎರಡನೆಯ ಸಂಧಿ**
**ಸಂತರು ಮೆಚ್ಚಿ ಮುಗಿಯಿತು** ॥೭॥

**ಅರ್ಥ:** ಇಂತು—ಹೀಗೆ, ಲಕ್ಷ್ಮಿಯೊಡನೆ—ಲಕ್ಷ್ಮೀಸಹಿತನಾಗಿ, ಮಲಗಿ-ನಿದ್ರಿಸಿ, ಶ್ರೀಕಾಂತನು—ಲಕ್ಷ್ಮೀವಲ್ಲಭನು, ಎಚ್ಚತ್ತನೆಂಬಲ್ಲಿ—ಎಚ್ಚರಗೊಂಡ-ನೆಂಬಲ್ಲಿಗೆ, ಸಂತೋಷವನೀವ—ಆನಂದವನ್ನುಂಟುಮಾಡುವ, **ಎರಡನೆಯ ಸಂಧಿ**—ಎರಡನೆಯ ಸಂಧಿಯು, ಸಂತರು ಮೆಚ್ಚೆ—ಸಜ್ಜನರು ಮೆಚ್ಚುವಂತೆ (ಜ್ಞಾನಿಗಳಿಗೆ ಸಮ್ಮತವಾಗಿರುವ ೨ನೇ ಸಂಧಿಯು), ಮುಗಿಯಿತು—ಪೂರ್ಣವಾಯಿತು.

**ಶ್ರೀಹಯವದನರಾಯನ ದಯದಿಂದ**
**ವಾದಿರಾಜೇಂದ್ರ**
**ರಚಿಸಿದ ಈ ದಿವ್ಯಕಾವ್ಯದಿ ಲಯವನೊರೆದ**
**ರಮ್ಯವಾದ ದ್ವಿತೀಯ ಸಂಧಿ ಪೊಸಗೆ ॥೮॥**

**ಅರ್ಥ:** ಶ್ರೀಹಯವದನರಾಯನ—ಶ್ರೀಹಯಗ್ರೀವಸ್ವಾಮಿಯ, ದಯದಿಂದ—ಕೃಪೆಯಿಂದ, ವಾದಿರಾಜೇಂದ್ರ ರಚಿಸಿದ—ವಾದಿರಾಜನೆಂಬ ಯತಿಶ್ರೇಷ್ಠನು ರಚಿಸಿದ, ಈ ದಿವ್ಯಕಾವ್ಯದಿ—ಶ್ರೀಹರಿಮಹಿಮೆಗಳನ್ನು ನಿರೂಪಿಸುವ ಈ (ಸಜ್ಜನಪ್ರಿಯ) ಕಾವ್ಯಗ್ರಂಥದಲ್ಲಿ, ಲಯವನೊರೆದ—ಪ್ರಳಯವಿಷಯಕ ಪ್ರಮೇಯಗಳನ್ನು ಪ್ರತಿಪಾದಿಸಿದ, ರಮ್ಯವಾದ—ಮನೋಹರವಾದ, ದ್ವಿತೀಯ ಸಂಧಿ—ಎರಡನೆಯ ಸಂಧಿಯು, ಪೊಸಗೆ—ಸೊಗಸಿತು (ವಿರಾಜಿಸಿತು).

**ವಿಶೇಷಾಂಶ:** (೧) ಸರ್ವಶಬ್ದವಾಚ್ಯನಾದ ಶ್ರೀಹರಿಯನ್ನು ಬಿಟ್ಟು ಲಕ್ಷ್ಮೀ-ದೇವಿಯೇ ಪ್ರಕೃತಿಶಬ್ದ ಮುಖ್ಯವಾಚ್ಯಳು—ಶ್ರೀಹರಿಯು ಪರಮಮುಖ್ಯ-ವಾಚ್ಯನು. ಸರಸ್ವತೀ, ಉಮಾ, ಶಚೀ ಮೊದಲಾದವರೂ ಪ್ರಕೃತಿಶಬ್ದ-ವಾಚ್ಯರೇ—ಲಕ್ಷ್ಮೀದೇವಿಯ ನಂತರ, ಆಕೆಯ ಅಧೀನರಾಗಿ, ಪ್ರಕೃತಿ-ನಿಯಾಮಕರೂ ಆಗಿದ್ದಾರೆ. '**ಪ್ರಕೃತಿ**'ಗಳೆಂದೇ ಕರೆಯಲ್ಪಡುವ ಎರಡು ದುಷ್ಟ ಪ್ರಕೃತಿಗಳೂ ಇವೆ. ಈ ಎರಡೂ ಪ್ರತಿಜೀವರಲ್ಲಿ ಬೇರೆಬೇರೆ ಇದ್ದೇ ಇವೆ. ಇವುಗಳಲ್ಲಿ 'ಸ್ವಗುಣಾಚ್ಛಾದಿಕಾ' ಎಂದು ಕರೆಯಲ್ಪಡುವುದು ಜೀವಸ್ವರೂಪ-ವನ್ನು ಆಚ್ಛಾದಿಸಿಕೊಂಡಿರುತ್ತದೆ. 'ಪರಮಾಚ್ಛಾದಿಕಾ' ಎಂಬುದು ಜೀವರಿಗೆ ಪರಮಾತ್ಮಜ್ಞಾನಪ್ರತಿಬಂಧಕವಾಗಿರುತ್ತದೆ. ಶ್ರೀಹರಿಯು ಮೊದಲಿನದನ್ನು ನಾಶ-ಮಾಡಿ, ಎರಡನೆಯದನ್ನು ದೂರೀಕರಿಸಿ, ಜೀವರನ್ನು ಮುಕ್ತರನ್ನಾಗಿ ಮಾಡು-ತ್ತಾನೆ. ಈ ಪ್ರಮೇಯಗಳು ಈ ಮುಂದಿನ ಬ್ರಹ್ಮಕಾಂಡಪುರಾಣ ವಾಕ್ಯಗಳಲ್ಲಿ ವಿಶೇಷ ಸ್ಪಷ್ಟಗೊಳಿಸಲ್ಪಟ್ಟಿವೆ.

*'ಅಜಾ ತು ಪ್ರಕೃತಿಃ ಪ್ರೋಕ್ತಾ ಶ್ರೀಃಪರಾ ಪ್ರಕೃತಿಃ ಸ್ಮೃತಾ।*
*ತತೋಽವರಾ ತು ಬ್ರಹ್ಮಾಣೀ ಬ್ರಹ್ಮಪತ್ನೀ ವರಾನನಾ॥*

*ಉಮಾಶಚೀಮುಖಾಸ್ತಸ್ಯಾ ಹ್ಯವರಾಃ ಸಂಪ್ರಕೀರ್ತಿತಾಃ।*
*ಏತಾಸಾಂ ಹನನಂ ನೈವ ಪ್ರಾರ್ಥಯಾಮಿ ಸದಾ ಹರೇ॥*

*ಪ್ರತಿಪ್ರತಿನೃಷು ಬ್ರಹ್ಮನ್ ಪ್ರಕೃತೀನ್ಯೇಚ ಸಂಸ್ಥಿತೇ।*
*ಏಕಸ್ತು ನಿತ್ಯಸಂಸಾರೀ ಅಜಶಬ್ದಾಭಿದಾಯಕಃ॥*

*ದ್ವಿತೀಯಸ್ತು ತಮೋಯೋಗ್ಯೋ ಅಜಶಬ್ದಾಭಿದಾಯಕಃ।*
*ಅತ ಏವ ಹ್ಯಜೌ ದುಷ್ಟಾವಿತಿ ಲೋಕೇ ಪ್ರಕೀರ್ತಿತೌ॥*

*ಮೋಕ್ಷಾಧಿಕಾರಿಣಾಮೇವ ಜ್ಞಾನೈಶ್ವರ್ಯಾದಯೋ ಗುಣಾಃ।*
*ತೇಷಾಮಾಚ್ಛಾದಿಕಾ ಹ್ಯೇಕಾ ತಮೋಗಾ ಸಾ ಪ್ರಕೀರ್ತಿತಾ।*
*ಜೀವಂ ಪ್ರತಿ ಮಹಾವಿಷ್ಣುಂ ಯಾ ತ್ವಾಚ್ಛಾದಯತಿ ಪ್ರಭೋ॥*

*ಸಾಪರಾ ಪ್ರಕೃತಿರ್ಜ್ಞೇಯಾ ಪರಮಾಚ್ಛಾದಿಕಾ ಸ್ಮೃತಾ।*
*ಪಿಶಾಚವತ್ಸಮುದ್ದಿಷ್ಟಾ ಜೀವಸ್ಯ ಹ್ಯಧಿಕಾರಿಣಃ॥*

*ಪ್ರೇರಕಾಶ್ಚ ತಯೋರ್ದೇವ್ಯಃ ಅಹಮಾದ್ಯಾ ಸುಖಾತ್ಮಿಕಾಃ।*
*ತತ್ರ ವಿಷ್ಣೋ ಮಹಾಭಾಗ ಸ್ವಗುಣಾಚ್ಛಾದಿಕಾಂ ಹನ॥*

*ಸ್ವರೂಪಾಚ್ಛಾದಿಕಾ ಯಸ್ಮಾತ್ತಮೋಗಾ ಸಾ ಪ್ರಕೀರ್ತಿತಾ।*
*ತಸ್ಯಾಶ್ಚ ಹನನಂ ಯುಕ್ತಂ ಅನಿತ್ಯತ್ವಾಚ್ಚ ಭೋ ದ್ವಿಜ॥*

*ಪರಮಾಚ್ಛಾದಿಕಾಂ ದುಷ್ಟಾಂ ವಿಪಾಟ್ಯ ಚ ಮಹಾವಿಭೋ।*
*ಮೋಕ್ಷಂ ದೇಹಿ ಮಹಾದೇವ ತದ್ಭಕ್ತಾನಾಂ ಮಹಾಪ್ರಭೋ॥*

**ತಾತ್ಪರ್ಯಾರ್ಥ:** ಜಡಪ್ರಕೃತಿಯು ಅನಾದಿನಿತ್ಯವು—'ಅಜಾ' ಎಂದು ಕರೆಯಲ್ಪಡುತ್ತದೆ. ಈ ಪ್ರಕೃತಿಗೆ ಮುಖ್ಯ ನಿಯಾಮಕಳಾದ ಲಕ್ಷ್ಮೀದೇವಿಯು, ಪ್ರಕೃತಿಶಬ್ದ ಮುಖ್ಯವಾಚ್ಯಳು. ಈಕೆಗಿಂತ ಅವರರಾದ ಬ್ರಹ್ಮಪತ್ನಿಯಾದ ಸರಸ್ವತಿಯೂ, ಉಮಾ, ಶಚೀ ಮೊದಲಾದ ದೇವಸ್ತ್ರೀಯರೂ **'ಪ್ರಕೃತಿ'**-ಯೆಂದೇ ಕರೆಯಲ್ಪಡುವರು. **'ಅಜಾಂ ಜಹಿ'** ಎಂದು ಪ್ರಾರ್ಥಿಸಿದ ದುರ್ಗಾ-ದೇವಿಯು, ಇವರ ಯಾರರ ಸಂಹಾರವನ್ನೂ ಕೇಳಲಿಲ್ಲ. 'ಹೇ ಹರೇ! ಇವರ ಸಂಹಾರವನ್ನು ಪ್ರಾರ್ಥಿಸುವುದಿಲ್ಲ—ಪ್ರತಿಪ್ರತಿ ಪುರುಷರಲ್ಲಿ **'ಪ್ರಕೃತಿ'** ಶಬ್ದ-ದಿಂದಲೇ ಕರೆಯಲ್ಪಡುವ, ಎರಡು ದುಷ್ಟ ಪ್ರಕೃತಿಗಳಿವೆ; ಇವರೂ **'ಅಜಾ'** ಎಂಬ ಶಬ್ದವಾಚ್ಯರು. ಒಂದಕ್ಕೆ ನಿತ್ಯಸಂಸಾರಿ ಚೇತನವು, ಅಭಿಮಾನಿಯು;

ಮತ್ತೊಂದಕ್ಕೆ ತಮೋಯೋಗ್ಯ ಚೇತನವು ಅಭಿಮಾನಿ; ಈ ಉಭಯರೂ ದುಷ್ಟಅಜಗಳೆಂದು ಕರೆಯಲ್ಪಡುವರು. ಮುಕ್ತಿ ಯೋಗ್ಯರಾದ ಜೀವರಿಗೆ ಮಾತ್ರ ಜ್ಞಾನೈಶ್ವರ್ಯಾದಿ ಗುಣಗಳೇ ಅವರ ಸ್ವರೂಪವಾಗಿವೆ. ಈ ಗುಣಗಳನ್ನು ತಮೋಯೋಗ್ಯಚೇತನದಿಂದ ಅಭಿಮನ್ಯಮಾನವಾದ ಪ್ರಕೃತಿಯು, ಆಚ್ಛಾದಿಸಿ ಮರೆಮಾಡುತ್ತದೆ. ಇದೇ ಸ್ವಗುಣಾಚ್ಛಾದಿಕೆಯೆಂಬುದು; ಮಹಾವಿಷ್ಣುವನ್ನು ಜೀವನಿಂದ ಮರೆಮಾಡುವ ಇನ್ನೊಂದು ಪ್ರಕೃತಿಯು, ನಿತ್ಯಸಂಸಾರಿಚೇತನ ನಿಂದ ಅಭಿಮನ್ಯಮಾನವಾದ, ಪರಮಾಚ್ಛಾದಿಕೆಯೆಂಬ ಪ್ರಕೃತಿಯು. ಈ ಎರಡು ಪ್ರಕೃತಿಗಳು ಮೋಕ್ಷಾಧಿಕಾರಿಯಾದ ಜೀವನನ್ನು ಪಿಶಾಚಿಗಳಂತೆ ಹಿಡಿದಿರುತ್ತವೆ; ಇವರುಗಳ ಪ್ರೇರಕರು, (ಕಾರ್ಯಶಕ್ತಿಪ್ರದರು) ಪೂರ್ವೋಕ್ತ-ದೇವಿಯರು, ನಾನು, ಮತ್ತು ಸರ್ವಪ್ರೇರಕನಾದ ಶ್ರೀಹರಿಯು; ಈ ಎರಡು ದುಷ್ಟಪ್ರಕೃತಿಗಳಲ್ಲಿ ಸ್ವಗುಣಾಚ್ಛಾದಿಕೆಯನ್ನು ಕೊಲ್ಲು—ಏಕೆಂದರೆ ಅದು ತಮೋ-ಯೋಗ್ಯವು (ಆದ್ದರಿಂದ ಹೇ ಗರುಡ! ಆ ಪ್ರಕೃತಿಯು ನಾಶಯೋಗ್ಯವು—ಅಭಿಮಾನಿಯು ತಮೋಯೋಗ್ಯನು); ದುಷ್ಟ ಪರಮಾಚ್ಛಾದಿಕೆಯನ್ನು (ನಿತ್ಯ-ಸಂಸಾರಿಯು ಅದರ ಅಭಿಮಾನಿಯಾದ್ದರಿಂದ) ಗ್ರಹಣಮಾಡಿರುವ ಜೀವನಿಂದ ತೊಲಗಿಸಿ ಸುಜೀವರಿಗೆ ಮುಕ್ತಿಯನ್ನು ಕೊಡು, ಪ್ರಭೋ! ಎಂದಳು—ದುರ್ಗೆ.

*'ನ ವಿಷ್ಣುಂ ಛಾದಯತ್ಯೇಷಾ ತಜ್ಜ್ಞಾನಂ ಛಾದಯೇತ್ಪರಮ್।*
*ಜೀವಸ್ಯೈವ ನ ತತ್ರಾಪಿ ಬ್ರಹ್ಮಾದೇರಸ್ತಿ ಸಾ ಕ್ವಚಿತ್।*
*ಸರ್ವಾವರೇ ತೇ ಪ್ರಕೃತೀ ಸತತಂ ದುಃಖಿತೇಽಪಿ ಚ।*
*ಪಿಶಾಚವತ್ಸಮುದ್ದಿಷ್ಟೇ ಪುರುಷಸ್ಯಾಧಿಕಾರಿಣಃ॥'*

ಎಂಬುದು ಶ್ಲೋಕ ೧೧ರ ಮುಂದಿರುವ ಭಾಗವತತಾತ್ಪರ್ಯನಿರ್ಣಯದ ಶ್ಲೋಕಗಳು—ಮಹಾತತ್ತ್ವವಿವೇಕವೆಂಬ ಗ್ರಂಥದಿಂದ ಉದಾಹೃತವಾದವು-ಗಳು. ೬ ಮತ್ತು ೧೦ನೇ ಶ್ಲೋಕಗಳು ಶ್ರುತಿಗೀತೆಯ (ಭಾಗವತ ೮೭ನೇ ಅಧ್ಯಾಯದ) ಮೂಲಶ್ಲೋಕಗಳು. 'ಈ ದ್ವಿವಿಧ ದುಷ್ಟಪ್ರಕೃತಿಯು, ವಿಷ್ಣುವಿಗೆ ಪ್ರತಿಬಂಧಕಗಳಲ್ಲ. ವಿಷ್ಣುವಿಷಯಕಜ್ಞಾನವನ್ನು, ಜೀವರಿಗೆ ಉಂಟಾಗದಂತೆ, ಜೀವರನ್ನು ಪ್ರತಿಬಂಧಿಸುತ್ತದೆ—ಪರಮಾಚ್ಛಾದಿಕೆಯು; ಅದರಲ್ಲಿಯೂ ಬ್ರಹ್ಮಾದಿ ಉತ್ತಮ ಜೀವರನ್ನಲ್ಲ. ಇವೆರಡೂ ಪ್ರಕೃತಿಪದವಾಚ್ಯಗಳಾದ ವಸ್ತುಗಳಲ್ಲಿ ಅಧಮಾಧಮಗಳು—ಸರ್ವದಾ ದುಃಖವುಳ್ಳವು—ಪಿಶಾಚಿಯಂತೆ ಮೋಕ್ಷಾಧಿಕಾರಿ ಜೀವನಲ್ಲಿರುತ್ತವೆ.

* * * * *

||ಶ್ರೀಹಯಾಸ್ಯಾಯ ನಮಃ||
||ಶ್ರೀವಾದಿರಾಜಗುರುಭ್ಯೋ ನಮಃ||

# * ತತ್ವಸಾರ *

## ೩. ಸೃಷ್ಟಿಸಂಧಿ

### ಪದ ೧

***ಇದು ಪುಣ್ಯಕಥೆ ಲೋಕಕ್ಕಿದು ಮುಕುತಿಯ ಪಥ|***
***ಇದ ಕೇಳುವವನೆ ಕೃತಾರ್ಥ ||ಪಲ್ಲವಿ||***

**ಅರ್ಥ:** ಈ ಹಿಂದಿನ ಸಂಧಿಗಳಲ್ಲಿರುವಂತೆಯೇ.

### ಶ್ಲೋಕ ೧

***ಆಸೀದೇಕೋ ಹ ವೈ ಚಾತ್ರ ವಿಷ್ಣುರ್ನಾರಾಯಣಾಹ್ವಯಃ|***
***ನ ಬ್ರಹ್ಮಾ ನ ಚ ರುದ್ರಶ್ಚ ನ ದೇವಾ ನ ಮಹರ್ಷಯಃ||***

**ಅರ್ಥ:** ಅತ್ರ—ಪ್ರಳಯಕಾಲದಲ್ಲಿ, ವಿಷ್ಣುಃ—ವಿಷ್ಣುವು, ನಾರಾಯಣಾಹ್ವಯಃ—ನಾರಾಯಣನೆಂಬ ನಾಮವುಳ್ಳವನಾಗಿ, (ಮೂಲರೂಪದಿಂದ), ಏಕಃ—ಒಬ್ಬನೇ, ಆಸೀತ್—ಇರುತ್ತಿದ್ದನು; ಹ ವೈ—ಇದು ಶ್ರುತಿಪ್ರಸಿದ್ಧವು; ಬ್ರಹ್ಮಾ—ಬ್ರಹ್ಮದೇವನು, ನ—ಇರಲಿಲ್ಲ, ರುದ್ರಶ್ಚ—ರುದ್ರನೂ ಸಹ, ನ ಚ—ಇರಲೇ ಇಲ್ಲ; ದೇವಾಃ—ದೇವತೆಗಳು (ಯಾರೂ), ನ—ಇರಲಿಲ್ಲ, ಮಹರ್ಷಯಃ—ಮಹರ್ಷಿಗಳೂ, ನ—ಇರಲಿಲ್ಲ.

### ಪದ ೧

**ಒಬ್ಬ ನಾರಾಯಣನು ಲಯದಲ್ಲಿಹನು ಗಡ**
**ಅಬ್ಜಸಂಭವನಾಗ ಎಲ್ಲಿಹನೋ**
**ಅಬ್ಬರದ ರುದ್ರ ಮತ್ತಿರ್ದ ದೇವರ್ಕಳು**
**ಒಬ್ಬ ಋಷಿಗಳು ಎಲ್ಲಿಹರೋ** ||೧||

**ಏಕೋ ನಾರಾಯಣ ಆಸೀದೆಂಬ ಶ್ರುತಿ**
**ಶ್ರೀಕೃಷ್ಣನೊಬ್ಬ ಪ್ರಳಯದಲಿ**
**ಆ ಕಾಲದಿ ನ ಬ್ರಹ್ಮಾ ನ ಚ ಶಂಕರ ಎಂದು**
**ಮುಖ್ಯಾರ್ಥವ ನಿರ್ಣೈಸೇ** ||೨||

**ಅರ್ಥ:** ಲಯದಲ್ಲಿ—ಪ್ರಳಯಕಾಲದಲ್ಲಿ, ಒಬ್ಬ ನಾರಾಯಣನು—ನಾರಾಯಣನೊಬ್ಬನೇ, ಇಹನು ಗಡ—ಇರುವನೆಂದೇ ವೇದವು ಹೇಳುವುದಲ್ಲವೇ; ಆಗ—ಆ ಕಾಲದಲ್ಲಿ, ಅಬ್ಜಸಂಭವನು—ಬ್ರಹ್ಮನು, ಎಲ್ಲಿಹನೋ—ಎಲ್ಲಿರುವನು; ಅಬ್ಬರದ ರುದ್ರ—ಉಗ್ರನಾದ ರುದ್ರನು, ಮತ್ತಿರ್ದ—ಇನ್ನುಳಿದ (ಸ್ಥಿತಿಕಾಲದಲ್ಲಿದ್ದವರಾದ), ದೇವರ್ಕಳು—ದೇವತೆಗಳು, ಒಬ್ಬ ಋಷಿಗಳು—ಋಷಿಗಳಲ್ಲಿ ಯಾರೊಬ್ಬನಾಗಲಿ, ಎಲ್ಲಿಹರೋ—ಎಲ್ಲಿರುವರೋ! ಏಕೋ ನಾರಾಯಣ ಆಸೀತ್—'ಏಕೋ ನಾರಾಯಣ ಆಸೀತ್' (ನಾರಾಯಣನೊಬ್ಬನೇ ಇರುತ್ತಿದ್ದನು) ಎಂಬ, ಶ್ರುತಿ—ವೇದವಾಕ್ಯವು, ಶ್ರೀಕೃಷ್ಣನೊಬ್ಬ—ಶ್ರೀಹರಿಯೊಬ್ಬನೇ; ಪ್ರಳಯದಲ್ಲಿ—ಪ್ರಳಯಕಾಲದಲ್ಲಿ (ಇರುವನೆಂದೂ ಇತರರು ಯಾರೂ ಇಲ್ಲವೆಂದೂ) ಹೇಳುತ್ತದೆ; ಆ ಕಾಲದಿ—ಆಗ, ನ ಬ್ರಹ್ಮಾ ನ ಚ ಶಂಕರಃ—ಬ್ರಹ್ಮನೂ ಇಲ್ಲ, ಶಂಕರನೂ ಇಲ್ಲ, ಎಂದು—ಎಂಬುದಾಗಿ ಹೇಳಿ, ಮುಖ್ಯಾರ್ಥವ—ಮುಖ್ಯಪ್ರಮೇಯವನ್ನು, ನಿರ್ಣೈಸೇ—ನಿಶ್ಚಯಿಸಿ ಹೇಳುತ್ತಿರಲು (ಅನ್ಯಾರ್ಥಕ್ಕೆ ಅವಕಾಶವೆಲ್ಲಿ?)

**ವಿಶೇಷಾಂಶ:** *'ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ', 'ವಾಸುದೇವೋ ವಾ ಇದಮಗ್ರ ಆಸೀನ್ನ ಬ್ರಹ್ಮಾ ನ ಚ ಶಂಕರಃ'* ಎಂಬ ಶ್ರುತಿಗಳು, ನಾರಾಯಣನನ್ನುಳಿದು ಬೇರೆ ಯಾರೂ ಇರಲಿಲ್ಲವೆಂದು ಹೇಳುತ್ತವೆ. ಇತರ ಸರ್ವವೂ ಸ್ವತಂತ್ರನಾದ ನಾರಾಯಣನ ಅಧೀನದಲ್ಲಿ, ನಿಶ್ಚೇಷ್ಟಿತ-ಅವ್ಯಕ್ತದೆಶೆಯಲ್ಲಿದ್ದುವೆಂದರ್ಥ. ಸರ್ವಸಂಹಾರಕನಾದ ನಾರಾಯಣನು ಇತರ ಸರ್ವವಸ್ತುಗಳ ಮೃತ್ಯುವು; ಆ ಮೃತ್ಯುವಿನಿಂದ ನುಂಗಲ್ಪಟ್ಟು ಎಲ್ಲವೂ ಆತನ ಉದರದಲ್ಲಿದ್ದವು—ಕ್ರಿಯಾಶೂನ್ಯವಾಗಿದ್ದವು. 'ನೈವ ಕಿಂ ಚ ನಾಗ್ರ ಆಸೀತ್ ಮೃತ್ಯುನೈವೇದಮಾವೃತಮಾಸೀತ್' (ಬೃಹದಾರಣ್ಯ)—'ಪ್ರಳಯ ಕಾಲದಲ್ಲಿ (ಅಗ್ರೇ-ಸೃಷ್ಟಿಗೆ ಮೊದಲು) ಬೇರಾವುದೂ ಇರಲಿಲ್ಲ, ಎಲ್ಲವನ್ನೂ ಸಂಹರಿಸಿ ನುಂಗಿದ ಮೃತ್ಯುನಾಮಕ ಶ್ರೀಹರಿಯಿಂದ ಎಲ್ಲವೂ (ನಿತ್ಯವಸ್ತುಗಳೆಲ್ಲವೂ) ಆವೃತವಾಗಿದ್ದವು' ಎಂದು ವೇದವೇ ಹೇಳುತ್ತದೆ. ಇದರ ಅರ್ಥವನ್ನು ಭಾಷ್ಯದಲ್ಲಿ ಸ್ಪಷ್ಟಗೊಳಿಸಲಾಗಿದೆ.

*'ಸರ್ವಸಂಹಾರಕಂ ವಿಷ್ಣುಂ ದೇವೀಂ ಜೀವಾಂಸ್ತಥೈವ ಚ।*
*ಕಾಲಂ ತ್ರಿಗುಣಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಮ್॥*
*ಸಂಸ್ಕಾರಂ ಚೈವ ವೇದಾಂಶ್ಚ ನರ್ತೇಕಿಂಚಿಲ್ಲಯೇ ತ್ವಭೂತ್॥'* ಮತ್ತು

*'ಆಸೀದೇಕೋ ಹರಿಃಪೂರ್ವಂ ದೇವೀ ನಾರಾಯಣಿ ತಥಾ।*
*ಅನ್ಯದವ್ಯಕ್ತತಾಂ ಯಾತಂ ತದ್ವ್ಯಕ್ತಮಕರೋದ್ಧರಿಃ॥'*

ಎಂದರೆ, 'ಸರ್ವಸಂಹಾರಕನಾದ ವಿಷ್ಣು, ಶ್ರೀದೇವಿ, ಜೀವರು, ಅವರ ಕರ್ಮಗಳು, ಸಾಮ್ಯಸ್ಥಿತಿಯನ್ನು ಹೊಂದಿಸಲ್ಪಟ್ಟ ತ್ರಿಗುಣಾತ್ಮಕಪ್ರಕೃತಿ, ಸೂಕ್ಷ್ಮತಮರೂಪದಿಂದಿರುವ ಪ್ರಾಣ, ಇಂದ್ರಿಯಗಳು, ಸಂಸ್ಕಾರಗಳು, ವೇದಗಳು, ಇವುಗಳನ್ನು ಬಿಟ್ಟು ಬೇರಾವುದೂ ಇರಲಿಲ್ಲ' ಮತ್ತು 'ಪ್ರಳಯ ಕಾಲದಲ್ಲಿ ಶ್ರೀಹರಿಯೊಬ್ಬನೇ ಇದ್ದನು—ಲಕ್ಷ್ಮೀದೇವಿಯೂ ಇದ್ದಳು (ನಾರಾಯಣನು ಸ್ತ್ರೀರೂಪದಿಂದ ಆಕೆಯ ಬಿಂಬನಾದ್ದರಿಂದ, ಲಕ್ಷ್ಮೀದೇವಿಯು ನಾರಾಯಣೀ); ಇತರವೆಲ್ಲವೂ ಅವ್ಯಕ್ತಭಾವವನ್ನು ಹೊಂದಿದ್ದಿತು—ಅದನ್ನು ಸೃಷ್ಟಿಕಾಲ ಬರಲು, ಶ್ರೀಹರಿಯು ವ್ಯಕ್ತಗೊಳಿಸಿದನು.' ನಿತ್ಯವಸ್ತುಗಳೆಲ್ಲವೂ ಅತಿಸೂಕ್ಷ್ಮರೂಪದಿಂದ ನಿಷ್ಕ್ರಿಯಾವಸ್ಥೆಯಲ್ಲಿ ಪರಮಾತ್ಮಾಧೀನವಾಗಿ, ಪ್ರಳಯಕಾಲದಲ್ಲಿರುತ್ತವೆಯಲ್ಲದೆ ಸ್ವರೂಪತಃ ನಾಶ ಹೊಂದುವುದಿಲ್ಲ. ಶ್ರೀಹರಿಯಾದರೋ, ನಿತ್ಯವಸ್ತುಗಳ ನಿತ್ಯತ್ವರಕ್ಷಣೆ, ಜೀವರಿಗೆ ಧ್ಯಾನ, ಸುಷುಪ್ತಿಗಳೆಂಬ ಅವಸ್ಥೆಗಳಲ್ಲಿಡುವಿಕೆ, ರಮೆಯೊಂದಿಗೆ ರಮಣ, ಇತ್ಯಾದಿ ಪ್ರಳಯ ಕಾಲೀನ ಕ್ರಿಯಾವಿಶಿಷ್ಟನಾಗಿ ನಿತ್ಯಜಾಗ್ರತನಾಗಿದ್ದರೂ ಯೋಗನಿದ್ರೆಯಲ್ಲಿರುವನು. ದುರ್ಗಾದೇವಿಯು ಸ್ತುತಿಸಿದನಂತರ ಎಚ್ಚರಗೊಂಡವನಂತೆ ಏಳುವನು.

*'ಏವಂ ಸ್ತುತೇ ವಿಷ್ಣುರಜಃಪುರಾಣಃ ಉದ್ಬುದ್ಧವನ್ನುತ್ಥಿತೋ ನಿತ್ಯ ಬುದ್ಧಃ'* ಎಂದು (ವಿಷ್ಣುರಹಸ್ಯ) ಹೇಳುತ್ತದೆ. ಲಕ್ಷ್ಮೀದೇವಿಯೂ ಸಹ ಸೃಷ್ಟ್ಯಾದಿವ್ಯಾಪಾರಗಳಿಂದ ನಿವೃತ್ತಳಾಗಿ ವಿಷ್ಣುವಶದಲ್ಲಿರುವಳಲ್ಲದೇ—ಸ್ವತಂತ್ರಳಾಗಿ ಅಲ್ಲ. ಯಾರೂ ಇರಲಿಲ್ಲವೆಂಬುದರ ಅರ್ಥವನ್ನು ಹೀಗೆ ಗ್ರಹಿಸಬೇಕು. ಈ ಹಿಂದೆ ನಿರೂಪಿಸಿರುವಂತೆ, ನಿತ್ಯವಸ್ತುಗಳಿಗೂ, ಲಕ್ಷ್ಮೀದೇವಿಗೂ ಸಹ ಒಂದೊಂದು ಪ್ರಕಾರದ ಸೃಷ್ಟಿಯೆಂಬುದುಂಟು. ಈ ಮುಂದೆ ಸಹ, ಈ ಸಂಧಿಯಲ್ಲಿ ನಾನಾ ಸೃಷ್ಟಿಪ್ರಕಾರಗಳು ವಿಸ್ತಾರದಿಂದ ಪ್ರಸಕ್ತವಾಗುತ್ತವೆ. *'ಚೇಷ್ಟಾದಿರೂಪೇಣ ತದಾ ನ ಕಿಂಚಿದಾಸೀದ್ವಿನಾ ವಿಷ್ಣುಮಥ ಶ್ರಿಯಂ ಚ'* ಎಂಬ (ಬ್ರಹ್ಮಾಂಡಪುರಾಣವು) ರಮಾನಾರಾಯಣರನ್ನುಳಿದು ಯಾವುದೊಂದು ವಸ್ತುವೂ ಚೇಷ್ಟಾಯುಕ್ತವಾಗಿರಲಿಲ್ಲವೆಂದು ಹೇಳುತ್ತದೆ. ಸೃಷ್ಟಿಯ ನಂತರ, ಪರಮಾತ್ಮನ ಅಧೀನವಾಗಿಯೇ ಆದರೂ, ನಾನಾವಿಧ ಚೇಷ್ಟಾವಿಶಿಷ್ಟವಾಗಿರುತ್ತವೆ.

## ಶ್ಲೋಕ ೨

**ಸಂಹೃತ್ಯ ನಿಖಿಲಂ ಶೇತೇ ನಿದ್ರಯಾ ಪ್ರಳಯಾಂಬುನಿ।**
**ಕದಾಪಿ ನ ವಿಯುಜ್ಯೇತ ತ್ವಯಾ ವಿಶ್ವಪತಿಃ ಸದಾ॥**

**ಅರ್ಥ:** ನಿಖಿಲಂ— ಸಮಸ್ತ ಜಗತ್ತನ್ನೂ, ಸಂಹೃತ್ಯ— ಸಂಹರಿಸಿ (ತನ್ನೊಳಗೆ ಸೆಳೆದುಕೊಂಡು), ಪ್ರಳಯಾಂಬುನಿ— ಪ್ರಳಯಜಲದಲ್ಲಿ, ನಿದ್ರಯಾ— ಯೋಗ ನಿದ್ರೆಯಿಂದ (ನಿದ್ರೆಬಂದವನಂತೆ), ಶೇತೇ— ಮಲಗುತ್ತಾನೆ; ವಿಶ್ವಪತಿಃ — ಜಗದೊಡೆಯನಾದ ಶ್ರೀಹರಿಯು, ಸದಾ— ತ್ರಿಕಾಲಗಳಲ್ಲಿ, ಕದಾಪಿ— ಯಾವ ಕ್ಷಣದಲ್ಲಿಯೂ, ತ್ವಯಾ— ನಿನ್ನಿಂದ, (ಹೇ ಲಕ್ಷ್ಮಿ!) ನ ವಿಯು-ಜ್ಯೇತ— ವಿಯೋಗವನ್ನು ಹೊಂದುವುದಿಲ್ಲ (ನಿನ್ನನ್ನು ಬಿಟ್ಟಿರುವುದಿಲ್ಲ.)

**ವಿಶೇಷಾಂಶ:** ರಮಾನಾರಾಯಣರು ನಿತ್ಯ ಅವಿಯೋಗಿಗಳು— ಕೂಡಿಯೇ ಇರುವರು. ಪ್ರಳಯಕಾಲದಲ್ಲಿ ಉಭಯರೂ ಯೋಗನಿದ್ರೆಯಲ್ಲಿರುವರು. ಆಗ ವಾಯುದೇವನೂ ಪ್ರತಿಭಾತಪರಾವರನಾಗಿರುತ್ತಿರಲು, ರಮಾ-ನಾರಾಯಣರು ಜ್ಞಾನಶೂನ್ಯನಿದ್ರೆಯಲ್ಲಿರುವರೇ? ಆಗಲೂ (ಯೋಗನಿದ್ರೆ-ಯಲ್ಲಿದ್ದರೂ) ಸಕಲ ಜೀವರನ್ನೂ, ವೇದ, ಕಾಲ ಇತ್ಯಾದಿ ಎಲ್ಲ ವಸ್ತುಗಳ ಜ್ಞಾನವಿಶಿಷ್ಟರಾಗಿಯೇ ಇರುವರು.

## ಪದ ೨

ರಾಗ (?) ತಾಳ-ರೂಪಕ

**ಪ್ರಳಯಕಾಲದಿ ಎಲ್ಲ ಜಗವ ಲಯವ ಮಾಡಿ**
**ಲಲನೆ ಲಕ್ಷ್ಮಿಯೊಡನೆ ವಟದ**
**ಎಲೆಯಲ್ಲಿ ಮಲಗಿ ಸುಖದಲಿಪ್ಪನೆಂದು**
**ಅಳವಿಲ್ಲ ಪ್ರಕೃತಿಪುರುಷರಿಗೆ** ॥೧॥

**ಅರ್ಥ:** ಎಲ್ಲ ಜಗವ— ಸಕಲ ಜಗತ್ತನ್ನು, ಲಯವ ಮಾಡಿ— ಲಯ-ಗೊಳಿಸಿ,. ಪ್ರಳಯಕಾಲದಿ— ಪ್ರಳಯಕಾಲದಲ್ಲಿ, ಲಲನೆ ಲಕ್ಷ್ಮಿಯೊಡನೆ— ಪ್ರಿಯತಮೆಯಾದ ತನ್ನ ಪತ್ನಿಯಾದ ಲಕ್ಷ್ಮೀದೇವಿಯೊಂದಿಗೆ, ವಟದ ಎಲೆಯಲ್ಲಿ— ಆಲದೆಲೆಯಮೇಲೆ, ಮಲಗಿ ಸುಖದಲಿಪ್ಪನು— ಸುಖವಾಗಿ ಮಲಗಿರುವನು; ಪ್ರಕೃತಿಪುರುಷರಿಗೆ— ಲಕ್ಷ್ಮೀನಾರಾಯಣರಿಗೆ, ಎಂದು— ಯಾವ ಕಾಲಕ್ಕೂ, ಅಳವಿಲ್ಲ— ಸಮರಿಲ್ಲ. (ಆ ದಾಂಪತ್ಯದ ವೈಖರಿಯೇ ಬೇರೆ.)

**ಸಮನಾವೆ ಸೂತ್ರವೆಂಬ ಪ್ರಕೃತಿಶಬ್ದ**
**ರಮೆಗು ತತ್ಪುರುಷ ಶ್ರೀಹರಿಗೂ**
**ಸಮ ದೇಶ ಕಾಲಗಳಲ್ಲಿ ಪೇಳಿತಾಗಿ**
**ಭ್ರಮೆ ಸಲ್ಲ ವೇದಾರ್ಥದಲ್ಲಿ** ॥೨॥

**ಅರ್ಥ:** ಸಮನಾವೆ ಎಂಬ ಸೂತ್ರವು—'ಸಮನಾ ಚ' ಎಂಬ ಸೂತ್ರವೇ, ಪ್ರಕೃತಿಶಬ್ದ—ಪ್ರಕೃತಿ ಎಂದು ಕರೆಯಲ್ಪಡುವ (ಪ್ರಕೃತಿಶಬ್ದವಾಚ್ಯಳಾದ), ರಮೆಗು —ರಮಾದೇವಿಗೂ, ತತ್ಪುರುಷ ಶ್ರೀಹರಿಗೂ—ಆಕೆಯ ಪತಿಯಾದ (ಪುರುಷ) ಶಬ್ದವಾಚ್ಯನಾದ) ಶ್ರೀಹರಿಗೂ, ದೇಶಕಾಲಗಳ ವ್ಯಾಪ್ತಿಯಲ್ಲಿ (ಸರ್ವತ್ರ ಸರ್ವ-ಕಾಲದಲ್ಲಿರುವುದೆಂಬ ವಿಷಯದಲ್ಲಿ), ಸಮ—(ಇಬ್ಬರೂ) ಸಮರೆಂದು, ಪೇಳಿತಾಗಿ—ಹೇಳಿರುವುದರಿಂದ, ವೇದಾರ್ಥದಲ್ಲಿ—ವೇದಗಳು ಹೇಳುವ ಅರ್ಥದಲ್ಲಿ, ಭ್ರಮೆ ಸಲ್ಲ—ಭ್ರಮಿಸುವುದು (ಬೇರೆ ಅರ್ಥವಿರಬಹುದೆಂದು ತಿಳಿಯುವುದು) ಯುಕ್ತವಲ್ಲ.

**ವಿಶೇಷಾಂಶ:** ಪ್ರಕೃತಿ ಪುರುಷ ಶಬ್ದವಾಚ್ಯರಾದ ರಮಾನಾರಾಯಣರ ಸ್ವರೂಪವನ್ನು ನಿರೂಪಿಸುವ ವೇದವಾಕ್ಯಗಳಿಗೆ, ವೇದಾರ್ಥಗಳನ್ನು ನಿರ್ಣಯಿ-ಸಲಿಕ್ಕಾಗಿಯೇ ಪ್ರವೃತ್ತವಾದ ಬ್ರಹ್ಮಸೂತ್ರಗಳನ್ನು ಬಿಟ್ಟು ಅನ್ಯಾರ್ಥಗಳನ್ನು ತಿಳಿಯುವುದು ಸರಿಯಲ್ಲ. ಸಾಕ್ಷಾನ್ನಾರಾಯಣನೇ ಶ್ರೀಬಾದರಾಯಣರೂಪ-ದಿಂದ, ನ್ಯಾಯಬದ್ಧವಾದ ಸೂತ್ರಗಳನ್ನು ರಚಿಸಿ ನಿರ್ಣಯಗಳನ್ನು ಹೇಳಿರು-ವನು. ಪ್ರಕೃತಿಪುರುಷರನ್ನು ಶ್ರುತಿಯು, *'ದ್ವೌ ವಾ ವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತೇ!'* (ಬೃಹಚ್ಛ್ರುತಿ)—'ಎಂದೂ ಸಂಸಾರವಿಲ್ಲದವರು ಇಬ್ಬರೇ—ಪ್ರಕೃತಿ ಮತ್ತು ಪುರುಷ; ಇಬ್ಬರೂ ನಿತ್ಯಮುಕ್ತರು, ನಿತ್ಯರು ಮತ್ತು ಸರ್ವಗತರು (ಸರ್ವತ್ರ ಇರುವವರು); ಹೀಗೆ ಇವರನ್ನು ತಿಳಿದು ಮುಕ್ತನಾಗುತ್ತಾನೆ' ಎಂದು ಹೇಳುತ್ತದೆ. ಹೀಗೆ ನಿತ್ಯತ್ವ—ನಿತ್ಯಮುಕ್ತತ್ವ, ಸರ್ವಗತತ್ವಗಳಿಂದ ಶ್ರೀಲಕ್ಷ್ಮೀ-ದೇವಿಯು ಶ್ರೀಹರಿಗೆ ಸಮಳಾದರೂ, ಅಸಮಳೂ ಆಗಿರುವಳು. *'ಸಮಾ-ವೇತೌ ಪ್ರಕೃತಿಶ್ಚ ಅಸಮಾವೇತೌ ಪ್ರಕೃತಿಶ್ಚ ಪರಮಶ್ಚ ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ವಿಲೀನಃ ಪರಮೇ ಹ್ಯಮೃತತ್ವಮೇತಿ'* ಎಂಬ (ಸೌಪರ್ಣ-ಶ್ರುತಿಯು)—ಈ ರಮಾನಾರಾಯಣರಿಬ್ಬರೂ ಸಮರು ಮತ್ತು ಅವರು ಅಸಮರೂ ಅಹುದು; ಲಕ್ಷ್ಮಿಯಲ್ಲಿ ಲಯಹೊಂದಿದವರು—ತಿರುಗಿ ಸಂಸಾರಕ್ಕೆ

ಬರುತ್ತಾರೆ; ಪರಮಾತ್ಮನಲ್ಲಿ ಲಯಹೊಂದಿದವರು ಮುಕ್ತರಾಗುತ್ತಾರೆ. ಪರಮಾತ್ಮನಲ್ಲಿ ಲಯಹೊಂದಿದವರೆಂದರೆ, ನಿತ್ಯಸ್ಥಿತಿರೂಪಪ್ರವೇಶವನ್ನು ಹೊಂದಿದವರೆಂದರ್ಥ — ಪ್ರಳಯಕಾಲದಲ್ಲಿ ಉದರ ಪ್ರವೇಶಮಾಡಿದವರೆಲ್ಲರೂ ಎಂದರ್ಥವಲ್ಲ. ಲಕ್ಷ್ಮೀದೇವಿಯು ಮುಕ್ತರಾಗುವ ಬ್ರಹ್ಮಾದಿಜೀವರಿಗೆ ದ್ವಾರ ಮಾತ್ರಳು — ಆಕೆಯಲ್ಲಿ ಲಯವಿಲ್ಲ. ಈ ಮುಂತಾದ ಶ್ರುತ್ಯರ್ಥಗಳನ್ನು ನಿರ್ಣಯಿಸಿ ಹೇಳುವ ಸೂತ್ರವು ಹೀಗಿದೆ:

*'ಓಂ ಸಮನಾ ಚಾ ಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ'*

**ಅರ್ಥ:** ಸಮನಾ — (ದೇಶಕಾಲಗಳಲ್ಲಿ ಶ್ರೀಹರಿಗೆ ಸಮವಾದ ವ್ಯಾಪ್ತಿಯುಳ್ಳವಳೆಂಬ ಕಾರಣದಿಂದ) **'ಸಮನಾ'** ಎಂದು ಕರೆಯಲ್ಪಡುವ ಲಕ್ಷ್ಮೀದೇವಿಯು, ಚ — ಪರಮಾತ್ಮನಲ್ಲಿ ಲಯಹೊಂದುವುದಿಲ್ಲ; ಅನುಪೋಷ್ಯ — ಶ್ರೀಹರಿಯನ್ನು ಉಪಾಸಿಸದೇ, ಅಮೃತತ್ವಂ (ಆಕೆಯ ಮುಕ್ತಿಯು), (ಶ್ರೀಲಕ್ಷ್ಮೀದೇವಿಯು ನಿತ್ಯಮುಕ್ತಳು — ಆಕೆಯ ಮುಕ್ತಿಯು ಉಪಾಸನಾಫಲರೂಪವಾದುದಲ್ಲ — ಆದರೂ ನಿರಂತರವಾದ ಉಪಾಸನೆಯುಳ್ಳವಳು); ಅಸೃತ್ಯುಪಕ್ರಮಾತ್ — ಯಾವ ಕಾಲಕ್ಕೂ ಸಂಸಾರದ ಉಪಕ್ರಮವೇ ಇಲ್ಲದವಳಾದ್ದರಿಂದ, ಚ — ಶ್ರುತಿಯೂ ಹಾಗೆಂದೇ (ಆಕೆಗೆ ಶ್ರೀಹರಿಯಲ್ಲಿ ಲಯವಿಲ್ಲವೆಂದೇ) ಹೇಳುವುದರಿಂದ, ದೇಶಕಾಲಗಳ ವ್ಯಾಪ್ತಿಯಿಂದ ಶ್ರೀಹರಿಗೆ ಸಮಳಾದರೂ ಶ್ರೀಹರಿಗೆ ಅನಂತಗುಣಗಳಿಂದ ನ್ಯೂನಳು. *'ಬ್ರಹ್ಮಾದ್ಯಾಸ್ತ್ವವಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮಾ'* (ವರಾಹಪುರಾಣ) — ಬ್ರಹ್ಮಾದಿಜೀವರು ಶ್ರೀಹರಿಗೆ ಸರ್ವಪ್ರಕಾರದಿಂದ ಅಸಮರು; ಲಕ್ಷ್ಮೀದೇವಿಯಾದರೋ **'ಸಮಾಸಮಳು'** (ಸಮಳೂ-ಅಸಮಳೂ) ಎಂದು ಹೇಳಲಾಗುತ್ತದೆ.

**ಬೊಮ್ಮನ ಪ್ರಳಯದಲಿ ಸುಮ್ಮನೆಯಾಗಿರ್ದ**
**ನಮ್ಮ ದೇವಗೆ ಮೃತ್ಯುವಿಲ್ಲ**
**ಜನ್ಮವಿವಗೆ ಸಲ್ಲ ಪ್ರಾಗಭಾವವಿಲ್ಲ**
**ಅಮ್ಮಮ್ಮ ಮೃಣ್ಮಯವಾಗುವುದೇ** ॥೩॥

**ಅರ್ಥ:** ಬೊಮ್ಮನ — ಬ್ರಹ್ಮನ, ಪ್ರಳಯದಲಿ — ಪ್ರಳಯದಲ್ಲಿ (ಬ್ರಹ್ಮದೇವನೂ ಲಯಹೊಂದಿದಾಗ — ಮಹಾಪ್ರಳಯದಲ್ಲಿ) , ಆನಂದದಿಂದ (ಶಾಂತನಾಗಿ) ಯೋಗನಿದ್ರೆಯಲ್ಲಿ ಮಲಗಿದ್ದ, ನಮ್ಮ ದೇವಗೆ — ನಮ್ಮ ಶ್ರೀಹರಿಗೆ, ಮೃತ್ಯುವಿಲ್ಲ-ಮರಣವೆಂಬುದಿಲ್ಲ (ಇಲ್ಲವೇ ಇಲ್ಲ;) ಇವಗೆ-ಇಂಥ

ಶ್ರೀಹರಿಗೆ, ಜನ್ಮವು ಸಲ್ಲ—(ಮರಣವಿಲ್ಲದ್ದರಿಂದ) ಜನನವೂ ಕೂಡುವುದಿಲ್ಲ; ಪ್ರಾಗಭಾವವಿಲ್ಲ—(ಆದ್ದರಿಂದಲೇ ಹುಟ್ಟುವ ಮೊದಲು ಇರಲಿಲ್ಲವೆಂಬ) ಮೊದಲಿನ ಅಭಾವವೂ ಇಲ್ಲ (ಏವಂ ಚ ಕಾಲತಃ ವ್ಯಾಪ್ತನು—ಎಂದರೆ, ಅನಾದ್ಯನಂತಕಾಲದಲ್ಲಿಯೂ ಇರುವವನು); ಅಮ್ಮಮ್ಮ—ಅಬ್ಬಬ್ಬ, ಮೃಣ್ಮಯ-ವಾಗುವುದೇ—ಇಂಥವನ ದೇಹವು ಪ್ರಾಕೃತವಾದೀತೇ? (ಜಡವಾದೀತೇ? ಸರ್ವಥಾ ಶಕ್ಯವಿಲ್ಲ).

**ವಿಶೇಷಾಂಶ:** (೧) *'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ'* ನಿತ್ಯವಸ್ತುಗಳಲ್ಲಿ ಪರಮನಿತ್ಯನು; ಚೇತನಗಳಲ್ಲಿ ಪರಮಚೇತನನು—ನಿತ್ಯವಸ್ತುಗಳ ನಿತ್ಯತ್ವವನ್ನು ರಕ್ಷಿಸುವವನೂ ಶ್ರೀಹರಿಯೇ ಎಂದು, ವೇದವು ಹೇಳುತ್ತವೆ.

*'ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಮ್।*
*ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್॥'*

ಎಂದರೆ, ಮೂಢಾಃ-ಮೂಢರು (ತಮೋಯೋಗ್ಯರು), ಭೂತಮಹೇಶ್ವರಂ—ಸರ್ವಕಾಲದೇಶಗಳಲ್ಲಿರುವ, (ಭೂತ-ಸರ್ವದಾ ಇರುವ, ಮಹತ್—ಸರ್ವದೇಶದಲ್ಲಿರುವ, ಈಶ್ವರಂ—ಅಚಿಂತ್ಯಶಕ್ತ್ಯಾದಿ ಗುಣಪೂರ್ಣನಾದ), ಪರಂ—ಸರ್ವೋತ್ಕೃಷ್ಟವಾದ, ಮಮ ಭಾವಂ—ನನ್ನ ಸ್ವರೂಪವನ್ನು, ಅಜಾನಂತಃ—ತಿಳಿಯದವರಾಗಿ, ಮಾನುಷೀಂ ತನುಂ—ಮನುಷ್ಯದೇಹವನ್ನು (ಜಡದೇಹವನ್ನು) ಆಶ್ರಿತಂ—ಆಶ್ರಯಿಸಿರುವವನೆಂದು **ಅಥವಾ** (ಮನುಷ್ಯ-ದೇಹದಂತೆ ತೋರುವ ರೂಪವನ್ನು ಸ್ವೇಚ್ಛೆಯಿಂದ ಪ್ರಕಟಿಸಿರುವ ನನ್ನನ್ನು), ಅವಜಾನಂತಿ—ಅಧಮನೆಂದು ತಿಳಿದು (ತಪ್ಪಾಗಿ ತಿಳಿದು) ವರ್ತಿಸುತ್ತಾರೆ' ಎಂದೂ

*'ಅವ್ಯಕ್ತಂ ವ್ಯಕ್ತಿ ಮಾಪನ್ನಂ ಮನ್ಯಂತೇ ಮಾಮಬುದ್ಧಯಃ।*
*ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್॥*

ಎಂದರೆ, ಅಬುದ್ಧಯಃ—ಬುದ್ಧಿಶೂನ್ಯರು (ಮೂಢರು), ಮಮ—ನನ್ನ, ಅವ್ಯಯಂ—ನಿರ್ವಿಕಾರವಾದ, ಅನುತ್ತಮಂ—ಸರ್ವೋತ್ಕೃಷ್ಟವಾದ, ಪರಂ-ಭಾವಂ—ಸಚ್ಚಿದಾನಂದಾತ್ಮಕವಾದ ದಿವ್ಯದೇಹವನ್ನು, ಅಜಾನಂತಃ—ತಿಳಿ-ಯದೇ, ಅವ್ಯಕ್ತಂ—ನನ್ನ ಇಚ್ಛೆಯಿಲ್ಲದೇ ಅನ್ಯರಿಗೆ ಗೋಚರಿಸದ, (ಅವ್ಯಕ್ತ-ನಾದ), ಮಾಂ—ನನ್ನನ್ನು, ವ್ಯಕ್ತಿಂ—ಸ್ವಾಭಾವಿಕವಾಗಿಯೇ ಸರ್ವರಿಗೂ ಗೋಚರಿಸುವ ಪ್ರಾಕೃತದೇಹವನ್ನು, ಆಪನ್ನಂ—ಹೊಂದಿರುವವನನ್ನಾಗಿ,

ಮನ್ಯಂತೇ— ತಿಳಿಯುತ್ತಾರೆ.' ಎಂದೂ, ಗೀತೆಯಲ್ಲಿ ಶ್ರೀಕೃಷ್ಣನೇ ತನ್ನ ರೂಪವು (ದೇಹವು) ಅಪ್ರಾಕೃತವೆಂದು ಹೇಳಿಕೊಂಡಿರುವನು.

(೨) **'ಅಭಾವ'**ವೆಂಬುದು ಮೂರು ವಿಧ— ಪ್ರಾಗಭಾವ, ಪ್ರಧ್ವಂಸಾಭಾವ ಮತ್ತು ಅತ್ಯಂತಾಭಾವಗಳೆಂದು. ಒಂದು ಪದಾರ್ಥದ ಉತ್ಪತ್ತಿಗೆ ಪೂರ್ವದಲ್ಲಿ ಅದು ಇಲ್ಲ— ಆಗ ಅದರ ಇಲ್ಲದಿರುವಿಕೆಯು, **ಪ್ರಾಗಭಾವವೆನಿಸುತ್ತದೆ.** ಆ ಪದಾರ್ಥದ ನಾಶದ ನಂತರವೂ ಅದಿಲ್ಲ— ಆಗಿನ ಅದರ ಅಭಾವವು **ಪ್ರಧ್ವಂಸಾಭಾವವು.** ಎಂದೂ ಎಲ್ಲಿಯೂ ಇಲ್ಲದ ಪದಾರ್ಥದ ಇಲ್ಲದಿರುವಿ-ಕೆಯು **ಅತ್ಯಂತಾಭಾವವು**— ಮನುಷ್ಯನ ಕೋಡು; ಗಗನಕುಸುಮ ಇತ್ಯಾದಿ-ಗಳಂತೆ. ಶಾಸ್ತ್ರದಲ್ಲಿ ಅಭಾವಘಟ್ಟವು ಬಹು ಕ್ಲಿಷ್ಟಭಾಗವು— ಗುರುಮುಖದಿಂದ **'ತತ್ವಸಂಖ್ಯಾನ'** ಮೊದಲಾದ ಗ್ರಂಥಗಳ ಅಭ್ಯಾಸದಿಂದ ವಿಶೇಷಗಳನ್ನು ತಿಳಿಯಬೇಕು.

**ಜನನಮರಣಗಳ ತೊರೆದ ಲಯದಲಿ ಹರಿ**
**ವನಿತೆಯರ ಒಡಗೂಡುವಾಗ**
**ಮನೆಮನೆದೈವಂಗಳೆಲ್ಲಿ ಪೋದವೋ ಸರ್ವಾ-**
**ಗ್ರಣಿ ಬೊಮ್ಮನೇ ಹೆಮ್ಮಗನೋ** ॥೪॥

**ಅರ್ಥ:** ಜನನಮರಣಗಳ ತೊರೆದ— ಜನನಮರಣರಹಿತನಾದ, ಹರಿ— ಶ್ರೀಹರಿಯು, ಲಯದಲಿ— ಪ್ರಳಯಕಾಲದಲ್ಲಿ, ವನಿತೆಯರ— ತನ್ನ ಪತ್ನಿ-ಯರಾದ ಶ್ರೀಭೂದುರ್ಗೆಯರನ್ನು (ಲಕ್ಷ್ಮೀರೂಪಗಳನ್ನು), ಒಡಗೂಡುವಾಗ — ಪ್ರೀತಿಯಿಂದ ಸೇರಿ ಮಲಗುವಾಗ, ಮನೆಮನೆ ದೈವಂಗಳು— ತತ್ವಾಭಿ-ಮಾನಿಗಳೆಂಬ ನಾನಾದೇವತೆಗಳು (ಮನೆ— ಗೃಹ, ಅಧಿಷ್ಠಾನ— ಆಶ್ರಯ-ಸ್ಥಳ), ಎಲ್ಲಿ ಪೋದವೋ— ಎಲ್ಲಿ ಹೋದರಯ್ಯಾ! (ಪ್ರಳಯಕಾಲದಲ್ಲಿ ಅವರ್‍ಯಾರೂ ಇರಲಿಲ್ಲವಲ್ಲಾ!); ಸರ್ವಾಗ್ರಣಿ— ಈ ದೇವತಾಸಮೂಹದ ನಾಯಕನಾದ, ಬೊಮ್ಮನೆ— ಬ್ರಹ್ಮನೇ, ಹೆಮ್ಮಗನೋ— (ಶ್ರೀಹರಿಯ) ಜ್ಯೇಷ್ಠಪುತ್ರನು (ಸೃಷ್ಟಿಯಾರಂಭವಾದೊಡನೆ ಮೊದಲು ಹುಟ್ಟುವವನು.)

**ವಿಶೇಷಾಂಶ:** *'ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ'* ಇತ್ಯಾದಿ ವೇದವಾಕ್ಯಗಳು, ಬ್ರಹ್ಮಾಂಡದೊಳಗೆ ಸೃಷ್ಟರಾದವರಲ್ಲಿ (ಬಾಹ್ಯ ಸೂಕ್ಷ್ಮಸೃಷ್ಟಿ ಕ್ರಮವು ತಾರತಮ್ಯಪ್ರಯೋಜಕವಲ್ಲ) ಬ್ರಹ್ಮನು ಮೊದಲಿಗನೆಂದು ಹೇಳು-ತ್ತವೆ.

**ಅನೇಕ ದನುಜರಟ್ಟುಳಿ ಬಂದಬಂದಾಗ**
**ಅನುಸರಿಸಿವನ ಯೆಂದೆಂದೂ**
**ಅನಾಯಾಸದಿ ಬಾಳುವ ದೇವರ ಈ**
**ಹರಿಯನುಗಯೆಂಬರವಿವೇಕಿಗಳೂ** ||೫||

**ಅರ್ಥ:** ಅನೇಕ ದನುಜರ—ಸದಾ ಬಹುಸಂಖ್ಯೆಯಲ್ಲಿರುವ ದಾನವರ (ಅಸುರರ), ಅಟ್ಟುಳಿ—ಕಾಟ (ಪೀಡೆ), ಬಂದಬಂದಾಗ—(ಸಜ್ಜನಲೋಕಕ್ಕೆ) ಉಂಟಾದಾಗಲೆಲ್ಲ, ಎಂದೆಂದೂ—ಎಲ್ಲ ಕಾಲದಲ್ಲಿ (ತಪ್ಪದೇ), ಅನಾಯಾಸದಿ—ಲೀಲೆಯಿಂದ, ಬಾಳುವ—(ಅವರ ಪೀಡೆಯನ್ನು ಪರಿಹರಿಸಿ, ತಾನೂ ಅವರ ಆಘಾತಕ್ಕೆ ಲೇಶವೂ ಒಳಗಾಗದೇ) ಮೆರೆಯುವ, ದೇವರ ಇವನ—ಶ್ರೀಹರಿಯನ್ನು, ಅನುಸರಿಸು—ಆಶ್ರಯಿಸು; ಈ ದೇವರ ಹರಿಯ—ಸರ್ವಾರಿಷ್ಟ ಪರಿಹಾರಕನಾದ ಈ ಕ್ರೀಡಾದಿ ಗುಣಪರಿಪೂರ್ಣನನ್ನು (ಶ್ರೀಹರಿಯನ್ನು), ಅನುಗ ಎಂಬರು—(ಇತರರನ್ನು) ಅನುಸರಿಸುವವನು (ಆಶ್ರಯಿಸುವವನು) ಎಂದು ಹೇಳುವವರು (ಅನಾಶ್ರಿತನನ್ನು ಆಶ್ರಿತನೆಂದು ತಿಳಿಯುವವರು), ಅವಿವೇಕಿಗಳೂ—ಮೂರ್ಖರೇ ಸರಿ.

**ವಿಶೇಷಾಂಶ:** ಶ್ರೀಹರಿಯ ಅನಂತಗುಣಗಳ ಮಧ್ಯೆ ಸ್ವಾತಂತ್ರ್ಯ ಗುಣವು ಪ್ರಧಾನವಾದುದು. ಎಂದರೆ ಅತ್ಯವಶ್ಯಕವಾಗಿ ಮೊಟ್ಟಮೊದಲು ಗ್ರಹಿಸಬೇಕಾದುದೆಂದರ್ಥ. ಸ್ವಾತಂತ್ರ್ಯವನ್ನು ಕಿಂಚಿನ್ನ್ಯೂನವೆಂದು ತಿಳಿಯುವುದು ಸಹ ಮಹಾ ಅನರ್ಥಪ್ರಾಪಕವಾದ ಮಿಥ್ಯಾಜ್ಞಾನವು—ಶ್ರೀರಾಮನು ತನ್ನ ಕಾರ್ಯಸಿದ್ಧಿಗಾಗಿ ಕಪಿಗಳನ್ನಾಶ್ರಯಿಸಿದನೆಂದು ತಿಳಿಯುವಂತೆ.

**ವೈರಿಂಚಿಲಯೇ ಮುಚ್ಯತೇ ಸರ್ವವೆಂಬ**
**ನಿರವಕಾಶವಾಗಿರಲೂ**
**ದುರಾಶೆಯ ಬಿಡು ಇನ್ನೊಂದು ಲಯವೆಲ್ಲಿ**
**ವಿರಿಂಚಿಲಯವೇ ಮಹಾಪ್ರಳಯ** ||೬||

**ಅರ್ಥ:** ವೈರಿಂಚಿಲಯೇ—ಬ್ರಹ್ಮನ ಲಯದಲ್ಲಿ, ಸರ್ವವು—ಎಲ್ಲವೂ, ಮುಚ್ಯತೇ—ತಮ್ಮ ಕಾರ್ಯಗಳಿಂದ (ಸರ್ವಚೇಷ್ಟೆಗಳಿಂದ) ನಿವೃತ್ತವಾಗುತ್ತವೆ, ಎಂಬ—ಎಂದು ಹೇಳುವ, ನಿರವಕಾಶವಾಗಿರಲು—ನಿರವಕಾಶ (ಅನ್ಯಾರ್ಥಕ್ಕೆಡೆಯಿಲ್ಲದ) ಪ್ರಮಾಣವಾಕ್ಯಗಳಿರಲು, ದುರಾಶೆಯ ಬಿಡು—ದುಷ್ಟ ಆಶೆಗಳನ್ನು ಬಿಡು (ಸ್ವಯೋಗ್ಯಸಾಧನೆಯನ್ನು ಪೂರ್ತಿಗೊಳಿಸಿಕೊ), ವಿರಿಂಚಿ-

ಲಯವೇ — ಬ್ರಹ್ಮಲಯವೇ. ಮಹಾಪ್ರಳಯ — ಮಹಾಪ್ರಳಯವೆಂಬುದು; ಇನ್ನೊಂದು ಲಯವೆಲ್ಲಿ — ಬೇರೆ ಲಯವೆಂಬುದೆಲ್ಲಿದೆ?

**ವಿಶೇಷಾಂಶ:** ಮನುಷ್ಯೋತ್ತಮರೇ ಮೊದಲಾದ ಸಾಮಾನ್ಯ ಮುಕ್ತಿ ಯೋಗ್ಯಜೀವರಿಗೆ, ಒಂದು ಬ್ರಹ್ಮಕಲ್ಪಮಾತ್ರವೇ ಸಾಧನಕಾಲದ ಅವಧಿಯು. ಮಹಾಪ್ರಳಯದ ನಂತರ, ಆ ಕಲ್ಪದ ಬ್ರಹ್ಮನೊಂದಿಗೆ ಮುಕ್ತರಾಗುತ್ತಾರೆ. ಬಹುಬ್ರಹ್ಮಕಲ್ಪಗಳ ಸಾಧನೆಯುಳ್ಳ ಉತ್ತಮ ದೇವಾದಿ ಅಧಿಕಾರಿಗಳು, ಮುಂದಿನ ಬ್ರಹ್ಮಕಲ್ಪಗಳಲ್ಲಿ ಪುನಃಪುನಃ ಜನ್ಮವೆತ್ತಿ ಸಾಧನಪೂರ್ತಿಯನ್ನು ದೊರಕಿಸಿಕೊಂಡು ಮುಕ್ತರಾಗುತ್ತಾರೆ. **'ಇನ್ನೊಂದು ಬ್ರಹ್ಮಲಯವೆಲ್ಲಿ'** ಎಂಬುದರಿಂದ, ಈ ಕಲ್ಪದ ಬ್ರಹ್ಮನೊಡನೆ ಮುಕ್ತರಾಗುವ ಜೀವರನ್ನು ಕುರಿತು, ತ್ವರೆಮಾಡಿರೆಂದು ಉಪದೇಶಿಸಿರುವರೆಂದು ತಿಳಿಯಬೇಕು.

**ಈ ಲಯಕಳುಕದ ಹರಿಯ ಕಾರಣಗುಣ**
**ಗಳಿಗೆ ಲಯವು ಸಲ್ಲದಾಗಿ**
**ತಾಳದು ನಿರ್ಗುಣ ನಿರಾಕಾರದ ಮತ**
**ಆಲೋಚನೆಯ ಬಲ್ಲವರಿಗೆ ॥೭॥**

**ಅರ್ಥ:** ಈ ಲಯಕೆ — ಈ ಮಹಾಪ್ರಳಯಕ್ಕೆ, ಅಳುಕದ — ಜಗ್ಗದ (ಅಲ್ಲಾಡದ — ಬೆದರದ), ಹರಿಯ — ಶ್ರೀಹರಿಯ, ಕಾರಣಗುಣಗಳಿಗೆ — ಪ್ರಳಯಾದಿಗಳಿಗೆಲ್ಲಕ್ಕೂ ಕಾರಣಗಳಾದ (ಸ್ವಾತಂತ್ರ್ಯ, ಸರ್ವಶಕ್ತಿ, ಸರ್ವಜ್ಞತ್ವ, ಆನಂದಾದಿ) ಗುಣಗಳಿಗೆ, ಲಯವು — ನಾಶವು (ಕುಂದೆಂಬುದು) ಸಲ್ಲದಾಗಿ — ಕೂಡುವುದಿಲ್ಲವಾದ್ದರಿಂದ, ಆಲೋಚನೆಯ ಬಲ್ಲವರಿಗೆ — ವಿಚಾರವಂತರಾದ ಜ್ಞಾನಿಗಳಿಗೆ, ನಿರ್ಗುಣನಿರಾಕಾರದ ಮತ — ಶ್ರೀಹರಿಯು ನಿರ್ಗುಣ, ನಿರಾಕಾರನೆಂದು ಮುಂತಾಗಿ ವಾದಿಸುವ ಮತವು, ತಾಳದು — ಹಿಡಿಸದು (ಸಹನೆಯಾಗುವುದಿಲ್ಲ.)

**ವಿಶೇಷಾಂಶ:** ಪರಮಾತ್ಮ ತತ್ವವನ್ನು, ನಿರ್ಗುಣ, ನಿರಾಕಾರ ನಿರ್ವಿಶೇಷ, ಇತ್ಯಾದಿಯಾಗಿ ನಿರೂಪಿಸುವ ಮಾಯಾವಾದಮತವು ಜೀವಬ್ರಹ್ಮರು ಸ್ವರೂಪದಿಂದ ಅತ್ಯಂತ ಅಭಿನ್ನರೆಂದು ಹೇಳುತ್ತದೆ. ಪ್ರಳಯಕಾಲದಲ್ಲಿ ಶ್ರೀಹರಿ ಮತ್ತು ಲಕ್ಷ್ಮೀ, ಬ್ರಹ್ಮ, ಜೀವಾದಿ ಇತರ ವಸ್ತುಗಳ ಸ್ಥಿತಿ ಪ್ರಕಾರವನ್ನು ಶ್ರುತಿ, ಸ್ಮೃತಿ, ಬ್ರಹ್ಮಸೂತ್ರಾದಿ ಪ್ರಮಾಣಗಳಿಂದ ನಿರೂಪಿಸಿ, ಈ ನುಡಿಗಳಲ್ಲಿ ನಿರ್ಗುಣನಿರಾಕಾರತ್ವಗಳನ್ನು ಯುಕ್ತಿವಿರುದ್ಧವೆಂದೂ ಸಾಧಿಸುತ್ತಾರೆ. ಜಗತ್-

ಕಾರಣಗಳಾದ ಸ್ವಾತಂತ್ರ್ಯಾದಿಗುಣಗಳು ನಿತ್ಯವಾಗಿರಲು ನಿರ್ಗುಣನು ಹೇಗಾದಾನು? ಪ್ರಳಯಕಾಲದಲ್ಲಿ ಸಹ ಲಕ್ಷ್ಮೀಭುಜಗಳಲ್ಲಿ ಕ್ರೀಡಿಸುತ್ತ ಆನಂದಪೂರ್ಣವಾಗಿ ವಿರಾಜಿಸುವನೆಂಬುವವನನ್ನು ನಿರಾಕಾರನೆಂದು ಹೇಳುವುದು ಹೇಗೆ ಕೂಡುತ್ತದೆ?

**ಏಕವೆನಿಪ ಬೊಮ್ಮನೈಕ್ಯವೆಂತಪ್ಪುದು**
**ಐಹಿಕ ಐಕ್ಯವಲ್ಲವಲ್ಲಾ**
**ಏಕಸ್ವಭಾವ ಐಕ್ಯವೆಂದುವದು ಪೇಳುವ**
**ವ್ಯಾಕರಣದ ಮಾತ ಕೇಳು** ॥೮॥

**ಅರ್ಥ:** ಏಕವೆನಿಪ— ಇರುವುದು ಒಂದೇ ವಸ್ತು ಎಂದು ಹೇಳಲಾಗುವ, ಬೊಮ್ಮನೈಕ್ಯವು— ಬ್ರಹ್ಮನ ಐಕ್ಯವು, ಎಂತಪ್ಪುದು— ಹೇಗೆ ಕೂಡುತ್ತದೆ? (ಬ್ರಹ್ಮವೆಂದು ಒಂದೇ ವಸ್ತುವಿದ್ದು, ಭಿನ್ನವಸ್ತುಗಳೇ ಇಲ್ಲದಿರಲು ಯಾರಿಂದ ಯಾರಿಗೆ ಐಕ್ಯ?); ಐಹಿಕ ಐಕ್ಯವಲ್ಲವಲ್ಲಾ— ಇಹದಲ್ಲಿ (ಪ್ರತ್ಯಕ್ಷದಿಂದ ಜಗತ್ತಿನಲ್ಲಿ) ಒಂದರಿಂದ ಮತ್ತೊಂದು ವಸ್ತುವಿಗೆ ಐಕ್ಯವೆಂಬುದು ಎಲ್ಲಿಯೂ ಕಾಣುವುದಿಲ್ಲ— ಅಲ್ಲವೇ? ಏಕಸ್ವಭಾವ— ಒಂದರ ಸ್ವಭಾವವನ್ನು; ಐಕ್ಯವೆಂದುವೆ ಅದು ಪೇಳುವ— ಅದು ಹೇಳುವ, 'ಐಕ್ಯ' ಶಬ್ದದ ಅರ್ಥವೇನೆಂದು; ಕೇಳು— ಐಕ್ಯವೆಂಬುದಕ್ಕೆ ವ್ಯಾಕರಣದಿಂದ ನಿರ್ದಿಷ್ಟವಾದ ಅರ್ಥವು ಇದೇ ಎಂಬುದನ್ನು (ವ್ಯಾಕರಣ ತಜ್ಞರನ್ನು) ಕೇಳಿ ತಿಳಿದುಕೋ.

**ವಿಶೇಷಾಂಶ:** ಇರುವುದೇ ಒಂದು ವಸ್ತುವಾಗಿರಲು, ಜೀವರು ಬ್ರಹ್ಮೈಕ್ಯ ಹೊಂದುವರೆಂಬುದು ಕೂಡುವುದಿಲ್ಲ. ಭಿನ್ನವಾದ ಸತ್ಯವಸ್ತುಗಳು ಸ್ವರೂಪದಿಂದ ಐಕ್ಯಹೊಂದುವುದೆಂಬುದು ಎಲ್ಲಿಯೂ ಇಲ್ಲ. ಹಾಗೆಂದು ಹೇಳುವುದು ಒಂದು ಅಸಂಭಾವ್ಯ ಕಲ್ಪನೆ ಮಾತ್ರ. ಈ ಕಲ್ಪನೆಯನ್ನು (ಐಕ್ಯವನ್ನು) ಸಾಧಿಸಲಿಕ್ಕೆಂದು ಹೇಳಲಾಗುವ ಯುಕ್ತಿಗಳು ಮತ್ತು ದೃಷ್ಟಾಂತಗಳು, ವಿಮರ್ಶೆಯನ್ನು ಎಷ್ಟುಮಾತ್ರವೂ ಎದುರಿಸಿ ನಿಲ್ಲಲಾರವು. **ನಾರಾಯಣಶ್ರುತಿಯ** ಸಯುಕ್ತಿಕ ನಿರ್ಣಯವನ್ನು ಇಲ್ಲಿ ಗಮನಿಸಬಹುದು.

*'ಯಥಾಽಪಿಯಂತಿ ತೇಜಾಂಸಿ ಮಹಾತೇಜಸಿ ಭಾಸ್ಕರೇ ಪೃಥಕ್‌ಸ್ಥಿತಾನ್ಯಪಿ ಸ್ವರೂಪೈರಪಿ ಸರ್ವಶಃ। ಪರೇ ಬ್ರಹ್ಮಣಿ ಜೀವಾಖ್ಯಬ್ರಹ್ಮಾಣ್ಯಪ್ಯಪಿ ಯಂತಿ ಹಿ। ಮುಕ್ತೌ ಪೃಥಕ್ ಸ್ಥಿತಾನ್ಯೇವ ತದನ್ಯೇಷಾಂ ಅದರ್ಶನಮ್। ಅಪ್ಯಯೋಽಯಂ ಸಮುದ್ದಿಷ್ಟೋ ನ ಸ್ವರೂಪೈಕತಾ ಕ್ವಚಿತ್॥*

—'ಬೇರೆ ಬೇರೆ ನಕ್ಷತ್ರ ಮೊದಲಾದವುಗಳ ಪ್ರಕಾಶಗಳು, ಹಗಲಲ್ಲಿ ಸೂರ್ಯನ ಮಹಾತೇಜಸ್ಸಿನಲ್ಲಿ (ಪ್ರಕಾಶದಲ್ಲಿ) ಹೇಗೆ ಅಡಗಿ ಲೀನವಾಗುತ್ತವೆಯೋ, ಹಾಗೆಯೇ ಜೀವರೆಂದು ಕರೆಯಲ್ಪಡುವ ಬ್ರಹ್ಮರು ಸಹ (ಸ್ವಪೂರ್ಣತೆಯನ್ನು ಹೊಂದಿದ ಮುಕ್ತರು 'ಬ್ರಹ್ಮ'ರು) ಮುಕ್ತಿಯಲ್ಲಿ, ಬೇರೆ ಬೇರೆ ಇರುವವರಾಗಿಯೇ, ಪರಬ್ರಹ್ಮನಲ್ಲಿ ಸೇರುತ್ತಾರೆ; ಅಮುಕ್ತರಿಗೆ ಕಾಣದಿರುವುದೇ ಮುಕ್ತಜೀವರ **'ಅಪ್ಯಯ'**ವು—ಸ್ವರೂಪೈಕ್ಯವೆಂಬುದು ಇಲ್ಲವೇ ಇಲ್ಲ. ಹೀಗೆ, ಮುಕ್ತಿಯಲ್ಲಿ ಸಹ ಸ್ವರೂಪೈಕ್ಯವನ್ನು ನಿಷೇಧಿಸುವ ನಿರವಕಾಶ-ಶ್ರುತಿವಾಕ್ಯಗಳು ಹೇರಳವಾಗಿವೆ. ಸಯುಕ್ತಿಕವಾದ ಈ ನಿರ್ಣಯವನ್ನು ತ್ಯಜಿಸಲು ಯಾವ ಕಾರಣವೂ ಇಲ್ಲ. ನಕ್ಷತ್ರಪ್ರಕಾಶಗಳು ಭಿನ್ನಭಿನ್ನಗಳಾಗಿಯೇ, ಭಿನ್ನಲಕ್ಷಣಗಳುಳ್ಳವಾಗಿ ಸದಾ ಇರುತ್ತವೆಂಬುದು, ಆ ಪ್ರಕಾಶಕಿರಣಗಳನ್ನು ವಿಶ್ಲೇಷಿಸಿ ನಾನಾವಿಧ ಪ್ರಯೋಗಗಳಿಗೆ ಒಳಪಡಿಸುತ್ತಿರುವ ಆಧುನಿಕ ವಿಜ್ಞಾನಿಗಳಿಗೂ ಸಮ್ಮತವಾಗಿರುವುದೆಂದು ತಿಳಿದುಬರುತ್ತದೆ. ಆದ್ದರಿಂದ ಪ್ರಕಾಶದಲ್ಲಿ ಪ್ರಕಾಶವು ಸೇರಿ ಒಂದೇ ಪ್ರಕಾಶವಾಗುವುದಿಲ್ಲ—ಹಗಲಿನಲ್ಲಿ ಎಲ್ಲ ಪ್ರಕಾಶಗಳೂ ಸೂರ್ಯಪ್ರಕಾಶದಲ್ಲಿ ಸೇರಿ ಒಂದೇಪ್ರಕಾಶವಾಗುತ್ತ-ದೆಂಬುದು ಅಜ್ಞಾನಿಗಳ ಭಾವನೆ ಮಾತ್ರ. ಇದರಂತೆಯೇ, ನದೀಸಮುದ್ರ-ದೃಷ್ಟಾಂತವೂ ಸಹ, ಐಕ್ಯವನ್ನು ಸಾಧಿಸುವುದಿಲ್ಲ. ಗಂಗಾನದೀಜಲಗಳನ್ನು ಸಮುದ್ರದಲ್ಲಿ ಅಜ್ಞರು ಗುರ್ತಿಸಲಾರರು; ಆದರೆ ಜ್ಞಾನಿಗಳು ಬಲ್ಲರು. ***'ವಾಯುಸ್ತು ತತ್ಪೃಥಕ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ'*** ಎಂದು (ಅಥರ್ವಣಭಾಷ್ಯ)—ವಾಯುದೇವನು ಆ ಜಲಗಳನ್ನು ಪ್ರತ್ಯೇಕವಾಗಿ ತಿಳಿದು, ಮೇಘರೂಪದಿಂದ ಮಳೆಗರೆಯುತ್ತಾನೆಂದು ಹೇಳಲಾಗಿದೆ. ಬೇರೆ ಬೇರೆ ನದೀಜಲಗಳು ಬೇರೆ ಬೇರೆ ಮೇಘಗಳಾಗಿ ಆಯಾ ನದೀಪಾತ್ರಗಳಲ್ಲಿ ವರ್ಷಿಸುತ್ತವೆ.

**ಧರ್ಮವೆನಿಪ ಬೊಮ್ಮ ಜೀವರೈಕ್ಯವೆ ಶುದ್ಧ-**
**ಚಿನ್ಮಯ ಅದ್ವಿತೀಯವೆಂಬ**
**ಅಮ್ಮಮ್ಮ ಅದ್ವಿತೀಯವೆಂಬ ಭ್ರಾಂತಿ ನಿನಗೆ**
**ಸಮ್ಮತ್ಯೈಕ್ಯವ ಖಂಡಿಸಿತೆಲ್ಲ** ॥೬॥

**ಅರ್ಥ:** ಧರ್ಮವೆನಿಪ **'ಧರ್ಮ'** ಎಂಬ ಅನ್ವರ್ಥನಾಮವುಳ್ಳ, ಬೊಮ್ಮ—ಪರಬ್ರಹ್ಮನು, ಮತ್ತು, ಜೀವರು—ಜೀವಗಳೂ, ಐಕ್ಯವೆ—ಒಂದೆಯೇ (ಜೀವ-

ಸ್ವರೂಪದಿಂದ ಪರಬ್ರಹ್ಮನು ಅಭಿನ್ನನೇ)?; ಶುದ್ಧಚಿನ್ಮಯ ಅದ್ವಿತೀಯ—ದೋಷದೂರನೂ, ಜ್ಞಾನಸ್ವರೂಪನೂ, ಸಮಾಧಿಕರಹಿತನೂ, ಎಂಬ—ಎಂದು ಹೇಳುವ ಶ್ರುತಿಯು, ಅಮ್ಮಮ್ಮ—ಏನಾಶ್ಚರ್ಯ, ಅದ್ವಿತೀಯವೆಂಬ—ಪರಬ್ರಹ್ಮನನ್ನು ಬಿಟ್ಟು ಎರಡನೆಯ ವಸ್ತುವೇ ಇಲ್ಲವೆಂದು (ಬ್ರಹ್ಮ ಒಂದೇ ಸತ್ಯ—ಜೀವನೂ ಬ್ರಹ್ಮನೇ—ಭಿನ್ನವಲ್ಲವೆಂದು), ನಿನಗೆ ಸಮ್ಮತೈಕ್ಯವ—ನಿನಗೆ (ಮಾಯಾವಾದಿಗೆ) ಬಹುಪ್ರಿಯವಾದ, ಐಕ್ಯವನ್ನು, ಖಂಡಿಸಿತು ಎಲ್ಲ—ಎಲ್ಲ ಪ್ರಕಾರದಿಂದ ಖಂಡಿಸುತ್ತದೆ; ನಿನಗೆ ಭ್ರಾಂತಿ—ಜೀವಬ್ರಹ್ಮರು ಒಂದೇ ಎಂಬ ಹುಚ್ಚು ಮಾತ್ರ—ಸತ್ಯವಲ್ಲ.

**ವಿಶೇಷಾಂಶ:** (೧) 'ಧಾರಕತ್ವಾತ್ ಧರ್ಮಃ'—ಸಕಲ ಜಗತ್ತಿನ ಧಾರಣ-ಪೋಷಣಕರ್ತನಾದ್ದರಿಂದ ಶ್ರೀಹರಿಯು 'ಧರ್ಮ'ನು. ತನ್ನಿಂದ ಭಿನ್ನವಾದ ವಸ್ತುವೇ ಇಲ್ಲದಿದ್ದರೆ, ಧಾರಣಪೋಷಣಗಳೆಂಬುವು ಅರ್ಥವಿಲ್ಲದ ಮಾತು-ಗಳು. ಆದ್ದರಿಂದ ಧರ್ಮಶಬ್ದ ವಾಚ್ಯನಾದ ಬ್ರಹ್ಮನೂ, ಆತನ ಆಶ್ರಿತರೂ ಪೋಷ್ಯರೂ ಆದ ಜೀವರೂ ಒಂದೇ, ಎಂಬ ವಾದವು ಯುಕ್ತಿಯನ್ನು ವಿರೋಧಿಸುತ್ತದೆ.

(೨) *'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ', 'ವಿಜ್ಞಾನಮಾನಂದಂ ಬ್ರಹ್ಮ'* ಮತ್ತು *'ಏಕಮೇವಾದ್ವಿತೀಯಂ'* ಎಂಬ ಶ್ರುತಿಗಳು, ಪರಬ್ರಹ್ಮನು ಜ್ಞಾನಸ್ವರೂಪನು—ಆನಂದಸ್ವರೂಪನು—ಅದ್ವಿತೀಯನು ಎಂದು ಹೇಳುತ್ತವೆ, *'ಏಕಮೇವಾ-ದ್ವಿತೀಯಂ'* ಎಂಬ ಶ್ರುತಿಯೇ, ಎರಡನೆಯ ವಸ್ತುವೇ ಇಲ್ಲವೆಂಬ ನಿನ್ನ ಮತ-ವನ್ನು ಖಂಡಿಸುತ್ತಿರುವಾಗ, ಜೀವ ಬ್ರಹ್ಮೈಕ್ಯವನ್ನು ಸಾಧಿಸುತ್ತದೆಂದು ತಿಳಿಯುವುದು ಕೇವಲ ಭ್ರಾಂತಿಯೆನ್ನುತ್ತಾರೆ. ಈ *'ಏಕಮೇವಾದ್ವಿತೀಯಂ'* ಎಂಬ ವಾಕ್ಯವು, ಶ್ರುತಿಗಳಲ್ಲಿ ಬರುವ ಕೆಲವು ಪ್ರಸಂಗಗಳನ್ನು ವಿಮರ್ಶಿಸು-ವುದು ಅವಶ್ಯಕವೆನಿಸುತ್ತದೆ. *'ಸತ್ವೇವ ಸೌಮ್ಯೇದಮಗ್ರ ಆಸೀದೇಕಮೇವಾ-ದ್ವಿತೀಯಂ'* ಎಂದು (ಛಾಂದೋಗ್ಯ ೬ನೇ ಅಧ್ಯಾಯ ೨ನೇ ಖಂಡ) ಉದ್ದಾಲಕರೆಂಬ ಋಷಿಗಳು ತಮ್ಮ ಮಗನಾದ ಶ್ವೇತಕೇತುವಿಗೆ ಉಪದೇಶಿಸು-ತ್ತಾರೆ. 'ಪ್ರಳಯಕಾಲದಲ್ಲಿ, ಎಲೈ ಮಗನೇ! **'ಸತ್'** ಎಂಬುದೇ ಅದೊಂದೇ ಅದ್ವಿತೀಯವಾಗಿತ್ತು' ಎಂದರ್ಥ. ಇದರ ಹಿಂದಿನ ವಾಕ್ಯಗಳು ಹೀಗಿವೆ: *'ಸದೇವ ಸೌಮ್ಯೇದಮಗ್ರ ಆಸೀದೇಕಮೇವಾದ್ವಿತೀಯಂ ತದ್ಧೈಕ ಆಹುರಸ-ದೇವೇದಮಗ್ರ ಆಸೀದೇಕಮೇವಾದ್ವಿತೀಯಂ ತಸ್ಮಾದಸತಃ ಸಜ್ಜಾಯತ ಇತಿ।*

*ಕುತಸ್ತು ಖಲು ಸೌಮ್ಯೇವಂ ಸ್ಯಾದಿತಿ ಹೋವಾಚ ಕಥಮಸತಃ ಸಜ್ಜಾಯೇತೇತಿ'* ಎಂದರೆ, *'ಹೇ ಶ್ವೇತಕೇತೋ!* ಸೃಷ್ಟಿಗೆ ಪೂರ್ವದಲ್ಲಿ (ಪ್ರಳಯಕಾಲದಲ್ಲಿ) **'ಸತ್'** ಎಂಬ ನಾಮವುಳ್ಳ ಸರ್ವೋತ್ತಮನಾದ ನಾರಾಯಣನೆಂಬ) ಪರಬ್ರಹ್ಮನು ಮಾತ್ರ ಇರುತ್ತಿದ್ದನು. ಅವನಲ್ಲಿ (ಎರಡೆಂಬುದು) ಭೇದವೆಂಬುದೇ ಇಲ್ಲ ಮತ್ತು ಅವನ ಸಮನೂ ಅಧಿಕನೂ ಇಲ್ಲವೇ ಇಲ್ಲ. ಜಗತ್ತಿನ ಸೃಷ್ಟಿ-ವಿಷಯದಲ್ಲಿ ಕೆಲವರು (ಶೂನ್ಯವಾದಿಗಳು) ಹೀಗೆ ಹೇಳುತ್ತಾರೆ. 'ಪ್ರಳಯ-ಕಾಲದಲ್ಲಿ **'ಅಸತ್'** (ಶೂನ್ಯವೇ) ಇತ್ತು (ಅಂದರೆ ಏನೂ ಇರಲಿಲ್ಲ— ಶೂನ್ಯಾತ್ಮಕವಾಗಿತ್ತು); ಅದರಿಂದ ಭಿನ್ನವಾದುದೂ ಯಾವುದೂ ಇರಲಿಲ್ಲ (ಅದ್ವಿತೀಯವಾಗಿತ್ತು); ಅಂತಹ ಅಸತ್ತಿನಿಂದ ಶೂನ್ಯದಿಂದ **'ಸತ್'** ಆದ ಜಗತ್ತು ಹುಟ್ಟಿತು' ಹೇ ಮಗನೇ! ಪ್ರಳಯಕಾಲದಲ್ಲಿ ಅಸತ್ತು (ಶೂನ್ಯ) ಇತ್ತೆಂಬುದು ಹೇಗೆ ಕೂಡುವುದು? ('ಇರಲಿಲ್ಲ ಮತ್ತು ಇತ್ತು' ಎಂಬ ಮಾತು 'ನನ್ನ ತಾಯಿಯು ಬಂಜೆ' ಎಂದಂತಲ್ಲವೇ); ಮತ್ತು ಅಸತ್ತಿನಿಂದ ಸತ್ತಾದುದು ಹೇಗೆ ಹುಟ್ಟುತ್ತದೆ?—ಸರ್ವಥಾ ಸಾಧ್ಯವಿಲ್ಲ.' ಹೀಗೆ ಹೇಳಿ, 'ಸತ್ವೇವ ಇದಮಗ್ರೇ' ಎಂಬ ಮೇಲೆ ಹೇಳಿದಂತೆ ಹೇಳುತ್ತಾನೆ. ಸತ್+ತು+ಏವ+ ಸತ್ತ್ವೇವ **'ಸತ್'** ಎಂಬ ವಸ್ತುವೇ ಇತ್ತು ಎಂದರ್ಥ. ಈ 'ಸತ್' ಶಬ್ದ-ವಾಚ್ಯವಾದುದು ಬ್ರಹ್ಮನೇ ಎಂಬುದು, ಇದರ ಸಮಾಖ್ಯಾವಾಕ್ಯವಾಗಿರುವ, ಬೃಹದಾರಣ್ಯ (೩ನೇ ಅಧ್ಯಾಯದ ೫ನೇ ಬ್ರಾಹ್ಮಣದಲ್ಲಿ) ವಾಕ್ಯದಿಂದ ಸ್ಪಷ್ಟವಾಗಿ ತಿಳಿಯುತ್ತದೆ. *'ಬ್ರಹ್ಮ ವಾ ಇದಮಗ್ರ ಆಸೀತ್'* ಎಂಬುದೇ ಆ ವಾಕ್ಯ. ಅದ್ವಿತೀಯವೆಂಬುದರ ಅರ್ಥವನ್ನು ಬೇರೆ ಶ್ರುತಿಗಳೂ ಸ್ಪಷ್ಟವಾಗಿ ಹೇಳುತ್ತವೆ. *'ಏಕ ಏವಾದ್ವಿತೀಯೋ ಭಗವಾಂಸ್ತತ್ಸದೃಶಃ ಪರೋ ನಾಸ್ತೀತಿ', 'ಏಕೋಭಗವಾಂಸ್ತತ್ಸದೃಶಪರೌ ನ ಸ್ತಃ'* ಎಂಬುದೇ ಈ ಶ್ರುತಿವಾಕ್ಯಗಳು. *'ಏಕಮೇವಾದ್ವಿತೀಯಂ ತತ್ಸಮಾಭ್ಯಧಿಕ ವರ್ಜನಾತ್। ಸ್ವಗತಾನಾಂ ಚ ಭೇದಾನಾಮಭಾವಾದ್ಬ್ರಹ್ಮ ಶಾಶ್ವತಂ'* ಎಂಬ (ಪ್ರವೃತ್ತಗ್ರಂಥ) ವಾಕ್ಯವೂ, 'ಶಾಶ್ವತನಾದ ಪರಬ್ರಹ್ಮನು ತನ್ನ ಅವಯವ, ಗುಣಾದಿಗಳಿಂದ ಭಿನ್ನನಲ್ಲವಾದ್ದ-ರಿಂದ **'ಏಕಮೇವ'** ಎಂದೂ, ತನಗೆ ಸಮನೂ ಅಧಿಕನೂ ಇಲ್ಲದ್ದರಿಂದ **'ಅದ್ವಿತೀಯ'**ನೆಂದೂ ಹೇಳಲ್ಪಡುತ್ತಾನೆ' ಎಂದು ಹೇಳುತ್ತದೆ. *'ಬ್ರಹ್ಮ ವಾ ಇದಮಗ್ರ ಆಸೀತ್'* ಎಂಬ ಬೃಹದಾರಣ್ಯದ ಮುಂದಿನ ವಾಕ್ಯವು, *'ತದಾತ್ಮಾನಮೇವಾವೇತ್ ಅಹಂ ಬ್ರಹ್ಮಾಸ್ಮೀತಿ'* ಎಂದರೆ "ಆ ಬ್ರಹ್ಮನು,

'ನಾನು ಬ್ರಹ್ಮ(ಗುಣಪೂರ್ಣನು) ಆಗಿದ್ದೇನೆ' ಎಂದು ತನ್ನನ್ನು ತಾನು ತಿಳಿದಿರುವನು" ಎಂದು ಹೇಳುತ್ತದೆ. ವೇದವಾಕ್ಯಗಳನ್ನು ಪೂರ್ವಾಪರ ವಿಮರ್ಶೆಗಳಿಲ್ಲದೇ, *'ಏಕಮೇವಾದ್ವಿತೀಯಂ'*, *'ಅಹಂ ಬ್ರಹ್ಮಾಸ್ಮಿ'*, *'ನೇಹ ನಾನಾಸ್ತಿ ಕಿಂಚನ'*, *'ಅಸದೇವ ಇದಮಗ್ರ ಆಸೀತ್'* ಇತ್ಯಾದಿ ಪೃಥಕ್ಕರಿಸಿ ಜೀವಬ್ರಹ್ಮೈಕ್ಯವನ್ನು ಹೇಳುತ್ತವೆಂದು ತಿಳಿಯುವುದು ಭ್ರಮೆಯಲ್ಲವೇ? **'ಮಹಾವಾಕ್ಯ'**ಗಳೆಂಬ ಪಟ್ಟಕ್ಕೇರಿಸಿ, ಸರ್ವ ವೇದವಾಕ್ಯಗಳು ಏಕಪ್ರಕಾರವಾದ ಪರಮಪ್ರಾಮಾಣ್ಯವುಳ್ಳವುಗಳಾಗಿರುವಾಗ, ಅವುಗಳನ್ನು ಹೀಗೆ ವಿಂಗಡಿಸುವುದು ಯುಕ್ತವಾದೀತೇ? *'ನೇಹ ನಾನಾಸ್ತಿ ಕಿಂಚನ'* ಎಂಬ ಶ್ರುತಿಯಾದರೂ '**ಇಹ**— ಈ ಪರಬ್ರಹ್ಮನಲ್ಲಿ **ಕಿಂಚನ**— ಯಾವುದೊಂದು, **ನಾನಾ**— ಭೇದವಾಗಲಿ, ಭೇದಾಭೇದವಾಗಲಿ, **ನಾಸ್ತಿ**— ಇಲ್ಲವೇ ಇಲ್ಲ' ಎಂದು ಹೇಳಿ, ಮುಂದಿನ ವಾಕ್ಯದಲ್ಲಿ, ಇರುವುದೆಂದು ತಿಳಿಯುವವರಿಗೆ ದೊರೆಯುವ ಗತಿಯನ್ನು ಹೇಳುತ್ತದೆ. *'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ'*, *'ಮೃತ್ಯೋಃಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ'*, ಎಂದರೆ, ಯಃ— ಯಾರು, ಇಹ— ಈ ಬ್ರಹ್ಮನಲ್ಲಿ, (ಮತ್ತು ಅವನ ಅನಂತ ರೂಪಗಳಲ್ಲಿ) ನಾನೇವ— ಭೇದವನ್ನಾಗಲಿ ಭೇದಾಭೇದವನ್ನಾಗಲಿ (ಒಂದೊಂದು ರೂಪದ ಕರಚರಣಾದಿ ಅವಯವಗಳಲ್ಲಿ ಅಥವಾ ಅದರ ಅನಂತಗುಣಗಳಲ್ಲಿ ಪರಸ್ಪರವಾಗಿ ಹೀಗೆ ಭೇದ, ಭೇದಾಭೇದಗಳನ್ನು) ಪಶ್ಯತಿ— ತಿಳಿಯುತ್ತಾನೆಯೋ, ಸಃ— ಅವನು, ಮೃತ್ಯೋಃ— ಮರಣಾನಂತರ (ಮೃತ್ಯುವಿನ ದೆಶೆಯಿಂದ), ಮೃತ್ಯುಂ— ನರಕವನ್ನು, ಆಪ್ನೋತಿ— ಹೊಂದುತ್ತಾನೆ; ಏವಂ ಧರ್ಮಾನ್— ಹೀಗೆಯೇ, ಪರಮಾತ್ಮನ ಧರ್ಮಗಳನ್ನು (ಗುಣಕ್ರಿಯಾದಿಗಳನ್ನು) ಪೃಥಕ್— ಪರಸ್ಪರ ಅಥವಾ ಪರಮಾತ್ಮನಿಂದ ಬೇರೆಯಾದವುಗಳೆಂದು, ಪಶ್ಯನ್— ತಿಳಿಯುವವನು, ತಾನ್ ಅನ್ವೇವ— ಅವುಗಳನ್ನು ಹಾಗೆ ತಿಳಿದ ನಂತರವೇ (ಆ ವಿಧ ಜ್ಞಾನನಿಶ್ಚಯವನ್ನು ಹೊಂದಿದೊಡನೆಯೇ ತಪ್ಪದೇ), ವಿಧಾವತಿ— ತಮಸ್ಸಿಗೆ ಧಾವಿಸುತ್ತಾನೆ (ಶೀಘ್ರವಾಗಿ ನಿತ್ಯನರಕದಲ್ಲಿ ಬೀಳುತ್ತಾನೆ.) ಹೀಗೆ ಜೀವಬ್ರಹ್ಮೈಕ್ಯಜ್ಞಾನವು ದುರ್ಗತಿಪ್ರದವಾದ್ದರಿಂದ ಮುಮುಕ್ಷುಗಳು ಅದನ್ನು ದೂರದಲ್ಲಿ ತ್ಯಜಿಸಬೇಕು— ಮಿಥ್ಯಾಜ್ಞಾನದಿಂದ ಬಹುಭಯವುಳ್ಳವರಾಗಿ, ಅದು ಸಮೀಪಕ್ಕೆ ಸುಳಿಯದಂತೆ ಎಚ್ಚರವುಳ್ಳವರಾಗಿರಬೇಕು.

**ತನ್ನ ಬಾಯಿಗೆ ಮುಟ್ಟುತಿಹ ಮೂಷಕವ ಬಿಟ್ಟು**
**ನಿನ್ನ ಶ್ರುತಿಯೆಂಬ ಭುಜಗೀ**
**ಅನ್ಯತ್ರ ಪೋಗಳು ಒಂದರಿಂದದರ ಸಂ-**
**ಪೂರ್ಣವಾಗದೆ ತಿರಗದು** ॥೧೦॥

**ಅರ್ಥ:** ನಿನ್ನ—ನೀನು ಆಶ್ರಯಿಸಿರುವ (ಜೀವಬ್ರಹ್ಮೈಕ್ಯಸಾಧನೆಗಾಗಿ ಹಿಡಿದಿರುವ), ಶ್ರುತಿಯೆಂಬ—ಶ್ರುತಿರೂಪದ, ಭುಜಗೀ—ಹೆಣ್ಣುಸರ್ಪವು, ತನ್ನ ಬಾಯಿಗೆ ಮುಟ್ಟುತಿಹ—ತನ್ನ ಮುಖದ ಸಮೀಪದಲ್ಲಿರುವ, ಮೂಷಕವ—ಇಲಿಯನ್ನು (ತನಗೆ ಇಷ್ಟವಾದ ಅರ್ಥವೆಂಬ ಇಲಿಯನ್ನು,) ಬಿಟ್ಟು—ತ್ಯಜಿಸಿ, ಅನ್ಯತ್ರ ಪೋಗಳು—ಬೇರೆ ಕಡೆ ಹೋಗುವುದಿಲ್ಲ (ಬೇರೆ ಅರ್ಥವುಂಟೇ ಎಂಬ ಕಡೆ ನೋಡುವುದೇ ಇಲ್ಲ); ಒಂದರಿಂದ—ಆ ಒಂದು ಇಲಿಯಿಂದ (ಆ ಒಂದರ್ಥದಿಂದ), ಅದರ ಸಂಪೂರ್ಣವಾಗದೆ—ಆ ಶ್ರುತಿಯ (ಆ ಸರ್ಪದ ಹೊಟ್ಟೆ ತುಂಬದೆ), ಪೂರ್ಣಾರ್ಥವಲ್ಲೆಂದು (ನಿಜವಾದ ತಾತ್ಪರ್ಯವಲ್ಲೆಂದು) ತಿಳಿಯದೇ! ತಿರಗದು—ಬೇರೆ ಅರ್ಥದ ಕಡೆಗೆ ನೋಡುವುದಿಲ್ಲ.

**ವಿಶೇಷಾಂಶ:** ಸರ್ಪವು ತನಗೆ ಇಷ್ಟವಾದ ಮೂಷಕವನ್ನೇ ಹಿಡಿಯುವಂತೆ, ಐಕ್ಯವಾದಿಗಳು, *'ಅಹಂ ಬ್ರಹ್ಮಾಸ್ಮಿ'*, *'ತತ್ತ್ವಮಸಿ'* ಇತ್ಯಾದಿ ವಾಕ್ಯಗಳಲ್ಲಿ ತಮಗೆ ಇಷ್ಟವಾದ ಜೀವಬ್ರಹ್ಮರು ಅಭಿನ್ನರೆಂಬರ್ಥವನ್ನೇ ಕಾಣುತ್ತಾರೆ. ಹೆಚ್ಚು ರುಚಿಕರವಾದ ಆಹಾರವನ್ನು ಕಂಡವನು ಹೊಲಸನ್ನು ತಿನ್ನುವನೇ! ಐಕ್ಯವಾದಿಗಳ, ಶ್ರುತಿಗಳು ಅಭೇದಾರ್ಥವನ್ನು ಸಾಧಿಸುವುದರಲ್ಲಿ ಹೆಣ್ಣಿನಂತೆ ದುರ್ಬಲಗಳೆಂದು ಸೂಚಿಸಲು 'ಭುಜಗೀ' (ಹೆಣ್ಣುಸರ್ಪ) ಎಂದಿರುವರು. ಅವರು ಹೇಳುವಂತೆ ಈ ವಾಕ್ಯಗಳು ಅಭೇದಾರ್ಥದಲ್ಲಿ ನಿರವಕಾಶಗಳಲ್ಲ. ಇಷ್ಟು ಮಾತ್ರವಲ್ಲ ಜೀವಬ್ರಹ್ಮರ ಭೇದವನ್ನೇ ಹೇಳುತ್ತವೆ. ಹಿಂದಿನ ನುಡಿಯ ವಿಶೇಷಾಂಶಭಾಗದಲ್ಲಿ *'ಅಹಂ ಬ್ರಹ್ಮಾಸ್ಮಿ'*, *'ನೇಹ ನಾನಾಸ್ತಿ ಕಿಂಚನ'* ಎಂಬ ಶ್ರುತಿಗಳ ತಾತ್ಪರ್ಯವನ್ನು ಸಂಕ್ಷೇಪವಾಗಿ ನಿರೂಪಿಸಲಾಗಿದೆ. *'ತತ್ತ್ವಮಸಿ'* ವಾಕ್ಯಾರ್ಥವನ್ನು ಸ್ವಲ್ಪ ವಿಸ್ತಾರವಾಗಿಯೇ ಇಲ್ಲಿ ಗಮನಿಸುವಾ. ಛಾಂದೋಗ್ಯ ಉಪನಿಷತ್ತಿನ ಆರನೆಯ ಅಧ್ಯಾಯದಲ್ಲಿ, *'ತತ್ತ್ವಮಸಿ'* ಎಂಬ ವಾಕ್ಯಘಟಿತವಾದ, ಪೂರ್ಣವಾಕ್ಯವು, *'ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ'* ಎಂಬುದಾಗಿದ್ದು, ಈ ಪೂರ್ಣವಾಕ್ಯವು, ಗುರುಕುಲವಾಸವನ್ನು ಮುಗಿಸಿ, ತಾನೇ ಮಹಾಜ್ಞಾನಿಯೆಂದು

ಸ್ತಬ್ಧನಾಗಿ (ದುರಹಂಕಾರಯುಕ್ತನಾಗಿ) ತಿರುಗಿ ಬಂದ, ತಮ್ಮ ಮಗ ಶ್ವೇತಕೇತುವಿಗೆ ಉದ್ದಾಲಕಋಷಿಗಳು ಮಾಡಿದ ಒಂಬತ್ತು ಪ್ರಕಾರದ ಸದೃಷ್ಟಾಂತ ಉಪದೇಶಗಳ ಕೊನೆಯಲ್ಲಿ, ಉಪಸಂಹಾರವಾಕ್ಯರೂಪದಿಂದ, ಒಂಬತ್ತಾವರ್ತಿ ಬಂದಿದೆ. *'ಸ ಆತ್ಮಾ ತತ್ತ್ವಮಸಿ'* ಎಂಬಲ್ಲಿ, ಸ ಆತ್ಮಾ ಅತತ್ತ್ವಮಸಿ ಎಂದೇ ಪದವಿಭಾಗವು. 'ತತ್ವ' ಶಬ್ದಮುಖ್ಯವಾಚ್ಯನಾದ ಸ್ವತಂತ್ರನೂ ಗುಣಪೂರ್ಣನೂ ಆದ 'ಪರಬ್ರಹ್ಮನು' ನೀನು ಅಲ್ಲವೇ ಅಲ್ಲ ಎಂಬುದೇ, ಪ್ರತಿ ಉಪದೇಶದ ಪಲ್ಲವಿವಾಕ್ಯದಂತಿರುವ, ಈ ವಾಕ್ಯದ ತಾತ್ಪರ್ಯವು. ಈ ಉಪದೇಶಗಳಲ್ಲಿ ತೋರಿಸಿರುವ ಒಂಬತ್ತು ದೃಷ್ಟಾಂತ-ಗಳಲ್ಲಿ ಯಾವುದೊಂದೂ ಜೀವಬ್ರಹ್ಮರ ಅಭೇದಸಾಧಕವಾಗಿಲ್ಲ. ಈ ಪೂರ್ಣವಾಕ್ಯದಲ್ಲಿರುವ, 'ಸಃ' ಎಂದರೆ ಸಾರನು (ಸರ್ವೋತ್ಕೃಷ್ಟನು), 'ಯಃ' ಎಂದರೆ ಸರ್ವನಿಯಾಮಕನು (ವಿಷ್ಣುವು), 'ಅಣಿಮಾ' ಎಂದರೆ ಸೂಕ್ಷ್ಮತಮನು (ಅಗಮ್ಯನು), 'ಐತದಾತ್ಮ್ಯಂ' ಎಂದರೆ ಎಲ್ಲವೂ ಆತನ ವಶವು (ವಿಷ್ಣುಭಿನ್ನ-ವಾದ ಇತರ ಸರ್ವವೂ ಆತನನ್ನೇ ಸ್ವಾಮಿಯಾಗುಳ್ಳದ್ದು), 'ಸತ್ಯ'ನೆಂದರೆ ಪೂರ್ಣಾನಂದ ಸ್ವರೂಪನು, 'ಆತ್ಮಾ' ಎಂದರೆ ಗುಣಪೂರ್ಣನು; ಈತನೇ 'ತತ್ವ'ನು. ನೀನು ಸತ್ಯವಾಗಿಯೂ 'ತತ್ವ'ನಲ್ಲ— ಈ ವಿಧ ಸ್ತಬ್ಧತೆಯು ನಿನಗೆ ಬರದಿರಲಿ— ಅಸುರರು ಮಾತ್ರ 'ನಾನೇ ಬ್ರಹ್ಮ'ನೆಂದು ತಿಳಿದು ಸ್ತಬ್ಧರಾಗಿರು-ವರು; ಇದೇ ಈ ಪೂರ್ಣವಾಕ್ಯದ ತಾತ್ಪರ್ಯವೆಂದು ಹೇಳುವ ಪ್ರಮಾಣವು (ಸಾಮಸಂಹಿತಾ) ಹೀಗಿದೆ:

*'ಯೋಽಸೌ ನಿಯಮನಾದ್ವಿಷ್ಣುಃಸಾರತ್ವಾತ್ಸ ಇತಿ ಸ್ಮೃತಃ।*
*ಅಣಿಮಾ ಸೂಕ್ಷ್ಮತೋಽಗಮ್ಯ ಐತದಾತ್ಮ್ಯಂ ಚ ತದ್ವಶಮ್॥*
*ಪರಾನಂದತ್ವತಃ ಸತ್ಯ ಆತ್ಮಾ ಪೂರ್ಣಗುಣತ್ವತಃ।*
*ಸತ್ಯತೋ ನಾಸ್ತಿ ತತ್ವಂ ಹಿ ಮಾ ಭೂತ್ತೇ ಸ್ತಬ್ಧತಾ ತತಃ॥*
*ಅಸುರಾಸ್ತಬ್ಧತಾಂ ಯಾತಾ ಬ್ರಹ್ಮಾಹಮಿತಿ ಮಾನಿನಃ।*
*ಅತತ್ತ್ವಮಸಿ ಪುತ್ರೇತಿ ಯ ಉಕ್ತೋ ಗೌತಮೇನ ತು।*
*ನವಕೃತ್ವಃ ಸದೃಷ್ಟಾಂತಂ ಸರ್ವಭೇದೇನ ಕೇಶವಃ॥'*

ಮೇಲಿನ ವಿವರಣೆಯೇ ಇದರ ಅರ್ಥವೆಂಬುದು ಸ್ಪಷ್ಟವಿದೆ. **ತತ್, ತ್ವಂ, ಅಸಿ** ಎಂದು ಪದಚ್ಛೇದವನ್ನಿಟ್ಟುಕೊಂಡರೂ, ತತ್ ಶಬ್ದವಾಚ್ಯವಾದ ಬ್ರಹ್ಮ-ವಸ್ತುವಿನ ಸದೃಶನೂ, ಅದನ್ನೇ ಆಶ್ರಯಿಸಿರುವನೂ ಆಗಿರುವೆಯೆಂಬ ಮುಂತಾದ ಅರ್ಥಗಳೂ ಸುಲಭವಾಗಿ ನಿಷ್ಪನ್ನವಾಗುತ್ತವೆ. ಹೆಚ್ಚು ವಿಮರ್ಶಾತ್ಮಕ

ಅಂಶಗಳನ್ನು ಉತ್ಸಾಹಿಗಳು ಗ್ರಂಥಗಳನ್ನು ಗುರುಗಳ ಸಹಾಯದಿಂದ ಅಭ್ಯಾಸ ಮಾಡಿ ತಿಳಿಯಬೇಕು. ಗ್ರಂಥವಿಸ್ತಾರಭಯದಿಂದ ದಿಗ್ದರ್ಶನಮಾತ್ರದಿಂದ ಉಪರಮಿಸಲಾಗುತ್ತದೆ.

**ಲೋಕವಿಲ್ಲೆಂಬ ಲೋಕಾಂತರ್ಗತವಾದಿ**
**ಕಾಕುಮಾಡದಿರು ಶ್ರುತಿಗಳ** ॥೧೧॥

**ಅರ್ಥ:** ಲೋಕವಿಲ್ಲೆಂಬ—ಜಗತ್ತು ಮಿಥ್ಯೆಯೆಂದು ವಾದಿಸುವ, ಲೋಕಾಂತರ್ಗತವಾದಿ—ಆ ಜಗತ್ತಿನಲ್ಲಿಯೇ ಇರುವ (ಜಗತ್ತಿನ ಏಕದೇಶನಾಗಿರುವ) ಹೇ ಮಾಯಾವಾದಿ! ಶ್ರುತಿಗಳ—ವೇದಗಳನ್ನು (ಜಗತ್ತು ಸತ್ಯವೆಂದು ಸಾರುವ ಶ್ರುತಿಗಳನ್ನು), ಕಾಕುಮಾಡದಿರು—ದೂಷಿಸದಿರು (ಕೆಡಿಸಬೇಡ—ವ್ಯಾವಹಾರಿಕಸತ್ಯತ್ವ ಮೊದಲಾದ ದುರರ್ಥಯೋಜನೆಗಳಿಂದ).

**ವಿಶೇಷಾಂಶ:** ಜಗತ್ತು ಮಿಥ್ಯೆಯೆಂಬ ಮಾಯಾವಾದಿಗಳ ಪರ್ಯವಸಾನದಲ್ಲಿ ಅಸತ್ಯವೆಂದೇ (ಸುಳ್ಳೆಂದೇ) ಹೇಳಿದಂತಾಗುತ್ತದೆ. ೧ನೇ ಮೋಕ್ಷಸಂಧಿಯ ಪದ (೧೪)ರ ವಿಶೇಷಾಂಶ(೪)ನ್ನು ಇಲ್ಲಿ ನೋಡಬಹುದು. 'ಜಗತ್ತೇ ಸುಳ್ಳೆಂದರೆ, ಜಗತ್ತಿನಲ್ಲಿರುವ ನೀನೂ, ನಿನ್ನ ಮಾತೂ ಎಲ್ಲವೂ ಸುಳ್ಳೇ ಎಂದಾಯಿತು; ಜಗತ್ತು ಮಿಥ್ಯೆಯೆಂಬ ನಿನ್ನ ಮಾತು ಸುಳ್ಳಾದರೆ, ಜಗತ್ತು ಸತ್ಯವೆಂದೇ ಆಗುತ್ತದಲ್ಲವೇ?' ಎಂಬ ಯುಕ್ತಿಯು ಸೂಚಿತವಾಗಿದೆ. ಶಾಸ್ತ್ರಾನುಸಾರಿ ಯುಕ್ತಿಗಳಿಂದ ತತ್ತ್ವವಾದಿಗಳ ಸಿದ್ಧಾಂತಗಳನ್ನು ಸಾಧಿಸುವುದು ಈ ಗ್ರಂಥದ ವೈಶಿಷ್ಟ್ಯ. *'ಜಗತೋಽಭಾವೇ ಅನುಮಾನಸ್ಯಾಪ್ಯಭಾವಃ'* ಎಂಬುದು (ಮಿಥ್ಯಾತ್ವಾನುಮಾನಖಂಡನದಲ್ಲಿ) ಶ್ರೀಮದಾಚಾರ್ಯರ ಉಕ್ತಿಯು.

**ಶ್ರುತವಾದರ್ಥ ಈ ಶ್ರುತಿ ಯಾವ ಕೆಡಿಸುವ**
**ಪಾತಕ ತನ್ನನೆ ಸುಡದೆ**
**ಯಾತರಿಂದೇನಾಯಿತು ಅದ್ವೈತಘಾತಕ್ಕೆ**
**ಹೇತುವಾದೆಂಬರು ಬುಧರು** ॥೧೨॥

**ಅರ್ಥ:** ಶ್ರುತವಾದ ಅರ್ಥ (ಜಗತ್ತು ಸತ್ಯವೆಂಬ) ಪ್ರಸಿದ್ಧವಾದ (ನಿರವಕಾಶವಾದ) ಅರ್ಥವುಳ್ಳ, ಈ ಶ್ರುತಿ—ಈ ಶ್ರುತಿಯನ್ನು, ಯಾವ—ಯಾವನು ಕೆಡಿಸುವ—(ಜಗತ್ತನ್ನು ಮಿಥ್ಯೆಯೆಂದು ಸಾಧಿಸಲು) ದುರರ್ಥದಿಂದ ಕೆಡಿಸುವನೋ ಅವನ, ಪಾತಕ—ಪಾಪವು, ತನ್ನನೆ—ಅವನನ್ನೇ, ಸುಡದೇ—ದಹಿಸದೇ ಇದ್ದೀತೇ? ಯಾತರಿಂದ—ಯಾವ ವಾದದಿಂದ, ಏನಾಯಿತು

—ಏನು ಪ್ರಯೋಜನವಾಯಿತು? (ಆದ್ದರಿಂದಲೇ) ಬುಧರು—ತತ್ತ್ವಜ್ಞಾನಿಗಳು, ಅದ್ವೈತ ಘಾತಕ್ಕೆ—ಅಭೇದವನ್ನು ಹೇಳುವ ವಿನಾಶಕಾರಕ (ತಮಸ್ಸನ್ನು ಹೊಂದಿಸುವ) ಮತವನ್ನು, ಹೇತುವಾದೆಂಬರು—'ಹೇತುವಾದ'ವೆಂದು ಕರೆಯುವರು.

**ವಿಶೇಷಾಂಶ:** (೧) *'ಯಚ್ಚಿಕೇತ ತತ್ಸತ್ಯಮಿತ್ ತನ್ನ ಮೋಘಂ'* (ಋಗ್ವೇದ). ಯತ್—ಯಾವ ಜಗತ್ತನ್ನು, ಚಿಕೇತ—ಸೃಷ್ಟಿಸಿದನೋ, ತತ್—ಅದು, ಸತ್ಯಮಿತ್—ಸತ್ಯವಾದುದು; ನ ಮೋಘಂ—ಮಿಥ್ಯೆಯಲ್ಲ (ವ್ಯರ್ಥವಲ್ಲ—ಅರ್ಥಕ್ರಿಯಾಕಾರಿಯಾದ ಸತ್ಯವಸ್ತುವೇ ಸರಿ); 'ವಿಶ್ವಂ ಸತ್ಯಂ ಮಘವಾನಾ'. ಮಘವಾನಾ—ಹೇ ಇಂದ್ರ ಬೃಹಸ್ಪತಿಗಳೇ! ವಿಶ್ವಂ ಸತ್ಯಂ—ಜಗತ್ತು ಸತ್ಯವಾದುದು, ಇತ್ಯಾದಿ ವೇದವಾಕ್ಯಗಳು ಅನ್ಯಾರ್ಥಕ್ಕೆಡೆಯಿಲ್ಲದ ಶಬ್ದಗಳಿಂದ ಜಗತ್ತಿನ ಸತ್ಯತ್ವವನ್ನು ಸಾರುತ್ತವೆ. ಇಂಥ ಶ್ರುತಿಗಳಿಗೂ, ತದರ್ಥವನ್ನೇ ಅತಿಸ್ಪಷ್ಟವಾಗಿ ಹೇಳುವ ಸ್ಮೃತಿವಾಕ್ಯಗಳಿಗೂ, ಕೇವಲ ಯುಕ್ತಿ (ಶುಷ್ಕತರ್ಕ) ಬಲದಿಂದ ಅನ್ಯಾರ್ಥಗಳನ್ನು ಕಲ್ಪಿಸುವುದು ಮಹಾಪಾಪವು-ಭಾರತೀದೇವಿಯ ಅಪಚಾರವು.

(೨) 'ಹೇತುವಾದವೆಂದರೆ, ಯುಕ್ತಿಗೆ (ಅನುಮಾನತರ್ಕ) ಪ್ರಧಾನ ಸ್ಥಾನವನ್ನಿತ್ತು ನಿರ್ಣಯಗಳನ್ನು ಸಾಧಿಸುವುದು. ವೈಶೇಷಿಕ, ನೈಯಾಯಿಕ ಮೊದಲಾದ ದರ್ಶನಗಳು ಹೇತುವಾದಗಳು. ವೇದಾಂತಿಗಳಂತೆ (ಉತ್ತರ ಮೀಮಾಂಸಕರಂತೆ) ಆಗಮಪ್ರಾಮಾಣ್ಯವನ್ನು, ಈ ದರ್ಶನಕಾರರು ಒಡಂಬಡುವುದಿಲ್ಲ. ಮಾಯಾವಾದಿಗಳು ಆಗಮಪ್ರಾಮಾಣ್ಯವನ್ನು ಅಂಗೀಕರಿಸುವೆವೆಂದು ಹೇಳಿದರೂ, ಒಡಂಬಡದವರೇ ಸರಿ. ಪರಬ್ರಹ್ಮನು ಅವಾಚ್ಯನೆಂದೂ ಅಜ್ಞೇಯನೆಂದೂ ಹೇಳುವ ಇವರು, ವೇದಗಳು ಪರಬ್ರಹ್ಮವಾಚಕಗಳಲ್ಲವೆಂದೇ ಸಾಧಿಸುವುದರಿಂದ (ಅತತ್ತ್ವಾವೇದಕಗಳೆಂದು ಹೇಳುವುದರಿಂದ) ಹೇತುವಾದಿಗಳೇ ಸರಿ. ಸ್ವಬುದ್ಧಿಯಂತೆ ವೇದಾರ್ಥಗಳನ್ನು ಕಲ್ಪಿಸುತ್ತಾರೆ. *'ಸ್ವೇನಾವಿಜ್ಞೇಯತ್ವಂ ತೈರುಚ್ಯತೇ' 'ಕರ್ತೃಕರ್ಮವಿರೋಧ ಇತಿ ಹಿ ತೇ ವದಂತಿ'*—'ಬ್ರಹ್ಮನು ತನ್ನನ್ನು ತಾನೂ ತಿಳಿಯನು; ಒಂದು ವಸ್ತುವು ಕರ್ತೃ ಕರ್ಮಗಳೆರಡೂ ಆಗಲಾರದು, ವಿರೋಧವಾಗುವುದರಿಂದ' ಎಂದೇ ಅದ್ವೈತಿಗಳು ಹೇಳುವರು. ಆದ್ದರಿಂದ, ಅವಾಚ್ಯನೂ ಅಜ್ಞೇಯನೂ ಎಂಬ ಅವರ ಬ್ರಹ್ಮನು, ಶೂನ್ಯನೇ ಸರಿ. *'ಅತೋಽವಾಚ್ಯತ್ವಾಚ್ಛೂನ್ಯಮೇವ ತದಿತಿ*

*ಪ್ರಾಪ್ತಂ'* ಎಂಬ (ವಿಷ್ಣುತತ್ವನಿರ್ಣಯ) ವಾಕ್ಯವೂ ಈ ಯುಕ್ತಿಯನ್ನೇ ಹೇಳುತ್ತದೆ. 'ಅಪರಸ್ಪರ ಸಂಭೂತಂ ಕಿಮನ್ಯತ್ ಕಾಮಹೈತುಕಂ' (ಗೀತಾ)— ಎಂದರೆ, ಅಪರಸ್ಪರ ಸಂಭೂತಂ—(ಮಹತ್, ಅಹಂಕಾರ ಮುಂತಾದ) ಪರಸ್ಪರಕಾರ್ಯಕಾರಣಕ್ರಮವುಳ್ಳ ತತ್ವಗಳಿಂದ ಜಗತ್ತು ಉತ್ಪನ್ನವಾದುದಲ್ಲ; ಕಿಂ—ಮತ್ತೇನೆಂದರೆ, ಅನ್ಯತ್—ಮಿಥ್ಯಾಭೂತವಾದುದು (ಹಗ್ಗದಲ್ಲಿ ತೋರುವ ಸರ್ಪದಂತೆ ಸದಸದ್ವಿಲಕ್ಷಣವಾದುದು), ಕಾಮಹೈತುಕಂ—ಅಜ್ಞಾನದಿಂದ ಮಾತ್ರ (ಜಗತ್ತು ಇದ್ದಂತೆ ತೋರುತ್ತದೆಂದು) ಆದುದೆಂದು ತರ್ಕದಿಂದಲೇ ಸಿದ್ಧವಾಗುತ್ತದೆ. ಹೀಗೆ, ತಿಳಿಯುವವರಿಗೆ,

*'ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್'*—

ನನ್ನ ಪ್ರಾಪ್ತಿಯೇ ಇಲ್ಲದೆ ಅಂಧಂತಮಸ್ಸೇ ಗತಿಯೆಂದೂ ಶ್ರೀಕೃಷ್ಣನು ಹೇಳಿರುವನು. **'ಅದ್ವೈತಘಾತ'**ಕ್ಕೆ ಎಂಬಲ್ಲಿ, ಆತ್ಮಹಾನಿಗೆ ಕಾರಣವಾಗುವ ಈ ಮತವನ್ನು, ಜ್ಞಾನಿಗಳು ಹೇತುವಾದವೆನ್ನುವರೆಂಬರ್ಥವನ್ನು ತಿಳಿಯಬೇಕು.

**ಚಿನ್ಮಾತ್ರಶ್ರುತಿಯೆಂಬ ನಿಮ್ಮ ಅಜ್ಞಾನವು**
**ನಮ್ಮ ನಾರಾಯಣಗಿಲ್ಲ**
**ರಮ್ಮೆಯರಸು ತನ್ನ ನಾಭಿಕಮಲದಿಂದ**
**ನಿರ್ಮಿಸಿದ ಜಗತು ಪುಸಿಯೇ** ॥೧೩॥

**ಅರ್ಥ:** ಶ್ರುತಿಯು—ವೇದವು, ಚಿನ್ಮಾತ್ರ—(ಬ್ರಹ್ಮನು) ಚೇತನ ಮಾತ್ರನು (ಆನಂದಾದಿಗುಣಗಳು—ಸೃಷ್ಟ್ಯಾದಿಕ್ರಿಯಾಶಕ್ತಿ ಮುಂತಾದ ಗುಣ ಕ್ರಿಯೆಗಳಿಲ್ಲದವನು), ಎಂಬ—ಎಂದು ಹೇಳುತ್ತದೆ ಎಂಬ, ನಿಮ್ಮ ಅಜ್ಞಾನವು—ನಿಮ್ಮ (ಮಾಯಾವಾದಿಗಳ) ವಿಪರೀತಜ್ಞಾನವು, ನಮ್ಮ ನಾರಾಯಣಗಿಲ್ಲ—ನಮ್ಮ ಪ್ರಭುವಾದ ನಾರಾಯಣನಿಗೆ ಇಲ್ಲ (ತನ್ನನ್ನು ಸರ್ವಗುಣಪೂರ್ಣ, ಸರ್ವಜ್ಞ, ಸರ್ವಶಕ್ತನೆಂದೇ ತಾನು ತಿಳಿದಿರುವನು); ರಮ್ಮೆಯರಸನು—ರಮಾಪತಿಯು, ತನ್ನ ನಾಭಿಕಮಲದಿಂದ—ತನ್ನ ನಾಭಿಕಮಲದೊಳಗೆ, ನಿರ್ಮಿಸಿದ ಜಗತು—ಜಗತ್ತು (ವಿಶ್ವವು), ಪುಸಿಯೇ—ಸುಳ್ಳೇ (ಮಿಥ್ಯೆಯೇ)? (ಸರ್ವಥಾ ಅಲ್ಲ).

**ವಿಶೇಷಾಂಶ:** *'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ'* ಇತ್ಯಾದಿ ಶ್ರುತಿವಾಕ್ಯಗಳಿಗೆ ಮಾಯಾವಾದಿಗಳು ತಿಳಿಯುವ ಅರ್ಥವು ಅಜ್ಞಾನದಿಂದಾದ ದುರರ್ಥವೆನ್ನುತ್ತಾರೆ. *'ಸ ಆತ್ಮಾ ಸ ನಿತ್ಯಃ ಶುದ್ಧಃ ಕೇವಲೋ ನಿರ್ಗುಣಶ್ಚ'* ಎಂಬ

ಶ್ರುತಿಯೂ ಅದೇ ಅರ್ಥವನ್ನೇ ಹೇಳುತ್ತದೆ. 'ತತ್ತ್ವಮಸಿ' ಎಂಬಲ್ಲಿ ತತ್, ತ್ವಂ, ಅಸಿ ಎಂದು ಪದಚ್ಛೇದಮಾಡಿ, 'ತತ್'—ಬ್ರಹ್ಮನು, ತ್ವಂ—ನೀನು, ಅಸಿ—ಆಗಿರುತ್ತೀ, ಎಂಬರ್ಥವನ್ನು ಹೇಳಿ, ತತ್ ಎಂಬ ಬ್ರಹ್ಮನ, ಸರ್ವಜ್ಞತ್ವ, ಸರ್ವಕರ್ತೃತ್ವಾದಿ ಧರ್ಮಗಳನ್ನೂ, ತ್ವಂ ಎಂಬ ಜೀವನ, ತದ್ವಿರುದ್ಧಗಳಾದ ಅಲ್ಪಜ್ಞತ್ವ, ಅಲ್ಪಶಕ್ತಿತ್ವಾದಿ ಧರ್ಮಗಳನ್ನೂ ತೆಗೆದುಹಾಕಿ, ಉಭಯರಲ್ಲಿರುವ 'ಚಿತ್' ಎಂಬುದಕ್ಕೆ ಐಕ್ಯವನ್ನು ತಿಳಿಯಬೇಕೆಂಬ ವಾದವು ಕೇವಲ ಹಾಸ್ಯಾಸ್ಪದವಾಗದೇ ಇರದು. ಹೀಗೆ ಅರ್ಥಮಾಡುವುದಕ್ಕೆ '*ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ*' ಎಂಬ ಶ್ರುತಿಯು ಸಹಾಯಕವೆಂದು ಭಾವಿಸುವುದು ಅಜ್ಞಾನದ ಪರಮಾವಧಿಯು. ಈ ಶ್ರುತಿಯ ಪೂರ್ಣವಾಕ್ಯವು ಹೀಗಿದೆ:

*ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।*
*ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥*

**ಅರ್ಥ:** ಏಕಃ—ಸರ್ವೋತ್ತಮನು ಮತ್ತು ಸ್ವಗತಭೇದ ವಿವರ್ಜಿತನು, ದೇವಃ—ಕ್ರೀಡಾದಿಗುಣವಿಶಿಷ್ಟನು, ಸರ್ವಭೂತೇಷು ಗೂಢಃ—ಸಕಲ ಪ್ರಾಣಿಗಳಲ್ಲಿ ಗುಪ್ತನಾಗಿ ವಾಸಿಸುವನು, ಸರ್ವವ್ಯಾಪೀ—ದೇಶ, ಕಾಲ, ಗುಣಗಳಿಂದ ವ್ಯಾಪ್ತನು (ಪ್ರಾಣಿಗಳಲ್ಲಿ ಮಾತ್ರ ಇರುವವನಲ್ಲ, ಸರ್ವವನ್ನೂ ವ್ಯಾಪಿಸಿಕೊಂಡಿರುವವನು), ಸರ್ವಭೂತಾಂತರಾತ್ಮಾ—ಸರ್ವಪ್ರಾಣಿಗಳೊಳಗಿದ್ದು ಅವುಗಳನ್ನು ಚೆನ್ನಾಗಿ ನಿಯಮಿಸುವವನು. (ಸರ್ವಾಂತರ್ಯಾಮಿಯಾಗಿದ್ದು ಎಲ್ಲವನ್ನು ತಿಳಿಯುವನು), ಕರ್ಮಾಧ್ಯಕ್ಷಃ—ಸರ್ವಕರ್ಮಾಧಿಪತಿಯು (ಕರ್ಮೋಪರಿ ಅಸ್ಯ ಅಕ್ಷಾಣಿ ವರ್ತಂತ **ಇತ್ಯಧ್ಯಕ್ಷಃ**—ತತ್ವಪ್ರದೀಪ) ಸರ್ವರ ಸರ್ವಕಾಲದ ಕರ್ಮಗಳನ್ನು ತಿಳಿದು ಮಾಡಿಸುವವನು, ಸರ್ವಭೂತಾಧಿವಾಸಃ—ಸರ್ವರ ಆಶ್ರಯನು, ಸಾಕ್ಷೀ—ಸ್ವರೂಪದಿಂದಲೇ ಸರ್ವವನ್ನೂ ಸಾಕ್ಷಾತ್ತಾಗಿ ನೋಡುವವನು, ಚೇತಾ-ಜ್ಞಾನರೂಪನು, ಕೇವಲಃ— ಜಡಾಮಿಶ್ರನು (ಶುದ್ಧನು—ಸಮಾಧಿಕ ರಹಿತನು), ನಿರ್ಗುಣಶ್ಚ—ಸತ್ವಾದಿಪ್ರಾಕೃತಗುಣರಹಿತನು.

**ಅನಾದಿಮಾಯಾಸುಪ್ತನು ಗಡ ಜೀವನು**
**ಅನಿದ್ರ ಗಡ ಪರಬೊಮ್ಮ**
**ಅನುಭವಕೆ ತಂದುಕೋ ಈ ಶ್ರುತಿಮಾರ್ಗವ**
**ಮನಕೆ ಬಂದಂತಾಡಬೇಡ** ॥೧೪॥

**ಅರ್ಥ:** ಜೀವನು—ದೇಹಾಭಿಮಾನಿ ಚೇತನನು, ಅನಾದಿಮಾಯಾಸುಪ್ತನು ಗಡ—ಅನಾದಿಯಾದ ಅವಿದ್ಯೆ (ಮಾಯಾ), [ಮಾಯಾಧೀನ (ಇಚ್ಛಾಧೀನ) ವಾದ ಮಾಯೆ(ಅವಿದ್ಯೆ)ಯಿಂದ] ಸಂಸಾರದಲ್ಲಿ ಪ್ರವೇಶಿಸಲ್ಪಟ್ಟಿರುವನು; ಪರಬೊಮ್ಮ—ಪರಬ್ರಹ್ಮನಾದರೋ, ಅನಿದ್ರ ಗಡ—ಎಂದಿಗೂ ಸಂಸಾರವಿಲ್ಲದವನು; ಈ ಶ್ರುತಿಮಾರ್ಗವ—ಹೀಗೆಂದು ಹೇಳುವ ತಾತ್ಪರ್ಯವನ್ನು, ಅನುಭವಕೆ ತಂದುಕೋ—ಚೆನ್ನಾಗಿ ತಿಳಿ; ಮನಕೆ ಬಂದಂತೆ—ಮನಬಂದಂತೆ (ಉನ್ಮತ್ತನಂತೆ) ಮಾತಾಡಬೇಡ—ನುಡಿಯದಿರು.

**ವಿಶೇಷಾಂಶ:** ಪ್ರಸಕ್ತ ಶ್ರುತಿವಾಕ್ಯವು ಇಂತಿದೆ:

*ಅನಾದಿಮಾಯಯಾ ಸುಪ್ತೋ ಯದಾ ಜೀವಃಪ್ರಬುಧ್ಯತೇ।*
*ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ॥* (ಮಾಂಡೂಕ)

**ಅರ್ಥ:** ವಿಷ್ಣ್ವಧೀನವಾದ ಅನಾದ್ಯವಿದ್ಯೆಯಿಂದ ಸಂಸಾರದಲ್ಲಿ ಪ್ರವೇಶಿಸಿರುವ (ವಿಷ್ಣುವನ್ನು ಮರೆತು ನಿದ್ರಿಸುತ್ತಿರುವ) ಜೀವನು, ಯಾವಾಗ (ಪ್ರಬುಧ್ಯತೇ—ಶ್ರೀಹರಿಯೇ ಸ್ವತಂತ್ರನು—ಸರ್ವವೂ ಆತನ ಅಧೀನವೆಂಬ ತತ್ವಜ್ಞಾನರೂಪದ) ಎಚ್ಚರವನ್ನು ಹೊಂದುತ್ತಾನೆಯೋ, ಆಗ, ಜನನಾದಿ ದೋಷರಹಿತನೂ (ಅಜ), ಸುಷುಪ್ತಿಸ್ವಪ್ನಗಳೆಂಬ (ಅನಿದ್ರಂ ಅಸ್ವಪ್ನಂ) ಅವಸ್ಥೆಗಳನ್ನು ಮೀರಿದ (ವಿಶ್ವಂ, ತೈಜಸ, ಪ್ರಾಜ್ಞಗಳೆಂಬ ರೂಪಗಳಿಂದ ಜೀವರಿಗುಂಟಾಗುವ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥೆಗಳನ್ನು ಮೀರಿದ—ಇವುಗಳಿಲ್ಲದ), ಅದ್ವೈತಂ—ಸರ್ವೋತ್ತಮನಾದ **'ತುರೀಯ'** ನಾಮಕ ಶ್ರೀಹರಿಯನ್ನು (ಬುಧ್ಯತೇ) ಜೀವನು ಸಾಕ್ಷಾತ್ತಾಗಿ ಕಾಣುತ್ತಾನೆ. ಭಾಷ್ಯೋದಾಹೃತ ಸ್ಮೃತಿವಾಕ್ಯವೂ ಈ ಅರ್ಥವನ್ನೇ ಸ್ಪಷ್ಟವಾಗಿ ನಿರೂಪಿಸುತ್ತದೆ.

*'ಅನಾದಿಮಾಯಯಾ ವಿಷ್ಣೋರಿಚ್ಛಯಾ ಸ್ವಾಪಿತೋ ಯದಾ।*
*ಪ್ರಬೋಧಮಾಯಾತಿ ತದಾ ವಿಷ್ಣುಂ ಪ್ರಪಶ್ಯತಿ॥'*

—ವಿಷ್ಣುವಿನ ಇಚ್ಛಾಧೀನವಾದ ಅನಾದಿಮಾಯೆಯಿಂದ ನಿದ್ರಿಸುತ್ತಿರುವ ಜೀವನು ಯಾವಾಗ ಎಚ್ಚರಗೊಳ್ಳುವನೋ ಆಗ ವಿಷ್ಣುವನ್ನು ನೋಡುತ್ತಾನೆ.

**ಮೃತಿಯಿಲ್ಲದವ ನಿತ್ಯಾಮೃತವೆಂಬ ಪ್ರಸಿದ್ಧ-**
**ಕೃತಿಯಿಲ್ಲದನುಮಾನ ಭವಕೆ**
**ಅತಿದೂರವಲ್ಲವೆ ಆದುದು ನಮ್ಮ ಶ್ರೀ-**
**ಪತಿ ನಿತ್ಯಮುಕ್ತ ಬಲ್ಲವರಿಗೆ** ॥೧೫॥

**ಅರ್ಥ:** ಮೃತಿಯಿಲ್ಲದವ — ಮರಣವಿಲ್ಲದವನು, ನಿತ್ಯಾಮೃತವೆಂಬ — ನಿತ್ಯನೂ ಮುಕ್ತನೂ ಎಂಬ; ಪ್ರಸಿದ್ಧಕೃತಿ — ಪ್ರಸಿದ್ಧಪ್ರಯೋಜನವುಳ್ಳದ್ದು; ಇಲ್ಲದ ಅನುಮಾನ — ಈ ಅನುಮಾನವು (ತರ್ಕವು) [ಮರಣವಿಲ್ಲೆಂದು ಹೇಳುವುದಕ್ಕೆ, ಎಲ್ಲರೂ ಒಪ್ಪಬೇಕಾದ ಪ್ರಯೋಜನವು, ಮುಕ್ತನೆಂದು ಸಾಧಿಸುವುದೇ ಅಲ್ಲವೇ] ಭವಕೆ ಅತಿದೂರ ಆದುದು ಅಲ್ಲವೇ — ನಿತ್ಯಮುಕ್ತನು (ಬ್ರಹ್ಮವಸ್ತುವು), ಸಂಸಾರಕ್ಕೇ ಅತಿದೂರನು, ಎಂದರೆ, ಎಂದೂ ಸಂಸಾರವಿಲ್ಲದವನೆಂದು ಸಾಧಿಸುವುದಿಲ್ಲವೇ; ನಮ್ಮ ಶ್ರೀಪತಿ — ನಮ್ಮ ಲಕ್ಷ್ಮೀಪತಿಯು, ಬಲ್ಲವರಿಗೆ — ಜ್ಞಾನಿಗಳಿಗೆ, ನಿತ್ಯಮುಕ್ತನೇ ಸರಿ. ಇಲ್ಲದೆ! — ಹೀಗಲ್ಲದೆ! (ಮತ್ತೇನು?)

**ವಿಶೇಷಾಂಶ:** ಎಲ್ಲವೂ ಲಯಹೊಂದಿದಾಗ ಸಹ (ಪ್ರಳಯಕಾಲದಲ್ಲಿಯೂ) ವಿರಾಜಮಾನನಾಗಿರುವನೆಂದು ಸಕಲ ಪ್ರಮಾಣಗಳಿಂದ ಶ್ರೀಹರಿಯು ದೇಹವಿಯೋಗರಹಿತನು — ಮರಣವಿಲ್ಲದವನೆಂದು ತಿಳಿದುಬರುತ್ತದೆ. ಮರಣರಾಹಿತ್ಯವೆಂಬ ಹೇತುವು ಮುಕ್ತತ್ವವನ್ನು ಸಾಧಿಸುತ್ತದೆ. ಎಂದೂ ಮರಣವಿಲ್ಲದವನು ನಿತ್ಯಮುಕ್ತನೇ ಸರಿ. ಎಲ್ಲರೂ ಒಪ್ಪಲೇ ಬೇಕು. ಅದರಿಂದ ಶ್ರೀಹರಿಗೆ ಪ್ರಾಕೃತದೇಹಸಂಬಂಧವು ಎಂದೂ ಇಲ್ಲವೆಂದು ಸಿದ್ಧವಾಗುತ್ತದೆ. ನಿಷ್ಫಲವಾದ (ಏನನ್ನೂ ಸಾಧಿಸಲಾಗದ) ಅನುಮಾನವು ವ್ಯರ್ಥವೆಂಬುದನ್ನು ಎಲ್ಲರೂ ಬಲ್ಲರು. **'ಬಲ್ಲವರಿಗೆ'** ಎಂದರೆ ಯುಕ್ತಿಶಾಸ್ತ್ರಜ್ಞರಿಗೆ, ಎಂಬರ್ಥವನ್ನೂ ತಿಳಿಯಬೇಕು.

**ಅವ ನಿತ್ಯಮುಕ್ತ ಜೀವರು ಮಧ್ಯಮುಕ್ತರೆಂಬ**
**ವಿರುದ್ಧಧರ್ಮ ಮುಕ್ತಿಯೊಳು**
**ಸುವಿವೇಕಿಗಳಿಗೆ ಸಮ್ಮತವಾದ ಕಾರಣ**
**ಇವರೈಕ್ಯವಲ್ಲಿಯು ಸಲ್ಲಾ** ॥೧೬॥

**ಅರ್ಥ:** ಅವ — ಅವನು (ಶ್ರೀಹರಿಯು), ನಿತ್ಯಮುಕ್ತ — ನಿತ್ಯಮುಕ್ತನು; ಜೀವರು — ಬ್ರಹ್ಮಾದಿ ಸಕಲ ಜೀವರು, ಮಧ್ಯಮುಕ್ತರು — ಮಧ್ಯಕಾಲದಲ್ಲಿ ಮುಕ್ತರಾದವರು (ಅಮುಕ್ತ — ಮುಕ್ತದೆಶೆಗಳ ಮಧ್ಯಕಾಲದಲ್ಲಿ ಮರಣಶೀಲವಾದ ದೇಹಗಳುಳ್ಳವರಾಗಿದ್ದು ನಂತರ ಶ್ರೀಹರಿಪ್ರಸಾದದಿಂದ ಮುಕ್ತರಾದವರು); ಎಂಬ — ಹೀಗೆಂಬ, ಮತ್ತು ಮುಕ್ತಿಯೊಳು — ಮುಕ್ತಿದೆಶೆಯಲ್ಲಿ ಸಹ, ವಿರುದ್ಧ ಧರ್ಮ — ವಿರುದ್ಧ ಧರ್ಮಗಳುಳ್ಳವರು (ಶ್ರೀಹರಿಯು ಸ್ವತಂತ್ರನು —

ಮುಕ್ತಜೀವರು ಅವನ ಅಧೀನರು; ಜ್ಞಾನಾನಂದಾದಿಗುಣಗಳಿಂದ ಶ್ರೀಹರಿಗೆ, ಮುಕ್ತರು ಅನಂತಗುಣಗಳಿಂದ ಹೀನರು, ಇತ್ಯಾದಿ ವಿರುದ್ಧಧರ್ಮಯುಕ್ತರು), (ಎಂಬುದು), ಸುವಿವೇಕಿಗಳಿಗೆ— ಯಥಾರ್ಥಜ್ಞಾನಿಗಳಿಗೆ, (ಆಗಮಾನುಸಾರಿ- ಗಳಾದ ಯುಕ್ತಿಗಳಿಂದ ವಿಮರ್ಶಿಸಿ ತಿಳಿಯುವವರಿಗೆ), ಸಮ್ಮತವಾದ- ಕಾರಣ— ಸಮ್ಮತವಾದ್ದರಿಂದ, (ಅಂಗೀಕಾರಾರ್ಹವಾದ್ದರಿಂದ), ಇವರೈಕ್ಯವು — ಜೀವಬ್ರಹ್ಮರ ಐಕ್ಯವು, ಅಲ್ಲಿಯು— ಮುಕ್ತಿಯಲ್ಲಿ ಸಹ, ಸಲ್ಲಾ— ಯೋಗ್ಯ- ವಲ್ಲ (ಕೂಡುವುದಿಲ್ಲ).

**ವಿಶೇಷಾಂಶ:** ವಿರುದ್ಧ ಧರ್ಮಗಳುಳ್ಳ ಎರಡು ವಸ್ತುಗಳು ಸ್ವರೂಪತಃ ಒಂದೇ ಎಂದು ಹೇಳುವುದು ಯುಕ್ತಿವಿರುದ್ಧ.

*'ಅಥ ಬದ್ಧಸ್ಯ ಮುಕ್ತಸ್ಯ ವೈಲಕ್ಷಣ್ಯಂ ವದಾಮಿ ತೇ।*
*ವಿರುದ್ಧಧರ್ಮಿಣೋಸ್ತಾತ ಸ್ಥಿತಯೋರೇಕಧರ್ಮಿಣಿ॥'* (ಭಾಗವತ)

'ಅನಾದಿಕಾಲೀನವಾದ ಪ್ರಾಕೃತಬಂಧವುಳ್ಳ ಜೀವರಿಗೂ ನಿತ್ಯಮುಕ್ತನಾದ ಶ್ರೀಹರಿಗೂ ಸ್ವಾಭಾವಿಕವಾದ ವಿರುದ್ಧಧರ್ಮಗಳಿರುವುದರಿಂದ, ಒಂದು ದೇಹದಲ್ಲಿದ್ದಾಗ್ಯೂ ಐಕ್ಯವಿಲ್ಲ' ಎಂದು ಶ್ರೀಕೃಷ್ಣನು ಉದ್ಧವನಿಗೆ ಉಪದೇಶಿಸು- ತ್ತಾನೆ.

*ಬದ್ಧಾ ಜೀವಾ ಇಮೇ ಸರ್ವೇ ಪೂರ್ವಬಂಧಸಮನ್ವಯಾತ್।*
*ನಿತ್ಯಮುಕ್ತತ್ವತೋ ವಿಷ್ಣುರ್ಮುಕ್ತನಾಮಾ ಸದೋದಿತಃ॥*
*ಮುಕ್ತಸ್ಯಾಪಿ ತು ಬದ್ಧತ್ವಮಸ್ತಿ ಯತ್ತಸಹರೇರ್ವಶಃ।*
*ಬದ್ಧತ್ವಂ ವಿಷ್ಣ್ವಧೀನತ್ವಂ ಅಂಧತ್ವಂ ತದದರ್ಶನಮ್॥*

ಈ ಬ್ರಹ್ಮಸಂಹಿತಾ ಮತ್ತು ಮುಕ್ತ ವಿವೇಕವಾಕ್ಯಗಳಿಂದ, ಉಕ್ತ ಭಾಗವತ ಶ್ಲೋಕದ ತಾತ್ಪರ್ಯವನ್ನು ಶ್ರೀಮದಾಚಾರ್ಯರು ನಿರೂಪಿಸುತ್ತಾರೆ. 'ಅನಾದಿ ಬಂಧಸಂಬಂಧವುಳ್ಳವರಾದ್ದರಿಂದ ಈ ಎಲ್ಲ ಜೀವರೂ ಬದ್ಧರೆಂದೇ ಕರೆಯಲ್ಪಡುತ್ತಾರೆ. ಶ್ರೀವಿಷ್ಣುವಾದರೋ ನಿತ್ಯಮುಕ್ತನಾದ್ದರಿಂದ ಮುಕ್ತನೆಂಬ ನಾಮದಿಂದಲೇ ಸದಾ ಕರೆಯಲ್ಪಡುತ್ತಾನೆ. ಮುಕ್ತಜೀವನು ಸಹ, ಶ್ರೀಹರಿಯ ವಶವರ್ತಿಯಾದ್ದರಿಂದ, ಬದ್ಧತ್ವವುಳ್ಳವನೇ, ಬದ್ಧತ್ವವೆಂಬುದೇ ವಿಷ್ಣ್ವಧೀನ- ತ್ವವು— ಶ್ರೀಹರಿಯ ದರ್ಶನವಿಲ್ಲದಿರುವುದೇ ಅಂಧತ್ವವು (ಇತರ ಎಲ್ಲವನ್ನೂ ಕಂಡರೂ ಶ್ರೀಹರಿಯನ್ನು ಕಾಣದವನು ಅಂಧನೇ— ಕುರುಡನೇ)'. ಮುಕ್ತಿ- ಯಲ್ಲಿ ಸಹ ಜೀವಬ್ರಹ್ಮರ ಐಕ್ಯವೆಂಬುದು ಸುತರಾಂ ಯುಕ್ತಿವಿರುದ್ಧವೆಂಬು- ದನ್ನು ವಿವೇಕಿಗಳು ಒಪ್ಪಲೇಬೇಕು.

**ಎಂದೆಂದು ಕರ್ಣಶೂನ್ಯಪನ್ನಂಗ**
**ಕೇಳ್ದಪ ಕರ್ಣಪೋದವಗೆ**
**ಮಂದಮಾನವ ಮಹದಂತರವಲ್ಲವೆ**
**ಎಂದ ಮಧ್ಯಮ ಈ ಮುಕ್ತರಿಗೆ** ॥೧೭॥

**ಅರ್ಥ:** ಎಂದೆಂದು—ಯಾವಕಾಲಕ್ಕೂ, ಕರ್ಣಶೂನ್ಯ—ಕಿವಿಯಿಲ್ಲದ, ಪನ್ನಂಗ—ಸರ್ಪ; ಕೇಳ್ದಪ—ಕೇಳಬಲ್ಲದು. ಮಂದಮಾನವ—(ಕಿವಿಯಿಲ್ಲದೆ ಯಾವ ಶಬ್ದವನ್ನೂ ಗ್ರಹಿಸಲಾರದ) ಅಲ್ಪಮಾನವನೇ! ಮಧ್ಯಮ ಈ ಮುಕ್ತರಿಗೆ—ನಿತ್ಯಮುಕ್ತರಲ್ಲದ (ಸಂಸಾರದಲ್ಲಿ ಸುತ್ತಿ ಒಂದು ಕಾಲಕ್ಕೆ ಮುಕ್ತ-ರಾದ) ಜೀವರಿಗೆ, ಮತ್ತು ಕರ್ಣಪೋದವಗೆ—ಕಿವಿಯೇ ಇಲ್ಲದ ಶ್ರೀಹರಿಗೆ ಅತಿದೂರವಿಲ್ಲವೇ? ಸಮತ್ವವಾಗಲಿ ಐಕ್ಯವಾಗಲಿ ಸಲ್ಲುವುದೇ ಎಂದು); ಎಂದ—ವೇದಪುರುಷನು ಹೇಳಿದನು.

**ವಿಶೇಷಾಂಶ:** *'ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ-ಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ'* (ಅಥರ್ವಣ) 'ಅಕ್ಷರನೆಂದು ಕರೆಯಲ್ಪಡುವ ಪರಮಾತ್ಮನು ಕಾಣಲ್ಪಡು-ವವನಲ್ಲ—ಗ್ರಹಿಸಲಶಕ್ಯನು—ಗೋತ್ರಜಾತಿಗಳಿಲ್ಲದವನು—ಕಣ್ಣು ಕಿವಿಗಳಿಲ್ಲ-ದವನು—ಕೈಕಾಲುಗಳಿಲ್ಲದವನು—ಶಾಶ್ವತನು—ಸರ್ವೇಶ್ವರನು—ಸರ್ವಾಂತ-ರ್ಯಾಮಿಯು—ಅತ್ಯಂತಸೂಕ್ಷ್ಮನು' ಎಂದು ಶ್ರುತಿಯು ಹೇಳುತ್ತದೆ. ಹೀಗಿರುವ ಪರಮಾತ್ಮನು, *'ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ'* (ಗೀತಾ). 'ಎಲ್ಲರ ಚಕ್ಷುರಾದಿ ಎಲ್ಲ ಇಂದ್ರಿಯಗಳಿಗೆ, ನೋಡುವ ಮೊದಲಾದ ಶಕ್ತಿಪ್ರದನೂ ಸ್ವಯಂ ಇಂದ್ರಿಯರಹಿತನೂ, ಎಂದು ಹೇಳಲ್ಪಡುತ್ತಾನೆ. ಹೀಗಿದ್ದರೂ, *'ಪಶ್ಯತ್ಯಚಕ್ಷುಃ ಸ ಶೃಣೋತಿ'*—ಇತ್ಯಾದಿ ಶ್ರುತಿಗಳು ಕಣ್ಣಿಲ್ಲದೇ ನೋಡುತ್ತಾನೆ, ಕಿವಿಯಿಲ್ಲದೆಯೇ ಕೇಳುತ್ತಾನೆಂದು ಮುಂತಾಗಿ ಹೇಳುತ್ತವೆ. ಮತ್ತು

*'ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿಶಿರೋಮುಖಮ್।*
*ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ॥'* (ಗೀತಾ)

ಎಂಬಲ್ಲಿ, 'ಕಣ್ಣಿಲ್ಲದೇ ನೋಡುತ್ತಾನೆಂದು ಮುಂತಾಗಿ ಮಾತ್ರವಲ್ಲ—ಕಿಂತು, ಎಲ್ಲ ಇಂದ್ರಿಯಗಳಿಂದ ಎಲ್ಲ ವ್ಯಾಪಾರಗಳನ್ನೂ ಮಾಡಬಲ್ಲನು; ಹಸ್ತ ಪಾದ-ಗಳಿಂದ ನೋಡುವ, ಕೇಳುವ ಎಲ್ಲವನ್ನೂ ಮಾಡಬಲ್ಲನು—ವಿಶ್ವದಲ್ಲಿರುವ

ಎಲ್ಲವನ್ನೂ ನೋಡುತ್ತಾನೆ, ಕೇಳುತ್ತಾನೆ— ಈ ವಿಧವಾದ ಅದ್ಭುತಮಹಿಮೋ-ಪೇತನು ಸರ್ವವ್ಯಾಪಿಯಾಗಿರುವನು ಎಂದೂ ಹೇಳಲಾಗಿದೆ. ಜೀವರಂತೆ ದುರ್ಬಲೇಂದ್ರಿಯಗಳುಳ್ಳವನಲ್ಲ— ಪ್ರಾಕೃತೇಂದ್ರಿಯಗಳಿಲ್ಲದವನೆಂಬರ್ಥವನ್ನು ತಿಳಿಯದಿದ್ದರೆ, ಉದಾಹೃತವಾಕ್ಯಗಳು ಪರಸ್ಪರ ವಿರುದ್ಧಗಳಾಗುತ್ತವೆ. ಹೀಗೆ ನಿತ್ಯನಿರ್ವಿಕಾರಗಳಾದ ಅದ್ಭುತೇಂದ್ರಿಯಗಳುಳ್ಳ ಶ್ರೀಹರಿಯನ್ನು, *'ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ'*— ಎಂದರೆ, ಸರ್ವದ— ಜೀವರ ಸೃಷ್ಟ್ಯಾದಿಗಳಿಗೆ ಸ್ವತಂತ್ರ ಕಾರಣನಾದ, ನಿತ್ಯನಿರ್ವಿಕಾರಚಿದಾನಂದ ಸ್ವರೂಪ-ನಾದ ಶ್ರೀಹರಿಯನ್ನು ಜ್ಞಾನಿಗಳು ಪ್ರತ್ಯಕ್ಷ ನೋಡುತ್ತಾರೆ' ಎಂದು ಮೇಲಿನ ಅಥರ್ವಣಶ್ರುತಿವಾಕ್ಯದ ಮುಂದಿನ ವಾಕ್ಯವು ಹೇಳುತ್ತದೆ.

**ಸಾಯುಜ್ಯ ಎಂಬ ಶಬ್ದವು ಶಾಬ್ದಿಕರಿಗೆ**
**ಆ ಯೋಜ್ಯವೆಂಬ ಧಾತುವಿನಿಂದ**
**ಆಯಿತೆಂಬುದು ಸಿದ್ಧ ಅದರಿಂದ**
**ಬಾಯಿಗೆ ಬೀಗವಾಯಿತು ಖಳರ** ॥೧೮॥

**ಅರ್ಥ: ಸಾಯುಜ್ಯ** ಎಂಬ ಶಬ್ದವು— 'ಸಾಯುಜ್ಯ'ವೆಂಬ ಪದವು, ಶಾಬ್ದಿಕರಿಗೆ— ವ್ಯಾಕರಣಪಂಡಿತರಿಗೆ, ಆ ಯೋಜ್ಯವೆಂಬ ಧಾತುವಿನಿಂದ— (ಯುಜಿರ್— ಯೋಗೇ) ಎಂಬ ಪ್ರಸಿದ್ಧ ಧಾತುವಿನಿಂದ, ಆಯಿತೆಂಬುದು ಸಿದ್ಧ — ನಿಷ್ಪನ್ನವಾದುದೆಂಬುದು ನಿಶ್ಚಿತವಾಗಿದೆ; ಅದರಿಂದ— ಈ ಕಾರಣದಿಂದ (ಸಾಯುಜ್ಯವೆಂದರೆ **'ಕೂಡಿರುವಿಕೆ'** ಎಂಬ ಅರ್ಥವಾದ್ದರಿಂದ), ಖಳರ— ದುಷ್ಟಮಾಯಾವಾದಿಗಳ, ಬಾಯಿಗೆ ಬೀಗವಾಯಿತು— ಬಾಯಿ ಮುಚ್ಚಿತು (ಸಾಯುಜ್ಯಮುಕ್ತಿಯೆಂದರೆ ಬ್ರಹ್ಮೈಕ್ಯವೆಂದೂ ಹೇಳುವಂತಿಲ್ಲ).

**ಹರಿಯ ಸರ್ವಾಂಗದಿ ತುಂಬಿರ್ದ ದೇವರ**
**ಇರವೆ ಸಾಯುಜ್ಯವೆನಿಪುದು**
**ಮರುಳಾಗಬೇಡ ಮಾನವಾ ಸರ್ವೇಶ್ವರನೆತ್ತ**
**ಹರಿಯನುವ್ರತಮುಕ್ತರೆತ್ತ** ॥೧೯॥

**ಅರ್ಥ:** ಹರಿಯ— ಶ್ರೀಹರಿಯ, ಸರ್ವಾಂಗದಿ— ಎಲ್ಲ ಅವಯವಗಳಲ್ಲಿ, ತುಂಬಿರ್ದ— ಸೇರಿರುವ, ದೇವರ— ದೇವತೆಗಳ, ಇರವೆ— ಅಲ್ಲಿರುವಿಕೆಯೇ, ಸಾಯುಜ್ಯವೆನಿಪುದು— ಸಾಯುಜ್ಯಮುಕ್ತಿಯೆನಿಸುವುದು (ಐಕ್ಯವಲ್ಲ); ಮಾನವಾ

— ಹೇ ಮನುಷ್ಯ! ಮರುಳಾಗಬೇಡ— ಮೋಸಹೋಗಬೇಡ; ಸರ್ವೇಶ್ವರನೆತ್ತ — ಸರ್ವೇಶ್ವರನಾದ ಶ್ರೀಹರಿಯೆಲ್ಲಿ, ಹರಿಯನುವ್ರತ— ಶ್ರೀಹರಿಯ ಅನುಚರರಾದ, ಮುಕ್ತರೆತ್ತ— ಮುಕ್ತ ಜೀವರೆಲ್ಲಿ? (ಮಹದಂತರವಲ್ಲವೇ— ಸರ್ವಥಾ ಅಭಿನ್ನರಲ್ಲ— ಅವರಲ್ಲಿ ಐಕ್ಯವೆಂಬುದಿಲ್ಲ).

**ವಿಶೇಷಾಂಶ:** ವಿವಿಧ ಪ್ರಕಾರದ ಮುಕ್ತಿಗಳಲ್ಲಿ ಉತ್ತಮಾಧಿಕಾರಿಗಳಿಗೆ ದೊರೆಯುವ ಸಾಯುಜ್ಯಮುಕ್ತಿಯನ್ನು ಸಹ ಬ್ರಹ್ಮೈಕ್ಯವೆಂದು ಭ್ರಮಿಸದಿರಿ, ಎಂದು ಎಚ್ಚರಿಸುತ್ತಾರೆ. ೧ನೇ ಮೋಕ್ಷಸಂಧಿಯ ೨೩ನೇ ಪದದ ವಿಶೇಷ ವಿವರಣೆಯನ್ನು ಓದಿಕೊಳ್ಳಬೇಕು. ಶ್ರೀಹರಿಯು, ಚತುರ್ಮುಖಬ್ರಹ್ಮದೇವನ ಸ್ತೋತ್ರದಿಂದ ಪ್ರಸನ್ನನಾಗಿ, ಮುಕ್ತಧಾಮವಾದ ಸ್ವಲೋಕವನ್ನು (ವೈಕುಂಠವನ್ನು) ಆತನಿಗೆ ಸಂದರ್ಶನ ಮಾಡಿಸಿದನು. ಅದರ ವರ್ಣನೆಯು ಶ್ರೀಮದ್ಭಾಗವತದಲ್ಲಿ ಹೀಗಿದೆ:

*'ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ ಸಂದರ್ಶಯಾಮಾಸ ಪರಂ ನ ಯತ್ಪರಂ'* ಭಗವಂತನು ಪ್ರೀತನಾಗಿ ಚತುರ್ಮುಖಬ್ರಹ್ಮನಿಗೆ ತೋರಿಸಿದ ಲೋಕವು ಉತ್ಕೃಷ್ಟವಾದುದು (ಪರಂ); ಅದಕ್ಕಿಂತ ಶ್ರೇಷ್ಠವಾದುದು ಇಲ್ಲವೇ ಇಲ್ಲ (ಯತ್ಪರಂ ನ)— ಮುಕ್ತವೈಕುಂಠಧಾಮವೆಂದು ಹೇಳಲಾಗಿದೆ. ಮತ್ತು, *'ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ।* — ಎಲ್ಲಿ (ಮಾಯಾ) ಪ್ರಕೃತಿಯ ಸ್ಪರ್ಶವೇ ಇಲ್ಲವೋ (ಅಪ್ರಾಕೃತವೋ— ಲಕ್ಷ್ಮೀದೇವಿಯೇ ಸಕಲ ವಸ್ತುರೂಪದಿಂದಿರುವಳೋ), ಆದ್ದರಿಂದಲೇ, ಪ್ರಕೃತಿ ನಿಮಿತ್ತಗಳಾದ ದುಃಖ, ಅಜ್ಞಾನಾದಿಗಳಿಗೆ ಎಡೆಯಿಲ್ಲವೋ ಅಲ್ಲಿ, ಸ್ವಪರಿವಾರದಿಂದ ಸೇವ್ಯರಾದ ದೇವತೆಗಳೂ ತತ್ತ್ವಾಭಿಮಾನಿದೇವತೆಗಳೂ (ಹರೇರನುವ್ರತಾಃ) ಶ್ರೀಹರಿಯ ಸೇವಕರಾಗಿರುವರು, ಎಂದೂ ಹೇಳಲಾಗಿದೆ.

**ಶ್ಲೋಕ ೩**

**ಸ್ರಕ್ಷ್ಯೇ ಹಿ ಚೇತನಗಣಾನ್ ಸುಖದುಃಖಮಧ್ಯ**
**ಸಂಪ್ರಾಪ್ತಯೇ ತನು-ಭೃತಾಂ ವಿಹೃತಿಂ ಮಮೇಚ್ಛನ್।**
**ಸೋಽಯಂ ವಿಹಾರ ಇಹ ಮೇ ತನುಭೃತ್ಸ್ವಭಾವ**
**ಸಂಭೂತಯೇ ಭವತಿ ಭೂತಕೃದೇವ ಭೂತ್ಯಾ॥**

**ಅರ್ಥ:** (ಇದು ಶ್ರೀಮದಾಚಾರ್ಯರ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದ ಶ್ಲೋಕ).

ಮಮ — ನನ್ನ, ವಿಹೃತಿಂ — ಕ್ರೀಡೆಯನ್ನು, ಇಚ್ಛನ್ — ಅಪೇಕ್ಷಿಸುವವನಾಗಿ, (ತನುಭೃತಾಂ — ದೇಹಧಾರಿಗಳ, ಸ್ವಭಾವಸ್ಯ — ತ್ರಿವಿಧಸ್ವಭಾವಗಳ, ಸಂಭೂತಯೇ — ಚೆನ್ನಾಗಿ ಪ್ರಕಟವಾಗಿ ಅವರ ಅನುಭವಕ್ಕೆ ಬರುವಂತಾಗಲು — ತನುಭೃತ್ಸ್ವಭಾವಸಂಭೂತಯೇ). ತನುಭೃತಾಂ — ಸಂಸಾರಿಗಳಾದ ಜೀವರ, ಸುಖದುಃಖ ಮಧ್ಯಸಂಪ್ರಾಪ್ತಯೇ — (ಕೇವಲಸ್ವರೂಪಸುಖ, ಸ್ವರೂಪದುಃಖ ಮತ್ತು ದುಃಖಮಿಶ್ರ ಸುಖರೂಪಗಳಾದ ಅವರ) ಸ್ವರೂಪಗಳನ್ನು ಹೊಂದಿಸಲಿಕ್ಕಾಗಿ, ಚೇತನ ಗಣಾನ್ — ಜೀವಸಮೂಹಗಳನ್ನು (ಅನಾದಿಲಿಂಗದೇಹಗಳಿಂದ ಬಂಧಿತರಾದ ಜೀವರನ್ನು), ಸ್ರಕ್ಷ್ಯೇ — ಸೃಷ್ಟಿಯಲ್ಲಿ ತರುತ್ತೇನೆ; ಹಿ — ಈ ವಿಧ ಸಂಕಲ್ಪವನ್ನು ಶ್ರೀಹರಿಯು ಪ್ರತಿಕಲ್ಪದ ಸೃಷ್ಟಿಪೂರ್ವದಲ್ಲಿ ಮಾಡುತ್ತಾನೆಂಬುದು ಶ್ರುತಿ ಪ್ರಸಿದ್ಧವು; ಮೇ — ನನ್ನ, ಸೋಽಯಂ ವಿಹಾರಃ — ಶ್ರುತಿಪ್ರಸಿದ್ಧ ಈ ಸೃಷ್ಟ್ಯಾದಿ ರೂಪಕ್ರೀಡೆಯು, ಭೂತ್ಯಾಃ — ಶ್ರೀಲಕ್ಷ್ಮೀದೇವಿಗೂ, ಭೂತಿಕೃತ್ ಏವ — ಆಕೆಯ ಐಶ್ವರ್ಯದ್ಯೋತಕವೂ, ಭವತಿ — ಆಗುತ್ತದೆ.

**ವಿಶೇಷಾಂಶ:** (೧) ಮಧ್ಯಮವರ್ಗದ ಜೀವರು ನಿತ್ಯಸಂಸಾರಿಗಳೆಂದೂ ವ್ಯವಹರಿಸಲ್ಪಡುತ್ತಾರೆ. ಮುಕ್ತಿಯೋಗ್ಯಜೀವರಂತೆ ಕೇವಲ ಸುಖರೂಪವೂ, ತಮೋಯೋಗ್ಯರಂತೆ ಕೇವಲ ದುಃಖರೂಪವೂ ಆದ ಸ್ವರೂಪವಿಲ್ಲದೆ, ಸುಖದುಃಖಮಿಶ್ರವುಳ್ಳವರು, ಈ ಮಧ್ಯಮಜೀವರು. ಇವರಿಗೂ ಅನಾದಿಲಿಂಗ ದೇಹಬಂಧವಿದೆ. ಲಿಂಗಭಂಗದಿಂದ ಸ್ವರೂಪದ ಆವಿರ್ಭಾವರೂಪದ ಮುಕ್ತಿಯು ಇವರಿಗಿದೆಯೇ ಎಂಬಲ್ಲಿ, ಶಾಸ್ತ್ರಜ್ಞರು ಭಿನ್ನಾಭಿಪ್ರಾಯವುಳ್ಳವರಾಗಿದ್ದಾರೆ. ಇಲ್ಲವೆಂಬುವರು, ಅವರು ನಿತ್ಯವೂ ಸಂಸಾರದಲ್ಲಿಯೇ ಸುತ್ತುತ್ತಿರುವರೆಂದು ತಿಳಿಯುತ್ತಾರೆ. *'ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್'* ಇತ್ಯಾದಿ ಋಗ್ವೇದವಾಕ್ಯಗಳೂ, *'ಏವಂ ತ್ರಯೀಧರ್ಮಮನುಪ್ರಪನ್ನಾಗತಾಗತಂ ಕಾಮ-ಕಾಮಾ ಲಭಂತೇ'* (ಗೀತೆ ೯ನೇ ಅಧ್ಯಾಯ) ಎಂಬ ಮುಂತಾದ ಸ್ಮೃತಿವಾಕ್ಯಗಳೂ ಅವರ ಅಭಿಪ್ರಾಯವನ್ನು ಸಮರ್ಥಿಸುವಂತಿವೆ. 'ಮನುಷ್ಯಮಧ್ಯಮರೆಂಬ ಮಿಶ್ರಸ್ವಭಾವದ ಜೀವರನ್ನು, ಮತ್ತೆ ಮತ್ತೆ ಸಂಸಾರದಲ್ಲಿಯೇ ಸುತ್ತಿಸುತ್ತಾನೆ — ಆ ಇಂದ್ರನಾಮಕನಾದ ಶ್ರೀಹರಿಯು' ಎಂದು ಶ್ರುತ್ಯರ್ಥವು. ಋಗ್ಯಜುಸ್ಸಾಮಗಳೆಂಬ ಮೂರು ವೇದಗಳ ವಿದ್ಯೆಯನ್ನು ಕಲಿತು, ಆಪಾತತಃ ತೋರುವ ಸ್ವರ್ಗಾದಿ ಫಲಗಳನ್ನು ತೋರಿ ಅನ್ಯದೇವತೆ-

ಗಳನ್ನಾರಾಧಿಸಿ, ಅಂತ್ಯದಲ್ಲಿ **'ಕೃಷ್ಣಾರ್ಪಣಮಸ್ತು'** ಎಂದು ವಿಷ್ಣುವಿಗೆ ಅರ್ಪಿಸುವವರು, **'ತ್ರೈವಿದ್ಯ'**ರೆನಿಸುವರು. ಇವರು, ತ್ರಯೀಧರ್ಮಂ—ವೇದೋಕ್ತಧರ್ಮವನ್ನು, ಅನುಪ್ರಪನ್ನಾಃ—ಅನುಷ್ಠಾನಮಾಡುವವರಾಗಿ, ಕಾಮಕಾಮಾಃ—ಫಲಭೋಗೇಚ್ಛೆಯುಳ್ಳವರಾಗಿ, ಗತಾಗತಃ—ಸ್ವರ್ಗಕ್ಕೆ ಹೋಗುವುದು, ತಿರಿಗಿ ಮನುಷ್ಯಲೋಕಕ್ಕೆ ಬರುವುದು, ಎಂಬ ಸ್ಥಿತಿಯನ್ನೇ, ಲಭಂತೇ—ಹೊಂದುತ್ತಾರೆ; ಎಂದು ಹೇಳುವುದು ಸಹ, ತಮ್ಮ ಅಭಿಪ್ರಾಯಕ್ಕೆ ಪೋಷಕವೆನ್ನುತ್ತಾರೆ. ಆದರೆ ಈ ಗ್ರಂಥಕರ್ತರಾದ ಶ್ರೀವಾದಿರಾಜರ ಅಭಿಪ್ರಾಯವಾದರೋ, ಮಧ್ಯಮಜೀವರಿಗೂ ಸ್ವರೂಪಾವಿರ್ಭಾವರೂಪದ ಮುಕ್ತಿಯುಂಟೆಂಬುದಾಗಿದೆ. ಸ್ವರೂಪವೇ ಮಿಶ್ರಸ್ವಭಾವದ್ದಾದ್ದರಿಂದ, ಮುಕ್ತ-ರಾದಮೇಲೂ ದುಃಖಮಿಶ್ರಸುಖವನ್ನೇ ಅನುಭವಿಸುತ್ತಾ, **'ಸಾಂತಾನಿಕ-ಲೋಕ'**ದಲ್ಲಿರುವರೆಂದು ತಿಳಿಯುತ್ತಾರೆ. ಇವರ ಈ ಅಭಿಪ್ರಾಯಕ್ಕೆ ಈ ಶ್ಲೋಕವು ಪುಷ್ಟಿಕೊಡುತ್ತದೆ. ಈ ಪ್ರಮೇಯವನ್ನು ಅನೇಕ ಸದ್ಯುಕ್ತಿಗಳಿಂದ, ಶ್ರೀರಾಜರು ಮುಂದಿನ ೪ನೇ ಸ್ಥಿತಿಸಂಧಿಯ ಪದ ೯ರ ೭ರಿಂದ ೧೧ರ ವರೆಗಿನ ನುಡಿಗಳಲ್ಲಿ ಸಾಧಿಸಿರುವರು. ಆ ನುಡಿಗಳ ವಿಶೇಷ ವಿವರಣೆಯ ಭಾಗವನ್ನು ನೋಡಬಹುದು.

(೨) ಸೃಷ್ಟಿಯು ನಾಲ್ಕುವಿಧವೆಂದು ಹೇಳಲಾಗುತ್ತದೆ. ಅದರ ವಿವರಣೆ-ಯನ್ನು ಮುಂದಿನ ಪದ ೩ ರ ೨ನೇ ನುಡಿಯ ವಿಶೇಷಾಂಶಭಾಗದಲ್ಲಿ ನೋಡಬೇಕು.

### ಪದ ೩

ರಾಗ-? ; ತಾಳ-ರೂಪಕ

**ಮತ್ತೊಂದು ತಂಡದ ಜೀವರಾಶಿಗಳಿಗೆ**
**ಮುಕ್ತಿಯೇ ಮೊದಲಾದ ಗತಿಯ**
**ಚಿತ್ತಜನಯ್ಯನಿತ್ತಪೆನೆಂದು ಪುನರಪಿ**
**ಚಿತ್ರಜಗತ್ತ ನಿರ್ಮಿಸಿದ** ॥೧॥

**ಅರ್ಥ:** ಮತ್ತೊಂದು ತಂಡದ—ಇನ್ನೊಂದು ಗುಂಪಿನ, ಜೀವರಾಶಿಗಳಿಗೆ—ಜೀವಸಮೂಹಗಳಿಗೆ, ಮುಕ್ತಿಯೇ ಮೊದಲಾದ—ಮುಕ್ತಿ ಮೊದಲಾದ (ಅವರವರ ಸ್ವರೂಪಯೋಗ್ಯತೆಗೆ ತಕ್ಕ), ಗತಿಯ—ಗತಿಗಳನ್ನು, ಇತ್ತಪೆನೆಂದು—ಹೊಂದಿಸುವೆನೆಂದು, ಚಿತ್ತಜನಯ್ಯನು—ಮನ್ಮಥಪಿತನು (ಶ್ರೀಹರಿಯು),

ಪುನರಪಿ — ಮತ್ತೆ (ಹೊಸ ಕಲ್ಪಾರಂಭದಲ್ಲಿ), ಚಿತ್ರಜಗತ್ತ — ವಿಚಿತ್ರವಾದ ಜಗತ್ತನ್ನು, ನಿರ್ಮಿಸಿದ — ಸೃಷ್ಟಿಸಿದನು.

**ವಿಶೇಷಾಂಶ:** ಶ್ರೀಹರಿಯು ಪ್ರತಿಬ್ರಹ್ಮಕಲ್ಪದಲ್ಲಿ, ಅಪಾರವಾದ ಅಸೃಜ್ಯ-ಜೀವರಾಶಿಯಿಂದ, ಒಂದೊಂದು ಭಾಗದ ಜೀವರಾಶಿಯನ್ನು ಸೃಷ್ಟಿಯಲ್ಲಿ ತಂದು (ಸಾಧನದೇಹಗಳನ್ನಿತ್ತು) ಅವರವರ ಗತಿದಾಯಕ ಸಾಧನೆಗಳನ್ನು ಮಾಡಿಸುತ್ತಾನೆ. ಈ ಪ್ರಮೇಯದ ವಿಷಯಕ್ಕೆ ಅಭಿಪ್ರಾಯಭೇದವಿರುವಂತೆ ತೋರುತ್ತದೆ. ಅಸೃಜ್ಯಜೀವರಾಶಿಗಳು ಅನಂತವಾಗಿವೆ. ಅದರಲ್ಲಿ ಒಂದು ಹಿಡಿ ತೆಗೆದು (ಒಂದು ಭಾಗವನ್ನು) ಸೃಷ್ಟಿಮಾಡುವುದನ್ನು ಮುಷ್ಟಿ ಸೃಷ್ಟಿಯೆಂದೂ, ಸಮಸ್ತಜೀವರಾಶಿಗಳನ್ನೂ ಸೃಷ್ಟಿಸುತ್ತಾನೆಂಬುದನ್ನು ಸಮಷ್ಟಿಸೃಷ್ಟಿಯೆಂದೂ ಕರೆಯಲಾಗುತ್ತದೆ. ಸ್ಥೂಲದೇಹಗಳನ್ನು ಪಡೆಯುವ ಜೀವರನುಳಿದು, ಇತರ ಸರ್ವಜೀವರೂ, ಸ್ಥೂಲದೇಹಗಳನ್ನು ಹೊಂದಿ ಸಾಧನೆಯಲ್ಲಿ ತೊಡಗದಿದ್ದರೂ, ಸಮಾನಯೋಗ್ಯತೆಯ ಸಾಧಕ ಜೀವರ ಕರ್ಮಗಳನ್ನು ಸಾಕ್ಷೀ-ಭೂತರಾಗಿ ನೋಡುತ್ತಾ, ತನ್ನಿಮಿತ್ತವಾದ ಲೇಪರಹಿತರಾಗಿರುವರೆಂದು ಹೇಳಲಾಗುತ್ತದೆ. ಇದನ್ನು ಕರ್ಮಾಭಿಮಾನಿದಶಾ (ದಶಾ — ಅವಸ್ಥೆ) ಎನ್ನುವರು. ಈ ಒಂದು ವಿಶೇಷದೃಷ್ಟಿಯಲ್ಲಿ ಸರ್ವಜೀವರಾಶಿಗಳೂ ಸೃಷ್ಟರಾಗುತ್ತಾರೆನ್ನಬಹುದು. ಪ್ರಳಯಕಾಲದಲ್ಲಿ ಕರ್ಮಾಭಿಮಾನಿದೆಶೆಯೂ ಇರುವುದಿಲ್ಲವಾದ್ದರಿಂದ ಸೃಷ್ಟಿ ಪ್ರಳಯಗಳು ಸರ್ವಜೀವರಾಶಿಗಳಿಗೂ ಉಂಟೆಂದು ತಿಳಿಯುವುದೂ ಯುಕ್ತವಾಗುತ್ತದೆ. ಸಾಧನದೇಹಗಳನ್ನು (ಸ್ಥೂಲದೇಹಗಳನ್ನು) ಹೊಂದುವವರು ಮಾತ್ರ ಸೃಷ್ಟರಾಗುವರೆಂದು ತಿಳಿದರೆ ಮುಷ್ಟಿಸೃಷ್ಟಿ-ಯೆಂಬುದೂ ಯುಕ್ತವಾಗುತ್ತದೆ. ಹೀಗೆ, ಭಿನ್ನಾಭಿಪ್ರಾಯದ ಪರಿಹಾರವೂ ಆಗುವುದೆಂದು ಕೆಲವರ ಅಭಿಪ್ರಾಯ. ಕರ್ಮಾಭಿಮಾನಿದೆಶೆಯೆಂಬುದು, '*ಲಿಂಗದೇಹಮಾತ್ರೇಣ ಸ್ವಾಭಿಮನ್ಯಮಾನ ಕರ್ಮಮಾತ್ರ ಶರೀರಾಶ್ಚ ಸ್ವಾಭಿಮನ್ಯಮಾನಕರ್ಮಮಾತ್ರಜ್ಞಾನಯುಕ್ತಾಃ ಸುಪ್ತಪ್ರಾಯಾ ವರ್ತಂತೇ*' —

(ಸ.ರ.ಮಾ.)

ಎಂದರೆ, 'ಲಿಂಗಶರೀರಮಾತ್ರವುಳ್ಳವರಾಗಿ, ತಮ್ಮಿಂದ ಅಭಿಮನ್ಯಮಾನ ಕರ್ಮವೇ ಶರೀರವಾಗುಳ್ಳವರಾಗಿ, ಆ ಕರ್ಮದ ಜ್ಞಾನಮಾತ್ರವುಳ್ಳವರಾದರೂ ಸುಪ್ತರಂತೆ (ನಿದ್ರೆಯಲ್ಲಿದ್ದಂತೆ) ಇರುತ್ತಾರೆ' ಎಂಬುದಾಗಿ ನಿರೂಪಿಸಲಾಗುತ್ತದೆ. ಇದೇ ವಿಷಯದಲ್ಲಿ:

*'ಸ್ವೇಚ್ಛಯೈವ ಅನಂತಕರ್ಮಣಾಮನಂತಜೀವರಾಶೀನಾಂ ತದೇಕೈಕ ಕರ್ಮಾಭಿಮಾನಿನಾಂ ಪುನರನಂತಕರ್ಮಾಣೀತ್ಯೇವಂ ಅನಂತಾನಂತಕರ್ಮ-ಜೀವಸಂತಾನಾನಾಂ ತತ್ತತ್ಕರ್ಮಪ್ರವರ್ತಯತಿ ನಿವರ್ತಯತಿ ಪುಣ್ಯೇನ ಜ್ಞಾನ-ಮುತ್ಪಾದ್ಯ ಪಾಪಂ ವಿನಾಶ್ಯ ತಸ್ಯ ಪುಣ್ಯಾಪಾಪರಹಿತಸ್ಯ ಜ್ಞಾನಿನಃ ಪ್ರಸನ್ನಃ ಸ್ವಯಂ ಫಲಮನಂತಂ ದದಾತೀತ್ಯತೋ ನಾರಾಯಣಸ್ಯ ಅತ್ಯಾಶ್ಚರ್ಯ-ರೂಪೋ ಮಹಿಮೇತ್ಯಾಶಯಃ'* — (ತತ್ವಪ್ರದೀಪ)

ಎಂಬಲ್ಲಿ ಜೀವರ ಕರ್ಮಾಭಿಮಾನಿದಶೆಯೆಂಬುದು ಪ್ರಸಕ್ತವಾಗಿದೆ. ಈ ವಾಕ್ಯದ ತಾತ್ಪರ್ಯಾರ್ಥ: ಅನಂತಕರ್ಮಗಳು— ಅನಂತಜೀವರಾಶಿಗಳು, ಅಲ್ಲಿ ಒಬ್ಬೊಬ್ಬ ಕರ್ಮಾಭಿಮಾನಿಜೀವನ ಅನಂತಕರ್ಮಗಳು; ಹೀಗೆ ಅನಂತಾನಂತ ಕರ್ಮ— ಜೀವಸಂತತಿಗಳ, ಪ್ರವರ್ತಕ— ನಿವರ್ತಕನಾದ ನಾರಾಯಣನು, ಸ್ವೇಚ್ಛೆಯಿಂದಲೇ ಪುಣ್ಯದಿಂದ ಜ್ಞಾನವನ್ನುಂಟುಮಾಡಿ, ಪಾಪವನ್ನು ನಾಶ-ಮಾಡಿ, ಪುಣ್ಯಾಪಾಪರಹಿತನಾದ ಜ್ಞಾನಿಜೀವನಿಗೆ ಪ್ರಸನ್ನನಾಗಿ ಅನಂತಫಲ-ರೂಪನಾದ ಮೋಕ್ಷಾನಂದವನ್ನು ಕರುಣಿಸುವನೆಂಬುದು ಆತನ (ನಾರಾಯಣನ) ಅತ್ಯಾಶ್ಚರ್ಯರೂಪಮಹಾಮಹಿಮೆಯು.

'ಕರ್ಮಾಭಿಮಾನಿದಶೆಯೆಂಬುದುಂಟೆಂದು ಒಪ್ಪಲೇಬೇಕು. ಇಲ್ಲವಾದರೆ ಸಮಾನಯೋಗ್ಯತೆಯುಳ್ಳ ಎಲ್ಲಸುಜೀವರಿಗೂ ಏಕಕಾಲದಲ್ಲಿ ಸಾಧನಪೂರ್ತಿ-ಯಾಗಿ ಎಲ್ಲರೂ ಮುಕ್ತರಾಗುವರೆಂದು ಹೇಳಬೇಕಾಗುತ್ತದೆ. ಮುಂದಿನ ಬ್ರಹ್ಮ ಕಲ್ಪಕ್ಕೆ ಆ ತರಗತಿಯ ಸಾಧಕಜೀವರಲ್ಲಿ ಎಲ್ಲ ತರಗತಿಯ (ಯೋಗ್ಯತೆಯ) ಜೀವರು ಇದ್ದೇ ಇರುತ್ತಾರೆ— ಇರಲೇಬೇಕು. ಕರ್ಮಾಭಿಮಾನಿತಾದಶೆಯಲ್ಲಿ-ರುವ ಋಜುಗಣದ ಜೀವರು, ಭಗವಂತನ ಜ್ಞಾನ ಮತ್ತು ಪೂರ್ಣಪರೋಕ್ಷ-ಜ್ಞಾನ(ಅನ್ಯವಸ್ತುವಿಷಯಕಜ್ಞಾನ)ವುಳ್ಳವರೇ ಆಗಿರುತ್ತಾರೆ. ಇವರ ಕೆಳಗಿನ ಉತ್ತಮದೇವತೆಗಳು (ತತ್ವಾಭಿಮಾನಿಗಳ ಪದಯೋಗ್ಯರು) ಸ್ವಾಭಿಮಾನ್ಯ-ಮಾನವಾದ, ಸಾಧಕಸಮಾನಜೀವನ ಕರ್ಮವನ್ನಲ್ಲದೆ ಇತರ ವಿಷಯಕ-ಜ್ಞಾನವುಳ್ಳವರೂ ಆಗಿರುತ್ತಾರೆ. ಇತರ ಸಮಸ್ತ ಕರ್ಮಾಭಿಮಾನಿತಾದಶೆ-ಯಲ್ಲಿರುವವರು, ಅಭಿಮನ್ಯಮಾನಕರ್ಮಸಾಕ್ಷಿಗಳು ಮಾತ್ರ ಆಗಿರುತ್ತಾ ಸುಪ್ತ-ಪ್ರಾಯರಾಗಿರುತ್ತಾರೆ.' ಹೀಗಿದೆ-ಸತ್ತತ್ವರತ್ನಮಾಲಾಕಾರರ ವಾಕ್ಯಗಳ ತಾತ್ಪರ್ಯ· ಕರ್ಮಾಭಿಮಾನಿದಶೆಯಲ್ಲಿರುವ ಸಮಾನ ಯೋಗ್ಯತೆಯುಳ್ಳವರು. ತಮಗೆ ಶ್ರೀಹರೀಚ್ಛೆಯಿಂದ ಸಾಧನದೇಹಗಳು ದೊರಕುತ್ತಹೋದಂತೆ, ಕೆಲವರು

ಮುಂದಿನ ಕಲ್ಪದಲ್ಲಿ, ಮತ್ತೆ ಕೆಲವರು ಬಹು ಕಲ್ಪಗಳ ನಂತರ, ಕೆಲವರು ಅನಂತ ಬ್ರಹ್ಮಕಲ್ಪಗಳ ನಂತರ ಮುಕ್ತರಾಗುವರೆಂದೂ, ಈ ವಿವೇಚನೆಯಿಂದ ಪ್ರಾಪ್ತವಾಗುತ್ತದೆ. ಈ ನಿಮಿತ್ತ ಪರಮಾತ್ಮನಲ್ಲಿ ಶಂಕಿಸಬಹುದಾದ ವೈಷಮ್ಯ-ದೋಷ ಪರಿಹಾರಾದಿ ವಿಶೇಷ ನಿರೂಪಣೆಗಳು, ಬಹುಗೋಪ್ಯಪ್ರಮೇಯ-ಗಳನ್ನೊಳಗೊಂಡು, ಪ್ರಾಚೀನಜ್ಞಾನಿಗಳ (ಟೀಕಾಟಿಪ್ಪಣಿಕಾರರ) ವಿಮರ್ಶಾತ್ಮಕ ವ್ಯಾಖ್ಯಾನಭಾಗಗಳಲ್ಲಿ ಪ್ರಸಕ್ತವಾಗುತ್ತವೆ. ಗುರುಗಳಿಂದ ಆಳವಾದ ಶಾಸ್ತ್ರಾಭ್ಯಾಸದಿಂದ ಮಾತ್ರ ಗಮ್ಯವಾಗಿದೆ.

**ಇದು ಲೀಲೆ ತನಗೆ ಲಕ್ಷ್ಮಿಗೆ ಮಹದೈಶ್ವರ್ಯ**
**ಪದ ಪಡೆವುದು ಜೀವರಿಗೆ**
**ಸದಾ ಸಮ್ಮಿಶ್ರಫಲವೀವುದು ಅದರಿಂದ**
**ಅದುಭುತಜಗವ ಮಾಡಿದನು ॥೨॥**

**ಅರ್ಥ:** ಇದು — ಈ ಜಗತ್ಸೃಷ್ಟಿವ್ಯಾಪಾರವು, ತನಗೆ — ಸ್ವಯಂ ಶ್ರೀಹರಿಗೆ, ಲೀಲೆ — ಕೇವಲ ಕ್ರೀಡೆಯು, ಲಕ್ಷ್ಮಿಗೆ — ಶ್ರೀಲಕ್ಷ್ಮೀದೇವಿಗೆ, ಮಹದೈಶ್ವರ್ಯ — (ತನ್ನ ಪತಿಯ ಆಜ್ಞೆಯಂತೆ ಸೃಷ್ಟಿಕಾರ್ಯದಲ್ಲಿ ತನ್ನ ಭಾಗವನ್ನು ವಹಿಸಿ ಸಂತೋಷಪಡಿಸುವುದೆಂಬ) ಮಹಾಸಂಪತ್ತು (ಅಥವಾ ತನ್ನ ಪ್ರಕೃತಿ ಸ್ವಾಮಿತ್ವದ ಅಭಿವ್ಯಕ್ತಿರೂಪದ ಅಚಿಂತ್ಯಶಕ್ತಿಯ ಪ್ರಕಾಶ); ಜೀವರಿಗೆ — ಜೀವರುಗಳಿಗಾ-ದರೋ, ಪದ ಪಡೆವುದು — ಸ್ವಯೋಗ್ಯಗತಿಗಳನ್ನು ಹೊಂದುವುದು (ಈ ಸೃಷ್ಟಿಯಿಂದಾಗುವ ಪ್ರಯೋಜನವು); ಸದಾ — ನಿರಂತರ, ಸಮ್ಮಿಶ್ರಫಲ-ವೀವುದು — ಸುಖ, ದುಃಖಮಿಶ್ರ (ಸುಖದುಃಖಗಳೆರಡರ) ಫಲಗಳನ್ನು ಕೊಡುವುದು (ಶ್ರೀಹರಿಯ ಸೃಷ್ಟಿವ್ಯಾಪಾರದ ಉದ್ದೇಶ); ಅದರಿಂದ — ಈ ಕಾರಣದಿಂದ, ಅದುಭುತ — ಆಶ್ಚರ್ಯಕರವಾದ, ಜಗವ — ಜಗತ್ತನ್ನು, ಮಾಡಿದನು — ಸೃಷ್ಟಿಸಿದನು.

**ವಿಶೇಷಾಂಶ:** (೧) ಸೃಷ್ಟಿಯಿಂದ, ಯಾರಿಗೆ, ಯಾವ ರೂಪದ ಪ್ರಯೋಜನವುಂಟೆಂಬುದನ್ನು ಹೇಳುತ್ತಾರೆ. ಶ್ರೀಹರಿಗೆ ಮಾತ್ರ ಯಾವ ಪ್ರಯೋಜನವೂ ಇಲ್ಲದ ಕೇವಲ ಲೀಲೆಯು.

(೨) ಶ್ರೀಹರಿಯ ಸೃಷ್ಟಿಯು ನಾಲ್ಕು ಪ್ರಕಾರವಾದುದು. (i) ಶುದ್ಧ ಸೃಷ್ಟಿ: ಸೃಷ್ಟ್ಯಾದಿಗಳನ್ನು ನಡೆಸಲು ಸ್ವೇಚ್ಛೆಯಿಂದ, (ಅನಂತರೂಪಗಳನ್ನೊಳಗೊಂಡಿ-ರುವ) ತನ್ನ ಮೂಲರೂಪದಿಂದ, ಶ್ರೀಹರಿಯು ವಾಸುದೇವಾದಿ ರೂಪಗಳನ್ನು ಪ್ರಕಟಿಸುವುದು.

(ii) ಪರಾಧೀನವಿಶೇಷಾವಾಪ್ತಿ ರೂಪದ ಸೃಷ್ಟಿ: *'ಲಕ್ಷ್ಮ್ಯಾದೀನಾಂ ಸೃಷ್ಟ್ಯಾದೌ ಭಗವದಾಜ್ಞಯಾ ಪ್ರಕೃತಿಸ್ವಾಮಿತ್ವಾದಿ ವಿಶೇಷಪ್ರಾಪ್ತಿಃ'*, ಭಾವ ಪ್ರಕಾಶಿಕಾ)– ಲಕ್ಷ್ಮೀ ಮೊದಲಾದ ದೇವತೆಗಳಿಗೆ ಸೃಷ್ಟಿ ಮೊದಲಾದ ಕಾರ್ಯಗಳಲ್ಲಿ, ಭಗವಂತನ ಆಜ್ಞೆಯಿಂದ ಪ್ರಕೃತಿಸ್ವಾಮಿತ್ವ ಮೊದಲಾದ ವಿಶೇಷಾವಸ್ಥೆಗಳನ್ನು ಹೊಂದುವುದು. ಭೃತ್ಯನು ಎಂದೂ ಸ್ವಾಮಿಯ ಅಧೀನನೇ. ಆದರೂ, ಸ್ವಾಮಿಯ ವಿಶಿಷ್ಟವಾದ ಒಂದು ಆಜ್ಞೆಯನ್ನು ಪಾಲಿಸುವ ಕಾರ್ಯದಲ್ಲಿ ತೊಡಗಿದಾಗ, ಆ ಪರಾಧೀನತ್ವದ ವಿಶೇಷ ಪ್ರಾಕಟ್ಯವಾಗುವಂತೆ, ಲಕ್ಷ್ಮ್ಯಾದಿ ದೇವತೆಗಳು ಜಗತ್ಸಂಬಂಧವಾದ ವಿವಿಧ ವ್ಯಾಪಾರಗಳಲ್ಲಿ ತೊಡಗಿದಾಗ, ಪರಾಧೀನತ್ವದ ವಿಶೇಷಪ್ರಾಪ್ತಿಯಾಗುವುದು. ಶ್ರೀಲಕ್ಷ್ಮೀದೇವಿಗಾದರೋ ಕೇವಲ ಪರಾಧೀನವಿಶೇಷಾವಾಪ್ತಿ ಮಾತ್ರ– ಇತರ ದೇವತೆಗಳಂತೆ ಪ್ರಾಕೃತ-ದೇಹಸಂಬಂಧವಿಲ್ಲ– ಅವರಿಗೆ ಅದೂ ಉಂಟು.

(iii) **ಮಿಶ್ರಸೃಷ್ಟಿ:** ಸ್ವರೂಪತಃ ನಿತ್ಯರಾದ ಜೀವಚೇತನರಿಗೆ, ಲಿಂಗದೇಹದ ಕಲೆಗಳಿಗೆ ಉಪಚಯ– ಮತ್ತು ಬಾಹ್ಯದೇಹಗಳಿಂದ ಯುಕ್ತರನ್ನಾಗಿ ಮಾಡು-ವುದು.

(iv) **ಕೇವಲಸೃಷ್ಟಿ:** ಜಡಜಗತ್ತಿನ ನಾನಾವಸ್ತುಗಳ ಸೃಷ್ಟಿ– ಪ್ರಳಯಕಾಲ-ದಲ್ಲಿ ನಾಶಹೊಂದಿದ ಜಗದ್ವಸ್ತುಗಳಿಗೆ ಸ್ವರೂಪತಃ ಸೃಷ್ಟಿ.

**ಲೋಹಿತ ಕೃಷ್ಣ ಶುಕ್ಲಗಳೆಂಬ ಪ್ರಕೃತಿಯ**
**ದೇಹದ ನಿಜಶಕ್ತಿಯನಿತ್ತು**
**ಶ್ರೀಹರಿಯದರಿಂದ ವರ್ಣತ್ರಯದ ರೇಣು-**
**ವ್ಯೂಹಕ್ಕೆ ಬೇರೆ ಬೇರಿಟ್ಟ** ॥೩॥

**ಅರ್ಥ:** ಶ್ರೀಹರಿಯು– ಭಗವಂತನು, ಲೋಹಿತ ಕೃಷ್ಣ ಶುಕ್ಲಗಳೆಂಬ– ರಕ್ತ, ನೀಲ, ಶುಭ್ರಗಳೆಂಬ, ಪ್ರಕೃತಿಯ-ಮೂಲಜಡಪ್ರಕೃತಿಯ, ವರ್ಣ-ತ್ರಯದ– ಮೂರು ವರ್ಣಗಳುಳ್ಳ, ರೇಣುವ್ಯೂಹಕ್ಕೆ– (ರಜ, ತಮ, ಸತ್ವ-ಗಳೆಂಬ) ಅಂಶಗಳ ರಾಶಿಗೆ, ದೇಹದ ನಿಜಶಕ್ತಿಯನಿತ್ತು– ತನ್ನ ಸ್ವರೂಪಶಕ್ತಿ-ಯನ್ನು ಕೊಟ್ಟು (ಅವುಗಳಲ್ಲಿ ಪ್ರವೇಶಿಸಿ), ಅದರಿಂದ– ಮೂಲಪ್ರಕೃತಿಯಿಂದ, ಬೇರೆ ಬೇರಿಟ್ಟ– ಪ್ರತ್ಯೇಕಿಸಿ (ಸೃಷ್ಟ್ಯಾದಿಗಳಲ್ಲಿ ಉಪಯೋಗಿಸುವ ಭಾಗವನ್ನು) ತೆಗೆದಿಟ್ಟನು.

**ವಿಶೇಷಾಂಶ:** (೧) ಮೂಲಪ್ರಕೃತಿಯು ಅನಂತವಾದುದು. ಸೃಷ್ಟ್ಯಾದಿಗಳಲ್ಲಿ ಅದರ ಏಕದೇಶಮಾತ್ರ (ಅಲ್ಪಭಾಗ) ಉಪಯೋಗಿಸಲ್ಪಡುತ್ತದೆ. ಸೃಷ್ಟಿಯಲ್ಲಿ ಉಪಯೋಗಿಸಲ್ಪಡದ ಸತ್ವ-ತಮೋಗುಣಗಳು, ಮುಕ್ತ ಲೋಕಗಳಲ್ಲಿ (ಕ್ರಮವಾಗಿ ವೈಕುಂಠಾದಿ ತ್ರಿಧಾಮಗಳು ಮತ್ತು ತಮಸ್ಸುಗಳಲ್ಲಿ) ಉಪಯೋಗಿಸಲ್ಪಡುತ್ತದೆ. (ವೈಕುಂಠದಲ್ಲಿ ಶುದ್ಧಸತ್ವದ ಉಪಯೋಗವನ್ನು ೧ನೇ ಮೋಕ್ಷಸಂಧಿಯ ವಿವರಣೆಯಲ್ಲಿ ನೋಡಬಹುದು). ಶ್ರೀಹರಿಯು ಪ್ರಕೃತಿಯನ್ನು ಕ್ಷೋಭೆಗೊಳಿಸಿ ಗುಣಗಳನ್ನು ಬೇರ್ಪಡಿಸಿ, ಆ ಗುಣಗಳಲ್ಲಿ ಪ್ರವೇಶಿಸಿ ಮುಂದಿನ ಮಹದಾದಿ ತತ್ವಗಳನ್ನು ನಿರ್ಮಿಸುತ್ತಾನೆ.

(೨) ಸತ್ವಾದಿಗುಣಗಳ ವರ್ಣಗಳು (ಬಣ್ಣಗಳು), *'ರಜೋರಾಗಾತ್ಮಕಂ'*, *'ತತ್ರ ಸತ್ವಂ ನಿರ್ಮಲತ್ವಾತ್'* ಇತ್ಯಾದಿ ವಾಕ್ಯಗಳಲ್ಲಿ ಸೂಚಿತವಾಗಿವೆ.

**ಸತ್ವವೆಂಬ ಶುಕ್ಲಾಣುಗಳ ರಾಶಿ**
**ರಕ್ತಾಣುಗಳೆ ರಜೋಗುಣ**
**ಮತ್ತೆ ನೀಲಾಣುಗಳು**
**ಮೊತ್ತವೆತ್ತವೆ ತಮೋಗುಣ**
**ಪ್ರತ್ಯೇಕ ಶಕ್ತಿಗಳಿದಕೆ** ॥೪॥

**ಅರ್ಥ:** ಸತ್ವವೆಂಬ—'ಸತ್ವ'ವೆಂದು ಕರೆಯಲ್ಪಡುವುದು, ಶುಕ್ಲಾಣುಗಳ ರಾಶಿ—ಬಿಳಿಬಣ್ಣದ ಸೂಕ್ಷ್ಮಾಂಶಗಳ ರಾಶಿಯು; ರಕ್ತಾಣುಗಳೆ—ಕೆಂಪುಬಣ್ಣದ ಅಂಶಗಳೇ, ರಜೋಗುಣ—ರಜೋಗುಣವೆಂಬುದು; ಮತ್ತೆ—ಇನ್ನು, ನೀಲಾಣುಗಳು—ಕೃಷ್ಣವರ್ಣದ ಅಂಶಗಳು, ಮೊತ್ತವೆತ್ತವೆ—ಕೂಡಿದ ರಾಶಿಯೇ, ತಮೋಗುಣ—ತಮೋಗುಣವೆನ್ನುವುದು, ಇದಕೆ—ಈ ಒಂದೊಂದು ರಾಶಿಗೂ, ಪ್ರತ್ಯೇಕ ಶಕ್ತಿಗಳು—ಬೇರೆಬೇರೆ ಕಾರ್ಯ-ಸಾಮರ್ಥ್ಯವು (ಮತ್ತು 'ಶಕ್ತಿ' ಶಬ್ದ ಮುಖ್ಯವಾಚ್ಯಗಳಾದ ಶ್ರೀ, ಭೂ, ದುರ್ಗಾನಾಮಕ ಶ್ರೀಲಕ್ಷ್ಮೀರೂಪಗಳೇ ನಿಯಾಮಕವಾಗುಳ್ಳವು).

**ವಿಶೇಷಾಂಶ:** ತ್ರಿಗುಣಗಳ ಉತ್ಪತ್ತಿ ಮತ್ತು ಅವುಗಳ ಕಾರ್ಯಗಳನ್ನು, 'ವಿಷ್ಣುರಹಸ್ಯ'ದಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ. ಅವುಗಳ ಉತ್ಪತ್ತಿ-ವರ್ಣನೆಯು ಹೀಗಿದೆ:

*ಪ್ರಕೃತಿ ಬೋಧಯಾಮಾಸ ದೇವಾನಾಂ ದೇಹಸೃಷ್ಟಯೇ।*
*ಸತ್ವರಾಶೇಸ್ತತಃ ಸತ್ವಂ ಶ್ರೀಃಸಮಾದಾಯ ತಸ್ಥುಷೀ॥*

*ತಮೋರಾಶೇಸ್ತಥಾದಾಯ ತಮೋದುರ್ಗಾ ವ್ಯವಸ್ಥಿತಾ।*
*ಅತಿಶ್ವೇತಂ ಶುದ್ಧಸತ್ವಂ ಅತಿಶ್ಯಾಮಂ ತಮಸ್ತಥಾ॥*

*ತತೋ ಮಮೇಚ್ಛಯೈವೈಷಾ ಲಕ್ಷ್ಮೀರ್ಭೂರೂಪಮಾಸ್ಥಿತಾ।*
*ತತೋ ಭೂಸ್ತಮಸೋ ರಾಶೇಃ ಕಿಂಚಿಚ್ಚಕ್ರೇ ತಮಃ ಪೃಥಕ್॥*

*ಸತ್ವರಾಶೇಸ್ತಥಾ ಸತ್ವಂ ಪೃಥಕ್ಚೈವ ಚಕಾರ ಹ।*
*ವಿಲೋಡಯಾಮಾಸ ತಮಃ ಸತ್ವೇ ಸತ್ವಂ ತಮಸ್ಯಪಿ॥*

*ತತಸ್ತಸ್ಮಾತ್ಸಮಾದಾಯ ಮಿಶ್ರೀಭೂತಾದ್ಗುಣದ್ವಯಾತ್।*
*ಭಾಗದ್ವಯಯುತಂ ಚಕ್ರೇ ಶಬಲಂ ತದ್ರಜೋಽಭವತ್॥*

*ಏವಂ ರಾಶಿತ್ರಯೇ ಜಾತೇ ಶ್ರೀಭೂದುರ್ಗಾಭಿರಕ್ಷಿತೇ।*

**ತಾತ್ಪರ್ಯ:** 'ದೇವತೆಗಳ ದೇಹಸೃಷ್ಟಿಯನ್ನು ಆರಂಭಿಸಲಿಚ್ಛಿಸಿ ಶ್ರೀಹರಿಯು ಲಕ್ಷ್ಮೀದೇವಿಯನ್ನು ಕಾರ್ಯೋನ್ಮುಖಳನ್ನಾಗಿ ಮಾಡಿದನು. ಆಕೆಯು ತನ್ನಿಂದ ಅಭಿಮನ್ಯಮಾನವಾದ ಮೂಲಜಡಪ್ರಕೃತಿಯಲ್ಲಿ ಸೂಕ್ಷ್ಮತಮರೂಪದಿಂದ ಅಡಗಿರುವ ಅಂಶಗಳನ್ನು (ಜಡಪ್ರಕೃತಿಯ ಅತ್ಯಲ್ಪವಿಕಾರದಿಂದ ಪ್ರತ್ಯೇಕಿಸಿ), ತನ್ನ ಶ್ರೀರೂಪದಿಂದ ಸ್ವಲ್ಪ ಸತ್ವರಾಶಿಯನ್ನೂ ದುರ್ಗಾರೂಪದಿಂದ ಸ್ವಲ್ಪ ತಮೋರಾಶಿಯನ್ನೂ ತೆಗೆದುಕೊಂಡು, ಆಜ್ಞಾಧಾರಕಳಾಗಿ ಶ್ರೀಹರಿಯ ಎದುರಿಗೆ ನಿಂತಳು. ಸತ್ವಗುಣವು ಶುದ್ಧ ಬಿಳಿ ಬಣ್ಣದ್ದು; ತಮೋಗುಣವು ಕಪ್ಪುವರ್ಣದ್ದು. ನಂತರ ಶ್ರೀಹರೀಚ್ಛೆಯಂತೆ ಲಕ್ಷ್ಮೀದೇವಿಯು ಭೂರೂಪದಿಂದ ವ್ಯಕ್ತಳಾಗಿ, ಸತ್ವತಮೋಗುಣಗಳ ಒಂದೊಂದು ಭಾಗವನ್ನು ತೆಗೆದುಕೊಂಡಳು. ತಮೋಗುಣವನ್ನು ಸತ್ವಗುಣದಲ್ಲಿಯೂ, ಸತ್ವಗುಣವನ್ನು ತಮೋಗುಣದಲ್ಲಿಯೂ ಚೆನ್ನಾಗಿ ಬೆರೆಸಿದಳು. ಅದರಿಂದ ಮಿಶ್ರವರ್ಣದ (ಸ್ವಲ್ಪ ಕೆಂಪಾದ) ರಜೋಗುಣವಾಯಿತು. ಮೂಲ ಪ್ರಕೃತಿಯಿಂದ ಹೀಗೆ ತ್ರಿಗುಣಗಳಾದವು. (ತ್ರಿಗುಣಗಳ ಈ ಸೃಷ್ಟಿಯು ಪ್ರಕೃತಿಯ ಅತಿಸೂಕ್ಷ್ಮವಿಕಾರದಿಂದ ಆದುದರಿಂದ, ಪ್ರಕೃತಿಯೇ ತ್ರಿಗುಣಾತ್ಮಕವೆಂದೂ ಹೇಳುವುದುಂಟು). ಶ್ರೀ, ಭೂ, ದುರ್ಗಾರೂಪಗಳಿಂದ ನಿಯಮ್ಯಗಳಾದ ಈ ಗುಣಗಳಿಂದ, ಮಹದಾದಿ ತತ್ವಗಳ ಸೃಷ್ಟಿಯಾಗುವುದು.' ಈ ಗುಣಗಳಿಂದಾಗುವ ನಾನಾಕಾರ್ಯಗಳನ್ನು ಮುಂದಿನ ನುಡಿಗಳಲ್ಲಿ ಹೇಳುತ್ತಾರೆ.

**ಈ ಪರಮಾಣುಗಳ ರೂಪೆಂಬ ತಮೋಗುಣ**
**ವ್ಯಾಪಾರ ಬಹಳವಾಗಿರಲು**

**ಆ ಪೂರಣಗಳೇವೆ ಗುಣವೆಂದು ಕರೆದಲ್ಲಿ**
**ತಾಪಸರಿದಕೆ ಮೆಚ್ಚುವರು ॥೫॥**

**ಅರ್ಥ:** ಪರಮಾಣುಗಳ ರೂಪೆಂಬ—ಅತಿಸೂಕ್ಷ್ಮಾಂಶಗಳ ರೂಪದಿಂದಿರುವ, ಈ ತಮೋಗುಣವ್ಯಾಪಾರ—ಈ ತಮೋಗುಣದ ಕಾರ್ಯಗಳು, ಬಹಳವಾಗಿರಲು—ಅನೇಕವಾಗಿರುವುದರಿಂದ, ಆ ಪೂರಣಗಳೇವೆ—ಆ ಕಾರ್ಯಗಳನ್ನು ನಿರ್ವಹಿಸುವ ಅವುಗಳ ಸಮೂಹವನ್ನೇ (ಅವುಗಳ ಸಹಜಶಕ್ತಿಯನ್ನೇ), ಗುಣವೆಂದು—'ಗುಣ'ವೆಂದು, ಕರೆದಲ್ಲಿ—ಹೇಳಿದರೆ, ಇದಕೆ—ಈ ಮಾತಿಗೆ (ಈ ಅರ್ಥವನ್ನು), ತಾಪಸರು—ಜ್ಞಾನಿಗಳು, ಮೆಚ್ಚುವರು—ಸರಿಯೆಂದೊಪ್ಪುವರು.

**ವಿಶೇಷಾಂಶ:** ಇದರಂತೆ, ಸತ್ತ್ವ ಮತ್ತು ರಜಗಳ ಸೂಕ್ಷ್ಮಾಂಶ ಸಮೂಹಗಳಿಂದ ಆಗುವ ಕಾರ್ಯಸೂಚಕವಾದ, ಅವುಗಳ ಸಹಜಧರ್ಮಗಳೇ ಆಯಾ 'ಗುಣ'ಗಳೆಂದು ಕರೆಯಲ್ಪಡುತ್ತವೆಂದೂ ತಿಳಿಯಬೇಕು. ಮತ್ತು ಸತ್ತ್ವಾದಿ ಅವುಗಳ ನಾಮಗಳೂ ಈ ಕಾರಣದಿಂದಲೇ ಅನ್ವರ್ಥನಾಮಗಳೆಂದೂ ತಿಳಿಯಬೇಕು.

**ಯಾವದ್ದ್ರವ್ಯಭಾವಿಗುಣಕೆ ಗುಣಿಯೊಳಿರೆ**
**ಭಾವವೆಂಬ ರಹಸ್ಯವನ್ನು**
**ಕೋವಿದರಿಗೆ ತೋರುವುದಕೆ ಈ ಗುಣಗಳಲ್ಲಿ**
**ಭಾವಜ್ಞರ್ ಗುಣಗಳೆಂಬುವರು ॥೬॥**

**ಅರ್ಥ:** ಯಾವದ್ದ್ರವ್ಯಭಾವಿಗುಣಕೆ—ವಸ್ತುವಿರುವವರೆಗೂ ಇರುವ ಧರ್ಮಕ್ಕೆ, ಗುಣಿಯೊಳಿರೆ—ಧರ್ಮಿಯಲ್ಲಿದ್ದರೆ, ಭಾವವೆಂಬ—ಭಾವದ್ರವ್ಯ (ಭಾವರೂಪಪದಾರ್ಥ)ವೆಂಬ, ರಹಸ್ಯವನ್ನು—ಗೂಢಾರ್ಥವನ್ನು (ಶಾಸ್ತ್ರೀಯ—ಪಾರಿಭಾಷಿಕಪ್ರಯೋಗವನ್ನು), ಕೋವಿದರಿಗೆ—ವಿವೇಕಿಗಳಿಗೆ, ತೋರುವುದಕೆ—ತಿಳಿಸಲು, ಭಾವಜ್ಞರ್—(ತರ್ಕ) ಶಾಸ್ತ್ರಜ್ಞರು, ಗುಣಗಳೆಂಬುವರು—(ಸತ್ತ್ವಾದಿಗಳನ್ನೂ) 'ಗುಣ'ಗಳೆಂದು ಕರೆಯುವರು.

**ವಿಶೇಷಾಂಶ:** ಪದಾರ್ಥಗಳ ಧರ್ಮಗಳು 'ಯಾವದ್ದ್ರವ್ಯಭಾವೀ' ಮತ್ತು 'ಅಯಾವದ್ದ್ರವ್ಯಭಾವಿ'ಗಳೆಂದು ಸಾಮಾನ್ಯವಾಗಿ ಎರಡು ವಿಧ. ಉದಾಹರಣೆ: ಘಟ (ಮಡಕೆ-ಗಡಿಗೆ) ಇರುವವರೆಗೂ ಅದರ ರೂಪ, ವರ್ಣ, ಜಲವನ್ನು ಧರಿಸುವ ಶಕ್ತಿ ಮೊದಲಾದ ಅದರ ಧರ್ಮಗಳು ಇರುತ್ತವೆ—ಘಟನಾಶ-

ದೊಂದಿಗೆ ನಷ್ಟವಾಗುತ್ತವೆ, ಮಾವಿನಕಾಯಿಗಿರುವ 'ಹಸಿರುಬಣ್ಣ—ಹುಳಿ-ರುಚಿ' ಮೊದಲಾದ ಕೆಲವು ಧರ್ಮಗಳು, ಅದಿರುವವರೆಗೂ ಇರುವುದಿಲ್ಲ —ಮಧ್ಯಕಾಲದಲ್ಲಿ, ಎಂದರೆ ವಸ್ತುನಾಶಕ್ಕೆ ಪೂರ್ವದಲ್ಲಿಯೇ ನಷ್ಟವಾಗುತ್ತವೆ. ಘಟದ, ಮೇಲೆ ಹೇಳಿದ ಧರ್ಮಗಳು 'ಯಾವದ್ದ್ರವ್ಯಭಾವಿ'ಗಳೆಂದೂ, ಮಾವಿನಕಾಯಿಯ ಧರ್ಮಗಳು 'ಅಯಾವದ್ದ್ರವ್ಯಭಾವಿ'ಗಳೆಂದೂ ಕರೆಯ-ಲ್ಪಡುತ್ತವೆ. ಯಾವದ್ದ್ರವ್ಯಭಾವಿಧರ್ಮಗಳಿಗೂ ವಸ್ತುವಿಗೂ ಅತ್ಯಂತ ಅಭೇದವೇ. ಅಯಾವದ್ದ್ರವ್ಯಭಾವಿಧರ್ಮಗಳಿಗೂ, ವಸ್ತುವಿಗೂ 'ಭೇದಾಭೇದ'ವೆಂದೂ ಹೇಳಲಾಗುತ್ತದೆ. ಹಸಿರುಬಣ್ಣ ಇರುವವರೆಗೂ ಅದಕ್ಕೂ ಮಾವಿನಕಾಯಿಗೂ ಅಭೇದವೇ—ಆ ಬಣ್ಣಹೋದಮೇಲೆ ಭೇದವೇ. ಯಾವದ್ದ್ರವ್ಯಭಾವಿಧರ್ಮ-ಗಳಿಗೂ (ಗುಣಗಳಿಗೂ, ಆ ಗುಣಗಳನ್ನುಳ್ಳ ವಸ್ತುಗಳಿಗೂ [ಗುಣಿಗೂ] ಅಭೇದವಿರುವುದರಿಂದ, ಗುಣಿಯನ್ನೇ ಗುಣವೆಂದೂ ಕರೆಯಬಹುದು. ಭಾವವಸ್ತುಗಳ) ('ಅಸ್ತಿ'—ಇದೆ ಎಂಬುದಾಗಿ ಮೊದಲಿಗೇ ಜ್ಞಾನವಿಷಯ-ವಾಗುವ ಪದಾರ್ಥಗಳ) ಸಂಬಂಧವಾದ ನಿಯಮವು ಹೀಗಿದ್ದರೆ, ಅಭಾವ-ವಸ್ತುಗಳ ವಿಷಯವೇ ಬೇರೆ. ಭಾವಾಭಾವವಸ್ತುಸ್ವರೂಪಗಳು, ಅಲ್ಲಿರುವ ನಾನಾ ಪ್ರಕಾರಗಳು, ಇತ್ಯಾದಿ ವಿವರಗಳನ್ನು ಶಾಸ್ತ್ರಾಭ್ಯಾಸದಿಂದಲೇ ಸ್ಪಷ್ಟವಾಗಿ ತಿಳಿದು ಗ್ರಹಿಸಬೇಕು.

*ಗುಣಕ್ರಿಯಾಜಾತಿಪೂರ್ವಾಃ ಧರ್ಮಾಃ ಸರ್ವೇಽಪಿ ವಸ್ತುನಃ।*
*ರೂಪಮೇವ ದ್ವಿಧಾ ತಚ್ಚ ಯಾವದ್ವಸ್ತು ಚ ಖಂಡಿತಮ್॥'*—(ಸ.ರ.ಮಾ.)

ಎಂಬುದರ ವಿವರಣೆಯಲ್ಲಿ

*'ಯಾವದ್ದ್ರವ್ಯಭಾವಿವಿಶಿಷ್ಟಶುದ್ಧಯೋರತ್ಯಂತಾಭೇದಃ।*
*ಅಯಾವದ್ದ್ರವ್ಯಭಾವಿನೋಸ್ತು ಭೇದಾಭೇದೌ॥'*

ಎಂದು ಹೇಳಲಾಗಿದೆ. ವಸ್ತುವನ್ನು ಶುದ್ಧವೆಂದೂ, ಧರ್ಮಗಳಿಂದ ಕೂಡಿದ ವಸ್ತುವನ್ನು ವಿಶಿಷ್ಟವೆಂದೂ ಕರೆಯಲಾಗುತ್ತದೆ—ವಿಶೇಷ(ಗುಣ)ದಿಂದ ಸಹಿತ-ವಾದುದು 'ವಿಶಿಷ್ಟ'. ಯಾವ ಧರ್ಮವೂ ಇಲ್ಲದ (ನಿರ್ವಿಶೇಷ) ಶುದ್ಧ-ವೆಂಬುದು ಇಲ್ಲವೇ ಇಲ್ಲ—ಶೂನ್ಯವೇ ಅದು. ಶುದ್ಧ (ವಸ್ತು) ವಿಶಿಷ್ಟಗಳಿಗೆ ಅತ್ಯಂತ ಅಭೇದವೆಂದೇ ತಿಳಿಯಬೇಕು—ಗುಣಗಳು ಯಾವದ್ದ್ರವ್ಯಭಾವಿ-ಗಳಾದಾಗ—ವಸ್ತು ಮತ್ತು ಅದರ ಅಸ್ತಿತ್ವ (ಇರುವಿಕೆ) ಧರ್ಮದಂತೆ.

**ಇಪ್ಪತ್ತು ನಾಲ್ಕು ಈ ತತ್ವಸೂಕ್ಷ್ಮಗಳಿಂದ**
**ತಪ್ಪದ ಸ್ಥೌಲ್ಯವಪ್ಪಂತೆ**

**ಒಪ್ಪುವ ಗುಣತ್ರಯದ ಗುಣಗಳ ಕೂಡಿಸಿ**
**ಸರ್ಪಶಯನ ಸೃಷ್ಟಿಸುವನು** ॥೭॥

**ಅರ್ಥ:** ಇಪ್ಪತ್ತುನಾಲ್ಕು ಈ ತತ್ವಸೂಕ್ಷ್ಮಗಳಿಂದ—(ತ್ರಿಗುಣಗಳಿಂದ ಸೃಷ್ಟ-ವಾದ) ೨೪ ಸೂಕ್ಷ್ಮ (ಮಹತ್—ಅಹಂಕಾರಾದಿ) ತತ್ವಗಳಿಂದ, ತಪ್ಪದ ಸ್ಥೌಲ್ಯವಪ್ಪಂತೆ—ಕೆಡದ ಸ್ಥೂಲಭಾವವು ಸಿದ್ಧಿಸುವಂತೆ, ಒಪ್ಪುವ—ಯೋಗ್ಯ-ವಾದಷ್ಟು (ತಕ್ಕಷ್ಟು), ಗುಣತ್ರಯದ—ಸತ್ವಾದಿ ಮೂರುಗುಣಗಳ, ಗುಣಗಳ—ಗುಣಾಂಶಗಳನ್ನು, ಕೂಡಿಸಿ—(ಸೂಕ್ಷ್ಮತತ್ವಗಳ ಉಪಚಯಕ್ಕಾಗಿ) ಅವು-ಗಳೊಂದಿಗೆ ಸೇರಿಸಿ, ಸರ್ಪಶಯನ—(ಶೇಷಶಾಯಿ) ಶ್ರೀಹರಿಯು, ಸೃಷ್ಟಿಸು-ವನು—ಜಗತ್ತನ್ನು ಸೃಷ್ಟಿಮಾಡುತ್ತಾನೆ.

**ವಿಶೇಷಾಂಶ:** (೨೪ ತತ್ವಗಳು ಯಾವುವೆಂದರೆ—೨ನೇ ಸಂಧಿಯ ೨ನೇ ಪದದ ೨ನೇ ನುಡಿ ನೋಡಿ). ಇವುಗಳಿಂದ ನಿರ್ಮಿತಗಳಾದ ದೇಹಗಳಲ್ಲಿ-ರುವ ಜೀವ-ಪರಮಾತ್ಮನನ್ನೂ ಸೇರಿಸಿದರೆ ೨೬ ತತ್ವಗಳು. ಕೆಲಕೆಲವು ತತ್ವ-ಗಳನ್ನು ಪರಸ್ಪರ ಸಮಾವೇಶದಿಂದ ಹೆಚ್ಚುಕಡಿಮೆ ಸಂಖ್ಯೆಯ ತತ್ವಗಳೆಂದು, ಜ್ಞಾನಿಗಳು ನಿರೂಪಿಸುವುದೂ ಇದೆ. ತ್ರಿಗುಣಗಳಿಂದ ಈ ತತ್ವಗಳ ಉತ್ಪತ್ತಿ-ಯಾಗಿದ್ದರೂ, ಹಿಂದೆ ಹೇಳಿದಂತೆ ಪ್ರಕೃತಿಯೇ ತ್ರಿಗುಣಾತ್ಮಕವೆಂದೂ ಹೇಳ-ಲ್ಪಡುವುದರಿಂದ, ಅವ್ಯಕ್ತ (ಎಂದರೆ ಪ್ರಕೃತಿ) ತತ್ವವನ್ನು ಒಂದೇ ತತ್ವವನ್ನಾಗಿ ಗಣನೆಮಾಡಲಾಗುತ್ತದೆ. ತ್ರಿಗುಣಗಳಿಂದ ಮೊದಲು ಮಹತ್ತತ್ವ. ಅದರಿಂದ ಅಹಂಕಾರತತ್ವ ಹೀಗೆ ಒಂದರಿಂದೊಂದು ಕ್ರಮವಾಗಿ ಸೃಷ್ಟವಾಗುತ್ತವೆ. ಹಿಂದಿನ ತತ್ವವು ಮುಂದಿನ ತತ್ವಕ್ಕೆ ಕಾರಣವಾದರೂ, ಮುಂದುಮುಂದಿನ ತತ್ವಗಳು ಹೆಚ್ಚು ಸ್ಥೂಲಗಳಾದ್ದರಿಂದ, ಆ ಸ್ಥೂಲಭಾವವನ್ನು ಹೊಂದಿಸಲು, ತ್ರಿಗುಣಗಳ ಅಂಶಗಳು ಉಪಯೋಗಿಸಲ್ಪಡುತ್ತವೆ. ಹೀಗೆ ಉಪಚಯಕ್ಕಾಗಿ (ಸ್ಥೂಲಭಾವವನ್ನು ಹೊಂದಿಸಲಿಕ್ಕಾಗಿ) ಉಪಯೋಗಿಸಲಾದ ತ್ರಿಗುಣಾಂಶ-ಭಾಗಗಳು, ಪ್ರಳಯದಲ್ಲಿ ತ್ರಿಗುಣಗಳಲ್ಲಿ ಸೇರುತ್ತವೆ. ಈ ಗುಣತ್ರಯಗಳಲ್ಲಿ, ಸಹ ರಜೋಗುಣದಲ್ಲಿರುವ ಸತ್ವ-ತಮೋಗುಣಾಂಶಗಳು (ಇವುಗಳ ಮಿಶ್ರಣ-ದಿಂದ ರಜೋಗುಣವು ನಿರ್ಮಿತವಾದ್ದರಿಂದ ಸತ್ವ ಮತ್ತು ತಮೋಗುಣಗಳಲ್ಲಿ ಸೇರಿಹೋಗುತ್ತವೆ. ಆಗ ಸತ್ವತಮೋಗುಣ ವಿಶಿಷ್ಟರಾಶಿಯು 'ಪ್ರಕೃತಿ' ಯೆಂದೇ ಕರೆಯಲ್ಪಡುತ್ತದೆ. ಈ ವಿವರಣೆಯು ಮುಂದಿನ ವಾಕ್ಯಗಳ ತಾತ್ಪರ್ಯಾರ್ಥವೇ ಆಗಿದೆ.

*'ತತ್ರ ಚ ಪ್ರಳಯಕಾಲೇ ಮಹದಾದಿತತ್ವವಿನಾಶೇ ತತ್ತತ್ಸೂಕ್ಷ್ಮಾಣ್ಯ ವ್ಯಕ್ತತಾಮಾಪದ್ಯಂತೇ ತದುಪಚಾಯಕ ಗುಣತ್ರಯಾಂಶಭೂತ ಮಹದಾದ್ಯುಪಾದಾನಭಾಗವಿಶೇಷಾಸ್ತು ಗುಣತ್ರಯೇ ಪ್ರವಿಶಂತಿ ಗುಣತ್ರಯೇऽಪಿ ಯದ್ರಜಃ ತತ್ಸತ್ವೇ ತಮಸಿ ಚ ಮಿಶ್ರೀಭವತಿ ನ ತದಾ ಸತ್ವಾದಿನಾಮಪ್ರಕೃತಿರೇವ ಹಿ ಸೋಽಚ್ಯತೇ॥'* (ಸ.ರ.ಮಾ.)

**ಬೆರಸಿದ ಇಪ್ಪತ್ತು ಮೂರು ತತ್ವಂಗಳ**
**ಪರಮಸೂಕ್ಷ್ಮಾಣುರಾಶಿಗಳ**
**ತರತರದಿ ತೆಗೆದು ತತ್ವಗಳ ಸಾಲ**
**ವಿರಚಿಸುವದು ಸಾಲದಲೇ** ॥೮॥

**ಎಷ್ಟು ಮಹಾತತ್ವಗಳ ಸೃಷ್ಟಿಗಳಾಗಬೇ-**
**ಕಷ್ಟಷ್ಟೆ ತ್ರಿಗುಣದಂಶಗಳ**
**ಇಟ್ಟು ಮಹತ್ತದರಿಂದಹಂಕಾರತತ್ವ**
**ಸೃಷ್ಟಿಸುವುದಕೊಂದಿಷ್ಟಿಡುವ** ॥೯॥

**ಕಾರಣತತ್ವದಂಶಗಳಂತೂ ತೆಗೆತೆಗೆದು**
**ಬೆರಸಿದ ತ್ರಿಗುಣದಂಶಗಳ**
**ಸೇರಿಸಿ ಉತ್ತರೋತ್ತರತತ್ವಂಗಳ**
**ಶಿರಿಧರನು ಮಾಡುವ ಕ್ರಮದಿಂದ** ॥೧೦॥

**ಅರ್ಥ:** ಬೆರಸಿದ—ಒಟ್ಟುಗೂಡಿಸಿದ, ಇಪ್ಪತ್ತುಮೂರು ತತ್ವಂಗಳ—(ಮೂಲ ಅವ್ಯಕ್ತತತ್ವವನ್ನು ಬಿಟ್ಟು ಅದರ ವಿಕಾರಜನ್ಯ) ೨೩ ಮಹದಾದಿ ತತ್ವಗಳ, ಪರಮಸೂಕ್ಷ್ಮಾಣುರಾಶಿಗಳ—ಅತ್ಯಂತಸೂಕ್ಷ್ಮವಾದ ಅಂಶರಾಶಿಗಳನ್ನು ತರತರದಿ—ನಾನಾ ಪ್ರಕಾರದಿಂದ, ತೆಗೆದು—ಉಪಯೋಗಿಸಿ, ತತ್ವಂಗಳ—ಇತರ ತತ್ವಗಳ, ಸಾಲ—ಪರಂಪರೆಯನ್ನು (ಪಂಕ್ತಿಯನ್ನು), ವಿರಚಿಸುವ ಅದು ಸಾಲದಲೇ—ನಿರ್ಮಿಸಲು ಅದು ಸಾಕಾಗದೆ; ॥೮॥

ಎಷ್ಟು ಮಹಾತತ್ವಗಳ ಸೃಷ್ಟಿಗಳಾಗಬೇಕೋ ಅಷ್ಟಷ್ಟೆ—ಮಹತ್ವದಿಂದ ಆಗಬೇಕಾದ ಕಾರ್ಯಗಳಾದ ಅಹಂಕಾರಾದಿತತ್ವಗಳ ಉಪಚಯಕ್ಕೆ (ಸ್ಥೂಲಭಾವಕ್ಕೆ) ಎಷ್ಟುಬೇಕೋ ಅಷ್ಟು ಪ್ರಮಾಣದ (ಅಳತೆಯ-ಮಿತಿಯ), ತ್ರಿಗುಣದಂಶಗಳ—ಸತ್ವಾದಿಗುಣಗಳ ಅಂಶಗಳನ್ನು, ಇಟ್ಟು—ಬೇರೆ ಇಟ್ಟು, ಮಹತ್ತತ್ವ—ಮಹತ್ತತ್ವವನ್ನೂ, ಅದರಿಂದ—ಆ ಮಹತ್ತತ್ವದಿಂದ, ಅಹಂಕಾರತತ್ವ—

ಅಹಂಕಾರತತ್ತ್ವವನ್ನು, ಸೃಷ್ಟಿಸುವುದಕೆ—ಸೃಷ್ಟಿಮಾಡಲಿಕ್ಕೆ, ಒಂದಿಷ್ಟು—ಬೇಕಾಗುವಷ್ಟು ಮಹತ್ತತ್ತ್ವಭಾಗವನ್ನು, ಇಡುವ—ಇಟ್ಟುಕೊಳ್ಳುತ್ತಾನೆ. ॥೯॥

ಕಾರಣತತ್ತ್ವದಂಶಗಳಂತೂ—(ತಮ್ಮಿಂದ ಉತ್ಪನ್ನವಾಗುವ ತತ್ತ್ವಗಳಿಗೆ ಕಾರಣಗಳಾಗುವ ತತ್ತ್ವಗಳ ಅಂಶಗಳನ್ನಾದರೋ, ತೆಗೆತೆಗೆದು—ಬೇರೆಬೇರೆ ತೆಗೆದು, ಬೆರೆಸಿದ ತ್ರಿಗುಣದಂಶಗಳ—(ಗೊತ್ತಾದ ಪ್ರಮಾಣದಲ್ಲಿ) ಬೆರೆಸಿದ ಸತ್ತ್ವಾದಿ ತ್ರಿಗುಣಾಂಶಗಳನ್ನು, ಸೇರಿಸಿ—(ಉಪಚಯಾರ್ಥವಾಗಿ) ಕೂಡಿಸಿ, ಉತ್ತರೋತ್ತರ ತತ್ತ್ವಂಗಳ-ಮುಂದುಮುಂದಿನ ತತ್ತ್ವಗಳನ್ನು, ಕ್ರಮದಿಂದ—ಕ್ರಮವಾಗಿ (ಒಂದಾದ ಮೇಲೊಂದರಂತೆ—ಒಂದರಿಂದೊಂದನ್ನು), ಶಿರಿಧರನು—ಶ್ರೀಹರಿಯು, ಮಾಡುವ—ನಿರ್ಮಿಸುತ್ತಾನೆ. ॥೧೦॥

**ವಿಶೇಷಾಂಶ:** ಹಿಂದಿನ ೭ನೇ ನುಡಿಯಲ್ಲಿ ಸೂಚಿಸಲಾದ ತತ್ತ್ವಗಳ ಉತ್ಪತ್ತಿಪ್ರಕಾರವನ್ನು; ಮುಂದಿನ ಈ ನುಡಿಗಳಲ್ಲಿ ನಿರೂಪಿಸಿರುವರು. ಆ ನುಡಿಯ ವಿಶೇಷಾಂಶ ಭಾಗವನ್ನು ನೋಡಬಹುದು.

**ಮಹತ್ತತ್ತ್ವದಂಶಗಳೇ ಮಹಿಮೆಯನೀವವು**
**ಅಹಂತತ್ತ್ವದಿಂದಹಂಕಾರ**
**ಬಹದು ಬುದ್ಧಿಯ ನಿಶ್ಚೈಸಿಕೊಡುವುದು ನಾ-**
**ನಾ ಹಂಬಲಕಿಯ ಮನವು** ॥೧೧॥

**ಅರ್ಥ:** ಮಹತ್ತತ್ತ್ವದಂಶಗಳೇ—ಮಹತ್ತತ್ತ್ವದ ಅಂಶಗಳು, ಮಹಿಮೆಯನು—ಪೂಜ್ಯತ್ವವನ್ನು, ಈವವು—ಕೊಡುತ್ತವೆ (ಎಂದರೆ ಇತರರಿಂದ ಪೂಜ್ಯತ್ವಕ್ಕೆ ಕಾರಣವಾಗುತ್ತವೆ); ಅಹಂತತ್ತ್ವದಿಂದ—ಅಹಂಕಾರತತ್ತ್ವಾಂಶಗಳಿಂದ, ಅಹಂಕಾರ—ಅಹಂಭಾವವು (ನಾವು ಸ್ವತಂತ್ರಕರ್ತ, ಇತ್ಯಾದಿ), ಬಹದು—ಉಂಟಾಗುತ್ತದೆ; ಬುದ್ಧಿಯ ನಿಶ್ಚೈಸಿಕೊಡುವುದು—(ಮತ್ತು) ಬುದ್ಧಿನಿಶ್ಚಯವೂ ಉಂಟಾಗುತ್ತದೆ; ಮನವು—ಮನಸ್ತತ್ತ್ವವು, ನಾನಾ ಹಂಬಲಕೀಯ—(ಸಂಕಲ್ಪ ವಿಕಲ್ಪರೂಪದ) ಹಂಬಲಗಳ (ಇಚ್ಛೆಗಳ) ಸ್ವಭಾವವುಳ್ಳದ್ದು;

**ಐದು ಜ್ಞಾನೇಂದ್ರಿಯಗಳೈದು ಕರ್ಮೇಂದ್ರಿಯಗ-**
**ಳೈದು ತನ್ಮಾತ್ರೆಗಳ**
**ಐದು ಭೂತಗಳಂತಿಪ್ಪತ್ತನಾಲ್ಕು**
**ಆದಿಕಾಲದ ತತ್ತ್ವಂಗಳನು** ॥೧೨॥

**ಅರ್ಥ:** ಐದು ಜ್ಞಾನೇಂದ್ರಿಯಗಳು—ಚಕ್ಷುರಾದಿ ಇಂದ್ರಿಯಗಳು ಐದು, ಐದು ಕರ್ಮೇಂದ್ರಿಯಗಳು—ಹಸ್ತಾದಿ ಕರ್ಮೇಂದ್ರಿಯಗಳು ಐದು, ಐದು ತನ್ಮಾತ್ರೆಗಳ—ಶಬ್ದಾದಿ ತನ್ಮಾತ್ರೆಗಳು ಐದು (ಆಕಾಶಾದಿ ಪಂಚಭೂತಗಳ ಉತ್ಪತ್ತಿ ಕಾರಣಗಳು ಅವುಗಳ ಗುಣಗಳೂ ಆದವು ತನ್ಮಾತ್ರೆಗಳು), ಐದು ಭೂತಂಗಳು—ಐದು ಪೃಥಿವ್ಯಾದಿ ಭೂತಗಳು, ಅಂತು—ಒಟ್ಟು ಇಪ್ಪತ್ತ-ನಾಲ್ಕು, ಆದಿ ಕಾಲದ ತತ್ವಂಗಳನು—ಮೊದಲಿಂದಲೂ ಇರುವ (ಅನಾದಿ-ಕಾಲದಿಂದಲೂ ಅವ್ಯಕ್ತ ತತ್ವದಲ್ಲಿ ಲೀನಗೊಂಡು ಅತಿಸೂಕ್ಷ್ಮದಿಂದ ಅವ್ಯಕ್ತ-ವಾಗಿಯೇ ಇದ್ದ) ತತ್ವಗಳನ್ನು (ಸೃಷ್ಟಿಮಾಡುವನು.)

**ವಿಶೇಷಾಂಶ:** (೧) ಈ ಹಿಂದೆ ೭ನೇ ನುಡಿಯ ಭಾಗದಲ್ಲಿ ಹೇಳಿರುವ ೨೪ ತತ್ವಗಳಲ್ಲಿ, ಗುಣತ್ರಯದಿಂದ (ಪ್ರಕೃತಿಯಿಂದ) ಮಹತ್ತತ್ವವೂ, ಅದರಿಂದ ಅಂಹಕಾರತತ್ವವೂ, ಇತರ ಪ್ರಭೇದಗಳಾದ ವೈಕಾರಿಕ, ತೈಜಸ, ತಾಮಸಾ-ಹಂಕಾರ ಭಾಗಗಳಿಂದ, ಕ್ರಮವಾಗಿ, ವೈಕಾರಿಕದಿಂದ ರುದ್ರಾದಿ ತತ್ವಾಭಿ-ಮಾನಿಗಳ ದೇಹಗಳೂ, ಮತ್ತು ಮನಸ್ಸೂ, ತೈಜಸದಿಂದ—ಹತ್ತು ಜ್ಞಾನ-ಕರ್ಮೇಂದ್ರಿಯಗಳೂ, ತಾಮಸದಿಂದ ತನ್ಮಾತ್ರೆಗಳೂ ಪಂಚಮಹಾಭೂತ-ಗಳೂ, ಹುಟ್ಟುತ್ತವೆ.

(೨) ಈ ತತ್ವಗಳಿಂದ ನಿರ್ಮಿತವಾದ ದೇಹಗಳಲ್ಲಿರುವ ತತ್ವಾಂಶಗಳಿಂದಾ-ಗುವ ಕಾರ್ಯಗಳಲ್ಲಿ, ಮಹತ್ತತ್ವ ಮತ್ತು ಅಹಂಕಾರತತ್ವಾಂಶಗಳ ಕಾರ್ಯ-ವನ್ನು ಈ ನುಡಿಯಲ್ಲಿ ವರ್ಣಿಸಲಾಗಿದೆ. ಈ ಕಾರ್ಯಗಳಾಗುವಲ್ಲಿ, ಆಯಾ ತತ್ವಗಳ ಅಭಿಮಾನಿದೇವತೆಗಳಿಂದ ಪ್ರೇರಿತವಾಗಿ, ನಿಮಿತ್ತ ಕಾರಣಗಳಾಗು-ತ್ತವೆ—ಜಡತತ್ವಗಳಿಗೆ ಸ್ವತಃಪ್ರವೃತ್ತಿಯೆಂಬುದಿಲ್ಲ.

(೩) ವೈಕಾರಿಕಾಹಂಕಾರದಿಂದ ಉತ್ಪನ್ನವಾದ ಮನಸ್ತತ್ವದ ಪ್ರವೃತ್ತಿಗಳು, ಮನಸ್ಸು, ಅಹಂಕಾರ, ಬುದ್ಧಿ, ಚಿತ್ತ, ಚೇತನಗಳೆಂದು ಐದು ವಿಧವಾಗಿರು-ವುವು. ಮನಸ್ಸಿನಿಂದ ಸಂಕಲ್ಪ ವಿಕಲ್ಪಗಳು, ಅಹಂಕಾರದಿಂದ ಸ್ವತಂತ್ರಕರ್ತೃ-ತ್ವಾದಿ ಭಾವಗಳು, ಬುದ್ಧಿಯಿಂದ ವಿವೇಕಶಕ್ತಿ, ಚಿತ್ತದಿಂದ ಸ್ಮರಣೆ, ಚೇತನ-ದಿಂದ ಬಹುಸ್ಮರಣಶಕ್ತಿ (ಜನ್ಮಾಂತರಸ್ಮರಣೆ ಸಹ), ಎಂಬುದು ಈ ಪಂಚ-ವೃತ್ತಿಗಳ ಸಾಮಾನ್ಯನಿರೂಪಣೆಯು. ಮನಃಪ್ರಭೇದವಾದ ಅಹಂಕಾರವು, ಅಹಂಕಾರತತ್ವವಲ್ಲ ಮತ್ತು ಬುದ್ಧಿಯು, ಬುದ್ಧಿತತ್ವವೆಂದು ಕರೆಯಲಾಗುವ ಮಹತ್ತತ್ವದ ಪ್ರಭೇದವಲ್ಲ.

(೪) ಬ್ರಹ್ಮ-ವಾಯು, ಸರಸ್ವತೀ-ಭಾರತೀ ಇವರು ಮಹತ್ವದ ವಿಜ್ಞಾನ-ತತ್ವ-ಬುದ್ಧಿತತ್ವವೆಂದೂ ಹೇಳಲಾಗುತ್ತದೆ. ಇದಕ್ಕೆ ಸರಸ್ವತೀ-ಭಾರತಿಯರು ವಿಶೇಷತಃ ನಿಯಾಮಕರು. ಈ ನಾಲ್ವರ ದೇಹಗಳೂ ಮಹತ್ತತ್ವಾತ್ಮಕವಾದವು-ಗಳೇ. ಮಹತ್ತತ್ವ ಮತ್ತು ಅದರ ಪ್ರಭೇದಗಳಿಗೆ ಅಭಿಮಾನಿಗಳಾದ— (ಶ್ರೀಹರಿಯ ಅಧೀನರಾಗಿ ನಿಯಾಮಕರಾದ) ಇವರು ಪ್ರತಿ ಪುರುಷದೇಹ-ದಲ್ಲಿ ಸಹ ಇರುವರು. ಹೀಗೆಯೇ ಇತರ ತತ್ವಗಳ ಅಭಿಮಾನಿದೇವತೆ-ಗಳೆಲ್ಲರೂ ತಮ್ಮಿಂದ ಅಭಿಮನ್ಯಮಾನವಾದ ತತ್ವಾಂಶಗಳಿರುವಲ್ಲೆಲ್ಲಾ, ಅಂಶ-ದಿಂದಿದ್ದು ಆ ತತ್ವಗಳ ಪ್ರವರ್ತಕರಾಗಿರುತ್ತಾರೆ. ಮೇಲುಮೇಲಿನ ತತ್ವಗಳ ಅಭಿಮಾನಿಗಳೆಲ್ಲರೂ, ಕೆಳಕೆಳಗಿನ (ನಂತರ ಹುಟ್ಟಿದ) ಎಲ್ಲ ತತ್ವಗಳ ಅಭಿ-ಮಾನಿಗಳ ನಿಯಾಮಕರೂ ಆಗಿರುವರು. ವಸ್ತುಗಳಲ್ಲಿ ಸಹ ಉತ್ತಮಾಭಿ-ಮಾನಿಗಳು ಅಂಶದಿಂದ ವ್ಯಾಪ್ತರಾಗಿರುವರೆಂದು ತಿಳಿಯಬೇಕು. ತತ್ವಾಭಿ-ಮಾನಿ ದೇವತೆಗಳು ಯಾರೆಂದರೆ: ಪೃಥಿವ್ಯಾದಿ ಪಂಚಭೂತಗಳಿಗೆ, ಕ್ರಮ-ದಿಂದ, ಧರಾದೇವಿ-ವರುಣ-ಅಗ್ನಿ-ಪ್ರವಹವಾಯು, ಗಣಪತಿ, ಇವರುಗಳೂ; ಶಬ್ದಾದಿ ಪಂಚತನ್ಮಾತ್ರೆಗಳಿಗೆ, ಸೌಪರ್ಣೀ (ಗರುಡಪತ್ನೀ) ವಾರುಣೀ (ಶೇಷ-ಪತ್ನೀ) ಮತ್ತು ಉಮಾ (ರುದ್ರಪತ್ನೀ) ಇವರು, ವಿವಿಧಪದಾರ್ಥಗತ ತನ್ಮಾತ್ರಾಂಶಗಳ ವಿವಿಧ ವಿಶಿಷ್ಟಪ್ರಮಾಣಮಿಶ್ರಿತಸಮೂಹಗಳಿಗೆ, ವಿಶೇಷಾಧಿ-ಕಾರರೂಪಗಳಿಂದ ನಿಯಾಮಕರು; ವಾಗಾದಿಪಂಚಕರ್ಮೇಂದ್ರಿಯಗಳಿಗೆ, ಕ್ರಮದಿಂದ, ಅಗ್ನಿ-ಇಂದ್ರ-ಜಯಂತ-ಯಮ-ದಕ್ಷ, ಇವರು ಅಭಿಮಾನಿಗಳು; ಪಂಚಜ್ಞಾನೇಂದ್ರಿಯಗಳಿಗೆ, ಕ್ರಮದಿಂದ, ಸೂರ್ಯ-ಚಂದ್ರ-ಕುಬೇರ-ವರುಣ-ಅಶ್ವಿನೀದೇವತೆಗಳು ಅಭಿಮಾನಿಗಳು; ಮನಸ್ಸು ಮತ್ತು ಅಹಂಕಾರತತ್ವಗಳಿಗೆ, ಗರುಡ-ಶೇಷ-ರುದ್ರರೂ, ಮಹತ್ತತ್ವಕ್ಕೆ ಚತುರ್ಮುಖಬ್ರಹ್ಮನೂ, ಅಭಿಮಾನಿ-ಗಳು. ಮುಖ್ಯಾಭಿಮಾನಿಗಳೊಂದಿಗೆ, ಅವರ ಅಧೀನರಾಗಿ ಕೆಲಸಮಾಡುವ ಅವಾಂತರಾಭಿಮಾನಿಗಳೆಂದು ಕರೆಯಲ್ಪಡುವ ಇತರ ದೇವತೆಗಳೂ ತತ್ವ-ಗಳಿಗೆ ಅಭಿಮಾನಿಗಳಾಗಿರುತ್ತಾರೆ. ಈ ಸಂಬಂಧವಾದ ವಿವರಗಳನ್ನು ಶಾಸ್ತ್ರಾ-ಭ್ಯಾಸಿಗಳು ಗಮನಿಸಿ ಅರಿಯಬೇಕಾಗುತ್ತದೆ. ಇಂದ್ರಿಯಗಳ ಅಭಿಮಾನಿಗಳು ಉತ್ತಮ ದೇವತೆಗಳು; ಇವರಿಗಿಂತ ಅರ್ಥಾಭಿಮಾನಿಗಳಾದ (ತನ್ಮಾತ್ರೆ-ಗಳುಳ್ಳ, ಇಂದ್ರಿಯಗ್ರಾಹ್ಯವಿಷಯಗಳಿಗೆ ಅಭಿಮಾನಿಗಳಾದ) ದೇವತೆಗಳು ಶ್ರೇಷ್ಠರು; ಇವರಿಗಿಂತ ಅಹಂಕಾರತತ್ವಕ್ಕೆ ಅಭಿಮಾನಿಗಳಾದ ಗರುಡ-ಶೇಷ-

ರುದ್ರರು ಉತ್ತಮರು; ಇವರಿಗಿಂತ ಸರಸ್ವತೀ ಭಾರತಿಯರೂ, ಅವರಿಗಿಂತ ಬ್ರಹ್ಮ-ವಾಯುಗಳೂ (ಮಹತ್ತತ್ತ್ವಾಭಿಮಾನಿಗಳು) ಶ್ರೇಷ್ಠರು. ಇವರೆಲ್ಲರಿಗಿಂತ ಶ್ರೀಲಕ್ಷ್ಮೀದೇವಿಯು ಶ್ರೇಷ್ಠಳು. ಆಕೆಗಿಂತ ಶ್ರೀಹರಿಯು ಅನಂತಗುಣಾಧಿಕನು. ಆತನ ಸಮರಾರೂ ಇಲ್ಲ— ಅಧಿಕನಂತೂ ಇಲ್ಲವೇ ಇಲ್ಲ. ಆತನೇ ಸರ್ವೋತ್ತ-ಮೋತ್ತಮನು.

(೫) 'ಆದಿಕಾಲತತ್ವಂಗಳನು' ಎಂಬುದರಿಂದ, ಮಹದಾದಿತತ್ವಗಳನ್ನು ಮೊದಲಿಂದ ಇದ್ದವುಗಳನ್ನೇ ಸೃಷ್ಟಿಮಾಡಿದನೆಂಬರ್ಥವನ್ನು ತಿಳಿಸುತ್ತಾರೆ. ಪ್ರಳಯಕಾಲದಲ್ಲಿ ಮಹದಾದಿ ತತ್ವಗಳೂ ನಾಶಹೊಂದುತ್ತವೆಂದು ಹೇಳುವು-ದನ್ನು, ಅತಿಸೂಕ್ಷ್ಮರೂಪದಿಂದ ಅವ್ಯಕ್ತದೆಶೆಯನ್ನು ಹೊಂದಿ, ಪ್ರಕೃತಿಯಲ್ಲಿ ಲೀನವಾಗುವುವೆಂದು ತಿಳಿಯಬೇಕು— ತತ್ವಗಳಿಗೆ ಸ್ವರೂಪತಃ ನಾಶವಿಲ್ಲ. ಅವ್ಯಕ್ತತತ್ವವೆಂದು ಕರೆಯಲ್ಪಡುವ 'ಮೂಲಪ್ರಕೃತಿ'ಯು, ಈ ಕಾರಣದಿಂದಲೇ ಅಚೇತನವಿಭಾಗಗಳಲ್ಲಿ 'ನಿತ್ಯಾನಿತ್ಯವರ್ಗ'ಕ್ಕೆ ಸೇರುತ್ತದೆ.

*'ಅಚೇತನಂ ತ್ರಿಧಾ ಪ್ರೋಕ್ತಂ ನಿತ್ಯಂ ಚಾನಿತ್ಯಮೇವ ಚ। ನಿತ್ಯಾನಿತ್ಯಂ ಚೇತಿ ನಿತ್ಯಂ ಸರ್ವಂ ವ್ಯಾಪ್ತಮುದಾಹೃತಂ॥ ನಿತ್ಯಾಸ್ತು ವೇದವರ್ಣಾಶ್ಚ ಪರಮಾಕಾಶ ಏವ ಚ।'* ಎಂದರೆ, ನಿತ್ಯ-ಅನಿತ್ಯ-ನಿತ್ಯಾನಿತ್ಯವೆಂದು ಅಚೇತನವು ಮೂರು ವಿಧ. ನಿತ್ಯ-ವಾದುದು ಸರ್ವತ್ರವ್ಯಾಪ್ತವು— ಇಲ್ಲಿ ನಿತ್ಯಶಬ್ದದಿಂದ ಹೇಳಲ್ಪಡುವ ನಿತ್ಯತ್ವವು, ಕೂಟಸ್ಥ (ನಿರ್ವಿಕಾರ)ವಾಗಿ ಆದ್ಯಂತಶೂನ್ಯವಾಗಿರುವಿಕೆ. ವೇದ-ವರ್ಣಗಳು-ಅವ್ಯಾಕೃತಾಕಾಶಾಗಳು ನಿತ್ಯ.

*'ಸತ್ವಂ ರಜಸ್ತಮ ಇತಿ ತ್ರಿವಿಧಾ ಪ್ರಕೃತಿರ್ಮತಾ।*
*ಸೂಕ್ಷ್ಮ ರೂಪೇಣ ನಿತ್ಯಾಪಿ ವಿಕಾರಿತ್ವಾದನಿತ್ಯಕಾ॥'*

ಸತ್ವರಜಸ್ತಮೋಗುಣಗಳೆಂದು ಪ್ರಕೃತಿಯೇ ಮೂರು ವಿಧದಿಂದಿರುವುದು. ಸೂಕ್ಷ್ಮರೂಪದಿಂದ ನಿತ್ಯವಾದರೂ, ವಿಕಾರವುಳ್ಳವುಗಳೂ ಆದ್ದರಿಂದ ಅನಿತ್ಯವೂ ಆಗಿದೆ. ಈ ಕಾರಣದಿಂದಲೇ ಪ್ರಕೃತಿಯು, 'ಪ್ರಕೃತಿಃ-ಪ್ರಕೃತಯಃ' ಎಂದು ಏಕವಚನಬಹುವಚನಶಬ್ದಗಳಿಂದ ಹೇಳಲ್ಪಡುತ್ತದೆ. ನಿತ್ಯವಾದ ಪರಮಾ-ಕಾಶವು, *'ಅಯಃಪಿಂಡಾದಿನಿಬಿಡಪದಾರ್ಥವದಪ್ರತೀತಾಂತಭೇದವದೇಕತ್ವಂ'* — ಉಕ್ಕಿನ ಗುಂಡು ಮೊದಲಾದ ನಿಬಿಡಪದಾರ್ಥಗಳಲ್ಲಿ ಅಂತರ್ಭೇದವು ತೋರದಿರುವ ಏಕತ್ವವುಳ್ಳದ್ದು; ಆದರೆ ಪ್ರಕೃತಿಯ ಏಕತ್ವವಾದರೋ

*'ವಾಲುಕಪಿಂಡಸ್ಯೈಕತ್ವೇಪಿ ಧಾನ್ಯಸಮುದಾಯಾದಿವೈಲಕ್ಷಣ್ಯೇನ ಘಟಾದಿವದೇಕ-ಸಂಸ್ಥಾನತ್ವೇಪಿ ವಾಲುಕಾನಾಂ ಅವಾಂತರಭಿನ್ನಾನಾಂ ಸಂಶ್ಲೇಷ ವಿಶ್ಲೇಷವತ್ವೇನೈಕ ಏಕ*

*ಏವಾಯಂ ವಾಲುಕಾಪಿಂಡ ಇತಿ ಸಮುದಾಯಿ ವೈಲಕ್ಷಣ್ಯೇನ ಪ್ರತ್ಯಕ್ಷಸಿದ್ಧ ಏಕತ್ವಾಧಿಕರಣತ್ವೇಪಿ ಸ್ಥೂಲಸೂಕ್ಷ್ಮಾದಿತಯಾ ಅವಸ್ಥಿತ ವಾಲುಕಾನಾಂ ಭೇದಃ ಪ್ರತೀಯತೇ ಏವಮಂತರ್ಭೇದಘಟಿತಮೇವ॥'*

ಸಣ್ಣಮರಳಿನ ಉಂಡೆಯು, ಧಾನ್ಯ ಮೊದಲಾದ ಗುಂಪುಗಳಂತಿರದೆ, ಘಟಾದಿಗಳಂತೆ ಏಕತ್ವವುಳ್ಳದ್ದಾಗಿ, ಒಳಗಿರುವ ಮರಳಿನ ಭಿನ್ನಭಿನ್ನ ಅಂಶ (ತುಂಡು)ಗಳು ಒತ್ತಾಗಿ ಸೇರಿಕೊಂಡಿರುವುದರಿಂದ ಹೇಗೆ ಒಂದು ಮರಳುಂಡೆಯೆಂದು ಪ್ರತ್ಯಕ್ಷಕ್ಕೆ ಗೋಚರಿಸುತ್ತದೆಯೋ, ಮತ್ತು ಒಂದೇ ಆದ ಮರಳುಂಡೆಯಲ್ಲಿ, ವಿವಿಧಪರಿಮಾಣದ ಮರಳಕಾಳುಗಳು ಭಿನ್ನವಾಗಿರುವುದು ಪರೀಕ್ಷಕರಿಗೆ ಕಾಣುತ್ತದೆಯೋ, ಹಾಗೆ ಅತಿಸೂಕ್ಷ್ಮರೂಪದಿಂದ (ಅವ್ಯಕ್ತದೆಶೆಯನ್ನು ಹೊಂದಿದ) ಇರುವ ಭಿನ್ನತತ್ವಗಳುಳ್ಳದ್ದಾಗಿ ಅಂತರ್ಘಟಿತ (ಒಳಗಿರುವ) ಭೇದವುಳ್ಳದ್ದೇ ಮೂಲಪ್ರಕೃತಿಯು, ಈ ವಿಧ ಸೂಕ್ಷ್ಮವಿಮರ್ಶೆಗಳು ಸತ್ತತ್ವರತ್ನಮಾಲೆಯ, ಮೇಲೆ ಉದಾಹರಿಸಿರುವ ವಾಕ್ಯಗಳಲ್ಲಿ ಕಂಡುಬರುತ್ತವೆ. 'ಆದಿಕಾಲತತ್ವಂಗಳನು' ಎಂಬುದರಿಂದ ಈ ಸೂಕ್ಷ್ಮಪ್ರಮೇಯವು ಸೂಚಿತವಾಗಿದೆ.

**ಹತ್ತು ಕಾರಣಗಳ ನಿತ್ಯದಿ ವಿಷಯಗ-**
**ಳರ್ಥಿಯ ತೋರಿ ಈ ಮನವ**
**ಅತ್ತಲೆ ಎಳೆಯಲುಂಡುಂಡಹಂಕಾರ**
**ಮರ್ತ್ಯಗೆ ಬೇಕು ಮಹತ್ತತ್ವ** ॥೧೩॥

**ಅರ್ಥ:** ಹತ್ತು ಕಾರಣಗಳ — ಹತ್ತು (ಕರಣಗಳ) ಇಂದ್ರಿಯಗಳಿಗೆ (ಅಥವಾ ನಾನಾಕಾರಣಗಳಿಂದ), ನಿತ್ಯದಿ — ಸದಾ, ವಿಷಯಗಳರ್ಥಿಯ ತೋರಿ — ವಿಷಯಗಳಲ್ಲಿ (ಅರ್ಥಿ) ಆಸಕ್ತಿಯನ್ನು ಹುಟ್ಟಿಸಿ, ಈ ಮನವ — (ಇಂದ್ರಿಯಗಳ ದ್ವಾರಾ ಬಾಹ್ಯಪ್ರವೃತ್ತಿಯುಳ್ಳ) ಈ ಮನಸ್ಸನ್ನು, ಅತ್ತಲೆ — ಆ ವಿಷಯಗಳ ಕಡೆಗೆ, ಎಳೆಯಲು — ಆಕರ್ಷಿಸಲು, ಉಂಡುಂಡು — ವಿಷಯಗಳನ್ನು ಮೇಲಿಂದ ಮೇಲೆ ಭೋಗಿಸಿ, ಅಹಂಕಾರಮರ್ತ್ಯಗೆ — (ಅಹಂಕಾರತತ್ವಪ್ರಭಾವದಿಂದ) ಅದೇ ಸುಖವು, ಎಂಬ ಮೋಹದಿಂದ ಅದನ್ನೇ ಅನುಭವಿಸುವೆನೆಂಬ ಅಭಿಪ್ರಾಯಕ್ಕೊಳಗಾದ ಮನುಷ್ಯನಿಗೆ, ಮಹತ್ತತ್ವ — ಮಹತ್ತತ್ವವು, ಬೇಕು — (ಆ ಮೋಹ — ಅಭಿಮಾನಗಳ ಪರಿಹಾರಕ್ಕೆ) ಅವಶ್ಯಕವು.

**ವಿಶೇಷಾಂಶ:** ೧೧ನೇ ನುಡಿಯಲ್ಲಿ ಹೇಳಿದಂತೆ ಪೂಜ್ಯತೆಗೆ ಕಾರಣವೆಂಬ ಮಹತ್ತತ್ವವು, ಆ ಪೂಜ್ಯತೆಗೆ ಕಾರಣವಾದ ಜ್ಞಾನ ಲಾಭಕ್ಕೂ, ಮೋಹಾದಿಗಳ ಪರಿಹಾರಕ್ಕೂ ಕಾರಣವೆನ್ನುತ್ತಾರೆ.

**ನಿತ್ಯನೈಮಿತ್ತಿಕ ಸತ್ಕರ್ಮಗಳ**
**ಉತ್ತಮರೊಳು ಮತ್ಸರಿಸುವ**
**ವಿತ್ತಸಂಪತ್ತಿಗುನ್ಮತ್ತನಾಗಿ ಭವದಲ್ಲಿ**
**ಸುತ್ತಿ ಸುತ್ತಿ ಆರ್ತಿಯನುಂಬ** ॥೧೪॥

**ಅರ್ಥ:** ನಿತ್ಯನೈಮಿತ್ತಿಕ ಸತ್ಕರ್ಮಗಳ—ನಿತ್ಯ (ಸಂಧ್ಯಾದಿ) ನೈಮಿತ್ತಿಕ (ಶ್ರಾದ್ಧ, ಪರ್ವ, ಗ್ರಹಣಕಾಲಗಳ) ವಿಧ್ಯುಕ್ತಕರ್ಮಗಳನ್ನು, (ಮರೆವ—ಮರೆತು ಬಿಡುವನು;) ಉತ್ತಮರೊಳು—ತನಗಿಂತ ಉತ್ತಮರಲ್ಲಿ, ಮತ್ಸರಿಸುವ—ಮಾತ್ಸರ್ಯವುಳ್ಳವನೂ ಆಗುತ್ತಾನೆ; ವಿತ್ತಸಂಪತ್ತಿಗುನ್ಮತ್ತನಾಗಿ—ಧನಾದಿ ಐಶ್ವರ್ಯದಿಂದ ದುರಹಂಕಾರಿಯಾಗಿ, ಭವದಲ್ಲಿ—ಸಂಸಾರದಲ್ಲಿ, ಸುತ್ತಿಸುತ್ತಿ—ಪುನಃಪುನಃತಿರುಗುತ್ತ, ಆರ್ತಿಯ—ದುಃಖವನ್ನು, ಉಂಬ—ಅನುಭವಿಸುವನು.

**ವಿಶೇಷಾಂಶ:** ವಿಷಯಾಸಕ್ತವಾದ ಮನಸ್ಸಿನಿಂದಾಗುವ ಅನರ್ಥಗಳನ್ನು ವಿವರಿಸಲಾಗಿದೆ.

**ಅಂಗನೆಯಾಶೆಗೆ ಚರಣ ನಡಿಸುವುವು**
**ಕಂಗಳವರಂಗ ತೋರುವುವು**
**ಭಂಗಾರ ಕೊಡುವವರ ಎಂಜಲುಣಿಸುವುವು ಕ-**
**ರ್ಣಂಗಳು ನುಡಿ ಕೇಳಿಸುವುವು** ॥೧೫॥

**ಅರ್ಥ:** ಅಂಗನೆಯ—ಸ್ತ್ರೀಯ, ಆಶೆಗೆ—(ಹೊಂದಬೇಕೆಂಬ) ಆಶೆಗಾಗಿ, ಚರಣ—ಕಾಲ್ಗಳು, ನಡೆಸುವುವು—ಸಂಚಾರದಲ್ಲಿ ತೊಡಗಿಸುವುವು; ಕಂಗಳು—ಕಣ್ಣುಗಳು, ಅವರಂಗ—ಸ್ತ್ರೀಯರ ದೇಹಗಳನ್ನು, ತೋರುವುವು—ತೋರಿಸುತ್ತವೆ (ತಂದು ಮನದ ಮುಂದೊಡ್ಡುತ್ತವೆ); ಭಂಗಾರ ಕೊಡಿಸುವವರ—ಭಂಗಾರವನ್ನು (ಬೆಲೆಯುಳ್ಳ ವಸ್ತುಗಳನ್ನು) ದೊರಕಿಸಿಕೊಡುವವರ, ಎಂಜಲ—ಎಂಜಲನ್ನು, ಉಣಿಸುವುವು—ತಿನ್ನಿಸುವುವು (ಅವರ ದಾಸರನ್ನಾಗಿ-ಮಾಡುತ್ತವೆ); ಕರ್ಣಂಗಳು—ಕಿವಿಗಳು, ನುಡಿ—(ಇಂಥವರ—ವಿಷಯಾಸಕ್ತರ) ಮಾತುಗಳನ್ನು, ಕೇಳಿಸುವುವು—(ಮೆಚ್ಚಿ) ಕೇಳುವಂತೆ (ಆಲಿಸುವಂತೆ) ಮಾಡುವುವು.

**ದುಷ್ಟನ್ನವುಂಡು ಪೊಟ್ಟೆಯ ಪೊರೆವುವು**
**ಈ ಭ್ರಷ್ಟರ ಕೂಡ್ಯಾಡಿಸುವುವು**
**ಕೊಟ್ಟರೆ ಪೊಗಳಿಸುವುವ್ಯೆ ಕೊಡದಿರೆ ಬೈಸುವುವ್ಯೆ**
**ಕಷ್ಟಗತಿಕಡೆಗೆಳೆಸುವುವು॥ ॥೧೬॥**

**ಅರ್ಥ:** ದುಷ್ಟನ್ನವುಂಡು — ನಿಷಿದ್ಧವಾದ ಆಹಾರಗಳನ್ನು ಸೇವಿಸಿ, ಪೊಟ್ಟೆಯ ಪೊರೆವುವು — (ವಿಷಯಗಳತ್ತ ಸೆಳೆಯುವ ಇಂದ್ರಿಯಗಳು) ಹೊಟ್ಟೆಯನ್ನು ತೃಪ್ತಿಗೊಳಿಸುವವು; ಈ ಭ್ರಷ್ಟರ ಕೂಡಿ — ಈ ಪತಿತರೊಂದಿಗೆ ಸೇರಿ, (ವಿಷಯಾಸಕ್ತರೊಂದಿಗೆ ಕೂಡಿ), ಆಡಿಸುವುವು — ನಲಿದಾಡಿಸುತ್ತವೆ; ಕೊಟ್ಟರೆ — ಇಂದ್ರಿಯಗಳ ಅಪೇಕ್ಷೆಗಳನ್ನು ಸಲ್ಲಿಸಿದರೆ, ಪೊಗಳಿಸುವುವ್ಯೆ — (ದುರ್ಮಾರ್ಗಿಗಳನ್ನೂ) ಹೊಗಳಿಸುತ್ತವೆ; ಕೊಡದಿರೆ — ಅವುಗಳನ್ನು ಸಲ್ಲಿಸ-ದಿದ್ದರೆ, ಬೈಸುವುವ್ಯೆ — ನಿಂದಿಸುವಂತೆ ಮಾಡುತ್ತವೆ; ಕಷ್ಟಗತಿಕಡೆಗೆ — ದುರ್ಗತಿಗೆ (ದುಃಖದ ದಿಕ್ಕಿಗೆ), ಎಳೆಸುವುವು — (ಜೀವನನ್ನು) ಎಳೆದು-ಕೊಂಡುಹೋಗುತ್ತವೆ.

**ವಿಶೇಷಾಂಶ:** ವಿಷಯಗಳನ್ನು ಕುರಿತು ಧಾವಿಸುವುದು ಇಂದ್ರಿಯಗಳ ಸ್ವಭಾವ. ಅವುಗಳನ್ನು ನಿಗ್ರಹಿಸಿ, ಮನಸ್ಸಿನ ವಶಗೊಳಿಸದಿದ್ದರೆ ಆಗುವ ಅನರ್ಥಗಳನ್ನು ವಿವರವಾಗಿ ವರ್ಣಿಸಿರುತ್ತಾರೆ.

*'ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ।*
*ತಯೋರ್ನವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ॥'* (ಗೀತಾ)

'ಇಂದ್ರಿಯಸ್ಯ — ಚಕ್ಷುರಾದಿ ಇಂದ್ರಿಯಗಳಿಗೆ, ಇಂದ್ರಿಯಸ್ಯ ಅರ್ಥೇ (ರೂಪಾದಿ) ಇಂದ್ರಿಯಾರ್ಥಗಳಲ್ಲಿ, ರಾಗದ್ವೇಷೌ — ಅನುರಾಗವೂ (ಪ್ರತಿ-ಕೂಲ ವಸ್ತುಗಳಲ್ಲಿ) ದ್ವೇಷವೂ (ತನ್ನಿಮಿತ್ತ ಲೋಭ, ಮೋಹ, ಮದ, ಮತ್ಸರಗಳೂ) ವ್ಯವಸ್ಥಿತೌ — ತಪ್ಪದೇ ಉಂಟಾಗುತ್ತವೆ; ತಯೋಃ — ಈ ರಾಗ-ದ್ವೇಷಗಳ, ವಶಂ — ಅಧೀನತೆಯನ್ನು, ನ ಗಚ್ಛೇತ್ — ಹೊಂದಕೂಡದು; ಹಿ — ಏಕೆಂದರೆ, ತೌ — ಅವು, ಅಸ್ಯ — (ಶ್ರೇಯಃಕಾಮಿಯಾದ) ಜೀವನಿಗೆ, ಪರಿಪಂಥಿನೌ — ಶ್ರೇಯೋವಿಘಾತಕಗಳು.'

ಮತ್ತು

*'ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ।*
*ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ॥'* (ಗೀತಾ)

'ವಿಷಯಗಳನ್ನು ಬೆನ್ನುಹತ್ತುವ ಇಂದ್ರಿಯಗಳ ಹಿಂದೆಯೇ ಮನಸ್ಸು (ಶ್ರೀಹರಿಪ್ರೇರಿತವಾಗಿಯೇ) ಹೋಗುತ್ತದೆ; ಮನಸ್ಸು, ಇಂದ್ರಿಯಗಳನ್ನನು-ಸರಿಸಿದರೆ, ಗಾಳಿಗೆ ಸಿಕ್ಕಿದ ಸಮುದ್ರನೌಕೆಯಂತೆ, ಮಾರ್ಗತಪ್ಪಿ, ಇತಿ-ಕರ್ತವ್ಯತಾ ಜ್ಞಾನವನ್ನೂ (ಶಾಸ್ತ್ರದಿಂದ ಕಲಿತ ವಿಧಿನಿಷೇಧಗಳ ವಿವೇಕಜ್ಞಾನ-ವನ್ನೂ) ಕಳೆದುಕೊಳ್ಳುತ್ತದೆ' ಎಂದೂ ಶ್ರೀಕೃಷ್ಣನ ಉಪದೇಶವಿದೆ. ಜ್ಞಾನಿಯೂ ಸಹ ಪೂರ್ವಸಂಸ್ಕಾರಬಲದಿಂದ, ರಾಗದ್ವೇಷಸಹಿತನಾಗಿಯೇ ಹುಟ್ಟಿ, ಚೇಷ್ಟಿಸುವನು; ಹೀಗಿರಲು ಅಜ್ಞಾನಿವಿಷಯದಲ್ಲಿ ಹೇಳತಕ್ಕದ್ದೇನಿದೆ.

*'ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ।*
ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ॥' (ಗೀತಾ)

'ಸಕಲಪ್ರಾಣಿಗಳೂ, ಸೃಷ್ಟಿಕಾಲದಲ್ಲಿ, ರಾಗದ್ವೇಷಗಳಿಂದಲೂ ಅವುಗಳ ಹುಟ್ಟುವ ದ್ವಂದ್ವಮೋಹದಿಂದಲೂ ಸಹಿತರಾಗಿ ಹುಟ್ಟಿ, ಸ್ಥೂಲದೇಹದಲ್ಲಿರು-ವಾಗ ವಿಶೇಷ ಮೋಹದಿಂದಲೇ ವರ್ತಿಸುತ್ತಾರೆ' ಎಂದೂ ಹೇಳಿರುವನು. ಹೀಗಿದ್ದರೆ, ಇಂದ್ರಿಯನಿಗ್ರಹವೆಂಬುದು ದುಸ್ಸಾಧ್ಯವೆಂದೇ ಪ್ರಾಪ್ತವಾಗುತ್ತದೆಂಬ ಸಂಶಯಕ್ಕೆ ಪರಿಹಾರ ಬೇಕಲ್ಲವೆ?

*'ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ'*

'ಪ್ರಾಣಿಗಳು ತಮ್ಮ ಸ್ವಭಾವಾನುಸಾರವಾಗಿ ವರ್ತಿಸುತ್ತವೆ—ನಿಗ್ರಹವೇನು ಮಾಡೀತು' ಎಂಬುದೂ ನಿಗ್ರಹಯತ್ನವು ವ್ಯರ್ಥವೆಂದೇ ಸೂಚಿಸುವು-ದಿಲ್ಲವೇ? ಇದರ ಪರಿಹಾರವನ್ನು 'ಗೀತಾವಿವೃತಿ'ಯಲ್ಲಿ (ಶ್ರೀಮಂತ್ರಾಲಯ-ಪ್ರಭುಗಳು) ಹೀಗೆ ನಿರೂಪಿಸಿರುವರು.

*'ನಿಗ್ರಹಾತ್ಸದ್ಯಃಪ್ರಯೋಜನಾಭಾವೇಽಪಿ ಭವತ್ಯೇವಾತಿಪ್ರಯತ್ನತಃ'*—

ಇಂದ್ರಿಯನಿಗ್ರಹಯತ್ನಕ್ಕೆ, ತತ್ಕಾಲದಲ್ಲಿ ಪ್ರಯೋಜನವು ತೋರದಿದ್ದರೂ, ಅತಿಪ್ರಯತ್ನದಿಂದ ಕಾಲಾಂತರದಲ್ಲಿ ಫಲವುಂಟು; ಯತ್ನವು ಸಫಲ-ವಾಗುವುದರಲ್ಲಿ ಜೀವಸ್ವಭಾವವು ಪ್ರಧಾನಕಾರಣವೆಂದು ಮಾತ್ರ ತಿಳಿಯ-ಬೇಕೆಂದು ಹೇಳಿರುವರು.

**ಇಂಥ ತತ್ವಂಗಳಿಗೆ ಒಡೆಯನಾದ ದೇವ**
**ಭ್ರಾಂತಿಯನೀವ ಕೆಡಿಸುವ**
**ಭೂತಳದೊಳಗರಸಿನ ಮನೆ ಸಂಕೋಲೆ**
**ಆತನ ಕಾಲಕಟ್ಟುವುದೇ** ॥೧೭॥

**ಅರ್ಥ:** ಇಂಥ—ಹೀಗಿರುವ, ತತ್ವಂಗಳಿಗೆ—ಇಂದ್ರಿಯಾದಿ ತತ್ವಗಳಿಗೆ, ಒಡೆಯನಾದ—ಸ್ವತಂತ್ರ ಪ್ರೇರಕನಾಗಿ ಅವುಗಳನ್ನಾಳುವ, ದೇವ—ಶ್ರೀಹರಿಯು, ಭ್ರಾಂತಿಯನೀವ—(ಇಂದ್ರಿಯಗಳನ್ನು ಸಂತೃಪ್ತಿಗೊಳಿಸುವುದೇ ಗುರಿ—ಅದೇ ಸುಖವೆಂಬ) ಮೋಹವನ್ನುಂಟುಮಾಡುತ್ತಾನೆ; ಕೆಡಿಸುವ—ಮೋಕ್ಷಮಾರ್ಗವನ್ನು ಲೋಪಗೊಳಿಸುತ್ತಾನೆ; ಭೂತಳದೊಳಗೆ—ಈ ಲೋಕದಲ್ಲಿ, ಅರಸಿನಮನೆ—ರಾಜಮಂದಿರವು ಸಹ (ಪರಿಪೂರ್ಣಭೋಗಸಾಮಗ್ರಿಗಳು ಸಹ), ಸಂಕೋಲೆ—ಶೃಂಖಲೆಗಳೇ ಸರಿ (ಬಂಧಕವೇ ಆಗಿವೆ), (ಆದರೆ), ಆತನ ಕಾಲಕಟ್ಟುವುದೇ—ಜಗದ್ರಾಜನಾದ (ಸಕಲ ಇಂದ್ರಿಯಭೋಗವನ್ನು ಒದಗಿಸುವ) ಶ್ರೀಹರಿಗೆ ಬಂಧಕವಾಗುವುದೇ? (ಆಗಲಾರದು).

**ವಿಶೇಷಾಂಶ:** (೧) *'ಬಂಧಕೋ ಭವಪಾಶೇನ ಮೋಚಕಶ್ಚ ಸ ಏವ ಹಿ'* ಎಂಬ ಶ್ರುತಿಯು, ಶ್ರೀಹರಿಯೇ ಸಂಸಾರವೆಂಬ ಪಾಶ(ಹಗ್ಗ)ದಿಂದ ಬಿಗಿಯುವವನೂ, ಆ ಕಟ್ಟನ್ನು ಬಿಡಿಸುವವನೂ ಆಗಿದ್ದಾನೆಂದು ಹೇಳುತ್ತದೆ. ಜೀವನು ಇಂದ್ರಿಯಗಳ ವಶನಾಗಿ ವಿಷಯಭೋಗಾಸಕ್ತನಾಗುವುದೂ ಶ್ರೀಹರೀಚ್ಛೆಯಿಂದಲೇ, ಜೀವರುಗಳ ಯೋಗ್ಯತಾನುಸಾರವಾಗಿ ಶ್ರೀಹರಿಯು ಪ್ರೇರಿಸುತ್ತಾನೆ. ಯೋಗ್ಯತೆಯೆಂದರೆ, ಸ್ವರೂಪಯೋಗ್ಯತೆ ಮತ್ತು ಪೂರ್ವಕರ್ಮ, ಸಂಸ್ಕಾರ ಮತ್ತು ಸಾಧನಯತ್ನಗಳು. ಸಂಸಾರಕ್ಕೆ ಕಾರಣವಾದ ಅನಾದ್ಯವಿದ್ಯಾಕಾಮ ಕರ್ಮಗಳು, (ಪ್ರಕೃತಿ ಮತ್ತು ಅದರ ಗುಣಗಳು ಸಹ) ಜಡವಾದ್ದರಿಂದ, ಸ್ವತಂತ್ರಪ್ರಭುವಾದ ಶ್ರೀಹರಿಯ ಶಕ್ತಿಯನ್ನು ಬಿಟ್ಟು ಸ್ವತಃ ಜೀವನನ್ನು ಬಂಧಿಸಲಾರವು. (ಜಡ) ಪ್ರಾಕೃತ ಇಂದ್ರಿಯಗಳೂ ಆತನ ಪ್ರೇರಕಶಕ್ತಿಯಿಲ್ಲದೆ, ವಿಷಯಗಳತ್ತ ಮನಸ್ಸನ್ನು ಸೆಳೆಯಲಸಮರ್ಥಗಳೇ ಸರಿ.

(೩) ವೈಷಯಿಕಸುಖವು ತುಚ್ಛ ಮತ್ತು ಕ್ಷಣಿಕ.
ಸರ್ವಾಪೇಕ್ಷಿತವಾದುದು, ದುಃಖಲೇಶವಿಲ್ಲದ ನಿತ್ಯಸುಖ.
*'ಯೇ ಹಿ ಸಂಸ್ಪರ್ಶಜಾ ಭೋಗಾಃದುಃಖಯೋನಯ ಏವ ತೇ।*
*ಆದ್ಯಂತವಂತಃಕೌಂತೇಯ ನ ತೇಷು ರಮತೇ ಬುಧಃ॥'* (ಗೀತಾ)

'ವಿಷಯೇಂದ್ರಿಯಸಂಬಂಧದಿಂದ ದೊರೆಯುವ ಸುಖವು, ದುಃಖಕ್ಕೇ ಕಾರಣವಾಗುತ್ತದೆ—ಈ ವೈಷಯಿಕಭೋಗಗಳು ಉತ್ಪತ್ತಿನಾಶಗಳುಳ್ಳವು—ನಶ್ವರವಾದವು; ವಿವೇಕಿಯು ಇವುಗಳಲ್ಲಿ ಆಸಕ್ತನಾಗುವುದಿಲ್ಲ (ಆಗಬಾರದು) ಎಂಬುದೇ ಶ್ರೀಕೃಷ್ಣನ ಉಪದೇಶವು. ವೈಷಯಿಕಸುಖವೂ ಸಹ ದುಃಖಕ್ಕೇ ಕಾರಣವಾಗುತ್ತದೆ. ಈ ಸುಖದಲ್ಲಿ ಆಸಕ್ತನಾದವನು. ಅದನ್ನು ಪಡೆಯಲಿಕ್ಕಾಗಿ

ಮತ್ತೆ ಮತ್ತೆ ದೇಹಗಳನ್ನು ಹೊಂದುತ್ತಾ ಸಂಸಾರದಲ್ಲಿಯೇ ಸಿಕ್ಕಿಕೊಳ್ಳುತ್ತಾನೆ. ಆದ್ದರಿಂದಲೇ ಸುಖರೂಪವಾದರೂ, ಸುವರ್ಣಶೃಂಖಲೆಗಳಂತೆ (ಬೇಡಿ-ಗಳಂತೆ) ಬಂಧಕಗಳೇ ಸರಿ. ಕಬ್ಬಿಣದ ಸಂಕೋಲೆಗಳಲ್ಲವೆಂಬ ಕಾರಣದಿಂದ, ಸುವರ್ಣದ್ದಾದ್ದರಿಂದ ಬಿಗಿಸಿಕೊಳ್ಳಲು, ವಿವೇಕಿಯು ಕೈಯ್ಯೊಡ್ಡುವನೇ?'

**ಜೀವರಾಶಿಗಳಿಗೆ ಈ ತರಂಗಗಳಿಂದ**
**ನೋವ ನೆನೆವ ಭಾವದೊಳಗೆ**
**ತಾವಿದಕೊಳಗಾಗದಿಹರು ಶ್ರೀಹರಿಯ ಕೃ-**
**ಪಾವಲೋಕನದಯದಿಂದ ॥೧೮॥**

**ಅರ್ಥ:** ಜೀವರಾಶಿಗಳಿಗೆ—ಜೀವಸಮೂಹಗಳಿಗೆ (ಪ್ರತಿಯೊಬ್ಬರಿಗೂ), ಈ ತರಂಗಗಳು—ಸುಖದುಃಖರೂಪದ ಸಂಸಾರಸಾಗರದ ಅಲೆಗಳು (ಇರು-ತ್ತವೆ—ಬೇರೆ ಯಾವ ವಸ್ತುವಿಗೂ ಇಲ್ಲ) ಇದ ನೋವ ನೆನೆವ ಭಾವ-ದೊಳಗೆ—ಈ ದುಃಖದಂತೆಯೇ (ದುಃಖವು ಹೇಗೆ ಅನುಪಾದೇಯವೋ ಯತ್ನಮಾಡಿ ದೊರಕಿಸಿಕೊಳ್ಳಲು ಯೋಗ್ಯವಲ್ಲವೋ ಹಾಗೆ) ತಿಳಿದು, ತಾವು—(ಕೆಲವು) ಜೀವರು, ಇದಕೆ—ಈ ವೈಷಯಿಕ ಸುಖಕ್ಕೆ (ಈ ತರಂಗಗಳಿಗೆ), ಒಳಗಾಗದೆ ಸಿಕ್ಕದೇ, ಶ್ರೀಹರಿಯ ಕೃಪಾವಲೋಕನದಯದಿಂದ—ಶ್ರೀಹರಿಯ ಕೃಪಾಕಟಾಕ್ಷದ ಅನುಗ್ರಹದಿಂದ, ಇಹರು—ಇರುತ್ತಾರೆ (ಉಳಿಯುತ್ತಾರೆ).

**ವಿಶೇಷಾಂಶ:** '*ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ*'—ಎಂಬುದು, ಸುಖದುಃಖಗಳು ಒಂದರಮೇಲೊಂದು ಬರುವುದು (ಸಾಗರದ ತೆರೆಗಳಂತೆ) ಸಂಸಾರದ ಸ್ವರೂಪ. ಶ್ರೀಹರಿಯ ಕೃಪಾಪಾತ್ರರಾದ ಕೆಲವರು ಮಾತ್ರ ಈ ತೆರೆಗಳಲ್ಲಿ ಸಿಕ್ಕಿ ಹೊಯ್ದಾಡದಿರುವರು.

**ಇಂಥ ಭ್ರಾಂತಿಯೀವ ತತ್ವಂಗಳಿವೆ ಮ-**
**ಹಾಂತರಜ್ಞಾನ ದೊರಕೊಳಲು**
**ಸಂತತ ಶ್ರವಣಾದಿ ಸನ್ಮಾರ್ಗಕೆರಗಿಸಿ**
**ಕಂತುಪಿತನ ತೋರಿಸುವುವೋ ॥೧೯॥**

**ಅರ್ಥ:** ಇಂಥ—ಈ ಪ್ರಕಾರದ, ಭ್ರಾಂತಿಯೀವ—ಸಂಸಾರಭ್ರಮೆಗೆ ಕಾರಣಗಳಾದ, ತತ್ವಂಗಳು—ತತ್ವಗಳು, ಇವೆ—ಇವೇನೇ; (ಈ ತತ್ವಗಳೇ) ಮಹಾಂತರಜ್ಞಾನ—ಶ್ರೇಷ್ಠಜ್ಞಾನವನ್ನು, ದೊರಕೊಳಲು—ದೊರಕಿಸಿಕೊಳ್ಳಲು, ಸಂತತ—ನಿರಂತರ, ಶ್ರವಣಾದಿ—ಶ್ರವಣ ಮೊದಲಾದ, ಸನ್ಮಾರ್ಗಕೆ—

ಒಳ್ಳೆಯದಾರಿಗೆ, ಎರಗಿಸಿ—ಹಚ್ಚಿ (ಸೇರಿಸಿ), ಕಂತುಪಿತನ—ಮಾರಜನಕನನ್ನು (ಶ್ರೀಹರಿಯನ್ನು), ತೋರಿಸುವುವೋ—ತೋರಿಸುತ್ತವೆ ನೋಡು.

**ವಿಶೇಷಾಂಶ:** (೧) ಮಹಾಂತರಜ್ಞಾನ—ಸರ್ವೋತ್ತಮನಾದ ಅಂತ-ರ್ಯಾಮಿಯ (ಬಿಂಬನ) ಜ್ಞಾನ.

(೨) '*ಆತ್ಮಾ ವಾಽರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ*'—'ಪರಮಾತ್ಮನನ್ನು ಕಾಣಬೇಕಾದರೆ, ಹೇ ಅಲ್ಪಮಾನವ; ಶ್ರವಣ, ಮನನ, ಧ್ಯಾನಗಳನ್ನು ಮಾಡಬೇಕು' ಎಂಬ ಶ್ರುತ್ಯುಕ್ತ ಸಾಧನೆಗಳು, ಶ್ರೀಹರಿಯ ಕೃಪಾಪಾತ್ರಗಳಾದ ಇಂದ್ರಿಯಗಳಿಂದಲೇ ಸಾಧ್ಯ.

**ಹರಿಯತ್ತ ನಡೆಸುವುವು ಹರಿನಾಮ ನುಡಿಸುವುವು**
**ಹರಿಪೂಜೆಗಳ ಮಾಡಿಸುವುವು**
**ಹರಿಮೂರ್ತಿ ನೋಡಿಸಿ ಹರಿಕೀರ್ತಿ ಪಾಡಿಸಿ**
**ನರರಹಂಕೃತಿ ಕೆಡಿಸುವುವು** **॥೨೦॥**

**ಅರ್ಥ:** ಸನ್ಮಾರ್ಗದಲ್ಲಿರುವ ತತ್ವಗಳು ಜೀವನನ್ನು ಉದ್ಧರಿಸುವ ಪ್ರಕಾರ-ವನ್ನು ವಿವರಿಸುತ್ತಾರೆ: ಹರಿಯತ್ತ—ಶ್ರೀಹರಿಯ ಕಡೆಗೆ, ನಡೆಸುವುವು—ಸಂಚಾರಮಾಡಿಸುತ್ತವೆ (ಪಾದಗಳು ಶ್ರೀಹರಿಯ ಸನ್ನಿಧಾನವುಳ್ಳ ಪುಣ್ಯಕ್ಷೇತ್ರ-ಗಳ ಯಾತ್ರೆ ಮಾಡಿಸುತ್ತವೆ); ಹರಿನಾಮ—ಶ್ರೀಹರಿಯ ನಾಮಗಳನ್ನು, ನುಡಿಸುವುವು—(ವಾಗಿಂದ್ರಿಯಕ್ರಿಯೆಗಳು) ಉಚ್ಚರಿಸುವಂತೆ ಮಾಡುತ್ತವೆ; ಹರಿಪೂಜೆಗಳ—ಶ್ರೀಹರಿಯ ಅರ್ಚನೆ ಮೊದಲಾದವುಗಳನ್ನು, ಮಾಡಿಸು-ವುವು—(ಕರಗಳು) ಮಾಡಿಸುತ್ತವೆ; ಹರಿಮೂರ್ತಿ—ಶ್ರೀಹರಿಯ ಚಲಾಚಲ-ಪ್ರತಿಮೆಗಳನ್ನು, ನೋಡಿಸಿ—(ಕಣ್ಣುಗಳು) ನೋಡುವಂತೆ ಮಾಡಿ, ಹರಿಕೀರ್ತಿ—ಶ್ರೀಹರಿಮಹಿಮೆಗಳನ್ನು, ಪಾಡಿಸಿ—(ಜಿಹ್ವೆಯು) ಹಾಡಿಸಿ, ನರರ—ಮಾನ-ವರ, ಅಹಂಕೃತಿ—ಅಹಂಕಾರವನ್ನು (ಕರ್ತೃತ್ವಾದಿಗಳನ್ನು—ಅಹಂಮಮಕಾರ-ಗಳನ್ನು), ಕೆಡಿಸುವುವು-ಬಿಡಿಸುತ್ತವೆ (ಸ್ಪಷ್ಟಗೊಳಿಸುತ್ತವೆ).

**ವಿಶೇಷಾಂಶ:** ಇಂದ್ರಿಯಗಳ ಸಾರ್ಥಕ್ಯವನ್ನು ನಿರೂಪಿಸಿ, ಅದಕ್ಕಾಗಿ ಶ್ರೀಹರಿಯ ಅನುಗ್ರಹವನ್ನು ಪ್ರಾರ್ಥಿಸಬೇಕೆನ್ನುತ್ತಾರೆ. ಶ್ರೀಮದ್ಭಾಗವತದ ಉಪದೇಶವು ಸೂಚಿತವೆಂದು ತಿಳಿಯಬೇಕು:

*ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ*
*ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ।*

*ಸ್ಮೃತ್ಯಾಂ ಶಿರಸ್ತವ ಸುರಪ್ರವರ ಪ್ರಣಾಮೇ*
*ದೃಷ್ಟಿಃಸತಾಂ ದರ್ಶನೇಽಸ್ತು ಭವತ್ತನೂನಾಮ್॥* (ಭಾಗವತ)

**ತಾತ್ಪರ್ಯ:** ನಿನ್ನ ಗುಣಕೀರ್ತನದಲ್ಲಿ ನನ್ನ ವಾಣಿಯೂ, ನಿನ್ನ ಚರಿತ್ರೆಗಳನ್ನು ಕೇಳುವುದರಲ್ಲಿ: ನನ್ನ ಕಿವಿಗಳೂ, ನಿನ್ನ ಗೃಹಮಾರ್ಜನ, ಅರ್ಚನಾದಿಕರ್ಮ-ಗಳಲ್ಲಿ ನನ್ನ ಕೈಗಳೂ, ನಿನ್ನ ಪಾದಸ್ಮರಣೆಯಲ್ಲಿ ನನ್ನ ಮನಸ್ಸೂ, ನಿನ್ನ ನಮಸ್ಕಾರದಲ್ಲಿ ನನ್ನ ಶಿರಸ್ಸೂ, ನಿನ್ನ ರೂಪಗಳನ್ನೂ ನಿನ್ನ ಭಕ್ತರನ್ನೂ (ನಿನ್ನ ಪ್ರತಿಮೆಗಳಾದ ಭಕ್ತರನ್ನೂ) ನೋಡುವುದರಲ್ಲಿ ನನ್ನ ಕಣ್ಣೂ, ಆಸಕ್ತವಾಗುವಂತೆ ಅನುಗ್ರಹಿಸು. ಇಂದ್ರಿಯಗಳನ್ನು ಹೀಗೆ ಉಪಯೋಗಿಸಿ ಸಾರ್ಥಕಗೊಳಿಸಲು ಶ್ರೀಹರಿಯ ಕೃಪೆಯಿಂದ ಮಾತ್ರ ಸಾಧ್ಯವೆಂದು ಹೇಳಲಾಗಿದೆ.

**ಉಕ್ಕು ತಗ್ಗಿಸುವುವು ಸೊಕ್ಕು ನಿಲ್ಲಿಸುವುವು**
**ಸತ್ಕರ್ಮಕ್ಕೊರಗಿಸುವುವು**
**ದುಃಖವನೀವ ಪಂಚಭೂತಾತ್ಮಕದೇಹ-**
**ದಕ್ಕರ ಬಿಡಿಸಿ ರಕ್ಷಿಸುವುವು** ॥೨೧॥

**ಅರ್ಥ:** [ಸನ್ಮಾರ್ಗದಲ್ಲಿ ಪ್ರವೃತ್ತಿಯುಳ್ಳ ಮನ ಮೊದಲಾದ ಇಂದ್ರಿಯಗಳು ಏನನ್ನು ಸಾಧಿಸಬಲ್ಲವೆಂಬುದನ್ನು ನಿರೂಪಿಸುತ್ತಾರೆ.] ಉಕ್ಕು— ಕೆಚ್ಚನ್ನು (ನಾನು ನನ್ನ ಅಭೀಷ್ಟಗಳನ್ನು ಸಾಧಿಸಿಕೊಳ್ಳಬಲ್ಲೆನೆಂಬ ಸ್ವಾಭಿಮಾನಾದಿಗಳನ್ನು), ತಗ್ಗಿಸುವುವು— ಕುಗ್ಗಿಸುತ್ತವೆ (ಕಡಿಮೆ ಮಾಡುತ್ತವೆ); ಸೊಕ್ಕು— ದುರಹಂಕಾರ-ವನ್ನು (ನನ್ನಂತಿರುವ ಜ್ಞಾನಿ ಯಾರು ಇತ್ಯಾದಿ), ನಿಲ್ಲಿಸುವುವು— ತಡೆದು ನಿಲ್ಲಿಸುತ್ತವೆ; ಸತ್ಕರ್ಮಕ್ಕೆ— ಪುಣ್ಯಕರ್ಮಗಳಲ್ಲಿ, ಒರಗಿಸುವುವು— ಅಧಿಕಾ-ಸಕ್ತಿಯನ್ನುಂಟುಮಾಡುತ್ತವೆ; ದುಃಖವನೀವ—(ನಾನಾ ಪರಿಯ) ದುಃಖ-ವನ್ನುಂಟುಮಾಡುವ, ಪಂಚಭೂತಾತ್ಮಕದೇಹದ— ಪೃಥಿವ್ಯಾದಿಭೂತಗಳಿಂದಾದ ದೇಹಸಂಬಂಧವಾದ, ಅಕ್ಕರ ಬಿಡಿಸಿ— ಮೋಹವನ್ನು (ದೇಹವೇ ನಾನು— ದೇಹ ನನ್ನದು ಎಂಬ ಅಜ್ಞಾನವನ್ನು) ಬಿಡಿಸಿ, ರಕ್ಷಿಸುವುವು— ರಕ್ಷಿಸುತ್ತವೆ. (ಜೀವನನ್ನು ದುರ್ಭಾವನೆಗಳಿಗೆ ತುತ್ತಾಗದಂತೆ ಕಾಪಾಡುತ್ತವೆ— ಶ್ರೀಹರಿಕೃಪೆ-ಯಿಂದ ಸನ್ಮಾರ್ಗದಲ್ಲಿರುವ ಮನಮೊದಲಾದ ಇಂದ್ರಿಯಗಳು.)

**ಈಸು ಪುಣ್ಯವ ಮಾಡಿ ದಿನದಿನ ಧೇನಿಸಲು**
**ಶ್ರೀಶ ಸಂತೋಷಿಸಿ ತನ್ನ**

**ಭಾಸುರಮೂರ್ತಿಯ ಕಣ್ಣಿಗೆ ಕಾ-**
**ಣಿಸಿಕೊಡುವ ದೋಷಂಗಳನು ದೂರೋಡಿಸುವ** **॥೨೨॥**

**ಅರ್ಥ:** ಈಸು ಪುಣ್ಯವ ಮಾಡಿ—ಇಷ್ಟು (ಈ ಪ್ರಕಾರದ) ಸತ್ಕರ್ಮಗಳನ್ನು (ನಾನಾ ಇಂದ್ರಿಯಗಳಿಂದ) ಮಾಡುತ್ತ, ದಿನದಿನ—ಪ್ರತಿನಿತ್ಯವೂ, ಧೇನಿಸಲು—(ಶ್ರೀಹರಿಯ) ಧ್ಯಾನದಲ್ಲಿ ತೊಡಗಲು, ಶ್ರೀಶ—ರಮಾಪತಿಯು, ಸಂತೋಷಿಸಿ—ಪ್ರಸನ್ನನಾಗಿ, ತನ್ನ ಆ ಭಾಸುರಮೂರ್ತಿಯ—ತನ್ನದಾದ (ಶ್ರೀಹರಿಯ ಜೀವಾಂತರ್ಯಾಮಿ ಬಿಂಬವಾದ) ದಿವ್ಯರೂಪವನ್ನು, ಕಣ್ಣಿಗೆ ಕಾಣಿಸಿ-ಕೊಡುವ—ಪ್ರತ್ಯಕ್ಷದರ್ಶನಮಾಡಿಸುತ್ತಾನೆ. ದೋಷಂಗಳನು—ಸಕಲ ಪಾಪ-ಗಳನ್ನು (ದರ್ಶನದ ನಂತರ ದುಃಖಾಜ್ಞಾನಾದಿಗಳನ್ನು) ದೂರೋಡಿಸುವ—ಲೇಪವಾಗದಂತೆ ಮಾಡುತ್ತಾನೆ.

**ವಿಶೇಷಾಂಶ:** (೧) ಶ್ರೀಹರಿಯ ದರ್ಶನದಿಂದ, ಮೇರುಪರ್ವತದಂತಿ-ರುವ ಪಾಪರಾಶಿಯು, ಹತ್ತಿಯ ರಾಶಿಯಲ್ಲಿ ಅಗ್ನಿಕಣ ಪ್ರವೇಶಿಸಿದಂತೆ, ಸುಟ್ಟು ಭಸ್ಮವಾಗುತ್ತದೆ. ಆದರೆ ದರ್ಶನಕಾಲಕ್ಕೆ ಫಲಕೊಡಲಾರಂಭಿಸಿರುವ (ಪ್ರಾರಬ್ಧ)-ಕರ್ಮಮಾತ್ರ ಫಲಪೂರ್ತಿಯ ನಂತರವೇ ನಷ್ಟವಾಗುತ್ತದೆ. ಈ ಪ್ರಾರಬ್ಧ-ಕರ್ಮದ ಫಲಭೋಗದ ಕಾಲದಲ್ಲಿ ಘಟಿಸಬಹುದಾದ ಪಾಪಪುಣ್ಯಗಳು ಲೇಪಿಸುವುದಿಲ್ಲ—ಜನ್ಮಾಂತರಗಳನ್ನು ಹೊಂದಿಸಿ ದುಃಖಾದಿ ಭೋಗಕ್ಕೆ ಕಾರಣ-ಗಳಾಗುವುದಿಲ್ಲ. *‘ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ-ತದ್ವ್ಯಪದೇಶಾತ್ ಓಂ’* ಎಂಬ (ಬ್ರಹ್ಮಸೂತ್ರ) ನಿರ್ಣಯವು ಈ ಪ್ರಮೇಯ-ವನ್ನು ನಿರೂಪಿಸುತ್ತದೆ.

**ಅರ್ಥ:** ತದಧಿಗಮೇ—ಬ್ರಹ್ಮದರ್ಶನವಾಗುತ್ತಿರಲು, ಉತ್ತರ ಪೂರ್ವಾ-ಘಯೋಃ—ಆ ನಂತರದ ಮತ್ತು ಮೊದಲಿನ ಪಾಪಗಳಿಗೆ, ಅಶ್ಲೇಷವಿನಾಶೌ-ನಿರ್ಲೇಪವಿನಾಶಗಳು (ನಿಶ್ಚಿತ) ತದ್ವ್ಯಪದೇಶಾತ್—ಶ್ರುತಿಯೇ ಹಾಗೆ ಹೇಳು-ವುದರಿಂದ, *‘ತದ್ಯಥೈಷಿಕಾ ತೂಲಮಗ್ನೌ ಪ್ರೋತಂ ಪ್ರದೂಯತೇ, ಏವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ’*—ಎಂದರೆ, ಅಗ್ನಿಯುಕ್ತವಾದ ಒಂದು ತೃಣವು (ಹುಲ್ಲುಕಡ್ಡಿಯು) ಹತ್ತಿಯ ರಾಶಿಯನ್ನು ಪ್ರವೇಶಿಸಲು ಹೇಗೆ ಅದನ್ನು (ಆ ದೊಡ್ಡ ಹತ್ತಿರಾಶಿಯನ್ನು) ಸುಟ್ಟು ಭಸ್ಮಮಾಡುತ್ತದೆಯೋ, ಹಾಗೆ ಬ್ರಹ್ಮಜ್ಞಾನಿಯ (ಬ್ರಹ್ಮಸಾಕ್ಷಾತ್ಕಾರವು ಅದನ್ನು ಪಡೆದವನ) ಸಕಲ ಪಾಪ-ಗಳನ್ನೂ (ಪಾಪರಾಶಿಯನ್ನು) ನಾಶಮಾಡುತ್ತದೆಂದು ಛಾಂದೋಗ್ಯ ಶ್ರುತಿಯು ಹೇಳುತ್ತದೆ.

(೨) ಮನಸ್ಸಿಗೆ ರಾಗದ್ವೇಷಗಳೇ ಮಲವು. ಪುಣ್ಯದಿಂದ ಈ ಮಲವು ನಷ್ಟವಾಗುತ್ತದೆ. ಸತ್ಕರ್ಮಾನುಷ್ಠಾನದಿಂದ ಪುಣ್ಯದ ಉದಯವಾಗುತ್ತದೆ. ಮಲರಹಿತವಾದ ಶುದ್ಧಮನಸ್ಸು ಧ್ಯಾನಸಿದ್ಧಿಗೆ ಅತ್ಯವಶ್ಯಕವು. ಸದಾ ಸತ್ಕರ್ಮಗಳಲ್ಲಿ ತೊಡಗುವವನ ಮನಸ್ಸಿನಲ್ಲಿ ರಾಗದ್ವೇಷಗಳು ಅಭಿವೃದ್ಧಿಹೊಂದಲು ಅವಕಾಶವೇ ಇರುವುದಿಲ್ಲ. ಪೂರ್ವಸಂಸ್ಕಾರದಿಂದ ಉಳಿದಿರುವುವು, ಕಾಲಕ್ರಮದಲ್ಲಿ ಪುಣ್ಯಾಧಿಕ್ಯದಿಂದ ನಾಶವಾಗುತ್ತವೆ.

**ಅಂತವಿಲ್ಲದ ಸ್ವರೂಪಸುಖದನುಭವಕೆ**
**ಅಂತರಾಯವ ಮಾಳ್ಪದೆಂದು**
**ಚಿಂತಿಸಿ ತುದಿಯೊಳೀಸಂತೈಸುವಂತೆ ಶ್ರೀ-**
**ಕಾಂತನ ಸಂತರ್ ಬೇಡುವರು ॥೨೩॥**

**ಅರ್ಥ:** ಅಂತವಿಲ್ಲದ — ನಿತ್ಯವಾದ (ನಾಶರಹಿತವೂ ನಿರಂತರವೂ ಆದ), ಸ್ವರೂಪಸುಖದ — ಸ್ವರೂಪಾನಂದವನ್ನು, ಅನುಭವಕೆ — ಅನುಭವಿಸುವುದಕ್ಕೆ, ಅಂತರಾಯವ — ವಿಘ್ನವನ್ನು, ಮಾಳ್ಪದೆಂದು — (ಇಂದ್ರಿಯಗಳ ವಶವಾದ ಅಶುದ್ಧ ಮನಸ್ಸು) ಮಾಡುವುದೆಂದು, ಚಿಂತಿಸಿ — ತಿಳಿದೇ, ಈ ತುದಿಯೊಳು — ಮೊದಲಿಗೆ, ಸಂತೈಸುವಂತೆ — (ಇಂದ್ರಿಯಗಳ ಉಪಟಳದಿಂದ) ಈ ಮನವನ್ನು ರಕ್ಷಿಸುವಂತೆ (ಸರ್ವೇಂದ್ರಿಯಗಳು ಸತ್ಕರ್ಮಪರವಾಗುವಂತೆ ಅನುಗ್ರಹಿಸಿ ಕಾಪಾಡೆಂದು), ಸಂತರ್ — ಸುಜೀವಿಗಳು (ಸುಜೀವಿಗಳು — ಮುಕ್ತಿಯೋಗ್ಯರು — ಸುಖಜ್ಞಾನಾದಿ ಸ್ವರೂಪವುಳ್ಳವರು), ಶ್ರೀಕಾಂತನ — ಲಕ್ಷ್ಮೀಪತಿಯನ್ನು, ಬೇಡುವರು — ಬೇಡಿಕೊಳ್ಳುತ್ತಾರೆ.

**ಕಣ್ಣಾಶೆ ಕಾಣುವುದು ಕರ್ಣಾಶೆ ಕೇಳುವುದು**
**ರಸನದಾಶೆ ಸ್ವಾದಿಪುದು**
**ಭಿನ್ನತತ್ತ್ವಗಳಿಗೆ ಭಿನ್ನಕಾರ್ಯವನ್ನು**
**ಮಾಡುವ ಶಕ್ತಿ ಕಾಣಿರೋ ॥೨೪॥**

**ಅರ್ಥ:** ಕಾಣುವುದು — ನೋಡಬೇಕೆಂಬುದು, ಕಣ್ಣಾಶೆ — ಕಣ್ಣಿನ ಆಶೆ; ಕೇಳುವುದು — ಕೇಳಬೇಕೆನ್ನುವುದು, ಕರ್ಣಾಶೆ — ಕಿವಿಯ ಆಶೆ; ಸ್ವಾದಿಪುದು — ರುಚಿನೋಡಬೇಕೆನ್ನುವುದು; ರಸನದಾಶೆ — ನಾಲಿಗೆಯ ಆಶೆ; ಭಿನ್ನತತ್ತ್ವಗಳಿಗೆ — (ಹಿಂದೆ ಹೇಳಿದ) ಬೇರೆಬೇರೆ ತತ್ತ್ವಗಳಿಗೆ, ಭಿನ್ನಕಾರ್ಯ — ಬೇರೆಬೇರೆ ಕಾರ್ಯವನ್ನೇ, ಮಾಡುವ ಶಕ್ತಿ ಕಾಣಿರೋ — ಶಕ್ತಿಯಿರುತ್ತದೆಂಬುದನ್ನು

ಸ್ವಾನುಭವವೇ ತಿಳಿಸುತ್ತದಲ್ಲವೇ! (ಒಂದರ ಕಾರ್ಯವನ್ನು ಮತ್ತೊಂದು ಮಾಡಲಾರದು).

**ವಿಶೇಷಾಂಶ:** (೧) ಇಂದ್ರಿಯಗಳೇ ಮೊದಲಾದ ತತ್ವಗಳು ತಮ ತಮಗೆ ಸಹಜವಾದ ವ್ಯಾಪಾರದಲ್ಲಿ ಮಾತ್ರ ಸಮರ್ಥಗಳು. ಶ್ರೀಹರಿಯ ಇಂದ್ರಿಯಾದಿಗಳು, ಒಂದೊಂದೂ ಎಲ್ಲವುಗಳ ಕಾರ್ಯವನ್ನೂ ಮಾಡಬಲ್ಲದು— ಸರ್ವಕಾರ್ಯಗಳನ್ನೂ ನಿರ್ವಹಿಸಬಲ್ಲ ಅಚಿಂತ್ಯಸಾಮರ್ಥ್ಯವುಳ್ಳವುಗಳು. ಪದ ೨ರ ೧೭ನೇ ನುಡಿಯ ವಿಶೇಷ ವಿವರಣೆಯನ್ನು ಇಲ್ಲಿ ನೋಡಬಹುದು.

(೨) ಇಂದ್ರಿಯಗಳ ಈ ಸಹಜಪ್ರವೃತ್ತಿಗಳನ್ನು ನಿರೋಧಿಸಿ, ಅವುಗಳನ್ನು ಜೀವನು ತನ್ನ ವಶಕ್ಕೆ ತಂದುಕೊಳ್ಳದಿದ್ದರೆ, ಅನರ್ಥಕ್ಕೆ ಗುರಿಯಾಗುತ್ತಾನೆಂದು ತಿಳಿಸುವುದೂ ಈ ನುಡಿಯ ತಾತ್ಪರ್ಯವಾಗಿದೆ. *'ಜಿಹ್ವೈಕತೋಽಚ್ಯುತ ವಿಕರ್ಷತಿ ಮಾಽವಿತೃಪ್ತಾ। ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್॥, ಘ್ರಾಣೋಽನ್ಯತಶ್ಚಪಲದೃಕ್ ಕ್ವ ಚ ಕರ್ಮಶಕ್ತಿಃ। ಬಹ್ವ್ಯಃಸಪತ್ನ್ಯ ಇವಗೇಹಪತಿಂ ಲುನಂತಿ॥'* (ಭಾಗವತ) ಎಂದು ಇಂದ್ರಿಯಗಳು ಜೀವನನ್ನು ಪೀಡಿಸುವ ಪ್ರಕಾರವು ವರ್ಣಿತವಾಗಿದೆ. ಇದರ ಭಾವಾರ್ಥ: ಹೇ ಅಚ್ಯುತ! ಬಹುಪತ್ನಿಯರುಳ್ಳ ಪುರುಷನನ್ನು ಹೇಗೆ ಪ್ರತಿಯೊಬ್ಬಳೂ ಒಂದೊಂದು ಪರಿಯಿಂದ ಎಳೆದು ಪೀಡಿಸುವಳೋ, ಹಾಗೆ ಈ ದೇಹವೆಂಬ ಮನೆಯ ಯಜಮಾನನಾದ ಜೀವನನ್ನು ಜಿಹ್ವೆ, ಶಿಶ್ನ, ತ್ವಕ್ (ಸ್ಪರ್ಶೇಂದ್ರಿಯ) ಕಿವಿ, ಮೂಗು-(ಘ್ರಾಣ), ಚಪಲವಾದ ಕಣ್ಣು, ಇತರ ಕರ್ಮೇಂದ್ರಿಯಗಳು, ಒಂದೊಂದು ತಂತಮ್ಮ ಇಚ್ಛಿತ ವಿಷಯಗಳ ಕಡೆಗೆ ಎಳೆದು ಹಿಂಸಿಸುತ್ತದೆ.

**ಅನ್ಯೋನ್ಯಕಾರ್ಯದಿ ಮಾಡಲರಿಯವು ಚರಣ**
**ನಡೆವುದಕೆ ಕೈ ತಡೆವುವು**
**ಘ್ರಾಣ ಗಂಧವಾಘ್ರಾಣಿಸುವಂತೆ ತ್ವಕ್ಕಿನಾಶಾ-**
**ಘ್ರಾಣಿಸುವುದು ಬಲ್ಲುದೇ ॥೨೫॥**

**ಅರ್ಥ:** ಅನ್ಯೋನ್ಯಕಾರ್ಯದಿ—ಒಂದು ಇಂದ್ರಿಯವು ಮತ್ತೊಂದರ ಕಾರ್ಯದಲ್ಲಿ, ಮಾಡಲರಿಯವು—ಅಸಮರ್ಥವಾಗಿದೆ (ಇಂದ್ರಿಯಗಳು ಪರಸ್ಪರ ಒಂದರ ಕಾರ್ಯವನ್ನು ಇನ್ನೊಂದು ಮಾಡಲಾರವು); ಚರಣ—ಕಾಲುಗಳು, ನಡೆವುದಕೆ—ನಡೆಯಲಿಕ್ಕಾಗಿ (ಇವೆ); ಕೈ—ಕೈಗಳು, ತಡೆವುವು—ಹಿಡಿಯುವ, ತಡೆಯುವ ಮೊದಲಾದ ಕಾರ್ಯಗಳಿಗಾಗಿ ಇವೆ; ಘ್ರಾಣ

— ನಾಸಿಕವು, ಗಂಧವ — ಗಂಧವನ್ನು (ವಾಸನೆಯನ್ನು), ಆಘ್ರಾಣಿಸುವಂತೆ— ಪೂಸಿ ತಿಳಿಯುವಂತೆ, ತ್ವಕ್ಕಿನಾಶಾ — ಸ್ಪರ್ಶದ ದಿಕ್ಕನ್ನಾದರೂ, (ಸ್ಪರ್ಶವೆಂದ-ರೇನೆಂಬುದನ್ನಾದರೂ), ಘ್ರಾಣಿಸುವುದು — ನಾಸಿಕವು ಬಲ್ಲುದೇ — ತಿಳಿಯು-ವುದೇ? (ಅಥವಾ ತ್ವಕ್ಕಿನಂತೆ, ಆಶಾ — ಅದರ ಸಹಜಶಕ್ತಿಯಂತೆ, ಸ್ಪರ್ಶವನ್ನು ತಿಳಿಯುವಂತೆ, ನಾಸಿಕವು ಸ್ಪರ್ಶವನ್ನು ಗ್ರಹಿಸಬಲ್ಲದೇ?)

**ಇಂಬುಗೊಡುವಡೆ ಅಂಬರವೆ ಬೇಕು ಬಾಯಿಂ-**
**ದುಂಬುವುದಕೆ ವಾಯುಬೇಕು**
**ಉಬ್ಬಡಿಗೆಗೆ ಕಿಚ್ಚು ಬೇಕು ಕ್ಷುದೆಯ ಕಳೆವರೆ**
**ಅಂಬು ಬೇಕುಣಲನ್ನಬೇಕು ॥೨೬॥**

**ಅರ್ಥ:** ಪಂಚ ಮಹಾಭೂತಗಳಿಂದ ಆಗುವ ಕಾರ್ಯಗಳನ್ನು ಹೇಳುತ್ತಾರೆ: ಇಂಬುಗೊಡುವಡೆ — (ವಸ್ತುಗಳಿರಲು — ಈ ದೇಹವಿರಲು) ಅವಕಾಶ ದೊರೆಯ -ಬೇಕಾದರೆ, ಅಂಬರವೆ ಬೇಕು — ಆಕಾಶವೇ ಆವಶ್ಯಕ; (ದೇಹ — ಅದರ ವಿವಿಧ ಅವಯವಗಳ ಸ್ಥಿತಿಗೆ ಅವಕಾಶವನ್ನು ನೀಡುವುದು 'ಆಕಾಶ'). ಬಾಯಿಂದುಂಬುವುದಕೆ — ಉಣ್ಣಲಿಕ್ಕೆ (ಆಹಾರವನ್ನು ನುಂಗಲಿಕ್ಕೆ), ವಾಯು ಬೇಕು — ಗಾಳಿಯು ಅವಶ್ಯಕ; ಉಬ್ಬಡಿಗೆಗೆ — ಹೆಮ್ಮೆಪಟ್ಟು ಮಾಡಿ ಉಣ್ಣುವ ಅಡುಗೆ ಸಿದ್ಧಪಡಿಸಲು, ಕಿಚ್ಚು ಬೇಕು — ಅಗ್ನಿ ಬೇಕು; ಕ್ಷುಧೆಯ — ಹಸಿವನ್ನು, ಕಳೆವರೆ — ಪರಿಹರಿಸಲು, ಅಂಬು ಬೇಕು — ನೀರು ಬೇಕು, ಉಣಲನ್ನಬೇಕು — ಊಟಮಾಡಲು ಅನ್ನಬೇಕು.

**ವಿಶೇಷಾಂಶ:** ಹಸಿವಿನೊಂದಿಗೆ ನೀರಡಿಕೆಯೂ ಇರುತ್ತದೆ. 'ಕ್ಷುಧೆ' ಎಂಬುದಕ್ಕೆ ಉಪಲಕ್ಷಣದಿಂದ 'ತೃಷೆ'ಯನ್ನೂ ಗ್ರಹಿಸಬೇಕು. ನೀರಿನಿಂದ ಈ ಉಭಯವೂ ಪರಿಹಾರವಾಗುತ್ತವೆ. *'ಪೃಥಿವೀ ವಾ ವ ಅನ್ನಂ'* ಇತ್ಯಾದಿ ಶ್ರುತಿ-ಗಳು ಅನ್ನವೇ ಪೃಥಿವಿಯು ಎಂದು ಹೇಳುತ್ತವೆ. ಏವಂ ಚ, ಈ ನುಡಿಯಲ್ಲಿ ಪೃಥಿವ್ಯಾದಿ ಎಲ್ಲ ಪಂಚಭೂತಗಳಿಂದಾಗುವ ಕಾರ್ಯಗಳೂ ಹೇಳಲ್ಪಟ್ಟಿವೆ.

**ಅದರಿಂದ ಇಪ್ಪತ್ತು ನಾಲ್ಕು ತತ್ವಂಗಳಿಗೆ**
**ಅಧಿಕ ನ್ಯೂನಶಂಕೆ ಸಲ್ಲ**
**ಇದನು ವಿವೇಕಿಸಿ ಹರಿ ಕಂಡು ಅವರವರ**
**ಮೊದಲೆ ರಾಶಿಗಳನು ಸೃಜಿಸುವ ॥೨೭॥**

**ಅರ್ಥ:** ಅದರಿಂದ—ತತ್ವಗಳಿಂದಾಗುವ ಕಾರ್ಯಗಳು ಹೀಗಿರುವುದರಿಂದ, ಇಪ್ಪತ್ತುನಾಲ್ಕು ತತ್ವಂಗಳಿಗೆ—ಈ ಮೊದಲು ಹೇಳಿದ ೨೪ ತತ್ವಗಳಿಗೆ, ಅಧಿಕ ನ್ಯೂನಶಂಕೆ—ಹೆಚ್ಚುಕಡಿಮೆಯೆಂಬ ಸಂಶಯಕ್ಕೆ, ಸಲ್ಲ—ಅವಕಾಶವಿಲ್ಲ, (ಸಂಶಯವು ಕೂಡುವುದಿಲ್ಲ); ಇದನು ವಿವೇಕಿಸಿ—(ಸಾಧನ ದೇಹಗಳಿಗೆ ಇಷ್ಟು ತತ್ವಗಳಿರಬೇಕೆಂಬುದನ್ನು) ಇದನ್ನು ತಿಳಿದು, ಹರಿ ಕಂಡು (ಸರ್ವಜ್ಞನಾದ) ಶ್ರೀಹರಿಯು ನಿಶ್ಚಯಿಸಿ, ಅವರವರ—ಆಯಾ ತತ್ವಗಳನ್ನು ಅಥವಾ ಜೀವರನ್ನು, ಮೊದಲೆ—ಸೃಷ್ಟಿಸುವ ಮೊದಲೇ, ರಾಶಿಗಳನು—ತತ್ವಗಳ ರಾಶಿಗಳನ್ನೇ, ಸೃಜಿಸುವ—ಸೃಷ್ಟಿಮಾಡುತ್ತಾನೆ.

**ವಿಶೇಷಾಂಶ:** ತತ್ವಗಳ ಸೃಷ್ಟಿಯ ನಂತರವೇ ಜೀವರು ಸ್ಥೂಲದೇಹಯೋಗದಿಂದ ಸೃಷ್ಟರಾಗುತ್ತಾರೆ. ಮೊದಲು ಸೃಷ್ಟವಾಗುವ ತತ್ವಾಂಶಗಳು ಹೆಚ್ಚಾಗುವುವೋ ಅಥವಾ ಕಡಿಮೆ ಬೀಳುವುವೋ ಎಂಬ ಸಂಶಯಕ್ಕೆ ಅವಕಾಶವಿಲ್ಲ, ಏಕೆಂದರೆ, ಪ್ರತಿತತ್ವದ ರಾಶಿಗಳನ್ನು ನಿರ್ಮಿಸುವ ಶ್ರೀಹರಿಯು ಸರ್ವಜ್ಞನು.

**ಇಂಥ ತತ್ವಸೂಕ್ಷ್ಮವಶ ಪ್ರಕೃತಿಯೊಳಗ-**
**ನಂತವು ಆಗಿಪ್ಪವು ಅ-**
**ನಂತರಾಶಿಗಳ ನಾನಾ ಧಾನ್ಯಗಳ**
**ರಾಶಿಯಂತೆ ಮಾಡಿಸಿ ಸೃಜಿಸುವ ॥೨೮॥**

**ಅರ್ಥ:** ಇಂಥ ತತ್ವಸೂಕ್ಷ್ಮ—ಹೀಗೆ ಸೃಷ್ಟವಾಗಿ ಉಪಯೋಗಿಸಲ್ಪಡುವ ಸೂಕ್ಷ್ಮತತ್ವಗಳು, ಅನಂತವು—ನಾಶರಹಿತವೂ ಅಪಾರವೂ ಆಗಿದ್ದು, ಪ್ರಕೃತಿಯೊಳಗೆ—ಪ್ರಕೃತಿಯಲ್ಲಿ (ಪ್ರಕೃತ್ಯಭಿಮಾನಿಯಾದ ಪ್ರಕೃತಿಶಬ್ದವಾಚ್ಯಳಾದ ಶ್ರೀಲಕ್ಷ್ಮೀದೇವಿಯಲ್ಲಿ), ವಶ ಆಗಿಪ್ಪವು—ಅಧೀನವಾಗಿರುವುವು (ಮೂಲಜಡಪ್ರಕೃತಿಯಲ್ಲಿರುವುವು); ನಾನಾ ಧಾನ್ಯಗಳ ರಾಶಿಯಂತೆ—ವಿವಿಧ ಧಾನ್ಯಗಳ ರಾಶಿಗಳಂತೆ ಇರುವುವು; ಅನಂತ ರಾಶಿಗಳ ಮಾಡಿಸಿ—ಈ ಅನಂತ ರಾಶಿಗಳನ್ನು (ಗೃಹಿಣಿಯು ವಿವೇಕಿಸಿ ಪ್ರತ್ಯೇಕ ರಾಶಿಗಳನ್ನಾಗಿ ಮಾಡಿ ಸಿದ್ಧಪಡಿಸುವಂತೆ) ಶ್ರೀಲಕ್ಷ್ಮೀದೇವಿಯಿಂದ ಮಾಡಿಸಿ (ಸಿದ್ಧಪಡಿಸಿ), ಸೃಜಿಸುವ—ಶ್ರೀಹರಿಯು ಸೃಷ್ಟಿಕಾರ್ಯವನ್ನು ಮುಂದುವರಿಸುತ್ತಾನೆ.

**ಇದರ ಮೊದಲೆ ಮಹತ್ತತ್ವದಂಶದ ಸೃಷ್ಟಿ**
**ಅದರಿಂದ ಮೇಲೆ ಕ್ರಮಕ್ರಮದಿ**

**ತುದಿಯಪ್ಪುದೆ ತತ್ವ ಕೊನೆಪರಿಯಂತವರಿಗೆ**
**ಒದಗಿಸಿ ಕೊಡುವ ಹರಿಗೆ ಪ್ರತಿಯೇ** ॥೨೯॥

**ಅರ್ಥ:** ಇದರ ಮೊದಲೆ—ಈ ತತ್ವಸಮೂಹದ ಮೊದಲಿಗೆ, ಮಹ-ತ್ತತ್ವದಂಶದ ಸೃಷ್ಟಿ—ಮಹತ್ತತ್ವಾಂಶದ ಸೃಷ್ಟಿಯಾಗುತ್ತದೆ; ಅದರಿಂದ ಮೇಲೆ—ಅದರ ಸೃಷ್ಟಿಯನಂತರ, ಕ್ರಮಕ್ರಮದಿ—ಒಂದಾದಮೇಲೆ ಮತ್ತೊಂದರಂತೆ, (ಅಹಂಕಾರ—ಮನಸ್ಸು ಇತ್ಯಾದಿ ಕ್ರಮದಿಂದ), ತುದಿಯಪ್ಪುದೆ—ತುದಿ-ಮುಟ್ಟುವುದಷ್ಟೆ; ತತ್ವಕೊನೆಪರಿಯಂತ—ತತ್ವಗಳ ಕೊನೆಯವರೆಗೆ (ಪೃಥ್ವಿಯ-ವರೆಗಿನ ಎಲ್ಲ ತತ್ವಗಳನ್ನು), ಅವರಿಗೆ—(ಸಾಧಕ) ಜೀವರಿಗೆ, ಒದಗಿಸಿ-ಕೊಡುವ (ದೊರಕಿಸುವ), ಹರಿಗೆ—ಶ್ರೀಹರಿಗೆ, ಪ್ರತಿಯೇ—ಸಮನು ಮತ್ತೊಬ್ಬನುಂಟೇ? (ಇಲ್ಲವೇ ಇಲ್ಲ).

**ವಿಶೇಷಾಂಶ:** ಮಹದಾದಿ ಪೃಥಿವೀಪರ್ಯಂತದ ತತ್ವಗಳು ಪ್ರಕೃತಿಯಲ್ಲಿ ಅತಿಸೂಕ್ಷ್ಮರೂಪದಿಂದ (ಪಾಂಸುಪಿಂಡದ ಸೂಕ್ಷ್ಮಕಣಗಳಂತೆ) ಇದ್ದೇ ಇರು-ತ್ತವೆ. ಹೀಗಿದ್ದರೂ ಪ್ರಕೃತಿಯು ಏಕಾಕಾರವಾಗಿರುತ್ತದೆ—ಅದರ ಏಕತ್ವಕ್ಕೆ ಭಂಗವಿಲ್ಲ. ಇದೇ ಪದದ ೧೨ನೇ ನುಡಿಯ ವಿಶೇಷಾಂಶ ೫ನ್ನು ಇಲ್ಲಿ ಓದಿಕೊಳ್ಳಬಹುದು. ಕಾರಣ-ಕಾರ್ಯರೂಪಗಳಾದ ಪ್ರಕೃತಿ ಮತ್ತು ಮಹದಾದಿತತ್ವಗಳು ಅನ್ಯೋನ್ಯ ಪ್ರವೇಶವುಳ್ಳವಾಗಿರುತ್ತವೆ (ಕೂಡಿಕೊಂಡಿರು-ತ್ತವೆ). ಎಂದರೆ ಕಾರಣವಸ್ತುವಿನಲ್ಲಿ ಕಾರ್ಯವಿದೆ; ಕಾರ್ಯದಲ್ಲಿ ಕಾರಣವೂ ಇದೆ—ಪ್ರಕೃತಿಯಲ್ಲಿ ಮಹತ್ತತ್ವವಿದೆ; ಮಹತ್ತತ್ವದಲ್ಲಿ ಪ್ರಕೃತಿಯಿದೆ. *'ಕಾರಣೇಷು ಸ್ಥಿತಂ ಕಾರ್ಯಂ ವ್ಯಾಪ್ತಂ ಕಾರ್ಯೇಷು ಕಾರಣಂ'* ಎಂಬ (ಗೀತಾತಾತ್ಪರ್ಯ) ವಾಕ್ಯದಲ್ಲಿ ಈ ಪ್ರಮೇಯವು ಉಕ್ತವಾಗಿದೆ. *'ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾಃ।' 'ಅಧಶ್ಚ ಮೂಲಾನ್ಯನುಸಂತತಾನಿ'* ಎಂಬ (ಗೀತಾ) ವಾಕ್ಯಗಳು ಹಾಗೆಯೇ ಹೇಳುತ್ತವೆ ಇಲ್ಲಿ ಒಂದು ಸೂಕ್ಷ್ಮವಿಷಯವನ್ನು ಮಾತ್ರ, ಗಮನ-ದಲ್ಲಿಡಬೇಕು. ಮಹದಾದಿ ತತ್ವಗಳು ಪ್ರಕೃತಿಯಂತೆ, ಸರ್ವತ್ರ ವ್ಯಾಪ್ತಗಳಲ್ಲ —ಪ್ರಕೃತಿಯಲ್ಲಿ ಸರ್ವತ್ರವಿರುವುದಿಲ್ಲ—ಗುಣತ್ರಯಗಳಂತೆ ಏಕದೇಶದಲ್ಲಿ ಮಾತ್ರ ಇರುತ್ತವೆ. ಗುಣತ್ರಯಗಳಾದರೂ ಸೂಕ್ಷ್ಮರೂಪದಿಂದ ಸರ್ವತ್ರ ಇದ್ದರೂ ಸೃಷ್ಟಿಗಾಗಿ ಇಚ್ಛಿಸಿ ಪ್ರಕೃತಿಯನ್ನು ಕ್ಷೋಭೆಗೊಳಿಸುವ ಶ್ರೀಹರಿಯು, ಸೃಷ್ಟಿಗಾಗಿ ಅವಶ್ಯಕವಾದ ಏಕದೇಶದಲ್ಲಿ ಮಾತ್ರ, ತ್ರಿಗುಣಗಳನ್ನು ವ್ಯಕ್ತೀಕರಿಸು-ತ್ತಾನೆ. ಅದೇ ತ್ರಿಗುಣಗಳ ಸೃಷ್ಟಿಯೆಂಬುದು. ಈ ತ್ರಿಗುಣಗಳಿಂದ ಮಹತ್ತತ್ವವು ಹುಟ್ಟುತ್ತದೆ. ವ್ಯಕ್ತೀಕರಿಸಲ್ಪಟ್ಟ ಸಮಗ್ರ ತ್ರಿಗುಣಗಳಿಂದಲೂ ಅಲ್ಲ; ಉಪಚಯ-

ಕ್ಕಾಗಿ ಕಾದಿಡಲ್ಪಟ್ಟ ಭಾಗವನ್ನುಳಿದು ಇತರ ಭಾಗದಿಂದ ಮಾತ್ರ. (ಇಲ್ಲಿ ೭ನೇ ನುಡಿಯ ವಿಶೇಷ ವಿವರಣೆಯನ್ನು ನೋಡಿರಿ.)

*'ಏವಂ ಪ್ರಕೃತೇರೇಕದೇಶತೋ ಗುಣತ್ರಯಾತ್ಮನಾ ವಿಕೃತತ್ವೇನ ಸಮಗ್ರ ಪ್ರಕೃತೇಃ ಕ್ಷೋಭವಿಶೇಷಸದ್ಭಾವೇನ ಚ, ಪ್ರಕೃತಿಜನಿವ್ಯವಹಾರಃ। ವಸತೋ-ವ್ಯಾಪ್ತ ಮೂಲಪ್ರಕೃತೇರಪಿ ಗುಣತ್ರಯಸೂಕ್ಷ್ಮ ಭಾಗರೂಪತಯಾ ಜನ್ಯ ಸತ್ವ ರಜಸ್ತಮಸಾಂ ಸಕಾಶಾತ್ ಪೃಥಕ್ ಪ್ರಧಾನಸ್ಯಾಪಿ ತ್ರಿಗುಣಾತ್ಮಕತ್ವೋಕ್ತಿಶ್ಚ ಉಪಪದ್ಯತೇ'* (ಸ.ರ.ಮಾ.)

**ಭಾವಾರ್ಥ:** 'ಶ್ರೀನಾರಾಯಣನ ಇಚ್ಛೆಯಿಂದ ಕ್ಷೋಭೆಗೊಂಡ ಪ್ರಕೃತಿಯ ಒಂದು ಭಾಗ (ಏಕದೇಶ) ಮಾತ್ರ ಅಲ್ಪ ವಿಕಾರವನ್ನು ಹೊಂದಿ, ಸತ್ವಾದಿ ಗುಣತ್ರಯರೂಪದಿಂದ ವ್ಯಕ್ತವಾಗುತ್ತದೆ. ಇದೇ ಪ್ರಕೃತಿಗೆ ಜನ್ಮವೆಂಬುದು. ಹೀಗೆ ವಿಕಾರಗೊಳ್ಳದಿರುವ ಪ್ರಕೃತಿಗೂ ತ್ರಿಗುಣಾತ್ಮಕತ್ವವು ಇದ್ದೇ ಇದೆ. ವಿಕಾರದಿಂದ ಪ್ರತ್ಯೇಕಿಸಲ್ಪಡದಿರುವ ತ್ರಿಗುಣಗಳು ವ್ಯಾಪ್ತವಾದ ಪ್ರಕೃತಿಯಲ್ಲಿ ಇದ್ದೇ ಇವೆ. ಹೀಗೆಂಬುದು ಯಾವ ಯುಕ್ತಿಗೂ ವಿರೋಧವೆನಿಸುವುದಿಲ್ಲ.' ಈ ವಿಷಯಗಳ ಪರ್ಯಾಲೋಚನೆಯಿಂದ, ಕ್ಲುಪ್ತಪರಿಮಾಣವುಳ್ಳ ಮಹದಾದಿ ತತ್ವಗಳಿಗೆ, ತಮಗೆ ಕಾರಣವಾದ ಮೂಲಪ್ರಕೃತಿಯಲ್ಲಿಯೂ, ತಮ್ಮ ಕಾರ್ಯ-ಗಳಾದ (ತಮ್ಮಿಂದ ಹುಟ್ಟಿದ) ಅಹಂಕಾರಾದಿ ತತ್ವಗಳಲ್ಲಿಯೂ ವ್ಯಾಪಿಸಿ-ಕೊಂಡಿರೋಣವು ಹೇಗೆ ಕೂಡುತ್ತದೆಂಬ ಸಂಶಯವು ಸಹಜವಾಗಿ ಉದ್ಭವಿಸುತ್ತದೆ. *'ಹರೇರಚಿಂತ್ಯಶಕ್ತ್ಯೈವ ಘಟತೇ ಸರ್ವಮೇವ ಚ'* ಎಂದಂತೆ, ಶ್ರೀಹರಿಯ ಅಘಟಿತಘಟನಸಾಮರ್ಥ್ಯದಿಂದ ಎಲ್ಲವೂ ಸಂಭಾವ್ಯವೇ ಆಗು-ತ್ತದೆ. ಹೀಗೆ ಜಗತ್ಸೃಷ್ಟಿಪ್ರಕಾರವು ಅತಿ ವಿಚಿತ್ರವೂ, ವಿಚಿತ್ರವಾದ ಅಚಿಂತ್ಯ-ಶಕ್ತಿಯಿಂದಲೇ ಸಾಧ್ಯವಾಗಿದ್ದು ಶ್ರೀಹರಿಯ, ಸರ್ವಶಕ್ತಿತ್ವ, ಸರ್ವಜ್ಞತ್ವ, ಅತ ಏವ ಸರ್ವೋತ್ತಮತ್ವಾದಿಗಳನ್ನು ಸಾಧಿಸುತ್ತದೆ.

**ಮಹತ್ತತ್ವದಂಶಗಳೆ ಶುಕ್ಲವಾಗಿಪ್ಪವು ಗಡ**
**ಅಹಂತತ್ವ ಮೂರು ಬಣ್ಣದಲಿ**
**ಅಹುದದರ ಶುಕ್ಲಾಣುಗಳಿಂದ ಬುದ್ಧಿ**
**ಲೋಹಿತಾಂಶದಲಿ ದಶೇಂದ್ರಿಯಗಳು** ॥೩೦॥

ಮಹತ್ತತ್ವದಿಂದ ಮುಂದಿನ ಸೃಷ್ಟಿಯನ್ನು ವಿವರಿಸುತ್ತಾರೆ:

**ಅರ್ಥ:** ಮಹತ್ತತ್ವದಂಶಗಳೆ—ಮಹತ್ತತ್ವದ ಅಂಶಗಳು, ಶುಕ್ಲವಾಗಿಪ್ಪವು ಗಡ—ಬಿಳಿಯವರ್ಣವುಳ್ಳವೇ ಸರಿ, (ಶುಕ್ಲವರ್ಣದ ಸತ್ವಗುಣವೇ ಪ್ರಚುರ-

ವಾಗುಳ್ಳದ್ದಾದ್ದರಿಂದ); ಅಹಂತತ್ವ—(ಅದರಿಂದ ಹುಟ್ಟುವ) ಅಹಂಕಾರ-ತತ್ವವು, ಮೂರು ಬಣ್ಣದಲಿ—ಮೂರು ಬಣ್ಣವುಳ್ಳದ್ದು, ಅಹುದು—ಆಗುವುದು; ಅದರ—ಆ ಮಹತ್ತತ್ವದ, ಶುಕ್ಲಾಣುಗಳಿಂದ—ಬಿಳಿವರ್ಣಗಳಿಂದ, ಬುದ್ಧಿ-ಮನಸ್ಸೂ, ಲೋಹಿತಾಂಶದಿ—ಕೆಂಪು ಬಣ್ಣಗಳಿಂದ, ದಶೇಂದ್ರಿಯಗಳು—ಹತ್ತು ಇಂದ್ರಿಯಗಳೂ (ಹುಟ್ಟುತ್ತವೆ).

**ವಿಶೇಷಾಂಶ:** (೧) ಸತ್ವಗುಣದಂತೆ ಶುಕ್ಲವರ್ಣವುಳ್ಳದ್ದು ಮಹತ್ತತ್ವ. ಏಕೆಂದರೆ,

*'ತಮಸೋ ರಜಸ್ತು ದ್ವಿಗುಣಂ ರಜಸ್ಸತ್ವಮೇವ ಚ*
*ಪರಿಮಾಣತ ಏವಂ ಸ್ಯುಸ್ತ್ರಯಃ ಪ್ರಕೃತಿಜಾ ಗುಣಾಃ॥*
*ತತ್ರ ಸತ್ವಂ ಕೇವಲಂ ಸ್ಯಾದ್ರಜಸ್ಯಪಿ ಶತಾಧಿಕಂ*
*ಸತ್ವಂ ರಜಃ ಶತಾಂಶಂ ತು ತಮಸ್ತತ್ರ ಪ್ರಕೀರ್ತಿತಃ*
*ತಮಸ್ಯಪಿ ತಥಾ ಸತ್ವಂ ತಮಸಸ್ತು ದಶೋತ್ತರಂ*
*ತದ್ದಶಾಂಶೇನ ರಜೋ ಮೂಲಜಂ ಯದ್ರಜಸ್ತು ತತ್॥'* (ಭಾಗ-ತೃ-ತಾ)

ಎಂದರೆ, 'ಮೂಲಪ್ರಕೃತಿಯಿಂದ ಸೃಷ್ಟಿಗಾಗಿ ಬೇರ್ಪಡಿಸಲಾದ ತಮೋ-ಗುಣರಾಶಿಗಿಂತ (ಸೃಷ್ಟಿಯಲ್ಲಿ ಉಪಯೋಗಿಸಲಾಗುವ) ರಜೋಗುಣವು ಇಮ್ಮಡಿಯಾಗಿಯೂ, ರಜೋಗುಣಕ್ಕಿಂತ ಎರಡರಷ್ಟು ಸತ್ವಗುಣವೂ ಇರು-ತ್ತಿದ್ದು, ಸತ್ವರಾಶಿಯು ಅಮಿಶ್ರಿತ ಸತ್ವಗುಣವುಳ್ಳದ್ದು; ರಜೋರಾಶಿಯಲ್ಲಿ, ರಜೋಗುಣಾಂಶಕ್ಕಿಂತ ಸತ್ವಗುಣಾಂಶವು ೧೦೦ ಪಾಲು ಹೆಚ್ಚಾಗಿರುತ್ತದೆ. ರಜೋಗುಣದಲ್ಲಿ ೧೦೦ ಭಾಗದಲ್ಲಿ ೧ ಮಾತ್ರ (೧/೧೦೦) ಮಾತ್ರ ತಮೋಗುಣವಿರುತ್ತದೆ. ತಮೋರಾಶಿಯಲ್ಲಿ ತಮೋಗುಣಕ್ಕಿಂತ ೧೦ ಪಾಲು ಹೆಚ್ಚು ಸತ್ವಗುಣವೂ, ತಮೋಗುಣದ ೧/೧೦ ಅಂಶ ರಜೋಗುಣವೂ ಇರುತ್ತದೆ.' ಸಾರಾಂಶ, ಸತ್ವರಾಶಿಯು ಅಮಿಶ್ರಿತ—ರಜಸ್ತಮೋರಾಶಿಗಳು ಉಕ್ತಪ್ರಮಾಣದಲ್ಲಿ ಇತರ ಗುಣಗಳಿಂದ ವಿಚಿತ್ರವಾದುವು. ಈ ಮೂರು-ಗುಣಗಳಿಂದ ಹುಟ್ಟುವ ಮಹತ್ತತ್ವವು,

*'ದಶಾಂಶಾಸ್ತತ್ರ ಸತ್ವಂ ಸ್ಯಾದೇಕಾಂಶೋ ರಜ ಏವ ತು ತದ್ದಶಾಂಶಂ ತಮೋಜ್ಞೇಯಂ'*—ಇತ್ಯಾದಿ ಪ್ರಮಾಣವಾಕ್ಯಗಳು ಹೇಳುವಂತೆ, ಸತ್ವಗುಣದ ೧/೧೦ನೇ ಭಾಗ ರಜೋಗುಣವನ್ನೂ, ರಜೋಗುಣದ ೧/೧೦ನೇ ಭಾಗ ತಮೋಗುಣವನ್ನೂ ಉಳ್ಳದ್ದು. ಹೀಗೆ ೧ ತಮೋಗುಣ ೧೦ ರಜೋಗುಣ, ೧೦೦ಸತ್ವಗುಣಭಾಗಗಳುಳ್ಳ ಮಹತ್ತತ್ವವು ಸತ್ವಪ್ರಚುರವಾದುದು.

(೨) ಮುಂದಿನ ಅಹಂಕಾರತತ್ತ್ವ ಆದರ ತ್ರಿವಿಧ ಪ್ರಭೇದಗಳ ಸ್ಪಷ್ಟ-ಪ್ರಕಾರವು, ವಿಷ್ಣುರಹಸ್ಯದಲ್ಲಿ ಹೀಗೆ ವರ್ಣಿತವಾಗಿದೆ:

*'ಮಹತ್ತತ್ತ್ವಂ ತು ತತ್ಪ್ರೋಕ್ತಂ ತತೋಽಪ್ಯರ್ಧಂ ಸಮಾದದೇ।*
*ಕಿಂಚಿತ್ತತ್ರ ತಮಃಕ್ಷಿಪ್ತ್ವಾಽಹಂಕಾರಂ ಕೃತವಾನಹಮ್॥*
*ಅಹಂಕಾರಂ ವಿಭಜ್ಯಾಥ ತ್ರೀನ್ ರಾಶೀನ್ ಕೃತವಾನಹಮ್।*
*ರಾಶಿತ್ರಯಂ ಕ್ರಮೇಣೈವ ತತ್ತದ್ರಾಶಿಂ ಸಮಂ ಪುನಃ॥*
*ಗುಣತ್ರಯಂ ವಿನಿಕ್ಷಿಪ್ತಂ ಏಕಸ್ಮಿನ್ನೇಕ ಏವ ಹಿ।*
*ಯತ್ರ ಸತ್ತ್ವಂ ವಿನಿಕ್ಷಿಪ್ತಂ ಜಾತೋ ವೈಕಾರಿಕೋ ಹಿ ಸಃ।*
*ರಜಸಾ ತೈಜಸಃ ಪ್ರೋಕ್ತಃ ತಮಸಾ ಚೈವ ತಾಮಸಃ॥'*

ಈ (ವಿಷ್ಣುರಹಸ್ಯ) ವಾಕ್ಯಗಳ ತಾತ್ಪರ್ಯವೇನೆಂದರೆ: 'ಸ್ಪಷ್ಟವಾದ ಮಹ-ತ್ತತ್ತ್ವದಲ್ಲಿ ಅರ್ಧಭಾಗವನ್ನು ತೆಗೆದುಕೊಂಡು, ಸ್ವಲ್ಪ ತಮೋಗುಣವನ್ನು ಸೇರಿಸಿ, ಅಹಂಕಾರತತ್ತ್ವವನ್ನು ಮಾಡಿದೆನು; ಅಹಂಕಾರತತ್ತ್ವವನ್ನು ಮೂರು ರಾಶಿಗಳ-ನ್ನಾಗಿ ವಿಭಾಗಿಸಿದೆನು; ಆ ಮೂರು ರಾಶಿಗಳಲ್ಲಿ ಕ್ರಮವಾಗಿ ಸತ್ವಾದಿ ಮೂರು-ಗುಣಗಳನ್ನು ಸೇರಿಸಿದೆನು. ಸತ್ವಗುಣವನ್ನು ಸೇರಿಸಿದ ಭಾಗವು **'ವೈಕಾರಿಕ'**-ವೆಂದೂ, ರಜೋಗುಣವನ್ನು ಸೇರಿಸಿದ ರಾಶಿಯು **'ತೈಜಸ'**ವೆಂದೂ, ತಮೋಗುಣಮಿಶ್ರಿತ ರಾಶಿಯು, **'ತಾಮಸ'**ವೆಂದೂ ಕರೆಯಲ್ಪಡುತ್ತದೆ. ಈ ಮೂರು ಪ್ರಕಾರದ ಅಹಂಕಾರ ತತ್ವಗಳಿಂದ ಹುಟ್ಟಿದ ಮುಂದಿನ ತತ್ವಗಳನ್ನು ನಿರೂಪಿಸುತ್ತ, ಈ ನುಡಿಯಲ್ಲಿ ವೈಕಾರಿಕದಿಂದ ಮನಸ್ತತ್ತ್ವವೂ, ತೈಜಸದಿಂದ ದಶೇಂದ್ರಿಯಗಳೂ ಹುಟ್ಟಿದವೆಂಬುದನ್ನು ಹೇಳಿರುವರು. ವೈಕಾರಿಕದಿಂದ ತತ್ವಾಭಿಮಾನಿಗಳ ದೇಹಗಳೂ ಸೃಷ್ಟವಾದುದೆಂದೂ ತಿಳಿಯಬೇಕು.

**ಕಣ್ಣೆನಂಶಗಳಿಂದ ಪಂಚಭೂತಗಳು**
**ಕಲ್ಪಯೆಂದೆಂದು ಪಿರಿಯರು**
**ಒಪ್ಪಿ ಪೇಳುವರಿಂತು ಬುದ್ಧಿಯೊಡನೆ ಮನ-**
**ಕೊಪ್ಪ ಷೋಡಶ ಕಲೆಗಳ ॥೩೧॥**

**ಅರ್ಥ:** ಕಣ್ಣೆನಂಶಗಳಿಂದ—ತಾಮಸಾಹಂಕಾರದ ಅಂಶಗಳಿಂದ (ಕಣ್ಣಿನ ಕಪ್ಪುಗುಡ್ಡೆಯಂತೆ ಕಪ್ಪುಬಣ್ಣವುಳ್ಳದ್ದು ತಾಮಸಾಹಂಕಾರವಾದ್ದರಿಂದ), ಪಂಚ-ಭೂತಗಳು—ಪೃಥಿವ್ಯಾದಿ ಪಂಚಭೂತಗಳು, ಕಲ್ಪ—ನಿರ್ಮಿತವು, ಎಂದೆಂದು

—ಯಾವ ಕಾಲಕ್ಕೂ, ಪಿರಿಯರು—ಹಿರಿಯರು (ಜ್ಞಾನಿಗಳೂ), ಒಪ್ಪಿ—ಒಪ್ಪಿಕೊಂಡು, ಪೇಳುವರು—ಹೇಳುತ್ತಾರೆ; ಇಂತು—ಹೀಗೆ, ಬುದ್ಧಿಯೊಡನೆ—ಬುದ್ಧಿ ತತ್ವದಿಂದ (ಮನಸ್ತತ್ವ) ಸಹಿತವಾದ, ಮನಕೊಪ್ಪ—ಸಮ್ಮತವಾದ, ಷೋಡಶ ಕಲೆಗಳ—೧೬ ತತ್ವಗಳನ್ನು (ನಿರ್ಮಿಸುತ್ತಾನೆ).

**ತಾಮಸವೆಂಬ ಕಣ್ಣಿನಂಶಗಳಿಂದ ಪಂಚ**
**ಮಾತ್ರಂಗಳ ಸೃಷ್ಟಿ ಗಡ**
**ಆಮೇಲೆ ವ್ಯೋಮಾದಿ ಪಂಚಭೂತಗಳ**
**ನಾಮವಾಹೋದೆಂದು ಸಿದ್ಧಾಂತ** ॥೩೨॥

**ಅರ್ಥ:** ತಾಮಸವೆಂಬ ಕಣ್ಣಿನಂಶಗಳಿಂದ—ತಾಮಸವೆಂಬ ಅಹಂಕಾರ ತತ್ವಾಂಶಗಳಿಂದ, ಪಂಚಮಾತ್ರಂಗಳ—ಪಂಚತನ್ಮಾತ್ರೆಗಳ (ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ), ಸೃಷ್ಟಿ ಗಡ—ಸೃಷ್ಟಿಯಾಗುವುದು, ಆಮೇಲೆ—ತನ್ಮಾತ್ರೆಗಳ ಸೃಷ್ಟಿಯನಂತರ, ವ್ಯೋಮಾದಿ ಪಂಚಭೂತಗಳ—ಆಕಾಶಾದಿ ಪಂಚಭೂತಗಳ, ನಾಮವು—ಹೆಸರು, ಆಹೋದೆಂದು—ಆಗುವುದೆಂದು, ಸಿದ್ಧಾಂತ—ನಿರ್ಣಯವು (ನಿಶ್ಚಯವು).

**ವಿಶೇಷಾಂಶ:** ಶಬ್ದವು ವರ್ಣಾತ್ಮಕ ಮತ್ತು ಧ್ವನ್ಯಾತ್ಮಕವೆಂಬ ಎರಡು ವಿಧ. ವರ್ಣಾತ್ಮಕ ಶಬ್ದವು ನಿತ್ಯ. ಸೂಕ್ಷ್ಮರೂಪದಿಂದಿರುವ ಧ್ವನಿಯೇ ಆಕಾಶರೂಪದಿಂದ ವಿಕೃತವಾಗುತ್ತದೆ. ಇದನ್ನೇ ಶಬ್ದತನ್ಮಾತ್ರೆಯೆಂದು ಕರೆಯುವುದು—ನಿತ್ಯವಾದ ಶಬ್ದವನ್ನಲ್ಲ. ಅದೇ ಸೂಕ್ಷ್ಮರೂಪದ ಧ್ವನ್ಯಾತ್ಮಕಶಬ್ದವೇ ತಾಮಸಾಹಂಕಾರದಿಂದ ಹುಟ್ಟುವುದು.

*ಶಬ್ದೋವರ್ಣಾತ್ಮಕೋ ನಿತ್ಯೋ ಧ್ವನಿರಾಕಾಶಸಂಭವಃ।*
*ಆಕಾಶ ಏವ ಸೂಕ್ಷ್ಮಸ್ತು ಧ್ವನಿರಿತ್ಯೇವ ಶಬ್ದ್ಯತೇ॥*

ಎಂದು ಭಾಗ-ತೃ-ತಾ.ದಲ್ಲಿ ಹೇಳಿರುವುದರ ಭಾವವೇ ಇದು.

ಈ ಶಬ್ದಾದಿ ಪಂಚತನ್ಮಾತ್ರೆಗಳು ತಾಮಸಾಹಂಕಾರಜನ್ಯಗಳೆಂಬುದನ್ನು, ಶಬ್ದದಿಂದ ಆಕಾಶ, ಆಕಾಶದಿಂದ ಸ್ಪರ್ಶ; ಸ್ಪರ್ಶದಿಂದ ವಾಯು, ವಾಯುವಿನಿಂದ ರೂಪ; ರೂಪದಿಂದ ತೇಜಸ್ಸು, ತೇಜಸ್ಸಿನಿಂದ ರಸ; ರಸದಿಂದ ಜಲ, ಜಲದಿಂದ ಗಂಧ; ಗಂಧದಿಂದ ಪೃಥಿವಿ, ಎಂಬುದಾಗಿ ಪರಂಪರೆಯಿಂದ ಉತ್ಪತ್ತಿಯೆಂದು ತಿಳಿಯಬೇಕು.

*'ನಭಸಃ ಶಬ್ದ ತನ್ಮಾತ್ರಾತ್ ಕಾಲಗತ್ಯಾ ವಿಕುರ್ವತಃ।*

*ಸ್ಪರ್ಶೋಽಭವತ್ತತೋ ವಾಯುಸ್ತ್ವಕ್ ಸ್ಪರ್ಶಸ್ಯ ಚ ಸಂಗ್ರಹಃ॥'* (ಭಾಗವತ-ತೃ) ಎಂಬ ಶ್ಲೋಕದಲ್ಲಿ ಈ ಕ್ರಮವು ಸ್ಪಷ್ಟವಾಗಿ ಸೂಚಿತವಾಗಿದೆ. ಕಾಲಗತ್ಯಾ—ಕಾಲನಾಮಕ ಶ್ರೀಹರಿಪ್ರೇರಣೆಯಿಂದ, ವಿಕುರ್ವತಃ—ವಿಕಾರಹೊಂದುವ, ಶಬ್ದತನ್ಮಾತ್ರಾತ್—ಶಬ್ದವೇ ತನ್ಮಾತ್ರೆಯಾಗುಳ್ಳ, ನಭಸಃ—ಆಕಾಶದಿಂದ, ಸ್ಪರ್ಶಃ—ಸ್ಪರ್ಶ ತನ್ಮಾತ್ರೆಯೂ, ತತಃ—ಅದರಿಂದ, ವಾಯುಃ—ವಾಯುವೂ, ಸ್ಪರ್ಶಸ್ಯ ಸಂಗ್ರಹಃ ತ್ವಕ್ ಚ—ಸ್ಪರ್ಶಜ್ಞಾನವನ್ನು ಹುಟ್ಟಿಸುವ (ಸ್ಪರ್ಶವನ್ನು ಗ್ರಹಿಸುವ) ತ್ವಕ್ (ತ್ವಗಿಂದ್ರಿಯವೂ) ಅಭವತ್—ಉಂಟಾಯಿತು. *'ಸ್ಪರ್ಶಾದಯೋಽಪಿ ವಾಯ್ವಾದೇಃ ಸೂಕ್ಷ್ಮಾವಸ್ಥಾ ಪ್ರಕೀರ್ತಿತಾ'* (ಭಾಗ-ತೃ-ತಾ) ಮತ್ತು ಅಲ್ಲಿಯೇ *'ಸೂಕ್ಷ್ಮೇಂದ್ರಿಯಾಣಿ ಸಂತ್ಯೇವ ಸ್ಯುಃ ಸ್ಥೂಲಾನ್ಯಹಂಕೃತೇಃ।'* ಎಂಬ ವಿವರಣೆಗಳಿಂದ, ಸ್ಪರ್ಶಾದಿ ಗುಣಗಳು ವಾಯು ಮೊದಲಾದ ಭೂತಗಳ ಸೂಕ್ಷ್ಮಾವಸ್ಥೆಯೆಂದೂ, ಇಂದ್ರಿಯಗಳು ಸೂಕ್ಷ್ಮರೂಪದಿಂದ ನಿತ್ಯಗಳೇ ಆಗಿದ್ದು, ತೈಜಸಾಹಂಕಾರದಿಂದ ಸ್ಥೂಲಭಾವವನ್ನು ಹೊಂದುತ್ತವೆಂದೂ ತಿಳಿಯಬೇಕು. ಆದ್ದರಿಂದ ಸ್ಪರ್ಶದಿಂದ ವಾಯು ಮತ್ತು ತೈಜಸಾಹಂಕಾರದಿಂದ ತ್ವಗಿಂದ್ರಿಯವೂ ಉತ್ಪನ್ನವಾದುದೆಂಬ ವಿಶೇಷೋಕ್ತಿಯ ಭಾವವನ್ನು ಸ್ಪಷ್ಟವಾಗಿ ವಿವೇಕಿಸಿ ತಿಳಿಯಬೇಕು. 'ಪಂಚಭೂತಗಳ ನಾಮವಾಹೋದು' ಎಂಬುದಕ್ಕೆ ತನ್ಮಾತ್ರೆಗಳ ಉತ್ಪತ್ತಿಯ ನಂತರವೇ ಭೂತಗಳ ಹೆಸರು, ಎಂದರೆ ಅವುಗಳ ಉತ್ಪತ್ತಿ—ತತ್ಪೂರ್ವದಲ್ಲಿ ಭೂತಗಳ ಹೆಸರೇ ಇಲ್ಲವೆಂದರ್ಥ.

**ತುದಿಯೊಳು ಸೃಷ್ಟಿಸಿ ಇಪ್ಪತ್ತ ಮೂರನೆಯ**
**ಉದಕವೆಂಬ ತತ್ವದೊಳಗೆ**
**ಕದಡದಂತೆ ಭೂರಜವ ಮಾಡಿ ಸಾಲಿಂ-**
**ತುದಿಸಿ ದೇವಖಿಲತತ್ವಂಗಳ** ॥೩೩॥

**ಅರ್ಥ:** ತುದಿಯೊಳು—ಕೊನೆಯಲ್ಲಿ, ಸೃಷ್ಟಿಸಿ—ಸೃಷ್ಟಿಮಾಡಿ, ಇಪ್ಪತ್ತ ಮೂರನೆಯ—೨೩ನೆಯದಾದ, ಉದಕವೆಂಬ ತತ್ವದೊಳಗೆ—ಆ ಜಲವೆಂಬ ತತ್ವದೊಳಗೆ (೨೪ನೆಯದು ಭೂ ತತ್ವ), ಕದಡದಂತೆ—ಕರಗದಂತೆ, ಭೂರಜವ ಮಾಡಿ—ಪೃಥಿವೀಕಣಗಳನ್ನು ನಿರ್ಮಿಸಿ, ಇಂತು—ಹೀಗೆ, ದೇವ—ಶ್ರೀಹರಿಯು, ಅಖಿಲ ತತ್ವಂಗಳ—ಎಲ್ಲಾ (೨೪) ತತ್ವಗಳ, ಸಾಲ—ಪಂಕ್ತಿಯನ್ನು, ಉದಿಸಿ—ಹುಟ್ಟಿಸಿ, (ಮುಂದಿನ ನುಡಿಯಲ್ಲಿರುವ (**'ಪೊರೆವ'** ಎಂಬುದರಿಂದ ಅನ್ವಯಮಾಡಿಕೊಳ್ಳಬೇಕು).

**ಇಂಥ ಮಹದಾದಿ ತತ್ವಗಳ ಸೃಷ್ಟಿಸಿ**
**ತತ್ತತ್‌ಸ್ಥಾನದೊಳಿಟ್ಟು ಪೊರೆವ**
**ಉತ್ತಮಪುರುಷರದರೊಳು, ಪೋಗುತಿರಲಾಗಿ**
**ಸುತ್ತ ಸುರರ ನಿರ್ಮಿಸಿದ** ||೩೪||

**ಅರ್ಥ:** ಇಂಥ—ಹೀಗಿರುವ, ಮಹದಾದಿ ತತ್ವಗಳ—ಮಹತ್ತೇ ಮೊದಲಾದ ತತ್ವಗಳನ್ನು, ಸೃಷ್ಟಿಸಿ—ನಿರ್ಮಾಣ ಮಾಡಿ, ತತ್ತತ್—ಆಯಾ, ಸ್ಥಾನದೊಳಿಟ್ಟು—ಸ್ಥಾನಗಳಲ್ಲಿ ಅವುಗಳನ್ನು ನಿಲ್ಲಿಸಿ (ಇಟ್ಟು), ಪೊರೆವ—ರಕ್ಷಿಸುತ್ತಾನೆ. ಉತ್ತಮ ಪುರುಷರು—ತತ್ವಾಭಿಮಾನಿ ದೇವತೆಗಳು, ಅದರೊಳು—ಆ ತತ್ವಗಳಲ್ಲಿ, ಪೋಗುತಿರಲಾಗಿ—ಪ್ರವೇಶ ಮಾಡುತ್ತಿರಲು, ಸುತ್ತ—ಅವರ ಸುತ್ತಲೂ (ಪರಿವಾರಭೂತರಾದ), ಸುರರ—ದೇವತೆಗಳನ್ನು (ಅವಾಂತರಾಭಿಮಾನಿಗಳಾದ ದೇವ, ಋಷ್ಯಾದಿಗಳನ್ನು), ನಿರ್ಮಿಸಿದ—ವ್ಯವಸ್ಥೆಗೊಳಿಸಿದನು.

**ವಿಶೇಷಾಂಶ:** (ಉತ್ತಮ ಪುರುಷರೆಂಬ) ಮುಕ್ತಿಯೋಗ್ಯ ಜೀವರನ್ನು ಈ ತತ್ವಗಳಿಂದ ನಿರ್ಮಿತವಾದ ದೇಹದಲ್ಲಿ ಪ್ರವೇಶಗೊಳಿಸಿ, ಅವರ ಸುತ್ತಲೂ (ಸರ್ವಚೇಷ್ಟಾಪ್ರೇರಕರಾದ) ತತ್ವಾಭಿಮಾನಿಗಳನ್ನು ವ್ಯವಸ್ಥೆಗೊಳಿಸಿದನೆಂಬ ಅರ್ಥವನ್ನೂ ಈ ನುಡಿಯಿಂದ ತಿಳಿಯಬಹುದಾಗಿದೆ.

**ಶುದ್ಧ ತತ್ವಗುಣದಿಂದ ತತ್ವಗಳ-**
**ನಾಳ್ದ ದೇವರ ದೇಹಂಗಳನು**
**ಮಾಳ್ದನವರವರ ಯೋಗ್ಯತೆ ತಕ್ಕಷ್ಟು**
**ಕೂಡ್ದ ಮಿಕ್ಕ ಗುಣಾಂಶಗಳ** ||೩೫||

**ಅರ್ಥ:** ತತ್ವಾಭಿಮಾನಿಗಳಾದ ರುದ್ರಾದಿದೇವತೆಗಳ ದೇಹಸೃಷ್ಟಿ ಪ್ರಕಾರವನ್ನು ವರ್ಣಿಸುತ್ತಾರೆ:

(ಶ್ರೀಹರಿಯು), ಶುದ್ಧ ತತ್ವಗುಣದಿಂದ—ಸತ್ವಗುಣಾಧಿಕ್ಯವುಳ್ಳ ವೈಕಾರಿಕಾಹಂಕಾರತತ್ವದಿಂದ, ತತ್ವಗಳನಾಳ್ದ ದೇವರ—ತತ್ವನಿಯಾಮಕ ದೇವತೆಗಳ, ದೇಹಂಗಳನು—ದೇಹಗಳನ್ನು, ಮಾಳ್ದನು—ನಿರ್ಮಿಸಿದನು; ಅವರವರ—ಆಯಾ ದೇವತೆಗಳ, ಯೋಗ್ಯತೆ ತಕ್ಕಷ್ಟು—ತಾರತಮ್ಯಾನುಸಾರವಾಗಿ, ಮಿಕ್ಕ ಗುಣಾಂಶಗಳ—(ಉಪಚಯಾರ್ಥವಾಗಿ) ಪ್ರತ್ಯೇಕವಾಗಿಟ್ಟಿದ್ದ ಸತ್ವಾದಿಗುಣಾಂಶಗಳನ್ನು, ಕೂಡ್ದ—ಕೂಡಿಸಿದನು (ವೈಕಾರಿಕ ಅಹಂಕಾರದೊಂದಿಗೆ, ಆ ದೇಹಗಳ ನಿರ್ಮಾಣದಲ್ಲಿ, ಕೂಡಿಸಿಯೇ ರಚಿಸಿದನು).

**ಮತ್ತು ತನ್ನರಸಿಯೊಳು ನೀರೊಳು ಕಲಕಿದಂತೆ**
**ತತ್ವದೊಂದೊಂದಂಶಗಳನು**
**ಚಿತ್ರರೇತವ ಮಾಡಿ ಚಿನ್ನದಜಾಂಡವ**
**ಸತ್ಯಸಂಕಲ್ಪ ನಿರ್ಮಿಸಿದ ॥೩೬॥**

**ಅರ್ಥ:** ಮತ್ತು—(ತತ್ವಾಭಿಮಾನಿ ದೇವತೆಗಳು ಬ್ರಹ್ಮಾಂಡನಿರ್ಮಾಣದಲ್ಲಿ ಸ್ವಯಂ ಅಶಕ್ತರಾಗಿ ಶ್ರೀಹರಿಯನ್ನೇ ಶರಣುಹೊಂದಿ ಪ್ರಾರ್ಥಿಸಿದ) ನಂತರ, ಪುನಃ ತಾನೇ, ನೀರೊಳು ಕಲಕಿದಂತೆ—ನೀರಲ್ಲಿ ಬೆರಸಿದಂತೆ, ತತ್ವದೊಂದೊಂದಂಶಗಳನು—ಪ್ರತಿತತ್ವಗಳ ಒಂದೊಂದು ಭಾಗಗಳನ್ನು, ಚಿತ್ರರೇತವ ಮಾಡಿ—ವಿಚಿತ್ರವಾದ (ದಿವ್ಯರೇತಸ್ಸನ್ನು) ನಿರ್ಮಿಸಿ, ತನ್ನರಸಿಯೊಳು—ತನ್ನ ಭಾರ್ಯಳಾದ ಲಕ್ಷ್ಮೀದೇವಿಯ ಗರ್ಭದಲ್ಲಿ, ಸತ್ಯಸಂಕಲ್ಪ—ಎಂದೂ ವ್ಯರ್ಥವಾಗದ ಸಂಕಲ್ಪವುಳ್ಳ ಶ್ರೀಹರಿಯು, ಚಿನ್ನದಜಾಂಡವ—ಸುವರ್ಣಾತ್ಮಕ ಬ್ರಹ್ಮಾಂಡವನ್ನು, ನಿರ್ಮಿಸಿದ—ಸೃಷ್ಟಿಸಿದನು.

**ವಿಶೇಷಾಂಶ:** (೧) *'ತತೋ ವಯಂ ಸತ್ತಮುಖಾ ಯದರ್ಥೇ ಬಭೂವಿಮಾತ್ಮನ್ ಕರವಾಮ ಕಿಂ ತೇ। ತ್ವಂ ನಃ ಸಚಕ್ಷುಃ ಪರಿದೇಹಿ ಶಕ್ತ್ಯಾದೇವ ಕ್ರಿಯಾರ್ಥೇ ಯದನುಗ್ರಹೇಣ'* (ಭಾಗ ೩-೬-೨೮) ಎಂದರೆ, ಯಾವ (ಬ್ರಹ್ಮಾಂಡನಿರ್ಮಾಣ) ಪ್ರಯೋಜನಕ್ಕಾಗಿ, ನಾವು ತತ್ವಗಳಿಗೆ ನಿಯಾಮಕರಾಗಿ ಸೃಷ್ಟರಾಗಿರುವೆವೋ, ಅಂಥ—ನಮ್ಮಿಂದ (ಆ ಕಾರ್ಯವು ಅಸಾಧ್ಯವಾಗಿರುವುದರಿಂದ) ಆ ಕಾರ್ಯ ಸಿದ್ಧಿಸಲು ಅವಶ್ಯಕವಾದ ಜ್ಞಾನಶಕ್ತಿಯನ್ನು ಕರುಣಿಸು' ಎಂದು ತತ್ವಾಭಿಮಾನಿಗಳು ಶ್ರೀಹರಿಯನ್ನು ಪ್ರಾರ್ಥಿಸಲು,

*'ಇತಿ ತಾಸಾಂ ಸ್ವಶಕ್ತೀನಾಮಸತೀನಾಂ ಸಮೇತ್ಯ ಸಃ।*
*ಪ್ರಸುಪ್ತಲೋಕತಂತ್ರಾಣಾಂ ನಿಶಮ್ಯ ಗಿರಮೀಶ್ವರಃ॥*
*ಕಾಲಸಂಜ್ಞಾಂ ತದಾ ದೇವೀಂ ಬಿಭ್ರಚ್ಛಕ್ತಿಮುರುಕ್ರಮಃ।*
*ತ್ರಯೋವಿಂಶತಿತತ್ವಾನಾಂ ಗಣಂ ಯುಗಪದಾವಿಶತ್॥'* (ಭಾಗ, ೩-೭-೧,೨)

'ಆವಿರ್ಭಾವವಾಗದ ಲೋಕಸೃಷ್ಟಿಶಕ್ತಿಯುಳ್ಳ (ಪ್ರಸುಪ್ತಲೋಕ ತಂತ್ರಾಣಾಂ) ಪ್ರತ್ಯೇಕರಾಗಿದ್ದ (ಸಮೇತ್ಯ ಅಸತೀನಾಂ) ತನ್ನ ಅಧೀನರಾದ ತತ್ವಾಭಿಮಾನಿದೇವತೆಗಳ (ಸ್ವಶಕ್ತೀನಾಂ) ಪ್ರಾರ್ಥನೆಯನ್ನು ಲಾಲಿಸಿ, ಸರ್ವಶಕ್ತನಾದ ಶ್ರೀಹರಿಯು, ಕಾಲನಾಮಕಳಾದ ರಮಾದೇವಿಯನ್ನು ಧರಿಸಿ, ೨೩ ತತ್ವಗಳ

ಸಮೂಹವನ್ನು, ಏಕಕಾಲದಲ್ಲಿ ಪ್ರವೇಶಿಸಿದನು' ಇತ್ಯಾದಿ ಭಾಗವತೋಕ್ತ-ಪ್ರಮೇಯಗಳನ್ನು ಈ ನುಡಿಯು ಸಂಗ್ರಹಿಸಿ ನಿರೂಪಿಸುತ್ತದೆ. '*ದೇವೀಂ ಬಿಭ್ರತ್*' ಎಂಬುದರ ವಿವರಣೆಯನ್ನು ವಿಷ್ಣುರಹಸ್ಯದಲ್ಲಿ ಕಾಣುತ್ತೇವೆ.

'*ಸ್ವಪೌರುಷೇಣ ರೂಪೇಣ ವಿಷ್ಣುರಾಧತ್ತ ವೀರ್ಯಂ ಭಗವಾನ್ ವೀರ್ಯ-ವಾಂಶ್ಚ*'—'ತನ್ನ ಪುರುಷರೂಪದಿಂದ (ತ್ರಿಗುಣಗಳಿಂದ ಮಹತ್ತತ್ವವನ್ನು ನಿರ್ಮಿಸಿದ ತನ್ನ ಪುರುಷರೂಪದಿಂದ), ವಿಷ್ಣುವು ಶ್ರೀದೇವಿಯಲ್ಲಿ ವೀರ್ಯಾ-ಧಾನಮಾಡಿದನು' ಎಂದು ಹೇಳಿದೊಡನೆ, ಗರುಡನು ವಿಷ್ಣುವನ್ನು ಪ್ರಶ್ನಿಸಿ-ದನು.

'*ವೀರ್ಯಂ ಕಿಮೀಶಸ್ಯ ಸ್ವರೂಪಭೂತಂ ಕಿಂ ವಾ ವಿಭಿನ್ನಂ ವದ*'—ವಿಷ್ಣುವೀರ್ಯವು ಸ್ವರೂಪಭೂತವೋ ಅಥವಾ ಬೇರೆಯೋ ಹೇಳೆಂದು ಗರುಡನು ಕೇಳಲು, ಶ್ರೀಕೃಷ್ಣನು ಹೇಳುತ್ತಾನೆ: '*ತದ್ವೀರ್ಯಮಾಹುರ್ನ ಹರೇಃ ಸ್ವರೂಪಂ, ಭಿನ್ನಂ ಚಾಹುಃ ಪ್ರಾಕೃತಮೇವ*'— ಆ ವೀರ್ಯವು ಶ್ರೀಹರಿಯ ಸ್ವರೂಪಭೂತವಾದುದಲ್ಲ; ಭಿನ್ನವೂ ಪ್ರಾಕೃತವೂ ಆದುದೆಂದು (ವೇದಜ್ಞಾನಿ-ಗಳು) ಹೇಳುವರು, ಎಂದು ಉತ್ತರಿಸಿ,

'*ವೀರ್ಯಾಧಾನಂ ತತ್ರ ತಾಸಾಂ ಚ ಮೇಲನಂ ಕಾರ್ಯೋನ್ಮುಖಂ ಮೇಲನಂ ಚಾಹುರಾರ್ಯಾ ರೇತೋ ರೂಪಂ ನಾಹುರಾರ್ಯಾಶ್ಚ ವಿಷ್ಣೋಃ*' ಇತ್ಯಾದಿ ವಾಕ್ಯಗಳಿಂದ, ಲಕ್ಷ್ಮೀದೇವಿಯಲ್ಲಿ (ತತ್ರ) ತತ್ತ್ವಾಂಶಗಳ ಮೇಳನವೇ ವೀರ್ಯಾಧಾನವು; ಮೇಳನವೆಂದರೆ ಕಾರ್ಯೋನ್ಮುಖವಾಗುವಂತೆ ಮಾಡು-ವುದೇ ಆಗಿದೆ; ವಿಷ್ಣು (ಸ್ವರೂಪಭೂತ) ರೇತಸ್ಸಲ್ಲವೆಂದೇ ಜ್ಞಾನಿಗಳು ಹೇಳು-ವರು' ಎಂದು ಹೇಳಿ ವೀರ್ಯಾಧಾನವೆಂದರೆ, ತತ್ವಗಳಲ್ಲಿ ತಾನೂ ಪ್ರವಿಷ್ಟ-ನಾಗಿ ಅವುಗಳಿಗೆ ಕಾರ್ಯಶಕ್ತಿಯನ್ನಿತ್ತು, ಲಕ್ಷ್ಮೀ ಉದರ ಪ್ರವೇಶಗೊಳಿಸು-ವುದೇ, ಎಂಬರ್ಥವನ್ನು ಸ್ಪಷ್ಟಗೊಳಿಸಿರುವನು.

(೩) '*ಪುರುಷೇಣಾತ್ಮಭೂತೇನ ವೀರ್ಯಮಾಧತ್ತ ವೀರ್ಯವಾನ್*'

'*ತತೋಽಭವನ್ಮಹತ್ತತ್ವಂ*' ಎಂಬ ಭಾಗವತಶ್ಲೋಕದ ವ್ಯಾಖ್ಯಾನದಲ್ಲಿ ವಿಜಯಧ್ವಜಟೀಕಾವಾಕ್ಯವೂ, '*ರೇತ ಆಖ್ಯಂ ಪರಿಣಾಮಕರಸಾಮರ್ಥ್ಯಂ*'—ರೇತಸ್ಸೆಂದು ಕರೆಯಲ್ಪಡುವ ಪರಿಣಾಮಕಾರಕಶಕ್ತಿ ವಿಶೇಷವೆಂಬರ್ಥವನ್ನು ಹೇಳುತ್ತದೆ. ಶ್ರೀವಾದಿರಾಜರೇ ತಮ್ಮ ಸರಸಭಾರತೀವಿಲಾಸವೆಂಬ ಗ್ರಂಥ-ದಲ್ಲಿ, ವೀರ್ಯಾಧಾನದ ಅರ್ಥವನ್ನು ಸುಸ್ಪಷ್ಟಗೊಳಿಸಿದ್ದಾರೆ:

*'ಕುಕ್ಷೌ ನಿಕ್ಷಿಪ್ತತತ್ತ್ವಾನಾಂ ಅಂಶಾನ್ ವೀರ್ಯಾತ್ಮನಾ ಪ್ರಭುಃ।*
*ಪರಿಣಾಮ್ಯ ಪುನರ್ಲಕ್ಷ್ಮ್ಯಾಃ ಕುಕ್ಷೌ ನಿಕ್ಷಿಪ್ಯ ಲೀಲಯಾ।*
*ಅಜಾಂಡಂ ನಿರ್ಮಮೇ ಹೈಮಂ ನ ತು ವಿಷ್ಣುಃಸ್ವರೇತಸಾ॥'* ಎಂಬುದಾಗಿ.

**ಭಾವಾರ್ಥ:** ಸೃಷ್ಟವಾದ ತತ್ತ್ವಾಂಶಗಳನ್ನು ವೀರ್ಯರೂಪದಿಂದ, ಲಕ್ಷ್ಮೀದೇವಿಯ ಗರ್ಭದಲ್ಲಿಟ್ಟು ಲೀಲೆಯಿಂದ ವಿಷ್ಣುವು ಸುವರ್ಣಾತ್ಮಕ ಬ್ರಹ್ಮಾಂಡವನ್ನು ಸೃಷ್ಟಿಸಿದನು—ತನ್ನ ರೇತಸ್ಸಿನಿಂದಲ್ಲ.

**ನೀರೊಳಗಿರ್ದ ಭೂರೇಣುಗಳೆಲ್ಲವ**
**ಸೇರಿಸಿ ತನ್ನುದರದೊಳು**
**ಆರನೆಯ ಗರ್ಭದಿ ಯೋನಿದ್ವಾರ ತೆಗೆದು**
**ವಿರಿಂಚಾಂಡವನು ನಿರ್ಮಿಸಿದ ॥೩೭॥**

ಬ್ರಹ್ಮಾಂಡನಿರ್ಮಾಣಪ್ರಕಾರವನ್ನು ವರ್ಣಿಸುತ್ತಾರೆ.

**ಅರ್ಥ:** ನೀರೊಳಗಿರ್ದ—ಜಲದೊಳಗಿದ್ದ, ಭೂರೇಣುಗಳೆಲ್ಲವ—ಪೃಥಿವೀಅಂಶಗಳೆಲ್ಲವನ್ನು, ತನ್ನುದರದೊಳು—ತನ್ನ ಉದರದಲ್ಲಿ, ಸೇರಿಸಿ—ಕೂಡಿಸಿ, ಆರನೆಯ ಗರ್ಭದಿ—ಆರನೆಯ ಸೃಷ್ಟಿಯಲ್ಲಿ (ಆರನೆಯ ಗರ್ಭದಲ್ಲಿ), ಯೋನಿದ್ವಾರದಿ—ಲಕ್ಷ್ಮೀದ್ವಾರಾ (ಲಕ್ಷ್ಮೀದೇವಿಯು ಪ್ರಸವವಾದಂತೆ), ತೆಗೆದು—ಹೊರಗೆ ಹಾಕಿ, ವಿರಿಂಚಾಂಡವನು—ಬ್ರಹ್ಮಾಂಡವನ್ನು, ನಿರ್ಮಿಸಿದ—ಸೃಷ್ಟಿಮಾಡಿದನು.

**ವಿಶೇಷಾಂಶ:** (೧) ೧ನೇ ಸೃಷ್ಟಿ ಶುದ್ಧಸೃಷ್ಟಿ (ವಾಸುದೇವಾದಿವ್ಯೂಹದ ಅಭಿವ್ಯಕ್ತಿ; ೨ನೇ ಸೃಷ್ಟಿ—ಲಕ್ಷ್ಮೀಸೃಷ್ಟಿ (ಪರಾಧೀನ ವಿಶೇಷಾವಾಪ್ತಿ ರೂಪವಾದುದು); ೩ನೇ ಸೃಷ್ಟಿ—ಗುಣತ್ರಯದ ಸೃಷ್ಟಿ, ೪ನೇ ಸೃಷ್ಟಿ—ಮಹತ್ತತ್ತ್ವದ ಸೃಷ್ಟಿ (ಪ್ರಥಮ ಪುರುಷರೂಪದಿಂದ ಆದುದು); ೫ನೇ ಸೃಷ್ಟಿ—ಇತರ ತತ್ತ್ವಗಳು ಮತ್ತು ತತ್ತ್ವಾಭಿಮಾನಿಗಳ ಸೃಷ್ಟಿ; ಹೀಗೆ ಐದು ವಿಧ ಸೃಷ್ಟಿಯಾದ ನಂತರ, ಆರನೇ ಸೃಷ್ಟಿಯೇ ಬ್ರಹ್ಮಾಂಡದ ಸೃಷ್ಟಿಯು. ಹೀಗೆ ಸೃಷ್ಟಿಸಿದ ಬ್ರಹ್ಮಾಂಡದಲ್ಲಿ, ದ್ವಿತೀಯ ಪುರುಷರೂಪದಿಂದ ಶ್ರೀಹರಿಯು ಪ್ರವೇಶಿಸಿದನು.

(೨) ಈ ಪುರುಷರೂಪದ ನಾಭಿಕಮಲದಲ್ಲಿ, ಬ್ರಹ್ಮದೇವನ ಉತ್ಪತ್ತಿ, ಲೋಕವಿಭಾಗಾದಿಗಳು ಕ್ರಮವಾಗಿ ಮುಂದೆ ನಡೆಯುತ್ತವೆ.

**ನೂರುಕೋಟಿ ಯೋಜನ ಪ್ರಮಾಣದಿ ಸುತ್ತ**
**ಪರಿಯೆಂತೆನ್ನೆ ಶೋಭಿಸುವ**

**ಆ ರಮ್ಯಬೊಮ್ಮಾಂಡ ಪೊಕ್ಕು ಪುನರಪಿ**
**ನೀರೊಳಗರಸು ಕೃಷ್ಣನು ಪವಡಿಸಿದ** ||೩೮||

ಬ್ರಹ್ಮಾಂಡದ ಹೊರಭಾಗವನ್ನು ವರ್ಣಿಸಿರುತ್ತಾರೆ.

**ಅರ್ಥ:** ನೂರುಕೋಟಿಯೋಜನಪ್ರಮಾಣದಿ—ನೂರುಕೋಟಿಯೋಜನ ಅಳತೆಯಷ್ಟು ದಪ್ಪವಾದ, ಸುತ್ತಪರಿ ಎಂತೆನ್ನೆ—ಬ್ರಹ್ಮಾಂಡದ ಸುತ್ತಲೂ, ಆವರಿಸಿ, ಶೋಭಿಸುವ—(ಪೃಥಿವೀ ಆವರಣದಿಂದ) ವಿರಾಜಿಸುವ, ಆ ರಮ್ಯಬೊಮ್ಮಾಂಡ ಪೊಕ್ಕು—(ತನ್ನ ಕ್ರೀಡಾಸ್ಥಾನವಾದ) ಆ ಬ್ರಹ್ಮಾಂಡವನ್ನು (ಪುರುಷರೂಪದಿಂದ) ಪ್ರವೇಶಿಸಿ, ಪುನರಪಿ—ಮತ್ತೆ (ನಂತರ) ಅಥವಾ ಪುನರಪಿ ಪೊಕ್ಕು—ಎರಡನೆಯ ಪುರುಷರೂಪದಿಂದ ಪ್ರವೇಶಿಸಿ, ಅರಸು ಕೃಷ್ಣನು—ಜಗದೊಡೆಯನಾದ ಶ್ರೀಹರಿಯು, ನೀರೊಳು—ಅಂಡದೊಳಗಿನ ಜಲದಲ್ಲಿ, ಪವಡಿಸಿದ—ಮಲಗಿದನು.

**ವಿಶೇಷಾಂಶ:** (೧) ಸೃಷ್ಟಿಪ್ರಕರಣವು ಬಹುತೊಡಕಿನ ಸೂಕ್ಷ್ಮ ಪ್ರಮೇಯ-ಗಳುಳ್ಳದ್ದು—ಸ್ಪಷ್ಟವಾಗಿ ಗ್ರಹಿಸುವುದು ಬಹುಕಷ್ಟ. 'ಸೃಷ್ಟಿಪ್ರಕರಣ ಕೃಷ್ಣನೇ ಬಲ್ಲ'ನೆಂಬುದು ಶ್ರೀವಿಜಯದಾಸರಂಥ ಜ್ಞಾನಿವರ್ಯರ ಉಕ್ತಿ. ಹೀಗಿದ್ದರೂ ಶ್ರೀವಾದಿರಾಜರು ಆದಷ್ಟು ತಿಳಿಯಾಗಿ ಅದನ್ನು ನಿರೂಪಿಸಲು ತೊಡಗಿದ್ದಾರೆ. ಓದುಗರು ಸಾವಧಾನದಿಂದ ಗ್ರಹಿಸಲೆತ್ನಿಸಬೇಕು.

(೨) ಬ್ರಹ್ಮಾಂಡವು ಪೂರ್ವ-ಪಶ್ಚಿಮ, ಉತ್ತರ-ದಕ್ಷಿಣ ಮತ್ತು ಸರ್ವತ್ರ ನೇರವಾಗಿ, ಮಧ್ಯದಲ್ಲಿರುವ ಮೇರುಪರ್ವತದ ಮೂಲಕ ೫೦ ಕೋಟಿ-ಯೋಜನ ಅಗಲವುಳ್ಳದ್ದು. ಇದಕ್ಕೆ ಹತ್ತು ಅವರಣಗಳಿವೆ. ಮೊದಲನೆಯದು ಪೃಥ್ವೀ ಆವರಣ. ಇದು ೧೦೦ ಕೋಟಿಯೋಜನ ಅಗಲ (ದಪ್ಪ)ವಾಗಿರು-ವುದು. ಮುಂದಿನ (ಅದರ ಮೇಲಿನ) ಜಲ ಮೊದಲಾದ ಒಂದೊಂದು ಆವರಣವೂ ಒಂದಕ್ಕಿಂತ ಒಂದು ೧೦ರಷ್ಟು ವಿಸ್ತಾರವುಳ್ಳದ್ದು.

'ಐವತ್ತು ಕೋಟಿಯೋಜನ ವಲಯಾಕಾರ ನಿರೀಕ್ಷಿಸು; ಈ ಪ್ರಕಾರದಳ-ವನ್ನು ತಿಳಿದು ಮುಂದರಿದು ನೋಳ್ಪದು; ಇದಕೆ ನೂರುಕೋಟಿ ಧರಣಿ ಆವರಣವು; ಅಲ್ಲಿಂದ ಮೇಲುಭಾಗ ಇರುತಿಪ್ಪವು ಕೇಳಿ। ಉದಕಾಗ್ನಿಮರು-ತಾಕಾಶ। ಹಿರಿದಾಗಿ ಒಂದೊಂದಕ್ಕೆ ದಶಮಡಿಗುಣಿತದಿಂದ। ಧರಣಿಯ ಬಿಟ್ಟು ಮೇಲಿಂದತ್ತ ಎಣಿಸುವುದು' ಇತ್ಯಾದಿ ಶ್ರೀವಿಜಯದಾಸಾರ್ಯರ ಸುಳಾದಿಯು. ಭಾಗವತ, ಬ್ರಹ್ಮಕಾಂಡ, ವಿಷ್ಣುರಹಸ್ಯ ಮುಂತಾದ ಗ್ರಂಥೋಕ್ತಪ್ರಮೇಯ-ಗಳನ್ನೇ ಇಲ್ಲಿ ನಿರೂಪಿಸಲಾಗಿದೆ.

**ಬೊಮ್ಮಂಡದೊಳು ಇಪ್ಪತ್ತನಾಲ್ಕು ತತ್ವ**
**ಸಮ್ಮತ್ರವಾಗಿ ಬೆರಸಿಹವು**
**ಆಮೇಲೆ ಭೂಮ್ಯಾದಿ ಹತ್ತಾವರಣಗಳು**
**ಕ್ರಮದಿಂದ ಸುತ್ತು ಸುತ್ತಿಹವು ॥೩೯॥**

**ಅರ್ಥ:** ಬೊಮ್ಮಂಡದೊಳು—ಬ್ರಹ್ಮಾಂಡದೊಳಗೆ, ಇಪ್ಪತ್ತುನಾಲ್ಕು ತತ್ವ—೨೪ ತತ್ವಗಳೂ, ಸಮ್ಮತ್ರವಾಗಿ—ಯಥಾಯೋಗ್ಯವಾಗಿ, ಬೆರಸಿಹವು—ಮಿಶ್ರವಾಗಿವೆ (ತುಂಬಿಕೊಂಡಿವೆ); ಆಮೇಲೆ—ಆ ಬ್ರಹ್ಮಾಂಡದ ಮೇಲ್ಭಾಗದಲ್ಲಿ, ಭೂಮ್ಯಾದಿ—ಭೂ ತತ್ವವೇ ಮೊದಲಾದ, ಹತ್ತಾವರಣಗಳು—ಹತ್ತು ಹೊದಿಕೆಗಳು, ಕ್ರಮದಿಂದ—ಪೃಥ್ವಿ, ಜಲ, ಅಗ್ನಿ ಇತ್ಯಾದಿ ಕ್ರಮದಿಂದ, ಸುತ್ತು—ಸುತ್ತಲೂ, ಸುತ್ತಿಹವು—ಸುತ್ತುಗಟ್ಟಿವೆ.

**ವಿಶೇಷಾಂಶ:** ಭೂ, ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್, ಸತ್ವ, ರಜ, ತಮಗಳೆಂಬ ಗುಣಗಳು, ಹೀಗೆ ೧೦ ಆವರಣಗಳು. ತ್ರಿಗುಣಗಳನ್ನು ಪ್ರತ್ಯೇಕವಾಗಿ ಹಿಡಿಯದೇ ತ್ರಿಗುಣಾತ್ಮಕ ಅವ್ಯಕ್ತ ತತ್ವವೆಂದು ಒಂದನ್ನೇ ಗಣಿಸಿದರೆ ೮ ಆವರಣಗಳು, ಇವುಗಳಾಚೆ ಅನಂತವಿಸ್ತಾರದ ಅವ್ಯಾಕೃತಾಕಾಶ. ಹೀಗೆ (೯) ನವಾವರಣಗಳು. ಬ್ರಹ್ಮಾಂಡದ ಖರ್ಪರವು ಪೃಥಿವ್ಯಾತ್ಮಕ ಮತ್ತು ಸುತ್ತಲೂ ೧೦೦ ಕೋಟಿ ಯೋಜನ ವಿಸ್ತಾರವುಳ್ಳದ್ದು, ಅದರ ಹೊರಗಿನ ಒಂದೊಂದು ಆವರಣವೂ ಅದರ ೧೦ರಷ್ಟು, ಎಂದರೆ, ಜಲಾವರಣವು ೧,೦೦೦ ಕೋಟಿ, ಅಗ್ನಿ ಆವರಣವು ೧೦,೦೦೦ ಕೋಟಿ ಯೋಜನ, ಹೀಗೆ ತಿಳಿಯಬೇಕು.

**ಪೃಥ್ವಿ ರೂಪವಾದ ಅಂಡವೆಂಬಾವರಣವ**
**ಸುತ್ತಲೂ ಸುತ್ತಿಕೊಂಡಿಹದು**
**ಮತ್ತೆ ಆಬಾದಿತತ್ವಂಗಳ ಆವರಣ**
**ಹತ್ತುಹತ್ತಾಗಿ ಬೆಳದಿಹವು ॥೪೦॥**

**ಅರ್ಥ:** ಪೃಥ್ವಿರೂಪವಾದ—ಭೂ ತತ್ವರೂಪದ, ಅಂಡವೆಂಬ ಆವರಣವ—ಅಂಡಾಕಾರದ ಆವರಣವನ್ನು, ಮತ್ತೆ—ಪುನಃ, ಆಬಾದಿ ತತ್ವಂಗಳ ಆವರಣ—ಉದಕವೇ ಮೊದಲಾದ ತತ್ವಗಳ ಆವರಣಗಳು, ಸುತ್ತಲೂ ಸುತ್ತಿಕೊಂಡಿಹದು—ಬ್ರಹ್ಮಾಂಡವನ್ನು ಸುತ್ತಲೂ ಸುತ್ತುಗಟ್ಟಿದೆ; ಹತ್ತು ಹತ್ತಾಗಿ ಬೆಳೆದಿಹವು—ಒಂದಕ್ಕಿಂತ ಒಂದು ಹತ್ತು ಮಡಿ ಅಧಿಕವಾಗಿ ಹಬ್ಬಿಕೊಂಡಿವೆ.

**ಬೆಳದಾನವಿನಲ್ಲಿ ಮೇಲುಮೇಲಾವರಣ**
**ಉಳಿದ ತತ್ವವನೊಳಗೊಳಗೂ**
**ಒಳಹೊರಗೆಲ್ಲ ಸುತ್ತಿಕೊಂಡೀಪರಿಯಲ್ಲಿ**
**ಸೇರಿದ ಮಹಿಮೆಯಿದಕೋ ॥೪೧॥**

**ಅರ್ಥ:** ಬೆಳೆದ—ಹೀಗೆ ಹಬ್ಬಿದ, ಆ ನವಿನಲ್ಲಿ—ಆ ಸುತ್ತಾವರಣಗಳಲ್ಲಿ, ಮೇಲುಮೇಲಾವರಣ—ಪ್ರತಿಮೇಲಿನ ಆವರಣವೂ, ಉಳಿದ ತತ್ವವನು—ಕೆಳಗಿನ ಇತರ ತತ್ವಾವರಣಗಳನ್ನು, ಒಳಗೊಳಗೂ—ಒಳಗೊಂಡು, ಒಳ-ಹೊರಗೆಲ್ಲ—ಒಳಗೆ ಮತ್ತು ಹೊರಗೆ ಸಹ, ಸುತ್ತಿಕೊಂಡು—ವ್ಯಾಪಿಸಿ, ಈ ಪರಿಯಲ್ಲಿ—ಈ ರೀತಿಯಲ್ಲಿ, ಸೇರಿದ—ಸೇರಿ ಬ್ರಹ್ಮಾಂಡವನ್ನು ಸುತ್ತಿರುವ, ಮಹಿಮೆ—ಪ್ರಭಾವವು (ಅದ್ಭುತವು) ಇದಕೋ—(ಈ ಆವರಣಗಳಿಂದ ಸಹಿತ-ವಾದ ಬ್ರಹ್ಮಾಂಡಕ್ಕೆ) ಇರುತ್ತದೆ. ನೋಡು!

**ವಿಶೇಷಾಂಶ:** *'ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾಃ। ಅಧಶ್ಚ ಮೂಲಾ-ನ್ಯನುಸಂತತಾನಿ'* ಇತ್ಯಾದಿ ಗೀತಾವಾಕ್ಯಗಳಲ್ಲಿ ವರ್ಣಿತವಾದಂತೆ, ತತ್ವಗಳ ಸೂಕ್ಷ್ಮ ಸ್ಥೂಲರೂಪಗಳಿಂದ, ಪರಸ್ಪರವ್ಯಾಪ್ತಿಯನ್ನು, ಈ ಹಿಂದೆ ವಿಸ್ತರಿಸಿರು-ವಂತೆ ಗ್ರಹಿಸಬೇಕು.

**ಉತ್ತರೋತ್ತರತತ್ವಕ್ಕತಿವ್ಯಾಪ್ತಿ ಬೇಕು**
**ಸುತ್ತು ಸುತ್ತಿಹ ದೆಶೆಯೆನಲು**
**ತತ್ವಮಯವಾದ ದೇಹಗಳಿಂತಿಪ್ಪವು**
**ಜೀವ ತ್ರಿಗುಣಗಳೆಂತು ಕಟ್ಟಿಹವೂ ॥೪೨॥**

ತತ್ವಗಳ ವ್ಯಾಪ್ತಿಪ್ರಕಾರವನ್ನು ಸ್ಪಷ್ಟಗೊಳಿಸುತ್ತಾರೆ:

**ಅರ್ಥ:** ಉತ್ತರೋತ್ತರತತ್ವಕ್ಕೆ—ಮೇಲುಮೇಲಿನ ತತ್ವಕ್ಕೆ, ಸುತ್ತು ಸುತ್ತಿಹ ದೆಶೆಯೆನಲು—ಬ್ರಹ್ಮಾಂಡವನ್ನು ಸುತ್ತಿಕೊಂಡಿರುವುದೆಂಬ ಸ್ಥಿತಿಯನ್ನು ಹೇಳಲು, ಅತಿ ವ್ಯಾಪ್ತಿ ಬೇಕು—ಅಧಿಕವಾದ ವ್ಯಾಪ್ತಿಯಿರಬೇಕು, ತ್ರಿಗುಣಗಳು—ಸತ್ವಾದಿಗುಣಗಳು ಪರಸ್ಪರವ್ಯಾಪ್ತಗಳಾಗಿ, (ಬಾಹ್ಯಕವಚರೂಪದಿಂದ), ಜೀವ—ಜೀವನನ್ನು, ಎಂತುಕಟ್ಟಿಹವೂ—ಹೇಗೆ ಸುತ್ತುಗಟ್ಟಿರುವುವೋ (ಬಂಧಿಸಿರು-ವುವೋ) ಹಾಗೆ, ತತ್ವಮಯವಾದ—ತತ್ವರೂಪದ (ಹೇಳಲಾದ ೧೦ ತತ್ವ ಗಳ ರೂಪದ), ದೇಹಗಳು—ದೇಹಗಳು (ಜೀವಸ್ವರೂಪವು ಒಂದರ-

ಮೇಲೊಂದು ಬಾಹ್ಯಕವಚಗಳಂತಿರುವ ದೇಹಗಳನ್ನು ಹೊಂದಿರುವಂತೆ), ಇಂತಿಪ್ಪವು— (ಬ್ರಹ್ಮಾಂಡಕ್ಕೆ ಆವರಣಗಳು ಕವಚಗಳಂತೆ) ಹೀಗಿರುವುವು.

**ಒಳಹೊರಗೆ ವ್ಯಾಪ್ತವಾದ ಮೇಲಣತತ್ವ**
**ಕೆಳಗೆ ಕೀಳುತತ್ವಗಳಿಹವು**
**ಜಲಜನಾಭನಿಂತು ಹತ್ತಾವರಣಗಳ**
**ಒಳಗೆ ಜಗವ ನಿರ್ಮಿಸಿದ** ॥೪೩॥

**ಅರ್ಥ:** ಒಳಹೊರಗೆ ವ್ಯಾಪ್ತವಾದ— ಮೇಲೆಕೆಳಗಿನ ತತ್ವಗಳಲ್ಲಿ ವ್ಯಾಪ್ತ-ವಾದ, ಮೇಲಣತತ್ವ— ಮೇಲಿರುವ (ಉತ್ತಮ) ಪ್ರತಿ ತತ್ವವೂ, ಕೆಳಗೆ— ಅದರ ಕೆಳಗೆ, ಕೀಳುತತ್ವಗಳು— (ಮೇಲಿನ ತತ್ವಕ್ಕಿಂತ ಹೆಚ್ಚು ಸ್ಥೂಲವಾದರೂ ಮತ್ತು ಅಧಮದೇವತಾಭಿಮನ್ಯವಾದುದೂ ಆದ) ಕೆಳಗಿನ (ಅವರ) ತತ್ವ ಗಳೂ, ಇಹವು ಇರುತ್ತವೆ; ಇಂತು— ಹೀಗೆ, ಜಲಜನಾಭನು— ಪದ್ಮನಾಭನು, (ಅಥವಾ ಜಲಜನಾಭ— ಶ್ರೀಹರಿಯು, ಹತ್ತಾವರಣಗಳ ಒಳಗೆ ನಿಂತು— ಹತ್ತು ಆವರಣಗಳಲ್ಲಿ ತಾನೇ ನಿಯಾಮಕನಾಗಿ ಇದ್ದು), ಹತ್ತಾವರಣಗಳ ಒಳಗೆ— ಹತ್ತಾವರಣಗಳ ನಂತರದ ಒಳಭಾಗದಲ್ಲಿ, ಜಗವ— ಜಗತ್ತನ್ನು, ನಿರ್ಮಿಸಿದ— ಸೃಷ್ಟಿಸುವನು.

**ನೂರುಕೋಟಿಯೋಜನ ಮೊದಲಂಡಾವರಣಕ್ಕೆ**
**ನೀರಮೇಲಿರೇಳಾಗಿಯಿಪ್ಪ**
**ತೋರೋ ಲೋಕಂಗಳೆಂಬೈವತ್ತು ಕೋಟಿ ಮೇಲಾರು**
**ಮೂರುದಶೋತ್ತರದ** ॥೪೪॥

**ಅರ್ಥ:** ಮೊದಲ— ಮೊದಲಿನ, ಅಂಡಾವರಣಕ್ಕೆ— ಬ್ರಹ್ಮಾಂಡದ ಆವ-ರಣಕ್ಕೆ (ಪೃಥಿವ್ಯಾತ್ಮಕ ಆವರಣಕ್ಕೆ), ನೂರುಕೋಟಿ ಯೋಜನ— ಒಂದು-ನೂರು ಕೋಟಿ ಯೋಜನದಷ್ಟು ಅಳತೆಯು; ನೀರಮೇಲೆ— (ಅದರ ಮೇಲಿನ) ಜಲಾವರಣದ ಮೇಲೆ, ಏಳಾಗಿಯಿಪ್ಪ— (ಜಲವೂ ಸೇರಿ) ಏಳು ಸಂಖ್ಯೆ-ಯಲ್ಲಿರುವ ಆವರಣಗಳು, ಇರೆ— ಇರುತ್ತಿರಲು, ತೋರೋ— (ಒಳಗೆ) ಪ್ರಕಟ-ವಾಗುವ, ಲೋಕಂಗಳೆಂಬ— ಲೋಕಗಳೆಂದು ಕರೆಯಲ್ಪಡುವ, ಐವತ್ತು ಕೋಟಿ— ೫೦ ಕೋಟಿಯೋಜನದ (ವಲಯಾಕಾರದ) ಪ್ರದೇಶವುಳ್ಳದ್ದು; ಮೇಲೆ— (ಅಂಡದೊಳಗೆ ತುಂಬಿರುವ, ಉದಕ— ಗರ್ಭೋದಕದ) ಮೇಲ್ಭಾಗ-

ದಲ್ಲಿ, ಆರುಮೂರುದಶೋತ್ತರದ—೧೯ ಕೋಟಿಯೋಜನ ವಿಸ್ತಾರವುಳ್ಳ (ಅಂಡೋದಕದಲ್ಲಿ ಎಂಬ ಮುಂದಿನ ನುಡಿಯ ಪದಗಳಿಂದ ಅನ್ವಯವು) ಅಥವಾ, ಮೇಲಾರುಮೂರು ದಶೋತ್ತರದ—ಪೃಥಿವೀ ಆವರಣದ ಮೇಲೆ ಒಂದಕ್ಕಿಂತ ಒಂದು ಹತ್ತರಷ್ಟಿರುವ ಒಂಬತ್ತು ಆವರಣಗಳು.

**ಅಂಡೋದಕದಲ್ಲಿ ಸಾಸಿರ ವರುಷಪರಿಯಂತ**
**ಪುಂಡರೀಕಾಕ್ಷ ಪವಡಿಸಿ**
**ಚಂಡಾಂಶುಸಹಸ್ರನಿಭನಾಭಿಯಿಂದ ಉ-**
**ದ್ದಂಡ ಮಂಡಲವ ನಿರ್ಮಿಸಿದ ॥೪೫॥**

**ಅರ್ಥ:** ಅಂಡೋದಕದಲ್ಲಿ—ಗರ್ಭೋದಕದಲ್ಲಿ, ಸಾಸಿರ ವರುಷ—(ದೇವಮಾನದ) ಸಾವಿರ ವರ್ಷಗಳ, ಪರಿಯಂತ—ವರೆಗೆ, ಪುಂಡರೀಕಾಕ್ಷ—ಶ್ರೀಹರಿಯು, ಪವಡಿಸಿ—ಮಲಗಿ, ಚಂಡಾಂಶುಸಹಸ್ರನಿಭ—ಸಹಸ್ರ ಸೂರ್ಯರ ಪ್ರಕಾಶದಂತೆ ಪ್ರಕಾಶಮಾನವಾದ, ಉದ್ದಂಡಮಂಡಲವ—ಅದ್ಭುತ ಕಮಲವನ್ನು, ನಾಭಿಯಿಂದ—ತನ್ನ ನಾಭಿಯಿಂದ (ಹೊಕ್ಕಳಿಂದ), ನಿರ್ಮಿಸಿದ— ಸೃಷ್ಟಿಸಿದನು.

**ವಿಶೇಷಾಂಶ:** (೧) ೧೯ ಕೋಟಿಯೋಜನವಿಸ್ತಾರ ಜಲದಲ್ಲಿ ಮಲಗಿದ ಆ ಶ್ರೀಹರಿಯು ಅಚಿಂತ್ಯ ಅದ್ಭುತಾಕಾರನಲ್ಲವೇ! ೭ ಕೋಟಿಯೋಜನಮಿತ ಬಾಲಕನಾಗಿ ಪ್ರಳಯಜಲದಲ್ಲಿ ವಟಪತ್ರಶಾಯಿಯಾದ ಶ್ರೀಹರಿಯ ಬಾಲ-ರೂಪದಂತೆಯೇ, ಇದೂ ಅತ್ಯದ್ಭುತವೇ ಸರಿ (೨ನೇ ಲಯಸಂಧಿಯ ಪದ ೩ ನುಡಿ ೩ ವಿಶೇಷಾಂಶ ೩ನ್ನು ಇಲ್ಲಿ ನೋಡಬಹುದು).

(೨) 'ಸಾಸಿರವರುಷ' ಎಂಬುದಕ್ಕೆ ದೇವಮಾನದ ಸಾವಿರವರ್ಷಗಳೆಂದು ಶ್ರೀವಿಜಯದಾಸಾರ್ಯರೂ *'ಸಿರಿಕೂಡ ಬೊಮ್ಮಂಡವ ಪ್ರವೇಶಿಸಿ ಸುರರ ಸಾವಿರ ವರುಷ ಮಲಗಿದ್ದ ಪರಮಾತ್ಮ ॥'* ಎಂದಿರುವರು. ಮನುಷ್ಯಮಾನದ ಒಂದು ವರ್ಷವು ದೇವಮಾನದ ಒಂದುದಿನ.

(೩) *'ಉದ್ದಂಡಮಂಡಲ'*— ಎಂಬುದಕ್ಕೆ, ದಂಡದಿಂದ (ಕಮಲದ ನಾಳ-ದೇಟು) ಎತ್ತಿಹಿಡಿಯಲ್ಪಟ್ಟ, ಮಂಡಲ—ದುಂಡಾಕೃತಿಯು ಎಂದರ್ಥ. 'ತತ್ಪದ್ಮದಲ್ಲಿ' ಎಂದು ಮುಂದಿನ ನುಡಿಗಳಲ್ಲಿ ವಿವರಿಸಿರುವುದರಿಂದ ಇದೇ ಅರ್ಥವು.

**ಇಂತೀಯೆಲ್ಲವು ಕೂಡಿ ವ್ಯಾಪ್ತವಾಗಿ ಲಕ್ಷ್ಮೀ-**
**ಕಾಂತನ ದಿವ್ಯಶ್ರೀಮೂರ್ತಿ**
**ಅಂತುಕೊಂಡಿಪ್ಪವು ರೋಮಕೂಪವು ತುಂಬು-**
**ವಂತೆ ಆ ಹರಿ ಇನಿತಿರೇ** **॥೪೬॥**

**ಅರ್ಥ:** ಇಂತು—ಹೀಗೆ, ಈ ಎಲ್ಲವು ಕೂಡಿ—ಆವರಣಗಳ ಸಹಿತವಾದ ಬ್ರಹ್ಮಾಂಡವು, ವ್ಯಾಪ್ತವಾಗಿ—ಬಹು ವಿಸ್ತಾರವಾಗಿದ್ದು, ಲಕ್ಷ್ಮೀಕಾಂತನ ದಿವ್ಯ ಶ್ರೀಮೂರ್ತಿ—ಶ್ರೀಹರಿಯ ಅದ್ಭುತವಾದ ಮಂಗಳದೇಹದ, ರೋಮ-ಕೂಪವು—(ಒಂದು ಕೂದಲೆಳೆಯ ಕೆಳಗಿನ ತಗ್ಗು) ರೋಮಕೂಪವನ್ನು, ತುಂಬುವಂತೆ—ಮುಚ್ಚುವಂತೆ, ಅಂತುಕೊಂಡಿಪ್ಪವು—ಆಶ್ರಯಿಸಿಕೊಂಡಿರು-ವುವು; ಆ ಹರಿ—(ಬ್ರಹ್ಮಾಂಡ ಮತ್ತು ಆವರಣಗಳನ್ನು ಸೃಷ್ಟಿಸಿದ) ಆ ಶ್ರೀಹರಿಯು, ಇನಿತಿರೇ—ಹೀಗೆ ಅನಂತನಾಗಿರುವನು (ಅದ್ಭುತವ್ಯಾಪ್ತಿ-ಯುಳ್ಳವನು).

**ವಿಶೇಷಾಂಶ:** (೧) ಅಸಂಖ್ಯಕೋಟಿಯೋಜನ ವಿಸ್ತಾರದ ಸಾವರಣ ಬ್ರಹ್ಮಾಂಡವು ಶ್ರೀಹರಿಯ ಒಂದು ರೋಮಕೂಪವನ್ನು ಮಾತ್ರ ತುಂಬಿದೆ—ಇದೂ ಸಹ ಆತನ ಇಚ್ಛೆಯಿಂದಲೇ, ಶ್ರೀಹರಿಯ ಆನಂತ್ಯವು ಅಚಿಂತ್ಯವೇ ಅಲ್ಲದೆ ಮತ್ತೇನು!

(೨) ಶ್ರೀಹರಿಯ ಒಂದೇ ರೋಮಕೂಪದಲ್ಲಿ ಅಡಗುವ ಬ್ರಹ್ಮಾಂಡವನ್ನು, ಶ್ರೀಹರಿಯು ತನ್ನ ಅನಂತ ರೋಮಕೂಪಗಳಲ್ಲಿ, ಒಂದನ್ನೇ ಅನಂತಕೋಟಿ-ಬ್ರಹ್ಮಾಂಡಗಳನ್ನಾಗಿ, ತನ್ನ ಅಚಿಂತ್ಯಶಕ್ತಿಯಿಂದ ಧರಿಸಿರುವನು. ಇರುವುದು ಒಂದೇ ಬ್ರಹ್ಮಾಂಡವು, ಅದನ್ನೇ ಕೋಟಿಶಃ ಬ್ರಹ್ಮಾಂಡಗಳನ್ನಾಗಿ ಶ್ರೀಹರಿಯು ಧರಿಸಿರುವನು.

'*ಶರೀರಾಣಾಂ ಬಹುತ್ವೇನ ಅತೀತಾನಾಗತೈಸ್ತಥಾ।*
*ಅಸ್ಯೈವ ದೇವಕಾಯೇಷು ಪ್ರತಿ ಪ್ರತಿ ಚ ದರ್ಶನಾತ್।*
*ವಿಷ್ಣು ಸಾಮರ್ಥ್ಯತೋಽಂಡಾನಾಂ ಬಹುತ್ವಂ ನಾನ್ಯಥಾ ಭವೇತ್॥*' (ಬ್ರಹ್ಮತರ್ಕ)
'*ಏಕಮಂಡಂ ಬಹುತ್ವೇನ ಪ್ರತ್ಯೇಕಂ ರೋಮಕೂಪಗಮ್।*
*ಬ್ರಹ್ಮಾಽಪಶ್ಯತ್ತಥಾಽತ್ಮಾನಂ ಹರೇಸ್ತೇಷು ಪೃಥಕ್ ಪೃಥಕ್॥*' (ಬ್ರಹ್ಮಾಂಡ-ಪುರಾಣ); '*ಬೃಹದಂಡಮಭೂದೇಕಂ*' (ಭಾರತ) ಈ ಮುಂತಾದ ಪ್ರಮಾಣ-ಗಳನ್ನು ಶ್ರೀಮದ್ಭಾಗವತತಾತ್ಪರ್ಯದಲ್ಲಿ ಉದಹರಿಸಿ, ನಿರ್ಣಯವನ್ನು ಹೇಳಿದ್ದಾರೆ—ಶ್ರೀಮದಾಚಾರ್ಯರು.

**ತಾತ್ಪರ್ಯ:** ಶ್ರೀಹರಿಯು ಬಹುರೂಪಿಯು, (ಅನಂತ ಸಚ್ಚಿದಾನಂದಾತ್ಮಕ ದೇಹಗಳುಳ್ಳವನು) ಮತ್ತು ಭೂತಭವಿಷ್ಯತ್ಕಾಲಗಳಲ್ಲಿ ಸೃಷ್ಟವಾಗುವ ಬ್ರಹ್ಮಾಂಡಗಳೂ ಅಸಂಖ್ಯ. ಈಗಿರುವ ಒಂದೇ ಬ್ರಹ್ಮಾಂಡವು, ಶ್ರೀಹರಿಯ ಅನೇಕರೂಪಗಳಲ್ಲಿ, ಅಸಂಖ್ಯವಾಗಿ ಧರಿಸಲ್ಪಟ್ಟಿದೆ. ಶ್ರೀವಿಷ್ಣುವಿನ ಅಚಿಂತ್ಯ-ಸಾಮರ್ಥ್ಯದಿಂದ ಬ್ರಹ್ಮಾಂಡಗಳ ಬಹುತ್ವವಲ್ಲದೇ ಬೇರೆ ರೀತಿಯಲ್ಲಲ್ಲ (ಬ್ರಹ್ಮತರ್ಕ); ಚತುರ್ಮುಖನು, ಶ್ರೀಹರಿಯ ರೂಪಗಳಲ್ಲಿ, ಪ್ರತಿರೂಪದ ಪ್ರತಿರೋಮಕೂಪದಲ್ಲಿ, ಬ್ರಹ್ಮಾಂಡವನ್ನೂ, ತನ್ನನ್ನೂ, ಪ್ರತ್ಯೇಕವಾಗಿ ಬಹುತ್ವೇನ ಕಂಡನು (ಬ್ರಹ್ಮಾಂಡಪುರಾಣ); ಒಂದೇ ಬ್ರಹ್ಮಾಂಡವು, (ಶ್ರೀಹರಿಯ ಸಾಮರ್ಥ್ಯವಿಶೇಷದಿಂದ) ಅನೇಕ ಬ್ರಹ್ಮಾಂಡವಾಯಿತು (ಭಾರತ). ಈ ಪ್ರಮಾಣಗಳಿಂದ ಒಂದು ಕಾಲದಲ್ಲಿ ಒಂದೇ ಬ್ರಹ್ಮಾಂಡವಿದ್ದರೂ, ಶ್ರೀಹರಿಯನ್ನು 'ಅನಂತ ಕೋಟಿಬ್ರಹ್ಮಾಂಡನಾಯಕ'ನೆಂದು ಆಗಮಗಳು ಸಾರುವುದು ಉಪಪನ್ನವಾಗುತ್ತದೆ.

**ಇಪ್ಪತ್ತೈದು ಕೋಟಿಯೋಜನದೊಳು ಜಗವ**
**ತತ್ಪದ್ಮದಲ್ಲಿ ಪದ್ಮಜನ**
**ಕಲ್ಪಿಸಿ ಆ ಪದ್ಮದಳದಿಂದ ಈರೇಳಾ**
**ಗಿಪ್ಪ ಲೋಕಗಳ ಮಾಡಿದನು** ॥೪೭॥

**ಅರ್ಥ:** ಇಪ್ಪತ್ತೈದು ಕೋಟಿಯೋಜನದೊಳು—೨೫ ಕೋಟಿಯೋಜನದೊಳಗೆ, ಜಗವ—ಭೂಮಿಸಹಿತವಾದ ಮೇಲಿನ (೭) ಸಪ್ತಲೋಕಗಳನ್ನೂ (ಅದರಂತೆ ಭೂಕೆಳಭಾಗದ ೨೫ ಕೋಟಿ ಯೋಜನದೊಳಗೆ ಪಾತಾಳಾದಿ ಸಪ್ತಲೋಕಗಳನ್ನೂ), ತತ್ಪದ್ಮದಲಿ—(ತನ್ನ ನಾಭಿಯಲ್ಲಿ ಸೃಷ್ಟಿಸಿದ) ಕಮಲದಲ್ಲಿ, ಪದ್ಮಜನ—ಬ್ರಹ್ಮದೇವನನ್ನು, ಕಲ್ಪಿಸಿ—ಹುಟ್ಟಿಸಿ, ಆ ಪದ್ಮದಳದಿಂದ—ಆ ಪದ್ಮದ ದಳಗಳಲ್ಲಿ, ಈರೇಳಾಗಿಪ್ಪ—೧೪ ಸಂಖ್ಯೆಯ, ಲೋಕಗಳ—ಲೋಕಗಳನ್ನೂ, ಮಾಡಿದನು—ಸೃಷ್ಟಿಸಿದನು.

**ವಿಶೇಷಾಂಶ:** (೧) ಭೂಲೋಕಸಹಿತವಾದ ಮೇಲಿನ ಸಪ್ತಲೋಕಗಳು: ಭೂಃ (ಭೂಲೋಕ), ಭುವ, (ಅಂತರಿಕ್ಷಲೋಕ), ಸ್ವಃ (ಸ್ವರ್ಗಲೋಕ), ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ. ಭೂಮಿಯಿಂದ ಸಪ್ತಲೋಕಗಳು: ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ.

(೨) ಲೋಕರೂಪದ ಆ ಮಹಾಪದ್ಮದಲ್ಲಿ, ಹಿಂದಿನ ಕಲ್ಪದಂತೆ, ಚತುರ್ಮುಖನು ಲೋಕಗಳನ್ನು ವ್ಯವಸ್ಥೆಗೊಳಿಸಿದನು—'*ಧಾತಾ ಯಥಾ ಪೂರ್ವಮಕಲ್ಪಯತ್*' ಎಂಬ ಶ್ರುತಿಯು ಹೇಳುವಂತೆ, ಬ್ರಹ್ಮನಾಮಕ ವಿಷ್ಣುವು ಬ್ರಹ್ಮನಲ್ಲಿದ್ದು ಸ್ವತಂತ್ರಲೋಕಕರ್ತನೆಂಬುದನ್ನು ಮರೆಯಲಾಗದು. '*ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ*' ಇತ್ಯಾದಿ ಪ್ರಮಾಣ ವಾಕ್ಯಗಳು ಇದನ್ನೇ ಹೇಳುತ್ತವೆ.

(೩) ನಾಭಿಕಮಲದಿಂದ ಹುಟ್ಟಿದ ಬ್ರಹ್ಮನು ೧೦,೦೦೦ ದಿವ್ಯವರ್ಷಗಳ-ಕಾಲ, 'ತಪ-ತಪ' ಎಂಬ ಶ್ರೀಹರಿಯ ಆಜ್ಞೆಯಂತೆ, ತಪಸ್ಸನ್ನಾಚರಿಸಿದನು. ಶ್ರೀಹರಿಯು ಪ್ರಸನ್ನನಾಗಿ, ಪ್ರತ್ಯಕ್ಷನಾಗಿ, ವೇದಾದಿ ಸಕಲ ಶಾಸ್ತ್ರಗಳನ್ನು ಉಪ-ದೇಶಿಸಿ, ಅಂತರ್ಧಾನ ಹೊಂದಿದನು. ಬ್ರಹ್ಮದೇವನು ೧,೦೦೦ ದಿವ್ಯವರ್ಷ-ಗಳವರೆಗೆ ಅಧ್ಯಯನ ಮಾಡಿಕೊಂಡಿದ್ದು, '*ಮತ್ವಾಥ ಶಕ್ತಮಾತ್ಮಾನಾಂ ವಿಶ್ವ-ಸೃಷ್ಟೌ ಮನೋ ದಧೇ। ಅವರ್ಧಯತ್ತತಃಪದ್ಮಮಧೋಮೂಲಂ ಸುವಿ-ಸ್ತೃತಂ॥ ಅಂಡಖರ್ಪರಮಾರಭ್ಯ, ಯಾವದ್ವೈಕುಂಠಮೂಲಕಂ। ವವೃಧೇ ಕಕುಭೋ ವ್ಯಾಪ್ಯ ವಿಶ್ವಸ್ಥಿತ್ಯೈ ಚತುರ್ದಶ॥ ಭುವನಾನ್ಯಸೃಜತ್ತತ್ರ....*' ಇತ್ಯಾದಿ (ವಿಷ್ಣುರಹಸ್ಯ) ನಿರೂಪಣೆಯಂತೆ, 'ಜಗತ್ತನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಪಡೆದನು; ಆಗ ತನ್ನ ಉತ್ಪತ್ತಿಸ್ಥಾನವಾದ ಪದ್ಮವು, ಕೆಳಗಿನ ಬ್ರಹ್ಮಾಂಡ ಖರ್ಪರದಿಂದ ಮೇಲೆ ವೈಕುಂಠದ ಬುಡದವರೆಗೂ, ವಿಸ್ತಾರವಾಗಿ ಬೆಳೆಯಿತು —ದಿಕ್ಕುಗಳನ್ನೆಲ್ಲಾ ವ್ಯಾಪಿಸಿತು; ಆಗ ಬ್ರಹ್ಮದೇವನು, ಜಗತ್ತಿನ ಸ್ಥಿತಿಗಾಗಿ, ಹದಿನಾಲ್ಕು ಲೋಕಗಳನ್ನು ಸೃಷ್ಟಿಮಾಡಿದನು.'

**ಮೊದಲೆ ಬ್ರಹ್ಮನಿಗೆ ಮುಕುತಿಯ**
**ಪದವನಿತ್ತು ಉಳಿದದ ಮುಖ್ಯಪ್ರಾಣನಿಗೆ**
**ಪದುಮಸಂಭವನೆಂಬ ಪಟ್ಟವನೆ ಕಟ್ಟಿ**
**ಹದಿನಾಲ್ಕು ಲೋಕ ಕಾವೆಂಬ ॥೪೮॥**

**ಅರ್ಥ:** ಮೊದಲೆ—ಬ್ರಹ್ಮನನ್ನು ಪದ್ಮದಿಂದ ಹುಟ್ಟಿಸುವ ಮೊದಲೇ, ಬ್ರಹ್ಮನಿಗೆ—ಹಿಂದಿನ ಕಲ್ಪದ ಬ್ರಹ್ಮನಿಗೆ, ಮುಕುತಿಯ ಪದವನಿತ್ತು—ಮೋಕ್ಷ ಪದವಿಯನ್ನು ಕೊಟ್ಟು, ಉಳಿದದ—(ಖಾಲಿಯಾದ—ತೆರವಾದ) ಆ ಸ್ಥಾನಕ್ಕೆ, ಮುಖ್ಯಪ್ರಾಣನಿಗೆ—ವಾಯುದೇವನಿಗೆ, ಪದುಮಸಂಭವನೆಂಬ—ಪದ್ಮಜ (ಬ್ರಹ್ಮ)ನೆಂಬ, ಪದವನೆ ಕಟ್ಟಿ—ಅಧಿಕಾರ ಸ್ಥಾನದಲ್ಲಿ ಕೂಡಿಸಿ, ಹದಿನಾಲ್ಕು-

ಲೋಕ—ಹದಿನಾಲ್ಕುಲೋಕಗಳನ್ನು, ಕಾವೆಂಬ—ನಾನೇ ರಕ್ಷಿಸುವೆನು ಎನ್ನು-ತ್ತಾನೆ. (ಹೀಗೆ ಸಂಕಲ್ಪಿಸಿ ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾದನೆಂದರ್ಥ).

**ವಿಶೇಷಾಂಶ:** ಪೂರ್ವಕಲ್ಪದ ವಾಯುದೇವನೇ ನಾಭಿಕಮಲದಲ್ಲಿ ಹುಟ್ಟಿದ ಈ ಕಲ್ಪದ ಬ್ರಹ್ಮನು. ಹಿಂದಿನ ಬ್ರಹ್ಮನನ್ನು ಮೋಕ್ಷದಲ್ಲಿಟ್ಟು ಮುಖ್ಯಪ್ರಾಣನನ್ನು ಬ್ರಹ್ಮಪದವಿಗೆ ತರಲು ಸಂಕಲ್ಪಿಸಿ, ನಾಭಿಕಮಲದಿಂದ ಸೃಷ್ಟಿಸಿದನು.

**ಶ್ಲೋಕ**

*ಮುಖ್ಯಪ್ರಾಣಾಯ ನಮೋ ಮಂತ್ರತ್ರಯಜಪಃ ಸದಾ।*
*ಅನುಗ್ರಹಾಯ ಮೇ ವಿಷ್ಣೋಃ ಪ್ರೀತಯೇ ಕ್ರಿಯತೇ ಹಿ ಸಃ।*
*ಏಕವಿಂಶತ್ಸಹಸ್ರಾತ್ಮಾ ಷಟ್ಶತಂ ತಮಹರ್ನಿಶಮ್॥*

**ಅರ್ಥ:** ಮುಖ್ಯಪ್ರಾಣಾಯ—ಮುಖ್ಯಪ್ರಾಣನಿಗೆ, ನಮಃ—ನಮಸ್ಕಾರವು; ಹಿ—(ಯಸ್ಮಾತ್) ಏಕೆಂದರೆ, ಸಃ—ಆತನು, ಸದಾ—ನಿರಂತರವಾಗಿ, ಮಂತ್ರತ್ರಯಜಪಃ—ಮೂರು ಮಂತ್ರಗಳ ಜಪವುಳ್ಳವನು; ವಿಷ್ಣೋಃ—ಶ್ರೀವಿಷ್ಣುವಿನ, ಪ್ರೀತಯೇ—ಪ್ರೀತ್ಯರ್ಥವಾಗಿ, ಮೇ ಅನುಗ್ರಹಾಯ—ನನ್ನನ್ನು ಅನುಗ್ರಹಿಸಲಿಕ್ಕಾಗಿಯೂ, ಏಕವಿಂಶತ್ಸಹಸ್ರಾತ್ಮಾಷಟ್ಶತಂ—೨೧,೦೦೦ ಸಂಖ್ಯಾಸಹಿತ ಆರುನೂರನ್ನು (೨೧,೬೦೦ ಆವರ್ತಿ), ತಂ—ಆ ಮಂತ್ರ-ಜಪವನ್ನು, ಅಹರ್ನಿಶಂ—ಹಗಲುರಾತ್ರಿ (ಬಿಡದೇ), ಕ್ರಿಯತೇ—ಮಾಡುತ್ತಾನೆ.

**ವಿಶೇಷಾಂಶ:** ನಿಮಿಷ ೧ಕ್ಕೆ ೧೫ ಉಚ್ಛ್ವಾಸನಿಶ್ವಾಸಗಳಾಗುತ್ತವೆ. ದಿನ ೧ಕ್ಕೆ ೨೧೬೦೦ ಆಗುತ್ತವೆ. ಇವು ಪ್ರಾಣಿದೇಹಗಳಲ್ಲಿದ್ದು, ಮುಖ್ಯ ಪ್ರಾಣದೇವನು ಮಾಡುವ, ಹಂಸಮಂತ್ರ ಜಪಗಳು. ಶ್ವಾಸೋಚ್ಛ್ವಾಸಗಳಿಂದಲೇ ಪ್ರಾಣಿಗಳು ಜೀವಿಸಿರುತ್ತವೆ. ಆದ್ದರಿಂದ ಮುಖ್ಯಪ್ರಾಣನೇ ಜೀವಧಾರಕನು. ಆತನ ಮಂತ್ರಜಪ ನಿಂತರೆ, ನಾವು ಮೃತರು—ನಮ್ಮ ದೇಹಗಳು ಶವಗಳು. ಆತನ ಜಪದಿಂದ ನಾವು ಬದುಕಿರುತ್ತೇವೆಯಾದರೂ, ಅದಕ್ಕಾಗಿಯೇ ಆತನ ಜಪ-ವಲ್ಲ—ವಿಷ್ಣುಪ್ರೀತಿಯೇ ಆತನ ಮುಖ್ಯಗುರಿಯು. ಅಸಂಖ್ಯಜೀವರ ಪ್ರಾಣ-ಧಾರಕನಾದ ಮುಖ್ಯಪ್ರಾಣನ ಮಹಿಮೆಯು, ರುದ್ರಾದಿ ಜೀವರಿಗೆ ಸಹ, ಅಚಿಂತ್ಯವೂ ಅದ್ಭುತವೂ ಆದುದು. ಜೀವನಪ್ರದನಾದ ಮುಖ್ಯಪ್ರಾಣನು ಜಪಿಸುವ ಮಂತ್ರವು ಮೂರು ಭಾಗಗಳುಳ್ಳದ್ದು—ಹಂಸಮಂತ್ರವೆಂದು ಆಗಮಗಳಲ್ಲಿ ಪ್ರಸಿದ್ಧ. ***'ಹಂಸಃ ಸೋಽಹಂ ಸ್ವಾಹಾ'*** ಎಂಬುದೇ ಆ ಮಂತ್ರವು. **'ಹಂಸಃ'**—ಎಂಬುದು ವಿರಾಮಕಾಲದಲ್ಲಿಯೂ, **ಸೋಽಹಂ**—

ಉಚ್ಛ್ವಾಸಕಾಲದಲ್ಲಿಯೂ, **ಸ್ವಾಹಾ**— ನಿಶ್ವಾಸಕಾಲದಲ್ಲಿಯೂ ಉಚ್ಚರಿಸಲ್ಪಡುತ್ತವೆ. ಸಕಲ ದೋಷದೂರನೂ, ಭಕ್ತರ ದುಃಖಾಜ್ಞಾನಾದಿದೋಷಪರಿಹಾರಕನೂ ಆದ ಶ್ರೀಹರಿಯು **'ಹಂಸ'**ನು; **'ಸೋऽಹಂ'** ಎಂದರೆ ಆ ಶ್ರೀಹರಿಯೇ ನನ್ನ ಅಂತರ್ಯಾಮಿಯೆಂದರ್ಥ; **'ಸ್ವಾಹಾ'** ಎಂದರೆ ಸಮರ್ಪಣಸಹಿತ ನಮಸ್ಕಾರವು.

*'ಅಂತರ್ಯಾಮಿಣಮೀಶೇಶಂ ಅಪೇಕ್ಷ್ಯಾಹಂ ತ್ವಮಿತ್ಯಪಿ।*
*ಇಮೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇऽಪಿ ವಸ್ತುಷು॥'* (ಭಾಷ್ಯ)

ಎಂದರೆ, ಅಹಂ, ತ್ವಂ, ಮೊದಲಾದ ಶಬ್ದಗಳು ಭಿನ್ನವಸ್ತುವಾಚಕಗಳಾದರೂ, ಸರ್ವನಿಯಾಮಕನಾದ ಅಂತರ್ಯಾಮಿಯನ್ನು ನಿರ್ದೇಶಿಸಲು ಪ್ರಯೋಗಿಸಲ್ಪಡುತ್ತವೆ. ಆದ್ದರಿಂದ 'ಸೋऽಹಂ' ಎಂಬಲ್ಲಿನ 'ಅಹಂ' ಎಂದರೆ ನನ್ನ ಅಂತರ್ಯಾಮಿಯೆಂದೇ ಅರ್ಥ. 'ನಾನೇ ಹಂಸ'ನೆಂಬ ಅಭೇದಾರ್ಥವನ್ನು ತಿಳಿಯುವವರು ಅಸುರರು.

## ಪದ ೪

ರಾಗ: ? ತಾಳ-ರೂಪಕ

**ಆರುನೂರು ಕೂಡಿ ಇಪ್ಪತ್ತೊಂದುಸಾವಿರ**
**ಮಂತ್ರೈಕಶ್ವಾಸಜಪವ**
**ಮಾರುತ ಈರೇಳು ಲೋಕದ ಜೀವರೆಲ್ಲರಂತೆ**
**ಮಾಡಿ ಮೆಚ್ಚಿರುವ** ॥೧॥
**ಇಂಥಾ ಭಕ್ತನಿಗೆ ಬ್ರಹ್ಮಪಟ್ಟವನು ಶ್ರೀ-**
**ಕಾಂತ ಕಟ್ಟುವದೊಂದರಿದೇ**
**ಎಂತೆಂತು ಸೇವಿಪರಂತಂತವರ ದಯವಂತ ಅ-**
**ನಂತ ರಕ್ಷಿಸುವನು** ॥೨॥

**ಅರ್ಥ:** ಆರುನೂರು ಕೂಡಿ ಇಪ್ಪತ್ತೊಂದುಸಾವಿರ— ೨೧೬೦೦ ಸಂಖ್ಯೆಯ, ಮಂತ್ರೈಕಶ್ವಾಸಜಪವ— (ಮುಖ್ಯಪ್ರಾಣದೇವನಿಗೆ) ಮುಖ್ಯಮಂತ್ರವಾದ ಶ್ವಾಸಜಪವನ್ನು (ನಮಗೆ ಉಸಿರಾಡುವಿಕೆ— ಅವರಿಗೆ ಶ್ರೀಹರಿಪ್ರೀತಿಕರಮಂತ್ರ), ಮಾರುತ— ವಾಯುದೇವನು, ಈರೇಳುಲೋಕದ ಜೀವರೆಲ್ಲರಂತೆ— ೧೪ ಲೋಕದ ಎಲ್ಲ ಜೀವರ ಶ್ವಾಸಗಳನ್ನನುಸರಿಸಿ, ಮಾಡಿ— (ಅವರ ದೇಹಗಳಲ್ಲಿದ್ದು) ಜಪಿಸಿ, ಮೆಚ್ಚಿರುವ— (ಇದರಿಂದ) ಪ್ರಸನ್ನನಾದ, ಶ್ರೀಕಾಂತ—

ಲಕ್ಷ್ಮೀಪತಿಯು, ಇಂಥಾ ಭಕ್ತನಿಗೆ— ಈ ವಿಧ ಮಹಿಮೆಯುಳ್ಳ ತನ್ನ ಭಕ್ತನಿಗೆ, ಬ್ರಹ್ಮಪದವಿಯನ್ನು, ಕಟ್ಟುವುದೊಂದರಿದೇ— ಕೊಡುವುದು ಹೆಚ್ಚೇ (ಆಶ್ಚರ್ಯವೇನಲ್ಲ); ಎಂತೆಂತು— ಹೇಗೆ ಹೇಗೆ, ಸೇವಿಪರ— ಸೇವಿಸುವರೋ, ಅಂತಂತು — ಹಾಗೆ ಹಾಗೆ, ಅವರ— ಅವರನ್ನು, ದಯವಂತ— ಕೃಪಾಮೂರ್ತಿಯಾದ, ಅನಂತ— ಶ್ರೀಹರಿಯು, ರಕ್ಷಿಪನು— ಸಲಹುತ್ತಾನೆ.

**ವಿಶೇಷಾಂಶ:** ಸರ್ವಸಮನಾದ ಶ್ರೀಹರಿಯು, ಸರ್ವರಿಗೂ ಸೇವಾನುರೂಪವಾದ ಫಲವಿತ್ತು ಅನುಗ್ರಹಿಸುತ್ತಾನೆ. ಬ್ರಹ್ಮಪದವಿಯು, ಮುಖ್ಯಪ್ರಾಣದೇವನ ಅದ್ಭುತವಾದ, ಅನ್ಯಸಾಧ್ಯವಲ್ಲದ ಸೇವೆಗೆ ಉಚಿತವಾದುದೇ ಎಂಬುದನ್ನು ಹಂಸಮಂತ್ರ ಜಪಪ್ರಕಾರದ ವರ್ಣನೆಯಿಂದ ಸೂಚಿತವೆಂದು ತಿಳಿಯಬೇಕು. ಹೀಗೆಯೇ, ಅವರ ಸರ್ವಕ್ರಿಯೆಗಳೂ ವಿಷ್ಣುಪ್ರೀತಿಯನ್ನು ಮಾತ್ರ ಉದ್ದೇಶಿಸಿ, ಮಾಡಲ್ಪಡುವ ವಿಷ್ಣು ಪೂಜಾರೂಪವಾದವುಗಳೇ ಆಗಿದ್ದು ಅನನ್ಯ ಸಾಧ್ಯಗಳೇ ಆಗಿವೆ.

*'ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ'* (ಗೀತಾ)
ಮತ್ತು
*'ನೈಷಾ ಪರಾವರಮತಿರ್ಭವತೋ ನನು ಸ್ಯಾ-*
*ಜ್ಜಂತೋರ್ಯಥಾತ್ಮಸುಹೃದೋ ಜಗತಸ್ತಥಾಪಿ।*
*ಸಂಸೇವಯಾ ಸುರತರೋರಿವ ತೇ ಪ್ರಸಾದಃ*
*ಸೇವಾನುರೂಪ ಉದಯೋ ನ ಪರಾವರತ್ವಮ್॥'* (ಭಾಗವತ)

ಎಂಬ ವಾಕ್ಯಗಳೂ, ಶ್ರೀಹರಿಯಿಂದ ಲಭಿಸುವ ಫಲವು ಸೇವಾನುರೂಪವೆಂಬ ಪ್ರಮೇಯವನ್ನೇ ಸಾರುತ್ತವೆ. ಈ ಪ್ರಮಾಣವಾಕ್ಯಗಳ ಅರ್ಥ: ಯೇ— ಯಾರು, ಯಥಾ— ಹೇಗೆ, ಮಾಂ— ನನ್ನನ್ನು, ಪ್ರಪದ್ಯಂತೇ— ಭಜಿಸುವರೋ, ತಾನ್— ಆ ಜನರನ್ನು, ತಥೈವ— ಅವರ ಸೇವಾನುಸಾರವಾಗಿಯೇ, ಅಹಂ— ನಾನು, ಭಜಾಮಿ— (ಫಲಪ್ರದನಾಗಿ) ಪ್ರತ್ಯುಪಕರಿಸುತ್ತೇನೆ. (ಗೀತಾ); ಯಥಾಜಂತೋಃ— ಪ್ರಾಣಿಗಳ ಯೋಗ್ಯತೆಯು (ಉಚ್ಚನೀಚಭಾವನೆಗಳು) ಹೇಗೋ, ತಥಾ— ಹಾಗೆ (ಅದಕ್ಕನುಸಾರವಾಗಿ), ಆತ್ಮಸುಹೃದಃ— ಸರ್ವಜೀವರನ್ನು ಪ್ರೀತಿಸುವ (ಉಪಕಾರಕನಾದ), ಭವತಃ— ನಿನಗೆ, ಏಷಾ— ಈ (ಲೋಕದ ಜನರಲ್ಲಿ ಕಾಣುವ), ಪರಾವರಮತಿಃ— ಉಚ್ಚನೀಚರೆಂಬ ವಿಷಮಬುದ್ಧಿಯು, ನ ಸ್ಯಾತ್‌ನನು— ಇಲ್ಲವೆಂಬುದು (ಸಲ್ಲದೆಂಬುದು) ಅತಿಸ್ಪಷ್ಟವು; ಜಗತಃ ಅಪಿ— ಜಗತ್ತಿಗಾದರೋ, (ಪ್ರಾಣಿಗಳಿಗಾದರೋ),

ತೇ ಪ್ರಸಾದಃ—ನಿನ್ನ ಪ್ರಸನ್ನತೆಯ ಫಲವು, ಸುರತರೋಃ—ಕಲ್ಪವೃಕ್ಷದ, ಸಂಸೇವಯಾ—ಸೇವೆಯಿಂದ, ಸೇವಾನುರೂಪಉದಯಃ ಇವ—ಸೇವಾನುಗುಣವಾದ ಫಲೋದಯವಾಗುವಂತೆ; ನ ಪರಾವರತ್ವಂ—ಉಚ್ಚನೀಚರೆಂಬ ವೈಷಮ್ಯದಿಂದಲ್ಲ.

**ಆರು ತಿಂಗಳು ಜಪಮಾಡಿದ ಧ್ರುವನಿಗೆ**
**ಸೇರಿಸಿದನು ಧ್ರುವಪದವ**
**ನೂರು ಬ್ರಹ್ಮನ ವರ್ಷಪರಿಯಂತ ಈ ವಿಧದಿ**
**ಆರಾಧಿಸುವ ಭಕ್ತಗೇ** ॥೩॥

**ಪೂರೈಸಿಕೊಡುವುದಕೆ ಸುಭಗವಿಲ್ಲ**
**ದೊರಕೊಂದು ಕೊಟ್ಟು ತಿರುಗುವಂತೆ**
**ಮಾರುತಗೆ ಬೊಮ್ಮಪಟ್ಟವನಿತ್ತು ತ-**
**ನ್ನಾರೋಗಣೆಯೊಳರ್ಧವನಿತ್ತ** ॥೪॥

**ಅರ್ಥ:** ಆರುತಿಂಗಳು—ಆರುತಿಂಗಳ ಕಾಲಮಾತ್ರ, ಜಪ ಮಾಡಿದ ಧ್ರುವನಿಗೆ—ತಪಸ್ಸುಮಾಡಿದ ಧ್ರುವರಾಜನಿಗೆ, ಧ್ರುವಪದವ—ಧ್ರುವಪದವಿಯನ್ನು, ಸೇರಿಸಿದನು—ಹೊಂದಿಸಿದನು; ನೂರು ಬ್ರಹ್ಮನ ವರ್ಷಪರಿಯಂತ — ಬ್ರಹ್ಮದೇವನ ಒಂದುನೂರುವರ್ಷಕಾಲ, ಈ ವಿಧದಿ—ಈ ಅದ್ಭುತ ಪ್ರಕಾರದಿಂದ, ಆರಾಧಿಸುವ ಭಕ್ತಗೆ—ಸೇವಿಸುವ ಭಕ್ತನಿಗೆ ಬೇರಾವ ಪದವನ್ನು ಕೊಡಬೇಕು? (ವಿವೇಕಿಗಳು ಯೋಚಿಸಲಿ.) ಪೂರೈಸಿಕೊಡುವುದಕೆ—(ಮುಖ್ಯಪ್ರಾಣನ ಸೇವೆಗೆ ತಕ್ಕ) ಪೂರ್ಣಫಲವನ್ನು ಕೊಡುವುದಕ್ಕೆ, ಸುಭಗವಿಲ್ಲ—ಐಶ್ವರ್ಯವೇ ಇಲ್ಲ. (ಯೋಗ್ಯ ವಸ್ತುವೇ ಇಲ್ಲ—ಸರಿಯಾದ ಸ್ಥಾನವೂ ಇಲ್ಲ), ದೊರಕೊಂದು ಕೊಟ್ಟು—ದೊರಕಿದ ಯಾವುದೋ ಒಂದನ್ನು ಕೊಟ್ಟು, ತಿರುಗುವಂತೆ—ಸುಮ್ಮನಾಗುವಂತೆ, ಮಾರುತಗೆ-ವಾಯುದೇವನಿಗೆ, ಬೊಮ್ಮಪಟ್ಟವನಿತ್ತು—ಬ್ರಹ್ಮಪದವಿಯನ್ನು ಕೊಟ್ಟು, *ತನ್ನಾರೋಗಣೆಯೊಳು

---

*ನಾವು ನೈವೇದ್ಯಕ್ಕೆ ಇಟ್ಟ ಪದಾರ್ಥಗಳಲ್ಲಿರುವ ಸ್ವಾಖ್ಯರಸವನ್ನು ಶ್ರೀಹರಿಯು ಸ್ವೀಕರಿಸುವಾಗ ತನ್ನ ತೊಡೆಯ ಮೇಲೆ ಶ್ರೀವಾಯುದೇವನನ್ನು ಕೂಡಿಸಿಕೊಂಡು, ತನ್ನೊಡನೆ ಆತನಿಗೆ ಅರ್ಹವಾದ ರಸವನ್ನು, ಪ್ರೀತಿಯಿಂದ ಮಗುವಿಗೆ ತಾಯಿ ಉಣಿಸುವಂತೆ ಊಟಮಾಡಿಸುತ್ತಾನಂತೆ! ಆದ್ದರಿಂದ ಶ್ರೀವಾದಿರಾಜರು ತನ್ನಾರೋಗಣೆ ಎಂದಿದ್ದಾರೆ. ಈ ಭಾಗ್ಯ ಮತ್ತಾರಿಗೆ!

ಆರೋಗಣೆ ಎಂಬುದಕ್ಕೆ ಭೋಜನವೆಂಬುದೂ ಅರ್ಥ. —ಸಂ.

— ತನ್ನ ಭೋಗದಲ್ಲಿ, ಅರ್ಧವನಿತ್ತ— ಸಮಭಾಗವನ್ನಿತ್ತನು (ಸಹಭೋಗ-ವನ್ನಿತ್ತನು).

**ವಿಶೇಷಾಂಶ:** (೧) ಇಂಥ ಅದ್ಭುತ ಮಹಿಮೋಪೇತನಾದ ಮುಖ್ಯ ಪ್ರಾಣನೂ ಸರ್ವದಾ ಸರ್ವಪ್ರಕಾರದಿಂದ ಶ್ರೀಹರಿಯ ವಶನು. ಹಂಸಮಂತ್ರ ಜಪವನ್ನು ಸಹ, ಶ್ರೀಹರಿಯ ಅನುಗ್ರಹದಿಂದ ಆತನೊಂದಿಗೇ ಮಾಡುವನು. ಶ್ರೀಹರಿಯನ್ನುಳಿದು ಯಾರೂ ಯಾವ ಕ್ರಿಯೆಯನ್ನೂ ಸ್ವತಂತ್ರವಾಗಿ ಮಾಡ-ಲಾರರೆಂಬ ಮುಖ್ಯ ಪ್ರಮೇಯವನ್ನು ಗಮನದಲ್ಲಿಟ್ಟು, ಸ್ವಯೋಗ್ಯವಾದ ಸಾಧನೆಗಳನ್ನು ಮಾಡಿಸಿ, ಅದಕ್ಕನುಸಾರವಾಗಿ ಫಲಗಳನ್ನೂ ಕೊಡುವವನು ಶ್ರೀಹರಿಯೇ ಎಂದು ತಿಳಿಯಬೇಕು. ಶ್ವಾಸಾದಿ ಸಕಲವೂ ಮುಖ್ಯಪ್ರಾಣನ ವಶವಾದರೂ ಆತನು ವಿಷ್ಣುವಶನೆಂದು ತಿಳಿಸುವ ಈ ಹಿಂದೆ ೨ನೇ ಲಯ ಸಂಧಿಯ ಪದ ೧೦, ನುಡಿ ೬ರ ವಿಶೇಷಾಂಶ ೪ರಲ್ಲಿ ವಿವರಿಸಲಾದ ಪ್ರಮಾಣಗಳು ಹೀಗಿವೆ: *'ಮುಖ್ಯಪ್ರಾಣವಶೇ ಸರ್ವಂ ಸ ವಿಷ್ಣೋರ್ವಶಗಃ ಸದಾ'* (ಅಣುಭಾಷ್ಯ)— ಸರ್ವವೂ ಮುಖ್ಯಪ್ರಾಣನ ವಶವು— ಆತನು ಸರ್ವದಾ ಶ್ರೀವಿಷ್ಣುವಶನು. *'ಹಂಸರೂಪೌ' ಹಿ ತೌ ದೇವೌ ಶ್ವಾಸೋಚ್ಛ್ವಾಸಪ್ರವರ್ತಕೌ'* (ಬೃಹದಾರಣ್ಯಭಾಷ್ಯ)— ನಿರ್ದೋಷಿಗಳಾದ (ಆದ್ದರಿಂದಲೇ ಹಂಸಶಬ್ದ-ವಾಚ್ಯರಾದ) ವಿಷ್ಣುವಾಯುಗಳಿಬ್ಬರೂ ಶ್ವಾಸೋಚ್ಛ್ವಾಸಪ್ರವರ್ತಕರು.

(೨) ಕೇವಲ ಸತ್ಯಲೋಕಾಧಿಪತ್ಯರೂಪದ ಬ್ರಹ್ಮಪದವಿಯೂ ಸಹ ಮುಖ್ಯಪ್ರಾಣನ ಸೇವೆಗೆ ಸರಿಯಾದ ಫಲವಲ್ಲವೆಂದೇ ಶ್ರೀಹರಿಯು ಆತನಿಗೆ **'ಸಹಭೋಗ'**ವನ್ನಿತ್ತನೆಂದು ಹೇಳಲಾಗಿರುವುದು, ಈ ನುಡಿಯ ಭಾವವನ್ನು ಸ್ಪಷ್ಟಗೊಳಿಸುತ್ತದೆ. *'ಮುಕ್ತಿಪ್ರದಾನಾತ್ ಪ್ರತಿಕರ್ತೃತಾ ಮೇ ಸರ್ವಸ್ಯ ಚಾಥೋ ಭವತಾಂ ಭವೇತ। ಹನೂಮತೋ ನ ಪ್ರತಿಕರ್ತೃತಾ ಸ್ಯಾತ್ ಸ್ವಭಾವಭಕ್ತಸ್ಯ ನಿರೌಪಧಂ ಮೇ। ಭೋಗಾಶ್ಚಯೇ ಯಾನಿ ಚ ಕರ್ಮ ಜಾತಾನ್ಯನಾದ್ಯನಂತಾನಿ ಮಮೇಹ ಸಂತಿ। ಮದಾಜ್ಞಯಾ ತಾನ್ಯಖಿಲಾನಿ ಸಂತಿ ಧಾತುಃ ಪದೇ ತತ್ಸಹಭೋಗನಾಮಾ। ಏತಾದೃಶಂ ಮೇ ಸಹ ಭೋಜನಂ ತೇ ಮಯಾ ಪ್ರದತ್ತಂ ಹನುಮನ್ ಸದೈವ॥'* ಎಂಬ (ಭಾ.ತಾ.ನಿ) ಭಾಗದಲ್ಲಿ ಈ ಪ್ರಮೇಯವು ನಿದರ್ಶಿತವಾಗಿದೆ. ಈ ಶ್ಲೋಕಗಳ ಅರ್ಥವು ಹೀಗಿದೆ: ಭವತಾಂ ಸರ್ವಸ್ಯ— ನಿಮ್ಮೆಲ್ಲರ ನನ್ನ ಸೇವಾರೂಪದ ಸುಕೃತಕ್ಕೆ, ಮುಕ್ತಿ-ಪ್ರದಾನಾತ್— ನಿಮಗೆ ಮೋಕ್ಷವನ್ನು ಕೊಡುವುದರಿಂದ, ಮೇ— ನನ್ನ, ಪ್ರತಿ-ಕರ್ತೃತಾ— ಪ್ರತ್ಯುಪಕಾರವು, ಭವೇತ— ಆಗಬಹುದು. (ಆದರೆ), ನಿರೌಪಧಂ

—ಉಪಾಧಿರಹಿತನಾಗಿ (ಫಲಾಪೇಕ್ಷೆ ಮುಂತಾದ ಯಾವ ನಿಮಿತ್ತವೂ ಇಲ್ಲ-ದಂತೆ) ಸೇವಿಸುವ, ಸ್ವಭಾವಭಕ್ತಸ್ಯ—ಸ್ವಭಾವದಿಂದಲೇ ಶ್ರೇಷ್ಠಭಕ್ತನಾದ, ಹನೂಮತಃ—ಹನುಮಂತನಿಗಾದರೋ, ಪ್ರತಿಕರ್ತೃತಾ ನ ಸ್ಯಾತ್—(ಮೋಕ್ಷಪ್ರಧಾನವೂ) ಯೋಗ್ಯಪ್ರತ್ಯುಪಕಾರವು (ಸಂಭಾವನೆಯು) ಆಗುವು-ದಿಲ್ಲ; ಇಹ ಜಗತ್ತಿನಲ್ಲಿ, ಅನಾದ್ಯನಂತಾನಿ ಯಾನಿ ಕರ್ಮಜಾತಾನಿ—ಅನಾದ್ಯನಂತಗಳಾದ ಯಾವ ಕರ್ಮಸಮೂಹಗಳಿವೆಯೋ, ತಾನಿ—ಆ ಎಲ್ಲವೂ, ಧಾತುಃಪದೇ—ಬ್ರಹ್ಮ ಪದವಿಯಲ್ಲಿ, (ಬ್ರಹ್ಮನ ವಶದಲ್ಲಿ), ಸಂತಿ—ಇರುತ್ತವೆ, (ಎಂದರೆ, ಸಕಲ ಪ್ರಾಣಿಗಳಿಂದ ಸಂಭವಿಸುವ ಸಕಲಶುಭ-ಕರ್ಮಗಳ ಮುಖ್ಯಕಾರಣತ್ವವು, ವಿಷ್ಣು ಬ್ರಹ್ಮರಿಗೆ ಇರುವುದರಿಂದ, ಆ ಎಲ್ಲವುಗಳ ಫಲರೂಪವಾದ ಸುಖಾನುಭವವು, ಉಭಯರಿಗೂ ಉಂಟು—ಬ್ರಹ್ಮನೊಂದಿಗೇ (ಬ್ರಹ್ಮಾಂತರ್ಯಾಮಿಯಾಗಿದ್ದುಕೊಂಡೇ) ಸರ್ವಶುಭಫಲ-ಭೋಕ್ತನು—ಶ್ರೀವಿಷ್ಣು; ಈ ಕಾರಣದಿಂದ ಈ ವಿಶೇಷಯುಕ್ತ ಬ್ರಹ್ಮಪದವಿಗೆ ಸಹಭೋಗವೆಂದು ಹೆಸರು); ಏತಾದೃಶಂ—ಈ ವಿಧ ಸುಖಭೋಗವುಳ್ಳ, ಮೇ ಸಹಭೋಜನಂ—ನನ್ನ ಸಹಭೋಗವು, ಮಯಾ—ನನ್ನಿಂದ, ಹನುಮನ್—ಹೇ ಹನುಮಂತ! ಸದೈವ—ನಿರಂತರವಾಗಿ, ಪ್ರದತ್ತಂ (ನಿನಗೆ) ಕೊಡಲ್ಪಟ್ಟಿದೆ.

**ಲೆಕ್ಕವಿಲ್ಲದ ನಾನಾ ಜೀವರು ಮಾಡುವ**
**ಸತ್ಕರ್ಮಗಳ ಫಲವಾದ**
**ಸೌಖ್ಯವ ಬೊಮ್ಮಪಟ್ಟವನಾಳ್ವ ದೇವನ**
**ಲಕ್ಷ್ಮೀರಮಣ ಕೂಡಿಕೊಂಡ ॥೫॥**

**ಆದರಿಂದ ಸಹಭೋಗಪದವೆಂಬುದರಿಂದ ಸಂ-**
**ಪದವ ಮುಖ್ಯಪ್ರಾಣನಿಗೆ**
**ಮದನನಯ್ಯಗೆ ಇಂತು ಮಾಡಿದ ಸೇವೆಗೆ**
**ಸದಮಲಫಲವಿತ್ತು ಕೂಡಿ ಕೊಡುವ ॥೬॥**

**ನಂಬಿದ ಸಾಲಿಗೆ ಬಂದು ಬೇಡಲಾಗಿ**
**ಉಂಬಗೆ ಕೂಡಿಕೊಂಡುಂಬ**
**ನಂಬಿಸುವಂತೆ ಬೊಮ್ಮನಿಗರ್ಧವನುಣಿಸಿ ಹರಿ**
**ಎಂಬ ಸಂಭ್ರಮವೇನೆಂಬೆ ॥೭॥**

**ಬೊಮ್ಮನ ನೂರುವರ್ಷಪರಿಯಂತ**
**ಸಮೀರ ಮಾಡಿದ ಜಪಕೆ**
**ಸಮ್ಮತ್ರಫಲ ಬೊಮ್ಮಕಲ್ಪದಿ ಉಣಿಸಿ**
**ರಮೇಶ ತಾನೆಂದಿರದೆ ॥೮॥**

**ಅಂದು ಹನುಮನಿಗಿತ್ತ ಚಂದದ ಕರವನ್ನು**
**ಇಂದು ಸಾರ್ಥಕ ಮಾಡಿದನು**
**ಇಂದಿರೆಯೊಡಗೂಡಿ ತನ್ನ ಪುರಂಗಳ**
**ಹೊಂದಿ ಆನಂದದೊಳಿರ್ದ ॥೯॥**

**ಅರ್ಥ:** ಲೆಕ್ಕವಿಲ್ಲದ—ಗಣನೆಯಿಲ್ಲದ, ನಾನಾ ಜೀವರು—ಜನರು, ಮಾಡುವ ಸತ್ಕರ್ಮಗಳ ಫಲವಾದ—ಮಾಡುವ ಶುಭಕರ್ಮಗಳ ಫಲರೂಪವಾದ, ಸೌಖ್ಯವ—ಸುಖವನ್ನು, ಲಕ್ಷ್ಮೀರಮಣ—ಶ್ರೀನಾರಾಯಣನು, ಬ್ರಹ್ಮಪಟ್ಟವನಾಳ್ವ—ಬ್ರಹ್ಮಪದವಿಯಲ್ಲಿದ್ದು ಅಧಿಕಾರ ನಡೆಸುವ, ದೇವನ—ಚತುರ್ಮುಖ ಬ್ರಹ್ಮನ, ಕೂಡಿ—(ಅಂತರ್ಯಾಮಿಯಾಗಿ) ಅವನೊಂದಿಗಿದ್ದು, ಕೊಂಡ—ಭೋಗಿಸಿದನು (ಸ್ವೀಕರಿಸುತ್ತಾನೆ). ॥೫॥

ಆದರಿಂದ—ಈ ಕಾರಣದಿಂದ, ಸಹಭೋಗಪದವೆಂಬುದು—(ಬ್ರಹ್ಮಪದವಿಗೆ) ಸಹಭೋಗವೆಂಬ ನಾಮವು; ಆದರಿಂದ—ಆದ್ದರಿಂದ, ಮದನನಯ್ಯಗೆ—ಶ್ರೀಹರಿಗೆ, ಇಂತು ಮಾಡಿದ ಸೇವೆಗೆ—ಹೀಗೆ ನಿರಂತರ ಸಲ್ಲಿಸಿದ ಸೇವೆಗೆ, ಸದಮಲ—ಪವಿತ್ರ ಸ್ವರೂಪನಾದ (ಸಚ್ಚಿದಾನಂದಸ್ವರೂಪನಾದ) ನಾರಾಯಣನು, ಫಲವಿತ್ತು—(ಪೂರ್ಣಪ್ರತಿಫಲವಲ್ಲದಿದ್ದರೂ) ಫಲರೂಪದಿಂದ ಕೊಟ್ಟು (ಸ್ವೀಕರಿಸೆಂದು ಆಜ್ಞಾಪಿಸಿ), ಮುಖ್ಯಪ್ರಾಣನಿಗೆ—ವಾಯುದೇವನಿಗೇ (ಅನ್ಯರಾರಿಗೂ ಅಲ್ಲ), ಸಂಪದವ—ಈ ಭಾಗ್ಯವನ್ನು, ಕೂಡಿಕೊಡುವ—(ಅವನೊಂದಿಗೆ ತಾನೂ ಭೋಗಿಸಿ) ಅನುಗ್ರಹಿಸುತ್ತಾನೆ. ॥೬॥

ನಂಬಿದ ಸಾಲಿಗೆ—ವಿಶ್ವಾಸಿಗಳ ಪಂಕ್ತಿಗೆ, ಬಂದು ಬೇಡಲಾಗಿ—ಬಂದು ಕೇಳಲು, ಉಂಬಗೆ—ಉಣ್ಣುವವನಿಗೆ, ಕೂಡಿಕೊಂಡುಂಬ—(ಲೋಕದ ಜನವು ಸಹ) ಅವನೊಂದಿಗೆ ಊಟ ಮಾಡುತ್ತಾನೆ. ನಂಬಿಸುವಂತೆ—(ಹಾಗೆ ಉಂಡು ತನಗೆ ಅವನಲ್ಲಿರುವ ಪ್ರೀತಿವಿಷಯದಲ್ಲಿ) ನಂಬಿಕೆಯನ್ನುಂಟುಮಾಡುವಂತೆ, (ಶ್ರೀಹರಿಯೂ ಈ ಲೋಕನೀತಿಯನ್ನು ಶಿಕ್ಷಿಸುತ್ತ), ಬೊಮ್ಮನಿಗೆ—ಬ್ರಹ್ಮದೇವಗೆ, ಅರ್ಧವನುಣಿಸಿ—(ಅವನೊಂದಿಗೆ) ಸಕಲ ಭೋಗಗಳ-

ನ್ನುಂಡು (ಸಹ ಭೋಗವನ್ನಿತ್ತು), ಹರಿ—ಶ್ರೀಹರಿಯು, ಉಂಬ ಸಂಭ್ರಮವ —ಭೋಗಿಸುವ ಸಂಭ್ರಮವನ್ನು (ಉತ್ಸಾಹವನ್ನು ಅಥವಾ ತನ್ನೊಂದಿಗಿರುವವನ ಸಮನು ತಾನೆಂಬ ಮೋಹವನ್ನು ಅಜ್ಞಾನಿಗಳಿಗೆ ಉಂಟುಮಾಡುವ ಪರಿಯನ್ನು), ಏನೆಂಬೆ—ಎಷ್ಟೆಂದು ವರ್ಣಿಸಲಿ. ॥೭॥

ಬೊಮ್ಮನ ನೂರು ವರ್ಷ ಪರಿಯಂತ—(ಹಿಂದಿನ ಕಲ್ಪದ) ಬ್ರಹ್ಮನ ನೂರುವರ್ಷಕಾಲ, ಸಮೀರ—ವಾಯುದೇವನು (ವಾಯುಪದದಲ್ಲಿ), ಮಾಡಿದ ಜಪಕೇ—ಆಚರಿಸಿದ ಹಂಸಮಂತ್ರ ಜಪಕ್ಕೆ, ಸಮ್ಮತಫಲ—ತನಗೆ ಇಚ್ಛಿತವಾದ ಫಲವನ್ನು, ಬೊಮ್ಮಕಲ್ಪದಿ—ಈ ಬ್ರಹ್ಮಕಲ್ಪದಲ್ಲಿ, ಎಂದು—(ಕೊಡುವೆನೆಂದು) ಸಂಕಲ್ಪಿಸಿ, ಇರದೇ ಉಣಿಸಿ—(ಆ ಫಲವನ್ನು) ತಪ್ಪದೇ ಭೋಗಿಸುವಂತೆ ಮಾಡಿ, ರಮೇಶ—ರಮಾಪತಿಯು, ತಾನೇ—ಸ್ವಯಂ, (ಮುಂದಿನ ನುಡಿಯಿಂದ ವಾಕ್ಯ ಪೂರ್ತಿಯಾಗುತ್ತದೆ) ॥೮॥

ಅಂದು—ಸೀತೆಯಿಂದ ಚೂಡಾಮಣಿಯನ್ನು ತಂದೊಪ್ಪಿಸಿದ ದಿನವೇ, ಹನುಮನಿಗೆ—ಹನುಮದವತಾರನಾದ ವಾಯುದೇವನಿಗೆ, ಇತ್ತ—ಕೊಟ್ಟ, ಚಂದದ ಕರವನ್ನು—ವಿಲಕ್ಷಣವಾದ ಉಡುಗೊರೆಯನ್ನು (ಕರ—ಗೌರವಾರ್ಥಕೊಟ್ಟ ಉಚಿತವಸ್ತು), ಇಂದು—ಈಗ (ಆ ವಾಯುದೇವನನ್ನೇ ನಾಭಿಕಮಲದಲ್ಲಿ ಬ್ರಹ್ಮನನ್ನಾಗಿ ಹುಟ್ಟಿಸಿ), ಸಾರ್ಥಕ ಮಾಡಿದನು—ಸತ್ಯಗೊಳಿಸಿದನು; ಇಂದಿರೆಯೊಡಗೂಡಿ—ಲಕ್ಷ್ಮೀಸಹಿತನಾಗಿ, ತನ್ನ ಪುರಂಗಳ—(ವೈಕುಂಠಾದಿ ಮುಕ್ತಸ್ಥಾನಗಳನ್ನು), ಹೊಂದಿ—ಸೇರಿ (ಅಲ್ಲಿರುತ್ತಾ), ಆನಂದದೊಳು ಸ್ವರೂಪಾನಂದಪೂರ್ಣನಾಗಿ, ಇರ್ದ—ಇರುತ್ತಿದ್ದನು. ॥೯॥

**ವಿಶೇಷಾಂಶ:** ಬ್ರಹ್ಮಾಂಡವು ಸೃಷ್ಟಿಯಾದೊಡನೆಯೇ, ವೈಕುಂಠಾದಿ ಲೋಕಗಳೂ ಬ್ರಹ್ಮಾಂಡದಲ್ಲಿ ವ್ಯಕ್ತವಾಗಿ ಮುಕ್ತರ ಕ್ರೀಡೆಯೂ ಆರಂಭವಾಗುತ್ತದೆ. ಇಲ್ಲಿ ೧ನೇ ಸಂಧಿ ಪದ (೧೭) ನುಡಿ (೫) ವಿಶೇಷಾಂಶ ೩ ಮತ್ತು ೨ನೇ ಸಂಧಿ ಪದ (೭) ನುಡಿ (೫) ವಿಶೇಷಾಂಶ (೨) ಈ ಭಾಗಗಳನ್ನು ನೋಡಬಹುದು. ಆ ವರೆಗೆ ಮುಕ್ತರು ಧ್ಯಾನಾನಂದಮಗ್ನರಾಗಿರುತ್ತಾರೆ (೨ನೇ ಲಯ ಸಂಧಿಯ ೭ ಮತ್ತು ೧೦ನೇ ಪದಗಳ ವಿವರಣೆಗಳನ್ನು ಇಲ್ಲಿ ನೋಡಬೇಕು). ಬ್ರಹ್ಮಾಂಡದೊಳಗೆ ವ್ಯಕ್ತವಾದ ವೈಕುಂಠವು,

*'ಬ್ರಹ್ಮಾಂಡೇ ಜಲಪೂರ್ಣೇಽಪಿ ಜಲಲೇಶೋಽಪಿ ಯತ್ರ ನ।*
*ತಾದೃಶಂ ರಮಣೀಯಂ ತದ್ವೈಕುಂಠಾಖ್ಯಂ ಪರಂ ಪದಮ್॥'*

—ಬ್ರಹ್ಮಾಂಡವು ಜಲಪೂರ್ಣವಾದರೂ, ಎಲ್ಲಿ ಆ ಜಲಪ್ರವೇಶವೇ ಇಲ್ಲವೋ, ಆ ರಮಣೀಯವಾದ ವೈಕುಂಠವೆಂಬ **ಪರಮಪದ**ವೆಂದು ವರ್ಣಿತವಾಗಿದೆ. ನಾಭಿಕಮಲದಲ್ಲಿ ಬ್ರಹ್ಮನನ್ನು ಸೃಷ್ಟಿಸಿ, ಅದೃಶ್ಯನಾಗಿಯೇ **'ತಪ, ತಪ'** ಎಂದು ಆಜ್ಞಾಪಿಸಿ, ದೇವಮಾನದಿಂದ ೧೦,೦೦೦ ವರ್ಷಗಳ ಕಾಲಾವಧಿಯ ಆತನ ತಪಸ್ಸು ಮುಗಿಯುವವರೆಗೆ, ಶ್ರೀಹರಿಯು, ವೈಕುಂಠಾದಿ-ಗಳಲ್ಲಿ ಕ್ರೀಡಿಸಿ, ನಂತರ ಪ್ರಸನ್ನನಾಗಿ, ಪ್ರತ್ಯಕ್ಷದರ್ಶನವನ್ನಿತ್ತು,

*'ಉಪಾದಿಶತ್ತತೋ ವೇದಾನ್ ಸಾಂಗಾನ್ ಸೂತ್ರಾಣಿ ಚಾಗಮಾನ್।*
*ಪಂಚರಾತ್ರಮುಖಾನ್ ತಸ್ಮೈ ತತೋಂತರ್ಧಾನಮಾಪ್ತವಾನ್॥'*

—ವೇದ, ವೇದಾಂಗಗಳನ್ನೂ, ಮೀಮಾಂಸಾ ಪಂಚರಾತ್ರ ಮೊದಲಾದ ಆಗಮಗಳನ್ನೂ ಉಪದೇಶಿಸಿ, ಅಂತರ್ಧಾನ ಹೊಂದಿ, ಪುನಃ ವೈಕುಂಠದಲ್ಲಿ ನಿತ್ಯದಂತೆ ಪ್ರಕಟನಾಗಿಯೇ ಸ್ವಾನಂದಪೂರ್ಣನಾಗಿ ವಿಹರಿಸುತ್ತಿರುವನು. ಈ ವಿಷ್ಣುರಹಸ್ಯದಲ್ಲಿ ವಿವರಿಸಲಾದ ಅರ್ಥವಿಶೇಷವನ್ನು, 'ಇಂದಿರೆಯೊಡಗೂಡಿ ತನ್ನ ಪುರಂಗಳ ಹೊಂದಿ' ಎಂಬ ಈ ನುಡಿಯ ಭಾಗದಿಂದ ಸೂಚಿಸಿರುವರು.

**ಕರ್ತುಹಯವದನ ಬೊಮ್ಮಾಂಡದೊಳಗೆ ಸ-**
**ರ್ವತ್ರ ಜೀವರ ನಿರ್ಮಿಸಿದನು**
**ಮುಕ್ತವರ್ಗವ ತನ್ನ ಮೂಲಸ್ಥಾನದೊಳಿಟ್ಟ**
**ವಿಸ್ತರಿಸಿದ ಶ್ರುತಿಪಥವ** ॥೧೦॥

**ಅರ್ಥ:** ಕರ್ತು—ಸರ್ವಕರ್ತನಾದ, ಹಯವದನ—ಶ್ರೀಹಯಗ್ರೀವ ದೇವನು (ಶ್ರೀಹರಿಯು), ಬೊಮ್ಮಾಂಡದೊಳಗೆ—ಬ್ರಹ್ಮಾಂಡದಲ್ಲಿ, ಸರ್ವತ್ರ —ಎಲ್ಲೆಲ್ಲಿಯೂ, ಜೀವರ—ಜೀವರನ್ನು, ನಿರ್ಮಿಸಿದನು—ಸೃಷ್ಟಿಸಿದನು; ಮುಕ್ತ ವರ್ಗವ—ಮುಕ್ತಜೀವರ ಸಮುದಾಯವನ್ನು, ತನ್ನ ಮೂಲಸ್ಥಾನದೊಳಿಟ್ಟ —**ತ್ರಿಧಾಮಗಳೆಂಬ** ವೈಕುಂಠಾದಿಗಳಲ್ಲಿ ವಿಹಾರದಲ್ಲಿ ತೊಡಗಿಸಿದನು; ಶ್ರುತಿ-ಪಥವ—ವೇದಮಾರ್ಗವನ್ನು, ವಿಸ್ತರಿಸಿದ—ಪ್ರಚುರಪಡಿಸಿದನು. (ಅಥವಾ ಶ್ರುತ್ಯುಕ್ತಪ್ರಕಾರದಿಂದ ಸೃಷ್ಟಿಕಾರ್ಯಗಳನ್ನು ವೃದ್ಧಿಗೊಳಿಸಿದನು—ಬೆಳೆಸಿದನು.)

**ಇಂದಿರೇಶನೆ ಈ ಜಗವನು ಎಲ್ಲವ**
**ಚಂದದಿಂದಲೆ ನಿರ್ಮಿಸಿದನು**
**ಎಂದು ಪೇಳುವಲ್ಲಿ ಮೂರನೆಯ ಸಂಧಿ**
**ಇಂದು ಮುಗಿಯಿತು ಕೇಳಿ ಬುಧರು** ॥೧೧॥

**ಅರ್ಥ:** ಇಂದಿರೇಶನೆ—ನಾರಾಯಣನೇ, ಈ ಜಗವನು ಎಲ್ಲವ—ಈ ಜಗತ್ತೆಲ್ಲವನ್ನೂ, ಚಂದದಿಂದಲೆ—ಲೀಲೆಯಿಂದ (ಅಥವಾ ಹೇಗಿರಬೇಕೋ ಹಾಗೆ), ನಿರ್ಮಿಸಿದನು—ಸೃಷ್ಟಿಸಿದನು; ಎಂದು ಪೇಳುವಲ್ಲಿ—ಇಷ್ಟು ವಿಷಯ-ವನ್ನು ಹೇಳುವಲ್ಲಿಗೆ, ಮೂರನೆಯ ಸಂಧಿ—೩ನೇ ಈ ಸೃಷ್ಟಿಸಂಧಿಯು, ಇಂದು—ಈ ದಿನ, ಮುಗಿಯಿತು—ಪೂರ್ಣವಾಯಿತು; ಕೇಳಿ ಬುಧರು—ವಿವೇಕಿಗಳು ಕೇಳಿ ನಿಷ್ಠೆಯನ್ನು ಹೊಂದಿರಿ (ಜ್ಞಾನಿಗಳು ಈ ಭಗವಂತನ ಮಹಿಮೆಯನ್ನು ಕೇಳಿ ಆನಂದಿಸಿರಿ).

**ವಿಶೇಷಾಂಶ:** ಸ್ವತಂತ್ರಸೃಷ್ಟಿಕರ್ತನು ಶ್ರೀಹರಿಯೇ—ಬ್ರಹ್ಮನಲ್ಲಿ, ಬ್ರಹ್ಮ-ನಾಮಕನಾಗಿದ್ದು ತಾನೇ ಸೃಷ್ಟಿಸುತ್ತಾನೆ. ಚತುರ್ಮುಖಬ್ರಹ್ಮನು ಅಧಿಷ್ಠಾನ-ಮಾತ್ರನು—ಆತನನ್ನು ಸೃಷ್ಟಿಕರ್ತನೆನಿಸಿ, ಲೋಕಪೂಜ್ಯನನ್ನಾಗಿಟ್ಟು, ಮಹಾ-ಭೋಗವನ್ನಿತ್ತು ರಕ್ಷಿಸುತ್ತಾನೆ.

**ಶ್ರೀಧರ ಹಯವದನರಾಯನ ದಯದಿಂದ**
**ವಾದಿರಾಜೇಂದ್ರ ರಚಿಸಿದ**
**ಈ ದಿವ್ಯಕಾವ್ಯದ ಸೃಷ್ಟಿಯನೊರೆದ ರಮ್ಯ-**
**ವಾದ ತೃತೀಯಸಂಧಿ ಪೊಸಗೆ** ॥೧೨॥

**ಅರ್ಥ:** ಶ್ರೀಧರ—ಲಕ್ಷ್ಮೀಪತಿಯಾದ, **ಹಯವದನರಾಯನ**— ಶ್ರೀ-ಹಯಗ್ರೀವಸ್ವಾಮಿಯ, ದಯದಿಂದ—ಕೃಪೆಯಿಂದ, **ವಾದಿರಾಜೇಂದ್ರ ರಚಿ-ಸಿದ**—ವಾದಿರಾಜನೆಂಬ ಯತಿಶ್ರೇಷ್ಠನು ನಿರ್ಮಿಸಿದ, ಈ ದಿವ್ಯ ಕಾವ್ಯದಿ—ಈ ಶ್ರೇಷ್ಠ ಕಾವ್ಯದಲ್ಲಿ, ಸೃಷ್ಟಿಯನೊರೆದ—ಶ್ರೀಹರಿಯ ಸೃಷ್ಟಿಸ್ವರೂಪ-ಮಹಿಮೆಯನ್ನು ನಿರೂಪಿಸಿದ, ರಮ್ಯವಾದ—ಮನೋಹರವಾದ (ಭಕ್ತರಿಗೆ ಆನಂದಪ್ರದವಾದ), **ತೃತೀಯಸಂಧಿ**—ಮೂರನೆಯ ಸಂಧಿಯು, **ಪೊಸಗೆ**—ಶೋಭಿಸಲಿ.

* * * * * *

||ಶ್ರೀಹಯಮುಖಾಯ ನಮಃ||

||ಶ್ರೀವಾದಿರಾಜಗುರುಭ್ಯೋ ನಮಃ||

# * ತತ್ವಸಾರ *

## ೪. ಸ್ಥಿತಿಸಂಧಿ

ರಾಗ-ನಾಟಿ; ತಾಳ-ರೂಪಕ

***ಇದು ಪುಣ್ಯಕಥೆ ಲೋಕಕ್ಕಿದು ಮುಕುತಿಯ ಪಥ***
***ಇದ ಕೇಳುವವನೆ ಕೃತಾರ್ಥ ||ಪಲ್ಲವಿ||***

ಅರ್ಥ: ಹಿಂದಿನ ಸಂಧಿಗಳ ಪಲ್ಲವಿಯಂತೆ.

### ಶ್ಲೋಕ ೧

**ನಾರಾಯಣಾಯ ಪರಿಪೂರ್ಣಗುಣಾರ್ಣವಾಯ**
**ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ।**
**ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-**
**ಸತ್ಕಾರಣಾಯ ವಿತತಾಯ ನಮೋ ನಮಸ್ತೇ॥**

**ಅರ್ಥ:** ಪರಿಪೂರ್ಣಗುಣಾರ್ಣವಾಯ— ಸರ್ವತ್ರ ನಿರವಧಿಕಬಲಜ್ಞಾನಾನಂದಾದಿಗುಣಗಳಿಂದ ಪೂರ್ಣನಾದ, ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ— ಸಕಲ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ನಿಯಮನಾದಿಗಳನ್ನು ಮಾಡುವ (ಜಗತ್ತಿಗೆ ಉತ್ಪತ್ತಿ ಮೊದಲಾದವುಗಳನ್ನು ಕೊಡುವ— ಉಂಟುಮಾಡುವ), ಜ್ಞಾನಪ್ರದಾಯ— ಜ್ಞಾನವನ್ನು ಕೊಡುವ, ವಿಬುಧಾಸುರಸೌಖ್ಯ ದುಃಖಸತ್ಕಾರಣಾಯ— ದೇವ ಮತ್ತು ಅಸುರಸ್ವಭಾವದ ಜೀವರಿಗೆ ಕ್ರಮವಾಗಿ ಮೋಕ್ಷ ಮತ್ತು ತಮಸ್ಸನ್ನೂ (ನಿತ್ಯಸುಖ-ದುಃಖವನ್ನೂ) ಹೊಂದಿಸುವ, ವಿತತಾಯ— ವ್ಯಾಪ್ತವಾದ, ನಾರಾಯಣಾಯ— ನಾರಾಯಣನಿಗೋಸ್ಕರ, (ಗುಣಪೂರ್ಣನೂ ನಿರ್ದೋಷನೂ ಆದ ನಾರಾಯಣನೆಂಬ), ತೇ— ನಿನಗೆ, ನಮೋನಮಃ— ಪುನಃಪುನಃ ನಮಸ್ಕಾರವು.

**ವಿಶೇಷಾಂಶ:** (೧) ನಾರಾಯಣ ಶಬ್ದವು ಶ್ರೀಹರಿಯ ಬಹುಮಹಿಮೆಗಳನ್ನು ನಿರೂಪಿಸುವ ಅನೇಕಾರ್ಥವುಳ್ಳದ್ದು. ಅವುಗಳಲ್ಲಿ ಗುಣಪೂರ್ಣತ್ವ, ನಿರ್ದೋಷತ್ವ, ಸರ್ವಾಶ್ರಯತ್ವ ಮೊದಲಾದವು ಮುಖ್ಯವಾದವುಗಳು.

(೨) ಸರ್ವದೇಶ—ಸರ್ವಕಾಲದಲ್ಲಿರುವವನೂ, ಸರ್ವಜ್ಞತ್ವ—ಸರ್ವಶಕ್ತಿ-ಸ್ವಾತಂತ್ರ್ಯಾದಿಗುಣಗಳುಳ್ಳವನೂ, ಎಂದರೆ ದೇಶ-ಕಾಲ-ಗುಣಗಳಿಂದ ವ್ಯಾಪ್ತ-ನಾದವನು ಇಂಥವನು ಮಾತ್ರ ಜಗತ್ಕರ್ತನಾಗಬಲ್ಲನು. ಶ್ರೀಹರಿಯು ಹೀಗೆ ವ್ಯಾಪ್ತನೆಂದು ತಿಳಿಸಲಿಕ್ಕಾಗಿ **'ವಿತತಾಯ'** ಎಂದಿರುವರು.

(೩) ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂಬುದರಲ್ಲಿ ಜ್ಞಾನಪ್ರದತ್ವವೂ ಸೇರು-ತ್ತದೆ. ಆದರೂ ವಸ್ತು ಸ್ವಭಾವಗಳನ್ನು ಅತಿಕ್ರಮಿಸದೇ ರಕ್ಷಿಸುವವನಾದ್ದರಿಂದ, ಜಡವಸ್ತುಗಳಿಗೆ ಜ್ಞಾನಪ್ರದನಲ್ಲ; ಕಿಂತು—ಸಕಲ ಚೇತನವರ್ಗಕ್ಕೆ, ಸಮ್ಯಕ್, ಮಿಶ್ರ ಮತ್ತು ಮಿಥ್ಯಾಭೇದದಿಂದ ತ್ರಿವಿಧಜ್ಞಾನದಾತನೆಂದು (ಯಥಾಯೋಗ್ಯ-ವಾಗಿ) ತಿಳಿಸಲಿಕ್ಕಾಗಿ **'ಜ್ಞಾನಪ್ರದಾಯ'** ಎಂದು ಪ್ರತ್ಯೇಕವಾಗಿ ಹೇಳಲಾಗಿದೆ.

(೪) ನಾರಾಯಣ ಶಬ್ದವು, *'ಏಕೋ ನಾರಾಯಣ ಆಸೀತ್'* ಇತ್ಯಾದಿ ಶ್ರುತಿಗಳು ಹೇಳುವಂತೆ, ಸೃಷ್ಟಿಗೆ ಮೊದಲು, ಪ್ರಳಯಕಾಲದಲ್ಲಿ ಸಹ ಇರು-ವವನೆಂಬರ್ಥವನ್ನೂ, ಅತ ಏವ, ಆದ್ಯಂತರಹಿತನಿತ್ಯಸ್ವರೂಪವುಳ್ಳವ-ನೆಂದೂ, ತಿಳಿಸುತ್ತದೆ.

*'ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ।*
*ಅಯನಸ್ತಸ್ಯ ತಾಃ ಪೂರ್ವಂ ತೇನ ನಾರಾಯಣ ಸ್ಮೃತಃ॥'*

'ಪ್ರಳಯೋದಕರೂಪದಿಂದ ಇದ್ದು, ಸಕಲ ಜಗತ್ತಿನ ಉತ್ಪತ್ತಿದ್ವಾರಳಾದ ಲಕ್ಷ್ಮೀದೇವಿಯೊಬ್ಬಳೊಂದಿಗೆ ಮಾತ್ರ ಪ್ರಳಯಕಾಲದಲ್ಲಿದ್ದ ಕಾರಣದಿಂದಲೂ ಶ್ರೀಹರಿಯು ನಾರಾಯಣನೆನಿಸುವನು' ಎಂಬರ್ಥವೂ ಸೂಚಿತವೆಂದು ತಿಳಿಯಬೇಕು. ಹೀಗೆ ಸಮಾಧಿಕರಹಿತನಾದ್ದರಿಂದ ನಾರಾಯಣನೇ ಸರ್ವ-ವಂದ್ಯನು.

## ಪದ ೧

ರಾಗ: ? ತಾಳ-ರೂಪಕ

**ನೀಲನಿರ್ಮಲಗಾತ್ರ ನಿರುಪಮಚರಿತ್ರ**
**ಮೂಲಕಾರಣ ಮುಕ್ತರೊಡೆಯ**
**ಪಾಲಸಾಗರಶಯನ ಪಂಕಜನಾಭನೇ**
**ಪಾಲಿಸೊ ಪರಮ ಪಾವನನೇ ॥೧॥**

**ಅರ್ಥ:** ನೀಲನಿರ್ಮಲಗಾತ್ರ—ನೀಲಕಾಂತಿಯ ಮಂಗಳದೇಹವುಳ್ಳ (ಅಪ್ರಾಕೃತದೇಹನಾದ) ಹೇ ನಾರಾಯಣ! ನಿರುಪಮಚರಿತ್ರ—ಅಸದೃಶ

ಮಹಿಮನೇ! ಮೂಲಕಾರಣ—(ಅನ್ಯಕಾರಣರಹಿತನಾಗಿ, ತಾನೇ ಎಲ್ಲಕ್ಕೂ ಸ್ವತಂತ್ರ) ಮೂಲಕಾರಣನಾದ, ಮುಕ್ತರೊಡೆಯ—ಮುಕ್ತಾಧಿಪನೇ! ಪಾಲ-ಸಾಗರಶಯನ—ಕ್ಷೀರಸಾಗರದಲ್ಲಿ ಪವಡಿಸಿದ, ಪಂಕಜನಾಭನೇ—ಹೇ ಪದ್ಮನಾಭ! ಪರಮಪಾವನನೇ—(ಸರ್ವವನ್ನೂ ಪವಿತ್ರಗೊಳಿಸುವ) ಸರ್ವೋ-ತ್ಕೃಷ್ಟಪರಿಶುದ್ಧ ಸ್ವರೂಪನೇ, ಪಾಲಿಸೊ—ರಕ್ಷಿಸಯ್ಯ, ಪ್ರಭೋ!

**ವಿಶೇಷಾಂಶ:** (೧) ನೀಲ, ಶ್ಯಾಮ ಶಬ್ದಗಳು ಕಪ್ಪುವರ್ಣಪರವಾಗಿಯೂ ಪ್ರಯೋಗಿಸಲ್ಪಡುತ್ತವೆ. ಆದರೆ ಶ್ರೀಹರಿಯ ದೇಹದ ನೀಲವರ್ಣವು ಅತಿ-ಮನೋಹರವಾದ ಅಪ್ರಾಕೃತ ವರ್ಣವು. ಆ ವರ್ಣದ ಕಲ್ಪನೆಯನ್ನುಂಟು-ಮಾಡಲು, ಶ್ರುತಿಯು ಲೌಕಿಕ ನಿದರ್ಶನದೊಂದಿಗೆ ಹೀಗೆ ವಿವರಿಸುತ್ತದೆ: *'ನೀಲತೋಯದಮಧ್ಯಸ್ಥವಿದ್ಯುಲ್ಲೇಖೇವ ಭಾಸ್ವರಾಟ್।'* ಮೇಘಮಧ್ಯದಲ್ಲಿ (ಮಳೆಗರೆಯಲು ಸಿದ್ಧವಾದ ನೀಲವರ್ಣವುಳ್ಳ ಮೇಘದಲ್ಲಿ) ವಿದ್ಯುತ್ ಪ್ರಕಾಶವಾದಂತೆ (ಪ್ರಬಲವಾದ ಮಿಂಚು ಮೂಡಿದಾಗ ತೋರುವ ನೀಲ-ವರ್ಣ) ಎಂದು ಶ್ರೀಹರಿಯ ದೇಹಕಾಂತಿಯು ನಿರೂಪಿತವಾಗಿದೆ.

(೨) 'ನೀಲನಿರ್ಮಲಗಾತ್ರ' ಎಂಬುದರಿಂದ ಶ್ರೀಹರಿಯ ದೇಹಕಾಂತಿಯು ಲೋಕವಿಲಕ್ಷಣವೆಂದೂ ಸೂಚಿತವೆಂದು ತಿಳಿಯಬಹುದು. ನೀಲ (ಕಪ್ಪು), ನಿರ್ಮಲ (ಶುಭ್ರ) ವರ್ಣಗಳು ಪರಸ್ಪರ ವಿರುದ್ಧ. ಲೋಕವಿರುದ್ಧಗಳಾದ ಧರ್ಮಗಳೂ ಶ್ರೀಹರಿಯಲ್ಲಿ ದೋಷರಹಿತವಾಗಿಯೇ ಇರುತ್ತವೆಂಬ 'ದಿವ್ಯತ್ವ'-ವನ್ನೂ ಹೇಳಿದಂತಾಯಿತು—'ಸೂರ್ಯಕೋಟಿಸಮಪ್ರಭಂ—ಚಂದ್ರಕೋಟಿ-ಸುಶೀತಲಂ' ಎಂದಂತೆ.

**ಹಾರಕೌಸ್ತುಭಧರ ಹಾವಿನಲ್ಲೊರಗಿಪ್ಪ**
**ನಾರಾಯಣ ನಳಿನಾಕ್ಷ**
**ಚಾರುಕುಂಡಲ ಚೆಲುವ ಚಂದ್ರವದನನೆ ನೀ**
**ಮಾರಜನಕ ಮನ್ನಿಸೆನ್ನ** ॥೨॥

**ಅರ್ಥ:** ಹಾರಕೌಸ್ತುಭಧರ—(ಮುತ್ತುರತ್ನ) ಹಾರಗಳನ್ನು ಕೌಸ್ತುಭ ಮಣಿ-ಯನ್ನೂ ಧರಿಸಿರುವ, ಹಾವಿನಲ್ಲಿ—ಶೇಷದೇವನ ದೇಹದಲ್ಲಿ, ಒರಗಿಪ್ಪ—ಮಲಗಿರುವ, ನಾರಾಯಣ—ಹೇ ಪದ್ಮನಾಭ! ನಳಿನಾಕ್ಷ—ಹೇ ಪುಂಡರೀಕಾಕ್ಷ! ಚಾರುಕುಂಡಲ—ಮನೋಹರವಾದ ಕರ್ಣಾಭರಣಗಳನ್ನು ಧರಿಸಿದ, ಚೆಲುವ—ಸುಂದರವಾದ, ಚಂದ್ರವದನನೆ—ಚಂದ್ರನಂತೆ (ಆಹ್ಲಾದಕರ) ಮುಖವುಳ್ಳ,

ಮಾರಜನಕ— ಮನ್ಮಥಪಿತನಾದ (ಸೌಂದರ್ಯನಿಧಿ), ಎನ್ನ— ನನ್ನನ್ನು, ಮನ್ನಿಸು —ಕ್ಷಮೆದೋರಿ ಆದರಿಸು (ಕೃಪೆಯಿಂದ ನೋಡು).

**ಪೊನ್ನಪೆಂಡೆಯ ಕಾಂಚಿ ಪೊಳೆವ ಪೀತಾಂಬರದ**
**ರನ್ನದ ಕಟಕ ರಾಜಿಸಲು**
**ಅನರ್ಘ್ಯಾಭರಣದರ್ತಿಯ ಹರಿಯೆ ನಮ್ಮ**
**ಉನ್ನತ ಸುಖವನುಣಿಸುವನು** ||೩||

**ಅರ್ಥ:** ಪೊನ್ನಪೆಂಡೆಯ ಕಾಂಚಿ— ಗಟ್ಟಿಭಂಗಾರದ ಒಡ್ಯಾಣ, ಮತ್ತು ಪೊಳೆವ ಪೀತಾಂಬರದ— ಹೊಳೆಯುತ್ತಿರುವ ಪೀತಾಂಬರವೂ, ರನ್ನದ ಕಟಕ — ರತ್ನ ನಿರ್ಮಿತ ಕೈಬಳೆಗಳೂ, ರಾಜಿಸಲು— ಶೋಭಿಸುತ್ತಿರಲು, ಅನರ್ಘ್ಯಾ-ಭರಣದ— ಬೆಲೆಯಿಲ್ಲದ ಭೂಷಣಗಳುಳ್ಳ, ಅರ್ತಿಯ ಹರಿಯೆ— ಪ್ರಿಯ-ತಮನಾದ ಶ್ರೀಹರಿಯೇ, ನಮ್ಮ ಉನ್ನತ ಸುಖವನು— ನಮ್ಮ ಸ್ವರೂಪದ ಪೂರ್ಣಸುಖವನ್ನು, ಉಣಿಸುವನು— ಅನುಭವಿಸುವಂತೆ ಮಾಡುವನು.

**ಕಂಜಕಂಬುಕಂಠ ಕೌಮೋದಕೀಹಸ್ತ**
**ಮಂಜುಳಮೂರ್ತಿ ಮಾರಮಣ**
**ಕುಂಜರಭಯಹಾರಿ ಕುಜನಸಂಹಾರಿ ನಿ-**
**ರಂಜನ ರಕ್ಷಿಸೋ ಜನರ** ||೪||

**ಅರ್ಥ:** ಕಂಜಕಂಬುಕಂಠ— ಪದ್ಮವರ್ಣದ ಶಂಖದಂತಿರುವ ಕಂಠವುಳ್ಳ (ಅಥವಾ ಕಂಜ— ಬ್ರಹ್ಮ ಕೌಸ್ತುಭರೂಪದಿಂದಿರುವ ಬ್ರಹ್ಮನನ್ನೇ ಕಂಬುಕಂಠ-ದಲ್ಲುಳ್ಳ), ಕೌಮೋದಕೀಹಸ್ತ— **'ಕೌಮೋದಕಿ'** ಎಂಬ ಗದೆಯನ್ನು ಕೈಯಲ್ಲಿ ಧರಿಸಿರುವ, ಮಂಜುಳಮೂರ್ತಿ— ಮೋಹನಾಕಾರನಾದ, ಮಾರಮಣ— ಹೇ ಲಕ್ಷ್ಮೀಪತೇ! ಕುಂಜರಭಯಹಾರಿ— ಗಜೇಂದ್ರನ ಭಯವನ್ನು ಪರಿಹರಿ-ಸಿದ, (ನಕ್ರಮುಖದಿಂದ ಬಿಡಿಸಿದ), ಕುಜನಸಂಹಾರಿ— ದೈತ್ಯಸಂಹಾರಕ, ನಿರಂಜನ— ಹೇ ದೋಷದೂರ ಹರೇ! ಜನರ— ಭಕ್ತಜನರನ್ನು, ರಕ್ಷಿಸೋ— ಸಲಹಯ್ಯ ದೇವ!

**ವಿಶೇಷಾಂಶ:** ದೇಹೇಂದ್ರಿಯಾದಿ ಸಕಲ ಸಾಧನಸಾಮಗ್ರಿಗಳನ್ನಿತ್ತು ಜೀವ-ರನ್ನು ಸೃಷ್ಟಿಸಿದ ಶ್ರೀಹರಿಯು, ಸ್ಥಿತಿಕಾಲದಲ್ಲಿ (ಸೃಷ್ಟಿ-ಪ್ರಲಯಗಳ ಮಧ್ಯಕಾಲ) ಜೀವರಲ್ಲಿಯೂ ದೇಹೇಂದ್ರಿಯಾದಿಗಳಲ್ಲಿಯೂ ಪ್ರೇರಕನಾಗಿ ನಿಂತು,

ಅವರವರ ಗತಿಸಾಧಕನಾಗಿ, ಸರ್ವ ವಿಧದಿಂದ ಅವರನ್ನು ರಕ್ಷಿಸುವ ಶ್ರೀಹರಿಯ ನಿರಂತರ ಸ್ಮರಣೆಗೆ ಅವಶ್ಯಕವಾದ ದಿವ್ಯರೂಪವನ್ನು ವರ್ಣಿಸಿ, ಸರ್ವರಕ್ಷಕನನ್ನು, ರಕ್ಷಿಸೆಂದು ಪ್ರಾರ್ಥಿಸುವುದು ಮಾತ್ರ ಜೀವರ ಕರ್ತವ್ಯ-ವೆಂದು ತಿಳಿಸುತ್ತಾರೆ.

*'ಪ್ರಸನ್ನವಕ್ತ್ರಂ ನಳಿನಾಯತೇಕ್ಷಣಂ*
*ಕದಂಬಕಿಂಜಲ್ಕಪಿಶಂಗವಾಸಸಮ್।*
*ಲಸನ್ಮಹಾಹಾರಹಿರಣ್ಮಯಾಂಗದ-*
*ಸ್ಫುರನ್ಮಹಾರತ್ನಕಿರೀಟಕುಂಡಲಮ್॥*
*ವಿಭೂಷಿತಂ ಮೇಖಲಯಾಂಗುಲೀಯಕೈಃ*
*ಮಹಾಧನೈರ್ನೂಪುರಕಂಕಣಾದಿಭಿಃ।*
*ಸ್ನಿಗ್ಧಾಮಲೈಃ ಕುಂಚಿತನೀಲಕುಂತಲೈಃ*
*ವಿರೋಚಮಾನಾನನಹಾಸಪೇಶಲಮ್॥'*

ಇತ್ಯಾದಿ ಭಾಗವತಶ್ಲೋಕಗಳಲ್ಲಿ ವರ್ಣಿತವಾದ ಶ್ರೀಹರಿಯ ದಿವ್ಯರೂಪ-ವನ್ನೇ ವರ್ಣಿಸಿರುವರೆಂಬುದು ಸ್ಪಷ್ಟವಿದೆ. ಶ್ರೀಹರಿಯು ನಿರಾಕಾರನೆಂಬ (ಯಾವ ರೂಪವೂ ಇಲ್ಲದವನೆಂಬ) ದುಷ್ಟಮತವು ಆಗಮಗಳಿಗೂ ಯುಕ್ತಿಗೂ ವಿರುದ್ಧವೆಂಬಲ್ಲಿ ಈ ಹಿಂದೆ ಬಹು ಸಂದರ್ಭಗಳಲ್ಲಿ ಪ್ರಸಕ್ತವಾಗಿರುವ ವಿವರಣೆಗಳನ್ನು ನೋಡಿಕೊಳ್ಳಬಹುದು.

**ದುಷ್ಟ ದಾನವರನೆ ಮೆಟ್ಟಿ ಸಜ್ಜನರ ಪ್ರ-**
**ತಿಷ್ಠೆಯ ಮಾಡಿ ಪಾಲಿಸಿದ**
**ಪಟ್ಟವ ಶಕ್ರಂಗೆ ಕಟ್ಟಿ ಬಲಿಯನು ಕೆಳ-**
**ಗಿಟ್ಟ ತನ್ನಿಷ್ಟರ ಪೊರೆದ ॥೫॥**

**ಅರ್ಥ:** ದುಷ್ಟದಾನವರ—ಸಜ್ಜನಪೀಡಕರಾದ ಅಸುರಸ್ವಭಾವದ ದಾನ-ವರೇ ಮೊದಲಾದವರನ್ನು, ಮೆಟ್ಟಿ—ನಿಗ್ರಹಿಸಿ, ಸಜ್ಜನರ—ಸುಜೀವರನ್ನು, ಪ್ರತಿಷ್ಠೆಯ ಮಾಡಿ—ಸ್ಥಿರವಾಗಿ ನಿಲ್ಲಿಸಿ (ಧರ್ಮಮಾರ್ಗದಲ್ಲಿಟ್ಟು), ಪಾಲಿಸಿದ—ರಕ್ಷಿಸಿದನು (ರಕ್ಷಿಸುತ್ತಾನೆ); ಶಕ್ರಂಗೆ—ಇಂದ್ರನಿಗೆ, ಪಟ್ಟವ ಕಟ್ಟಿ—ಸ್ವರ್ಗ ಸಿಂಹಾಸನದಲ್ಲಿ ಕೂಡಿಸಿ, ಬಲಿಯನು—ದೈತ್ಯಚಕ್ರವರ್ತಿಯಾದ ಬಲಿಯನ್ನು, ಕೆಳಗಿಟ್ಟ—ಕೆಳಗಿನ ಲೋಕಕ್ಕೆ (ಸುತಲಲೋಕಕ್ಕೆ), ತಳ್ಳಿದನು; ತನ್ನಿಷ್ಟರ—ತನಗೆ ಪ್ರಿಯರಾದ ಭಕ್ತರನ್ನು, ಪೊರೆದ—ರಕ್ಷಿಸಿದನು.

**ವಿಶೇಷಾಂಶ:** (೧) ರಕ್ಷಣೆಯೆಂಬುದು, ದೇಹಪೋಷಣಾದಿಗಳಿಗೆ ಆವಶ್ಯಕವಾದ ಧನಾದಿ ಸಾಮಗ್ರಿಗಳನ್ನೊದಗಿಸುವುದು ಮತ್ತು ರೋಗಾದಿ ಉಪದ್ರವಗಳನ್ನು ಪರಿಹರಿಸುವುದು ಮಾತ್ರವಲ್ಲ—ಜೀವರು, ಅವರವರ ಆತ್ಯಂತಿಕ ಗತಿಗಳನ್ನು ಹೊಂದುವಂತೆ, ಅವರನ್ನು ಯೋಗ್ಯ ಸಾಧನಮಾರ್ಗ-ಗಳಲ್ಲಿಟ್ಟು, ನಡೆಸುವುದೇ ಆಗಿವೆ. ಸುಜೀವರನ್ನು ಧರ್ಮಮಾರ್ಗದಲ್ಲಿಟ್ಟು, ಅವರನ್ನು ಸಂಸಾರಬಂಧದಿಂದ ಬಿಡುಗಡೆಮಾಡಿ, ನಿತ್ಯಾನಂದಸ್ಥಿತಿಯನ್ನು ಹೊಂದಿಸುವುದು ಅವರ ಮುಖ್ಯರಕ್ಷಣೆಯು. ಈ ರೂಪದ ರಕ್ಷಣೆಯನ್ನು ಸರ್ವರ ಅಂತಃಪ್ರೇರಕನಾಗಿ ನಿಂತು ಶ್ರೀಹರಿಯು ಮಾಡುತ್ತಾನಲ್ಲದೆ ತನ್ನ ನಾನಾ ಅವತಾರಗಳಿಂದ ಸಹ, ಇದನ್ನೇ ಸಾಧಿಸುತ್ತಾನೆ. ಶ್ರೀಕೃಷ್ಣನು

'ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥' (ಗೀತಾ)

ದುಷ್ಟರನ್ನು ಸಂಹರಿಸಿ, ಸಜ್ಜನರನ್ನು ರಕ್ಷಿಸಿ, ಧರ್ಮಸಂಸ್ಥಾಪನೆ ಮಾಡಲಿ-ಕ್ಕಾಗಿಯೇ ಆಯಾ ಯುಗಗಳಲ್ಲಿ ಅವತರಿಸುವೆನೆಂದು ಹೇಳಿರುತ್ತಾನೆ.

(೨) ಬಲಿಚಕ್ರವರ್ತಿಯು ಪ್ರಸಿದ್ಧ ಭಗವದ್ಭಕ್ತನು. ಈತನನ್ನು ಕೆಳಗೆ ತಳ್ಳಿದುದು ಭಕ್ತರಕ್ಷಣೆಯೇ ಎಂಬ ಸಂಶಯದ ವಿಷಯವಾಗಿ ವಿವರಣೆಯು ಆವಶ್ಯಕ. ಶ್ರೀಹರಿಯು ತನ್ನ ಭಕ್ತರನ್ನು ಸರ್ವದಾ ರಕ್ಷಿಸುವನೆಂಬ ಮಹಾ ಪ್ರಮೇಯದಲ್ಲಿ ದೃಢವಿಶ್ವಾಸವಿರಬೇಕಾದುದು ಅತ್ಯವಶ್ಯಕ. ಅದು ಮೋಕ್ಷ ಪ್ರಾಪಕಶರಣಾಗತಿಯ ಮುಖ್ಯ ಲಕ್ಷಣವೂ ಆಗಿದೆ.

*'ರಕ್ಷತ್ಯೇವೇತಿ ವಿಶ್ವಾಸಃ ತದೀಯೋಹಮಿತಿ ಸ್ಮೃತಿಃ*
*ಶರಣಾಗತಿರೇಷಾ ಸ್ಯಾದ್ವಿಷ್ಣೌ ಮೋಕ್ಷಪ್ರದಾಯಿನೀ'* (ವಿಷ್ಣುರಹಸ್ಯ)

ಎಂದು ವಿಷ್ಣುಶರಣಾಗತಿಯು ನಿರೂಪಿಸಲ್ಪಟ್ಟಿದೆ. ಪ್ರಕೃತ, ಬಲಿಯು ಸ್ವಯಂ ಭಗವದ್ಭಕ್ತನು. ಆದರೆ ಅವನಲ್ಲಿ ಅಸುರಾವೇಶವಿದೆ. ಜೀವದ್ವಯಾವೇಶ-ವುಳ್ಳವರಲ್ಲಿ ಎರಡು ವಿಧ. ಆ ಸಂಬಂಧದ ಸೂಕ್ಷ್ಮವಿಶೇಷಗಳನ್ನು ತಿಳಿಯ-ಬೇಕು. ಭಕ್ತರಲ್ಲಿ ಅಸುರಾವೇಶ ಮತ್ತು ಅಸುರರಲ್ಲಿ ಭಕ್ತರ ಆವೇಶವೆಂಬ ಭೇದವಿದೆ. ಏಕದೇಹಗತ ಮನ ಆದಿ ಇಂದ್ರಿಯಗಳ ದ್ವಾರಾ ಪ್ರವರ್ತಿಸುವ ಜೀವರು ಇಬ್ಬರಿದ್ದರೂ, ಆವಿಷ್ಟಜೀವದ್ವಯರ ಕೃತಿಗಳ ಸ್ವಭಾವದಲ್ಲಿ ಕಂಡು-ಬರುವ, ಪ್ರಾಬಲ್ಯ-ದೌರ್ಬಲ್ಯ ಮತ್ತು ಪ್ರಾಚುರ್ಯ-ಅಪ್ರಾಚುರ್ಯ ಲಕ್ಷಣ-ಗಳಿಂದ, ಯಾರಲ್ಲಿ ಯಾರ ಆವೇಶವೆಂಬುದನ್ನು ನಿರ್ಧರಿಸಿಕೊಳ್ಳಬೇಕು. ಹೀಗೆ

ಆವೇಶದಲ್ಲಿ ದ್ವೈವಿಧ್ಯವಿರುತ್ತದೆಂಬುದನ್ನು ಈ ಮುಂದಿನ ಪ್ರಮಾಣವಾಕ್ಯ-ಗಳಿಂದ ತಿಳಿಯಬಹುದಾಗಿದೆ.

*'ಪೌಂಡ್ರಕೇ ನರಕೇ ಚೈವ ಸಾಲ್ವೇ ಕಂಸೇ ಚ ರುಗ್ಮಿಣಿ।*
*ಆವಿಷ್ಟಾಸ್ತು ಹರೇರ್ಭಕ್ತಾಃ ತದ್ಭಕ್ತ್ಯಾ ಹರಿಮಾಪಿರೇ॥*
*ಅಸುರಾಸ್ತು ಸ್ವಯಂ ತೇ ತು ಮಹಾತಮಸಿ ಪಾತಿತಾಃ।*
*ಬಲಿರಪ್ಯಸುರಾವೇಶಾತ್ ಸ್ತುವನ್ನಪಿ ಜನಾರ್ದನಮ್।*
*ಆಕ್ಷಿಪತ್ಯಂತರಾ ಕ್ವಾಪಿ ಪ್ರಹ್ಲಾದೋ ನಿತ್ಯಭಕ್ತಿಮಾನ್॥'* (ಭಾಗ. ತಾ.ನಿ)

**ಭಾವಾರ್ಥ:** 'ಪೌಂಡ್ರಕ, ನರಕಾಸುರ, ಸಾಲ್ವ, ಕಂಸ ಮತ್ತು ರುಗ್ಮಿ ಇವರಲ್ಲಿ ವಿಷ್ಣುಭಕ್ತರು ಆವಿಷ್ಟರಾಗಿರುವರು; ಅವರು ಭಕ್ತಿಯಿಂದ ಸಾರೂಪ್ಯ-ಮುಕ್ತಿಯನ್ನೇ ಹೊಂದಿದರು; ಆದರೆ ಸ್ವಯಂ ಅಸುರರಾದ ಅವರೆಲ್ಲರೂ ಮಹಾತಮಸ್ಸನ್ನೇ ಹೊಂದಿದರು. ಬಲಿಯಲ್ಲಿ ಬಲಿ ಎಂಬ ಅಸುರನ ಆವೇಶ-ವಿತ್ತು. ಆದ್ದರಿಂದ ಶ್ರೀಹರಿಸ್ತುತಿಪರನಾದರೂ ಮಧ್ಯೆ ಮಧ್ಯೆ ಕೆಲವು ವೇಳೆ ತಿರಸ್ಕಾರದ ಮಾತುಗಳನ್ನಾಡುತ್ತಾನೆ; ಪ್ರಹ್ಲಾದನಾದರೋ ನಿರಂತರ ಭಕ್ತಿ-ಯುಳ್ಳವನು'. ಒಂದು ದೇಹದಲ್ಲಿ ಎರಡು ಜೀವರಿದ್ದಾಗ 'ಜೀವದ್ವಯಾವೇಶ'-ವೆಂದು ಕರೆದರೂ, ಇಬ್ಬರಿರುವುದಕ್ಕೂ, ಆವೇಶಮಾತ್ರಕ್ಕೂ ಇರುವ ಸೂಕ್ಷ್ಮ ವಿಶೇಷವನ್ನು ಗಮನಿಸಬೇಕು. ಪ್ರಹ್ಲಾದನಲ್ಲಿ ವಾಯುದೇವನ ಆವೇಶ, ಪೃಥುರಾಜನಲ್ಲಿ ವಿಷ್ಣುವಿನ ಆವೇಶ, ಎಂದು ಹೇಳಿದರೆ, ಅಲ್ಲಿ (ಆ ದೇಹವು) ಉಭಯ ಚೇತನರ ಆವಾಸವೆಂದು ತಿಳಿಯಕೂಡದು. ಎರಡು ಜೀವರಂತೆ, ಅಲ್ಲಿ ಇಬ್ಬರೂ ವಾಸಿಸುವರೆಂದಲ್ಲ. ಅಧಿಕಶಕ್ತಿ ಪ್ರಕಟವಾದಾಗ ಮಾತ್ರ, ಅದು ಆವೇಶನಿಮಿತ್ತವೆಂದು ತಿಳಿಯಬೇಕು. ಋಜುಗಳ ವ್ಯತಿರಿಕ್ತರಾದ ರುದ್ರಾದಿ-ಗಳಲ್ಲಿ ಸಹ ಅಸುರಾವೇಶವುಂಟು. ಆದರೆ ಅವರನ್ನು ಜೀವದ್ವಯಾವೇಶ-ವುಳ್ಳವರೆಂದು ಹೇಳಲಾಗುವುದಿಲ್ಲ. ಅಸುರಾವೇಶವು, ಯಾವುದೋ ಒಂದು ಕಾಲದಲ್ಲಿ, ಅಲ್ಪಕಾಲ ಮಾತ್ರವಿರುತ್ತದೆ. ಆಗ ಮಾತ್ರ ವಿರುದ್ಧವರ್ತನೆ-ಯುಳ್ಳವರಾಗುತ್ತಾರೆ. ಹೀಗೆ ದೇವತೆಗಳು ಅಸುರಾವೇಶಕ್ಕೆ ವಶರಾಗುವ ಸ್ವಭಾವದವರೂ ನಿತ್ಯಭಕ್ತರೆಂದೇ ಕರೆಯಲ್ಪಡುತ್ತಾರೆ.

*'ಪೂತನಾಕಂಸನರಕಶಿಶುಪಾಲಾದಿಷು ದ್ವಿಧಾ*
*ಜೀವಾಃಸಂತಸ್ತ್ವಸಂತಶ್ಚ।'*— (ಭಾಗ.ತಾ.ನಿ)

— ಎಂದರೆ, ಪೂತನಾ, ಕಂಸ, ನರಕ, ಶಿಶುಪಾಲಾದಿಗಳಲ್ಲಿ, ಸಂತರು ಮತ್ತು ಅಸುರರು (ಸುಜೀವ-ದುರ್ಜೀವಗಳೆಂಬ) ಎರಡು ವಿಧ ಜೀವರಿರುತ್ತಾರೆಂದು

ಹೇಳುವುದರಿಂದ ಈ ವಿಶೇಷವು ಸೂಚಿತವಾಗಿದೆ. ಅಸುರಾವೇಶವಿಲ್ಲ-ದಿದ್ದರೂ, ಸುಜೀವಿಗಳು ಕಾಲವಿಶೇಷಗಳಲ್ಲಿ, ಪೂರ್ವಕರ್ಮಾನುಸಾರವಾಗಿ ವರ್ತಿಸುವುದೂ ಉಂಟೆಂಬುದನ್ನೂ ಲಕ್ಷ್ಯದಲ್ಲಿಡಬೇಕು. ತಾತ್ವಿಕದೈತ್ಯ-ಪ್ರೇರಣೆಗೂ, ದೈತ್ಯಾವೇಶಕ್ಕೂ ಇರುವ ಸೂಕ್ಷ್ಮವ್ಯತ್ಯಾಸವನ್ನು ಗಮನಿಸಬೇಕು. ಬಲಿಯು ಹರಿಭಕ್ತನು—ಆತನಲ್ಲಿ ಅಸುರನ ಆವೇಶ—ಅಸುರನಲ್ಲಿ ಭಕ್ತನ ಆವೇಶದಂತಲ್ಲ. ಅಸುರಾವೇಶನಿಮಿತ್ತದಿಂದ ಇಂದ್ರಾದಿ ದೇವತೆಗಳಲ್ಲಿ ಶತ್ರು-ಭಾವದಿಂದ ವರ್ತಿಸಿದನು. ಇದಕ್ಕಾಗಿ ಬಲಿಯನ್ನು ಶ್ರೀಹರಿಯು ನಿಗ್ರಹಿಸಿ-ದರೂ, ಭಕ್ತನಾದ್ದರಿಂದ ಸುತಲಲೋಕದ ಅಖಂಡೈಶ್ವರ್ಯವನ್ನೂ, ಮುಂದಿನ ಮನ್ವಂತರದ ಸ್ವರ್ಗಾಧಿಪತ್ಯವನ್ನೂ (ಇಂದ್ರಪದವನ್ನೂ) ಅನುಗ್ರಹಿಸಿದನು. ಹೀಗೆ, ತನ್ನ ಭಕ್ತರು ಕಾರಣಾಂತರಗಳಿಂದ ಮಾರ್ಗ ತಪ್ಪಿದಾಗ, ಯೋಗ್ಯ-ಶಾಸನ ಮಾಡಿ, ಸನ್ಮಾರ್ಗಕ್ಕೆ ಹಚ್ಚಿ ಅನುಗ್ರಹಿಸುವುದೂ ಭಕ್ತರ ರಕ್ಷಣೆಯೇ ಸರಿ. ಅಸುರಜೀವನಿಂದ ಕೂಡಿದ ಭಕ್ತನನ್ನು ಸಹ ಶ್ರೀವಿಷ್ಣು ಮೋಚನೆಮಾಡಿ ತನ್ನ ಪ್ರಾಪ್ತಿಯನ್ನು ಅನುಗ್ರಹಿಸುವನು—ಈತನ ಭಕ್ತವಾತ್ಸಲ್ಯವು ಆಶ್ಚರ್ಯಕರವು.

*'ದ್ವೇಷಿಜೀವಯುತಂ ಚಾಪಿ ಭಕ್ತಂ ವಿಷ್ಣುರ್ವಿಮೋಚಯೇತ್।*
*ಅಹೋಽತಿಕರುಣಾ ವಿಷ್ಣೋಃ....'*

ಎಂದಿರುವರು ಶ್ರೀಮದಾಚಾರ್ಯರು, ಭಾಗವತತಾತ್ಪರ್ಯದಲ್ಲಿ.

**ಗ್ರಂಥಾದಿಯಲಿ ಮಾಳ್ಪ ಮಂಗಳಕೆ ಸಲಿಸು-**
**ವಂತ ವೇದೋಕ್ತಿ ಸಲ್ಲದಿರೆ**
**ವ್ಯರ್ಥ ಶಿಷ್ಟಾಚಾರಬಲದಿಂದ ವೊಂದು ಮೂಲ-**
**ಶ್ರುತಿಯಿಂದ ತಂದುಕೊಂಬುವುದು ॥೬॥**

ಗ್ರಂಥಾರಂಭದಲ್ಲಿ ಆಚರಿಸುವ ಮಂಗಳವು, ದೋಷಾದಿ ವಿಘ್ನಪರಿಹಾರಕ ಶುಭಚಿನ್ಹೆಯಾಗಿರುವಂತೆ, ಶ್ರೀಹರಿಪ್ರಸನ್ನತೆಗಾಗಿ ಆಚರಿಸುವ ಸಕಲ ಕರ್ಮ-ಗಳಿಗೆ, ಚಕ್ರಾದಿ ವಿಷ್ಣುಚಿನ್ಹೆಗಳನ್ನು ದೇಹದಲ್ಲಿ ಧರಿಸುವುದು ಶುಭಫಲ ಪ್ರಾಪ್ತಿಗೆ ಕಾರಣವಾದ ಸಲ್ಲಕ್ಷಣವೆನಿಸುತ್ತದೆಂಬ ಪ್ರಮೇಯವನ್ನು ಈ ಮುಂದಿನ ನುಡಿ-ಗಳಲ್ಲಿ ಯುಕ್ತಿಗಳಿಂದ ಸಾಧಿಸುತ್ತಾರೆ.

**ಅರ್ಥ:** ಗ್ರಂಥಾದಿಯಲಿ—ಗ್ರಂಥಾರಂಭದಲ್ಲಿ, ಮಾಳ್ಪ—ಮಾಡುವ (ರಚಿ-ಸುವ—ಆಚರಿಸುವ); ಮಂಗಳಕೆ—ಮಂಗಳಕ್ಕೆ, ಸಲಿಸುವಂತ—ಹೊಂದಿಕೆ-

ಯಾಗುವಂಥ (ಮಂಗಳವನ್ನಾಚರಿಸಬೇಕೆಂದು ವಿಧಿಸುವ), ವೇದೋಕ್ತಿ—ವೇದವಾಕ್ಯವು, ಸಲ್ಲದಿರೆ—ದೊರೆಯದಿದ್ದರೆ, ವ್ಯರ್ಥ—ಮಂಗಳವನ್ನಾಚರಿಸುವುದು ವ್ಯರ್ಥವಾದೀತೇ? (**ಅಥವಾ** ನೀನು ವ್ಯರ್ಥವೆಂದು ಭಾವಿಸುವ) ಶಿಷ್ಟಾಚಾರ ಬಲದಿಂದ—ಶಿಷ್ಟಾಚಾರವನ್ನು ಆಶ್ರಯಿಸಿ (ಜ್ಞಾನಿಸಂಪ್ರದಾಯಬಲದಿಂದ), ಪೊಂದು ಮೂಲಶ್ರುತಿಯಿಂದ—(ಶಿಷ್ಟಾಚಾರದ ಮೂಲದಲ್ಲಿ, ಎಂದರೆ ಅದಕ್ಕೆ ಆಧಾರವಾದ) ಯಾವುದೊಂದು ವೇದವಾಕ್ಯವಿರಬೇಕೆಂದು ಕಲ್ಪಿಸಿ, ತಂದುಕೊಂಬುವುದು—ಸಮಾಧಾನವನ್ನು ಹೊಂದಿ ಮಂಗಳವನ್ನಾಚರಿಸಬೇಕಲ್ಲವೇ?

**ವಿಶೇಷಾಂಶ:** ಶ್ರೀವಾದಿರಾಜರು ತಮ್ಮಿಂದ ರಚಿತವಾದ 'ಚಕ್ರಸ್ತುತಿ'ಯಲ್ಲಿ ಸ್ಪಷ್ಟವಾಗಿ ನಿರೂಪಿಸಿರುವ ಯುಕ್ತಿಯನ್ನೇ ಈ ನುಡಿಯಲ್ಲಿ ಸಂಗ್ರಹಿಸಿ ಹೇಳಿದ್ದಾರೆ.

*'ದೋಷೌಘವಾರಣಂ ಯಸ್ಯ ಧಾರಣಂ ಮೋಕ್ಷಕಾರಣಮ್।*
*ನ ವೈದಿಕಂ ತಪ್ತಚಕ್ರಧಾರಣಂ ಯದಿ ಮನ್ಯಸೇ॥*
*ಗ್ರಂಥಾದೌ ಮಂಗಲಂ ತರ್ಹಿ ಕಸ್ಮಾನ್ನಾವೈದಿಕಂ ತವ।*
*ಶಿಷ್ಟಾಚಾರಾತ್ ಸ್ಮೃತಿಃ ಕಲ್ಪ್ಯಾ ಸ್ಮೃತೇಶ್ಚ ಶ್ರುತಿಕಲ್ಪನಾ॥*
*ಯದಿ ತತ್ರ ತಥೈತಸ್ಮಿನ್ ಕಿನ್ನ ಕಲ್ಪಯಸಿ ಶ್ರುತಿಮ್।*
*ನಿಂಬಾದಿತ್ಯಾನುಗೈಃ ಪ್ರಾಜ್ಞೈರ್ಮಾಯಾವಾದ್ಯೇಕದೇಶಿಭಿಃ।*
*ವಿಷ್ಣುಸ್ವಾಮಿಮತಸ್ಥೈಶ್ಚ ರಾಮಾನುಜಮತಾಶ್ರಯೈಃ॥*
*ತತ್ವವಾದಿಜನಾಚಾರ್ಯೈಃ ಶಿಷ್ಟಶ್ರೇಷ್ಠೈರನುಷ್ಠಿತೇ।*
*ಬಹುಶಿಷ್ಟಜನಾಚಾರಃ ಪ್ರಮಾಣಮುಭಯತ್ರ ಚ॥'*

**ತಾತ್ಪರ್ಯ:** ದೇಹದಲ್ಲಿ ತಪ್ತಚಕ್ರಧಾರಣಮಾಡುವುದು ಸಕಲ ದೋಷಪರಿಹಾರಕವು ಮತ್ತು ಮೋಕ್ಷಸಾಧಕವು. ಇದು ವೇದೋಕ್ತವಿಧಿಯಲ್ಲವೆಂದು (ನೀನು ಹೇಳುವಂತೆ; ವಸ್ತುತಃ ವೇದೋಕ್ತವೇ) ತಿಳಿಯುವುದಾದರೆ, ಗ್ರಂಥಾರಂಭದಲ್ಲಿ ಮಂಗಲವನ್ನಾಚರಿಸಬೇಕೆಂಬ ಪದ್ಧತಿಯನ್ನು ಅವೈದಿಕವೆಂದೇಕೆ ಭಾವಿಸಿ, ತ್ಯಜಿಸುವುದಿಲ್ಲ? ಶಿಷ್ಟಾಚಾರ ಪ್ರಾಪ್ತವಾದುದರಿಂದ ಮಂಗಲವನ್ನಾಚರಿಸಬೇಕೆಂದರೆ, ಆ ಶಿಷ್ಟಾಚಾರಕ್ಕೆ ಒಂದು ಸ್ಮೃತಿಯನ್ನೂ, ಆ ಸ್ಮೃತಿಗೆ ಆಧಾರಭೂತವಾದ ಒಂದು ಶ್ರುತಿಯನ್ನೂ ಕಲ್ಪಿಸಬೇಕಲ್ಲವೇ? (ಇರಲೇಬೇಕೆಂದು ತಿಳಿಯಬೇಕಲ್ಲವೇ?) ಈ ಅರ್ಥವನ್ನು ಹೇಳುವಂತಿರುವ ಒಂದು ಶ್ರುತಿಗೆ ತದನುಗುಣವಾದ ಅರ್ಥವನ್ನು ಯೋಜನೆಮಾಡಿಕೊಳ್ಳಬೇಕಲ್ಲವೇ?

ನಿಂಬ, ಆದಿತ್ಯಾದಿಗಳ ಮತಾನುಯಾಯಿಗಳಿಂದಲೂ, ಮಾಯಾವಾದಿಗಳ ಒಂದು ಪಂಗಡದವರಿಂದಲೂ, ವಿಷ್ಣುಸ್ವಾಮಿ ಹಾಗೂ ರಾಮಾನುಜ-ಮತೀಯರಿಂದಲೂ, ತತ್ವವಾದಿ ಜನರ ಆಚಾರ್ಯರಿಂದಲೂ, ಶಿಷ್ಟರೆಂದು ಪರಿಗಣಿತರಾದ ಇತರರಿಂದಲೂ ಅನುಷ್ಠಿತವಾದುದು, ಉಭಯತ್ರ (ತಪ್ತ-ಚಕ್ರಧಾರಣ ಮತ್ತು ಮಂಗಲಾಚರಣಗಳ ವಿಷಯದಲ್ಲಿ) ಪ್ರಮಾಣ-ಗಳಾಗುವುದಿಲ್ಲವೇ? (ಆಗಿಯೇ ಆಗುತ್ತವೆ).

**ನಿಂಬಾದಿತ್ಯವಿಷ್ಣುಸ್ವಾಮಿಮತದೇವ-**
**ರೆಂಬ ನಿಮ್ಮವರೆ ಧರಿಸುವರು**
**ತುಂಬಿದ ತತ್ವವಾದಿಗಳು ರಾಮಾನುಜರು**
**ಸಂಭ್ರಮದಿ ಚಕ್ರ ಧರಿಸಿದರು ॥೭॥**

**ಅರ್ಥ:** ನಿಂಬಾದಿತ್ಯವಿಷ್ಣುಸ್ವಾಮಿಮತದೇವರೆಂಬ—ನಿಂಬ, ಆದಿತ್ಯ, ವಿಷ್ಣುಸ್ವಾಮಿ, ಮತದೇವ ಮುಂತಾದ ಮತಾನುಯಾಯಿಗಳಾದ, ನಿಮ್ಮವರೆ —ನಿಮ್ಮ ಜನರೇ (ಮಾಧ್ವರಲ್ಲದ ಇತರರು ಸಹ). ಧರಿಸುವರು—ವಿಷ್ಣು-ಚಿನ್ಹೆಗಳನ್ನು ಧರಿಸುತ್ತಾರೆ; ತುಂಬಿದ ತತ್ವವಾದಿಗಳು—(ತಾವೇ) ಪೂರ್ಣತತ್ವ-ವಾದಿಗಳೆಂದು (ವೈಷ್ಣವರೆಂದು) ಹೇಳಿಕೊಳ್ಳುವ (ಅಥವಾ ತತ್ವವಾದಿಗಳೆಂಬ ಅನ್ವರ್ಥನಾಮವುಳ್ಳ ಮಧ್ವಮತಾನುಗರು), ಸಂಭ್ರಮದಿ-ಉತ್ಸಾಹದಿಂದ, ಚಕ್ರ —ಚಕ್ರ ಚಿನ್ಹೆಯನ್ನು, ಧರಿಸಿದರು—(ಆವಶ್ಯಕವೆಂದಂಗೀಕರಿಸಿ) ಧಾರಣೆ-ಮಾಡುತ್ತಾರೆ.

**ನಿಮ್ಮ ಮತದ ಸಂನ್ಯಾಸಿಗಳೆಲ್ಲರು**
**ನಿರ್ಮಲಶ್ವೇತೋರ್ಧ್ವಧರಿಸಿ**
**ತಮ್ಮ ಕರದಿಂದಲಿ ಚಕ್ರಮುದ್ರಿಕೆ ಸತ್**
**ಕರ್ಮ ಮಾಡುವಲ್ಲಿ ಧರಿಸುವರು ॥೮॥**

**ಅರ್ಥ:** ನಿಮ್ಮ ಮತದ—ಅದ್ವೈತಮತದ, ಸಂನ್ಯಾಸಿಗಳೆಲ್ಲರು—ಎಲ್ಲ ಯತಿಗಳು, ನಿರ್ಮಲಶ್ವೇತೋರ್ಧ್ವ—ಪವಿತ್ರವಾದ ಶುಭ್ರವರ್ಣದ ಊರ್ಧ್ವ-ಪುಂಡ್ರವನ್ನು ಧರಿಸಿ—ತಾವೂ ಧರಿಸಿ, ತಮ್ಮ ಕರದಿಂದ—ತಮ್ಮ ಕೈಯಿಂದಲೇ, ಚಕ್ರಮುದ್ರಿಕೆ—ಚಕ್ರಮುದ್ರೆಯನ್ನು, ಸತ್ಕರ್ಮಮಾಡುವಲ್ಲಿ—ಸತ್ಕರ್ಮಾಚರಣೆಗೆ ಮೊದಲು, ಧರಿಸಿರುವರು—(ತಪ್ಪದೇ) ಧರಿಸಿರುತ್ತಾರೆ, (ತಮ್ಮ ಶಿಷ್ಯರೂ ಧರಿಸುವಂತೆ ಮಾಡುತ್ತಾರೆ).

**ವಿಶೇಷಾಂಶ:** (೧) ಅದ್ವೈತಮತಾನುಯಾಯಿಗಳಾದ ಯತಿಗಳೂ ಸತ್ಕರ್ಮಾನುಷ್ಠಾನಕಾಲದಲ್ಲಿ, ಸ್ವಯಂ ಚಕ್ರಚಿನ್ಹೆಯನ್ನು ದೇಹದಲ್ಲಿ ಧರಿಸುವರೆಂಬ, ಏಕದೇಶ ಒಪ್ಪಿಗೆಯನ್ನು (ಕೆಲವರ ಅಂಗೀಕಾರವನ್ನು) ಬಳಸಿಕೊಂಡು, ವಿಷ್ಣುಚಿನ್ಹೆಗಳ ಧಾರಣೆಯ ಅವಶ್ಯಕತೆಯ ಸಾಧನೆಗೆ ಯುಕ್ತಿಯನ್ನು ಸೂಚಿಸುತ್ತಾರೆ.

(೨) ಗುರುಗಳಿಂದ ಮುದ್ರಾಧಾರಣ ಮಾಡಿಸಿಕೊಳ್ಳಬೇಕೆಂಬ ನಿಯಮವಿರುತ್ತದೆ. ಹೀಗಿದ್ದರೂ ತಮಗೆ ತಾವೇ ಚಕ್ರವನ್ನು ಧರಿಸುವುದರಲ್ಲಿ ಸಹ ಆ ನಿಯಮದ ಏಕದೇಶದ ಅಂಗೀಕಾರವನ್ನು ಕಾಣಬಹುದೆನ್ನುತ್ತಾರೆ.

(೩) ವಿಷ್ಣುದೀಕ್ಷೆಯು ಬಾಹ್ಯ-ಅಂತರಗಳೆಂಬ ಭೇದದಿಂದ ಎರಡು ಪ್ರಕಾರವಾಗಿರುವುದು. ಮುದ್ರಾಧಾರಣವು ಬಾಹ್ಯದೀಕ್ಷೆಯು. ಗುರುಗಳಿಂದಲೇ ದೀಕ್ಷಾಸ್ವೀಕಾರವಾಗಬೇಕು.

ಮುಂದಿನ ನುಡಿಗಳ ವಿಶೇಷ ವಿವರಣೆಯನ್ನು ನೋಡಬೇಕು.

**ಸ್ವತಪ್ತ ಚಕ್ರ ಸುಪವಿತ್ರ ಮುದ್ರಿಕೆಯೆಂದು**
**ಶ್ವೇತೋರ್ಧ್ವಪುಂಡ್ರಜ್ವಾಲೆಂದು**
**ಮತ ನಿಮ್ಮ ಯತಿಗಳೇ ಮಾಡಿದ ಶ್ರುತಿ**
**ಯಾತಕಿನ್ನು ಬರಿದೆ ಕಲಹ** ॥೯॥

**ಅರ್ಥ:** ಸ್ವತಪ್ತ— ವಿಷ್ಣುನಾಮಕ (ವಿಷ್ಣುವೀರ್ಯಾತ್ಮಕ) ವಹ್ನಿಯಲ್ಲಿ ದಹಿಸಲಾದ (ಚೆನ್ನಾಗಿ ಕಾಯಿಸಿದ), ಚಕ್ರ— ಚಕ್ರವೇ, ಸುಪವಿತ್ರ— ಅತಿ ಪವಿತ್ರವಾದ (ದೇಹವನ್ನು ಪವಿತ್ರಗೊಳಿಸುವ), ಮುದ್ರಿಕೆಯೆಂದು— ಚಿನ್ಹೆಯೆಂದು, ಶ್ವೇತೋರ್ಧ್ವಪುಂಡ್ರಜ್ವಾಲೆಂದು— ಶುಭ್ರವಾದ ಊರ್ಧ್ವಪುಂಡ್ರವು ಅಗ್ನಿಜ್ವಾಲೆಯೆಂದೂ, ನಿಮ್ಮ ಯತಿಗಳೇ— ನಿಮ್ಮ ಮತೀಯ ಯತಿಗಳೇ(ಜ್ಞಾನಿಶ್ರೇಷ್ಠರೇ), ಮಾಡಿದ— ಆಚರಿಸಿದ, ಶ್ರುತಿಮತ— ಶ್ರುತಿಸಮ್ಮತ್ರವಾದ ಕರ್ಮವು; ಇನ್ನು— ಹೀಗಿರಲು, ಬರಿದೆ ಕಲಹ— ವ್ಯರ್ಥಕಲಹವು (ತಪ್ತಮುದ್ರಾಧಾರಣೆಯು ಆವಶ್ಯಕವೇ ಹೇಗೆಂಬ ವಿಚಾರದಲ್ಲಿ ವಿವಾದವು), ಯಾತಕಿನ್ನು— ಏಕೆ? ಬೇಕಿಲ್ಲವಷ್ಟೆ.

**ಇಷ್ಟು ಶಿಷ್ಟಾಚಾರಕ್ಕೆ ಮೂಲವಾದ**
**ಸ್ಪಷ್ಟ ಧ್ರುವವೇದವಿರುವರೆ**
**ನಿಟ್ಟನೇ ರುದ್ರ ಪದ್ಮಜ ಶ್ರುತಿಯನೊಡಂ-**
**ಬಟ್ಟು ಚಕ್ರವ ಧರಿಸಿದರು** ॥೧೦॥

**ಅರ್ಥ:** ದೇವಶ್ರೇಷ್ಠರಾದ ಬ್ರಹ್ಮರುದ್ರಾದಿಗಳೂ ಧರಿಸುವರೆಂದು ಹೇಳಿ, ವಿಷ್ಣುಚಿಹ್ನೆಗಳ ಧಾರಣೆಯು ಅತ್ಯವಶ್ಯಕವೆಂಬುದನ್ನು ಸಮರ್ಥಿಸುತ್ತಾರೆ.

ಇಷ್ಟು ಶಿಷ್ಟಾಚಾರಕ್ಕೆ— ಇಷ್ಟು ವಿವಿಧ ಉತ್ತಮರ ಆಚರಣೆಗೆ, ಮೂಲ-ವಾದ— ಆಧಾರವಾದ, ಸ್ಪಷ್ಟ ಧ್ರುವವೇದವು— ಸ್ಪಷ್ಟವಾದ ಅನಾದಿನಿತ್ಯ ಶ್ರುತಿ ವಾಕ್ಯವು, ಇರುವರೆ— ಇರುತ್ತಿರಲು (ಮತ್ತೇನು ಬೇಕು? ತಪ್ತ ಚಕ್ರ-ಧಾರಣೆಯು ಆವಶ್ಯಕವೆಂದು ಸಿದ್ಧವಾಗುವುದಿಲ್ಲವೇ?); ರುದ್ರ— ರುದ್ರ-ದೇವನು, ಪದ್ಮಜ— ಬ್ರಹ್ಮದೇವನು ಸಹ, ಶ್ರುತಿಯನೊಡಂಬಟ್ಟು— (ತಪ್ತ-ಮುದ್ರೆಗಳ ಧಾರಣೆಯನ್ನು ವಿಧಿಸುವ ಶ್ರುತಿಯನ್ನು ಒಪ್ಪಿ), ನಿಟ್ಟನೇ— ಸ್ಪಷ್ಟವಾಗಿ, ಚಕ್ರವ— ಚಕ್ರವನ್ನು (ಉಪಲಕ್ಷಣದಿಂದ ಇತರ ಚಿಹ್ನೆಗಳನ್ನು), ಧರಿಸಿದರು— ಧರಿಸಿರುವರು.

**ವಿಶೇಷಾಂಶ:** ವಿಷ್ಣುದೀಕ್ಷೆಯ ಮಹತ್ವವನ್ನು ನಿರೂಪಿಸುವ ವಿಷ್ಣುರಹಸ್ಯ-ವಾಕ್ಯಗಳು ಹೀಗಿವೆ:

*ದೀಕ್ಷಾ ಹಿ ದ್ವಿವಿಧಾ ಪ್ರೋಕ್ತಾ ಬಾಹ್ಯಾಭ್ಯಂತರಭೇದತಃ।*
*ಜ್ಞಾನಿನಾಂ ಉಭಯಂ ತತ್ರ ಬಾಹ್ಯೋವಾऽಜ್ಞಾನಿನಾಂ ಭವೇತ್॥*
*ವಿಧಿನಾಗ್ನಿಂ ಪ್ರತಿಷ್ಠಾಪ್ಯ ತಿಲಾಜ್ಯೇನ ಘೃತೇನ ವಾ।*
*ಸಹಸ್ರಂ ವ್ಯಾಹೃತೀರ್ಹುತ್ವಾ ವಷಟ್ ತೇ ವಿಷ್ಣುಮಂತ್ರತಃ॥*
*ಅಷ್ಟೋತ್ತರಶತಂ ಹುತ್ವಾ ಪ್ರತ್ಯೇಕಂ ಚ ತತಃಪರಮ್।*
*ಹೋಮಶೇಷಂ ಸಮಾಪ್ಯಾಗ್ನೌ ಚಕ್ರಶಂಖೌ ಪ್ರತಾಪಯೇತ್॥*
*ಪಿತಾ ವಾಪಿ ಗುರುರ್ವಾಪಿ ಯಃ ಕೋಪಿ ಹಿ ಮಹಾನ್ ಭವೇತ್।*
*ಸದಹೇದ್ದಕ್ಷಿಣೇ ಬಾಹೌ ಚಕ್ರಂ ಶಂಖಂ ಚ ವಾಮತಃ॥*
*ಸ್ತನಯೋರೂರ್ಧ್ವತಶ್ಚಾಪಿ ಸ್ವೇಚ್ಛಯಾ ಚ ತಥೋದರೇ।*
*ಏವಂ ಮುದ್ರಾಪಂಚಕಂ ವಾ ಮುದ್ರಾದ್ವಯಮಥಾಪಿ ವಾ॥*
*ಗೃಹ್ಣೀಯಾತ್ತು ಪ್ರಯತ್ನೇನ ಬಾಹ್ಯದೀಕ್ಷಾ ತು ಸಾ ಭವೇತ್।*
*ವಿಷ್ಣುದೀಕ್ಷಾಯುತೋ ಯೋಪಿ ವಿಷ್ಣು ಭಕ್ತಿ ವಿವರ್ಜಿತಃ॥*
*ದೀಕ್ಷಾಫಲಂ ನ ತಸ್ಯಾಸ್ತಿ ದೀಕ್ಷಯಾ ನರಕಂ ವ್ರಜೇತ್॥*
*ಅಯಂ ಸರ್ವೇಷ್ಟದಾತಾ ಮೇ ಸರ್ವಾನಿಷ್ಟನಿವಾರಕಃ।*
*ಸರ್ವೋತ್ಕೃಷ್ಟೋ ಯಮೇವೈಕಸ್ತದೀಯೋಹಂ ಸ ಮೇ ಪತಿಃ॥*
*ಇತಿ ಜ್ಞಾನಂ ನಿಶ್ಚಿತಂ ಯತ್ಸಾ ದೀಕ್ಷಾಭ್ಯಂತರಾ ಮತಾ।*
*ನಾಮಚಿನ್ಹಾದಿನಾ ದೇಹೇ ವಹ್ನಿನಾ ವಾ ಮೃದಾಂಕನಮ್॥*
*ಸಾ ಬಾಹ್ಯಾ ಪ್ರೋಚ್ಯತೇ ದೀಕ್ಷಾ ಹ್ಯಜ್ಞಾನಾಂ ಜ್ಞಾನಿನಾಮಪಿ।*

**ತಾತ್ಪರ್ಯ:** 'ಬಾಹ್ಯ-ಅಭ್ಯಂತರ ಭೇದದಿಂದ ದೀಕ್ಷೆಯು ಎರಡು ವಿಧ. ಬಾಹ್ಯದೀಕ್ಷೆಯು ಮಾತ್ರ ಅಜ್ಞಾನಿಗಳಲ್ಲಿರುತ್ತದೆ—ಜ್ಞಾನಿಗಳಲ್ಲಾದರೋ ಎರಡೂ ವಿಧ ದೀಕ್ಷೆಗಳಿರುತ್ತವೆ. ವಿಧಿಪೂರ್ವಕ ಅಗ್ನಿ ಪ್ರತಿಷ್ಠಾಪನೆಯನ್ನು ಮಾಡಿ, ಎಳ್ಳು ಅಥವಾ ತುಪ್ಪದಿಂದ, ವ್ಯಾಹೃತಿಮಂತ್ರದಿಂದ **೧,೦೦೦ ಸಲ** ಅಗ್ನ್ಯಂತರ್ಗತ ವಿಷ್ಣುಪ್ರೀತ್ಯರ್ಥವಾಗಿ ಹೋಮಮಾಡಿ, ವಷಟ್ಕಾರಮಂತ್ರದಿಂದ **೧೦೮ ಸಲ** ಹೋಮಿಸಿ, ಹೋಮಶೇಷವನ್ನು ಮುಗಿಸಿ, ಆ ಅಗ್ನಿಯಲ್ಲಿ ಚಕ್ರಶಂಖಗಳನ್ನು ದಹಿಸಬೇಕು (ಕಾಯಿಸಬೇಕು); ನಂತರ, ತಂದೆಯಾಗಲಿ, ಗುರುವಾಗಲಿ ಅಥವಾ ಮಹಾತ್ಮನಾದ ಯಾರೊಬ್ಬನಾಗಲಿ, ಬಲಭುಜದಲ್ಲಿ ಚಕ್ರವನ್ನೂ, ಎಡಭುಜದಲ್ಲಿ ಶಂಖವನ್ನೂ (ಆ ತಪ್ತಚಕ್ರಶಂಖಗಳನ್ನು ಒತ್ತಿ ಮುದ್ರಿಸಬೇಕು) ಧರಿಸುವಂತೆ ಮಾಡಬೇಕು ಅಥವಾ ದೀಕ್ಷೆಯನ್ನು ಕೊಡುವವನ ಇಚ್ಛಾನುಸಾರವಾಗಿ (ದೀಕ್ಷೆಯನ್ನು ಪಡೆಯುವವನ ದೇಹದ) ಸ್ತನಗಳ ಮೇಲ್ಭಾಗದಲ್ಲಿ ಮತ್ತು ಹೊಟ್ಟೆಯ ಮೇಲೆ ಸಹ, (ಹೀಗೆ ಎರಡು ಅಥವಾ ಐದು ಮುದ್ರೆಗಳನ್ನು) ಧಾರಣಮಾಡಿಸಬೇಕು. ಯತ್ನಪೂರ್ವಕವಾಗಿ, ಈ ರೂಪದ ಬಾಹ್ಯದೀಕ್ಷೆಯನ್ನು ಹೊಂದಬೇಕು. ಬಾಹ್ಯದೀಕ್ಷೆಯನ್ನು ಪಡೆದ ಯಾವಾತನು, ವಿಷ್ಣುಭಕ್ತಿರಹಿತನಾದರೆ, ಆತನಿಗೆ ದೀಕ್ಷಾಫಲವಿಲ್ಲವೆಂದು ಮಾತ್ರವಲ್ಲ; ನರಕವನ್ನೂ ಹೊಂದುತ್ತಾನೆ. 'ಈ ವಿಷ್ಣುವೇ ನನಗೆ ಸರ್ವೇಷ್ಟಪ್ರದನು, ನಾನು ಆತನ ಭೃತ್ಯನು—ಆತನೇ ನನ್ನ ಸ್ವಾಮಿಯು—ನನ್ನ ಸರ್ವಾನಿಷ್ಟ ಪರಿಹಾರಕನು—ಆತನೇ ಸರ್ವೋತ್ತಮನು, ಎಂಬ ನಿಶ್ಚಿತಜ್ಞಾನವೇ ಅಂತರ್ದೀಕ್ಷೆಯು; ದೇಹದಲ್ಲಿ ತಪ್ತಮುದ್ರೆಗಳನ್ನೂ (ನಿತ್ಯದಲ್ಲಿ ಗೋಪೀಚಂದನಾದಿಗಳಿಂದ ಮುದ್ರೆಗಳನ್ನು) ಧರಿಸುವುದು, ಎಂಬ ಬಾಹ್ಯದೀಕ್ಷೆಯು, ಅಜ್ಞಾನಿಗಳಿಗೂ ಜ್ಞಾನಿಗಳಿಗೂ ಸಮವಾಗಿ ಆವಶ್ಯಕವು.'

**ಶ್ರುತಿ ೧**

ತಪ್ತಮುದ್ರಾಧಾರಣದ ಶಿಷ್ಟಾಚಾರಕ್ಕೆ ಮೂಲವಾದ, ಹಿಂದಿನ ಪದದ ೧೦ನೇ ನುಡಿಯಲ್ಲಿ ಪ್ರಸಕ್ತವಾದ, ಶ್ರುತಿಯನ್ನು ಉದಾಹರಿಸುತ್ತಾರೆ:

*ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ।*
*ಅತಪ್ತತನೂರ್ನತ ದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ ಸಮಾಶತ॥*

(ಋಗ್ವೇದ)

ಈ ಶ್ರುತ್ಯರ್ಥದ ವಿವರಣೆಯೇ ಮುಂದಿನ ಪದವು. ಈ ಶ್ರುತಿಯ ಭಾವಾರ್ಥಸಂಗ್ರಹವು ಹೀಗಿದೆ: 'ಚತುರ್ಮುಖನಿಗೂ ಸ್ವಾಮಿಯಾದ ಹೇ

ವಿಷ್ಣೋ! ಸರ್ವತ್ರ ವ್ಯಾಪ್ತವಾದ ಪವಿತ್ರತೇಜಸ್ಸಿನಿಂದ ವಿರಾಜಿಸುವ ನಿನ್ನ ಸುದರ್ಶನ (ಚಕ್ರ)ದಿಂದ ಗುರ್ತಿಸಲ್ಪಟ್ಟ ದೇಹವುಳ್ಳವರನ್ನೇ ಸಂಸಾರದಿಂದ ಉದ್ಧರಿಸುವಿ; ಅಂಥ (ನಿನ್ನ ಚಕ್ರಚಿಹ್ನೆಯನ್ನು ದೇಹದಲ್ಲಿ ಧರಿಸಿದ) ನಾವು ಶುದ್ಧರಾಗಿ (ಪಾಪವಿಮುಕ್ತರಾಗಿ) ಶತ್ರುರಹಿತರಾಗಿ, ನಿನ್ನ ಪರಮಪದವನ್ನು ಹೊಂದುವೆವು; ಅತಪ್ತತನುಗಳು (ತಪ್ತಚಕ್ರವನ್ನು ಧರಿಸದವರು) ಉತ್ತಮ ಲೋಕವನ್ನು ಹೊಂದುವುದಿಲ್ಲ.

## ಪದ ೨

ರಾಗ-ನಾಟಿ; ತಾಳ-ರೂಪಕ

**ಎಂಬ ಶ್ರುತ್ಯರ್ಥವ ತುಂಬಿ ಪೇಳಿದ ಪದವ**
**ನಂಬಿರೋ ನಾವೆಂದ ತತ್ತ್ವ**
**ಉನ್ನತಬ್ರಹ್ಮನಿಗೆ ಪ್ರತಿಯೆನಿಪ ಪ್ರಭು**
**ಜಗತ್ತಿನೊಳಗೆ ಎಣೆಯೆಲ್ಲಿ ಪೂರ್ಣ** **॥೧॥**

**ಅರ್ಥ:** ಎಂಬ ಶ್ರುತ್ಯರ್ಥವ—ಹೀಗೆಂಬ (ಪವಿತ್ರಂ ತೇ ಎಂಬ) ಶ್ರುತ್ಯರ್ಥವನ್ನು, ತುಂಬಿ—ಅಡಗಿಸಿ (ಒಳಗಿಟ್ಟು), ಪೇಳಿದ—ಹೇಳಿರುವ, ಪದವ—ಪದವನ್ನು (ಈ ಪದದಲ್ಲಿ ನಾವು ಹೇಳುವ ಹಿತೋಕ್ತಿಯನ್ನು), ನಂಬಿರೋ—ವಿಶ್ವಾಸಮಾಡಿ ಸ್ವೀಕರಿಸಿರಿ; ನಾವೆಂದ ತತ್ತ್ವ—ನಾವು ಹೇಳುವ ಮುಖ್ಯಸತ್ತ್ವ ಪ್ರಮೇಯವು (ಯಾವುದೆಂದರೆ), ಉನ್ನತಬ್ರಹ್ಮನಿಗೆ—ಸರ್ವೋ-ತ್ತಮನಾದ ಪರಬ್ರಹ್ಮನಿಗೆ (ವಿಷ್ಣುವಿಗೆ), ಪ್ರತಿಯೆನಿಪ—ಸಮನೆನಿಸುವ, ಪ್ರಭು—ಸ್ವತಂತ್ರ ಒಡೆಯನು, ಜಗತ್ತಿನೊಳಗೆ—ಜಗತ್ತಿನಲ್ಲಿ, ಎಣೆಯೆಲ್ಲಿ—(ಸಮನಾದ) ಮತ್ತೊಬ್ಬನು ಎಲ್ಲಿರುವನು? (ಇಲ್ಲವೇ ಇಲ್ಲ); ಪೂರ್ಣ—ಅವನೇ ಪೂರ್ಣನು (ಇತರ ಸರ್ವರೂ ಅಪೂರ್ಣರೇ).

**ನಿನ್ನ ಕರಕಂಜದಿ ನಿಲಿಸಿರ್ದ ಸುದರ್ಶನ**
**ನಿನ್ನಂತೆ ಜಗದೊಳು ಪೂರ್ಣ**
**ತನ್ನವರೀಪರಿಯೆಂಬುವ ಜಾತಿತ್ರಯವ**
**ಮಾನ್ಯ ಪೊಗಳೆ ಪೋಗಬಲ್ಲ** **॥೨॥**

**ಅರ್ಥ:** ನಿನ್ನ ಕರಕಂಜದಿ—ನಿನ್ನ ಕರಪದ್ಮದಲ್ಲಿ, ನಿಲಿಸಿರ್ದ—ಧರಿಸಿರುವ, ಸುದರ್ಶನ—ಚಕ್ರವು, ಜಗದೊಳು—ಜಗತ್ತಿನಲ್ಲಿ, ನಿನ್ನಂತೆ—ನೀನು ಹೇಗೋ

ಹಾಗೆ, ಪೂರ್ಣ—ಪೂರ್ಣವಾದುದು (ಗುಣಾದಿಗಳಿಂದ ವ್ಯಾಪ್ತವಾದುದು); ಈಪರಿಯೆಂಬುವ—ಹೀಗೆ ಹೇಳುವ (ತಿಳಿಯುವ), ತನ್ನವರ—ತನ್ನ ಭಕ್ತರಾದ, ಜಾತಿತ್ರಯವ—ತ್ರಿವರ್ಣದವರನ್ನು (ದ್ವಿಜರನ್ನು), ಪೊಗಳೆ—ಸ್ತುತಿಸಿದರೆ, ಮಾನ್ಯ—ಅವನು ಗೌರವಾರ್ಹನು; (ಅಥವಾ ಮಾನ್ಯ ಪೊಗಳೆ—ವಿವೇಕಜ್ಞನು ಪ್ರಶಂಸಿದರೆ, ಹರಿಭಕ್ತರ ಸ್ತುತಿಯಿಂದ), ಪೋಗಬಲ್ಲ—ಸಂಸಾರವನ್ನು ದಾಟಿ ಮೋಕ್ಷಪದವಿಯನ್ನೂ ಸಾಧಿಸಬಲ್ಲ.

**ವಿಶೇಷಾಂಶ:**

*'ಸಂಸ್ಕಾರಾಣಾಂ ಚ ಸರ್ವೇಷಾಮಾದ್ಯಂ ಚಕ್ರಾದಿಧಾರಣಮ್।*
*ತತ್ಕರ್ತವ್ಯಂ ಹಿ ಸರ್ವೇಷಾಂ ವಿಧಿನಾ ವೈ ದ್ವಿಜನ್ಮನಾಮ್॥'*

ಹಾರೀತಸ್ಮೃತಿಯ ವಾಕ್ಯವು, ಚಕ್ರಾದಿ ವಿಷ್ಣುಚಿಹ್ನೆಗಳ ಧಾರಣವು ಸಂಸ್ಕಾರಗಳ ಮಧ್ಯದಲ್ಲಿ ಮೊದಲಿನದು—ಪ್ರಧಾನವು; ಎಲ್ಲರಿಗೂ ಈ ಸಂಸ್ಕಾರವು ಅವಶ್ಯ ಕರ್ತವ್ಯವಾದುದು; ದ್ವಿಜರಿಗೆ (ಬ್ರಾಹ್ಮಣ-ಕ್ಷತ್ರಿಯ-ವೈಶ್ಯರೆಂಬ ತ್ರಿವರ್ಣದವರಿಗೆ), ವಿಧಿಪೂರ್ವಕವಾಗಿ ಈ ಸಂಸ್ಕಾರವು ಆಗಲೇಬೇಕು ಎನ್ನುತ್ತದೆ.

**ಧನ್ಯರೀ ಹರಿಚಕ್ರವನ್ನೆ ಪವಿತ್ರವೆಂಬ**
**ಪುನ್ನಾಮದಿ ಕರೆಯುತಿಹರು**
**ಇನ್ನು ಚಕ್ರದಿಂದಳವ ಕೆಡುವುದೆಂದು ತ್ರಿಲೋಚ-**
**ನನೆ ಶ್ರುತಿಗಳ ಪೇಳ್ದ ॥೩॥**

**ಅರ್ಥ:** ಈ ಹರಿಚಕ್ರವನ್ನೆ—ಈ ವಿಧ ಮಹಿಮೆಯುಳ್ಳ ಶ್ರೀಹರಿಯ ಚಕ್ರವನ್ನು, ಧನ್ಯರು—(ಕೃತಕೃತ್ಯರು) ಭಾಗ್ಯಶಾಲಿಗಳು ಮಾತ್ರ, ಪವಿತ್ರವೆಂಬ ಪುನ್ನಾಮದಿ—ಸುದರ್ಶನಪುರುಷನೆಂದು, ಕರೆಯುತಿಹರು—ಕರೆಯುತ್ತಾರೆ; ಇನ್ನು—ಮತ್ತು, ಚಕ್ರದಿಂದಳವ ಕೆಡುವುದೆಂದು—ಚಕ್ರಧಾರಣೆಯಿಂದ (ಅಳವ) ಕ್ಷುದ್ರಪಾತಕಗಳೆಲ್ಲವೂ ನಾಶಹೊಂದುತ್ತವೆಂದು, ತ್ರಿಲೋಚನನೆ—ಸ್ವಯಂ ಮುಕ್ಕಣ್ಣನೇ (ರುದ್ರದೇವನೇ), ಶ್ರುತಿಗಳ ಪೇಳ್ದ—ಶ್ರುತಿಪ್ರಮಾಣಗಳನ್ನು ಹೇಳಿರುವನು.

**ಶ್ರೈ-ಪಾಕೇಯೆಂಬ ಧಾತುವಿನಿಂದಲಿ ಚಕ್ರ-**
**ದಾಪಕ ಭುಜಯುಗದಲ್ಲಿ**
**ಗೋಪಿಚಂದನದಿಂದಲನುದಿನವು ಪುಸವರ**
**ಕೃಪಾಳು ಹರಿಯವರಿಗೊಲಿವ ॥೪॥**

**ಅರ್ಥ:** ಶೃ-ಪಾಕೇ—'ಶೃ-ಪಾಕೇ' ಎಂಬ ಧಾತ್ವರ್ಥದಿಂದ, (ಪಾಕ=ಪಾಕ-ಮಾಡು, ದಹಿಸು ಎಂದರ್ಥ), ಚಕ್ರದಾಪಕ—ಚಕ್ರಮುದ್ರೆಯನ್ನು ಕೊಡು-ವವನು (ಗುರುವು), ಭುಜಯುಗದಲ್ಲಿ—ಎರಡೂ ಭುಜಗಳಲ್ಲಿ (ತಪ್ತಚಕ್ರ-ದಿಂದಲೇ ಮುದ್ರಿಸಬೇಕು); ಅನುದಿನವು—ನಿತ್ಯದಲ್ಲಿ, ಗೋಪಿಚಂದನ-ದಿಂದಲಿ—ಗೋಪೀಚಂದನದಿಂದ (ಚಕ್ರವನ್ನು), ಪುಸವರ—ಲೇಪಿಸಿಕೊಳ್ಳು-ವವರ (ದೇಹದಲ್ಲಿ ಚಿತ್ರಿಸಿಕೊಳ್ಳುವವರ), ಅವರಿಗೆ—ತಪ್ಪದೇ ಹೀಗೆ ಮಾಡುವವರಿಗೆ, ಕೃಪಾಳು ಹರಿಯು—ಕೃಪಾಸಮುದ್ರನಾದ ಶ್ರೀಹರಿಯು, ಒಲಿವ—ಪ್ರಸನ್ನನಾಗುತ್ತಾನೆ.

**ಉದರವ್ಯಾಧಿಯನೆ ಬಿಡುವರು ಹೊಟ್ಟೆಯ ಮೇಲೆ**
**ಮುದದಿಂದ ಚಕ್ರವನ್ನೆ ಬುಧರು**
**ಧರಿಸುವುದನು ವಿಧಿಸುತಿರಬೇಕೆಂದು ತನ್ನ**
**ಪದವ ಹೇಳಿತು ನಮ್ಮ ವೇದ** ||೫||

**ಅರ್ಥ:** ಮುದದಿಂದ—ಆದರಪೂರ್ವಕವಾಗಿ, ಹೊಟ್ಟೆಯ ಮೇಲೆ—ಉದರಭಾಗದಲ್ಲಿ, ಚಕ್ರವನ್ನೆ—ಚಕ್ರವನ್ನು, (ಪುಸವರ—ಲೇಪನದಿಂದ ಗುರ್ತಿಸಿ-ಕೊಳ್ಳುವವರ, ಹಿಂದಿನ ನುಡಿಯಿಂದ ಆಕರ್ಷಿಸಿಕೊಂಡು ಅನ್ವಯ), ಉದರ ವ್ಯಾಧಿಯನೆ ಬಿಡುವರು—ನಾನಾವಿಧದ ಉದರರೋಗಗಳನ್ನು ಪರಿಹರಿಸಿ-ಕೊಳ್ಳುತ್ತಾರೆ; ಬುಧರು—ಜ್ಞಾನಿಗಳು, ಧರಿಸುವುದನು—(ವಿಷ್ಣುಚಿಹ್ನೆಗಳನ್ನು ತಪ್ಪದೇ) ಧರಿಸಬೇಕೆಂಬುದನ್ನು, ವಿಧಿಸುತಿರಬೇಕೆಂದು—(ಅಜ್ಞಾನಿ ಜನರಿಗೆ) ಉಪದೇಶಿಸುತ್ತಿರಬೇಕೆಂದು, ನಮ್ಮ ವೇದ—(ತತ್ವವಾದಿಗಳಾದ ನಮಗೆ) ಪರಮಪ್ರಮಾಣವಾದ ವೇದವು, ಪದವ—ಸ್ಪಷ್ಟಪದಗಳಿಂದ, ಹೇಳಿತು—ಹೇಳಿರುತ್ತದೆ.

**ತಪ್ತಚಕ್ರವ ಧರಿಸಬೇಕೆಂದು ತೊಡಗಿದ ಸ-**
**ತಪ್ತತ್ರಯದಲ್ಲಿ ಶ್ರುತಿಯ**
**ಅರ್ಥಪೂರ್ವಕ ವಿಸ್ತರಿಸಿ ಪೇಳಿದ**
**ಮತ್ತೊಂದರ್ಥವನಿದಕೆ ಮೆಚ್ಚ** ||೬||

**ಅರ್ಥ:** ತಪ್ತಚಕ್ರವ—(ಹೋಮಾಗ್ನಿಯಲ್ಲಿ) ದಹಿಸಲ್ಪಟ್ಟ ಚಕ್ರವನ್ನು, ಧರಿಸಬೇಕೆಂದು—(ದೇಹದಲ್ಲಿ) ಅಂಕಿಸಿಕೊಳ್ಳಬೇಕೆಂದು (ಮುದ್ರಿಸಿಕೊಳ್ಳ-ಬೇಕೆಂದು), ತೊಡಗಿದ—(ಹೇಳಲು) ಆರಂಭಿಸಿದ, ಸತಪ್ತತ್ರಯದಲ್ಲಿ—

ತಪ್ತಮುದ್ರೆಯ ವಿಷಯದಲ್ಲಿ ಪ್ರವೃತ್ತವಾದ (ಋಕ್-ಯಜು-ಸಾಮಗಳೆಂಬ) ಮೂರು ವೇದಗಳಲ್ಲಿರುವ, ಶ್ರುತಿಯ— ವೇದವಾಕ್ಯಗಳನ್ನು, ಅರ್ಥಪೂರ್ವಕ ವಿಸ್ತರಿಸಿ— ಅರ್ಥಸಹಿತ ವಿಸ್ತಾರಮಾಡಿ, ಪೇಳಿದ— ಹೇಳಿದ, ಶಿವ— ಶಿವನು, ಇದಕೆ— ಈ ವೇದವಾಕ್ಯಗಳಿಗೆ, ಮತ್ತೊಂದರ್ಥವನು— ಬೇರೊಂದು ಅರ್ಥ-ವನ್ನು, ಮೆಚ್ಚ— ಒಪ್ಪುವುದಿಲ್ಲ.

**ವಿಶೇಷಾಂಶ:** (೧) ಶ್ರೀಹರಿಯ ಚಕ್ರಾದಿ ಆಯುಧಗಳು ಮುಖ್ಯತಃ ಸ್ವರೂಪಾತ್ಮಕವೇ (ಸಚ್ಚಿದಾನಂದಸ್ವರೂಪಗಳೇ ಆಗಿದ್ದು ಶ್ರೀಹರಿಯ ಸ್ವರೂಪ-ದಿಂದ ಅಭಿನ್ನಗಳೇ); ಲಕ್ಷ್ಮೀಸ್ವರೂಪಗಳೇ ಆದವುಗಳನ್ನೂ ಧರಿಸಿರುತ್ತಾನೆ— ಅನ್ಯದೇವತಾಸ್ವರೂಪಗಳೂ ಅವರಿಂದ ಅಭಿಮನ್ಯವಾದ ಪ್ರಾಕೃತಚಕ್ರಾದಿ ಆಯುಧಗಳನ್ನೂ ಧರಿಸುವನು. ಶ್ರೀಹರಿಯ ಸ್ವರೂಪಾತ್ಮಕಚಕ್ರವು (ಶ್ರೀಹರಿ-ಯಂತೆಯೇ) ವ್ಯಾಪ್ತವೂ ಅಚಿಂತ್ಯ ಅದ್ಭುತ ಮಹಿಮೋಪೇತವೂ ಆದುದೆಂದು ತಿಳಿಸಲು ೨ನೇ ನುಡಿಯಲ್ಲಿ 'ಸುದರ್ಶನ ನಿನ್ನಂತೆ ಜಗದೊಳು ಪೂರ್ಣ' ಎಂದಿರುವರು.

(೨) *'ತತ್ಪವಿತ್ರಮಿದಂ ವ್ಯಾಪ್ತಂ ಯತ್ತ್ವಂ ಪರ್ಯೇಷಿ ವಿಶ್ವತಃ।*
*ಇತಿ ಶ್ರುತ್ಯುದಿತಂ ವಿಷ್ಣುವ್ಯಾಪ್ತ್ಯಾ ವ್ಯಾಪ್ತತ್ವಮೇವ ಚ।'*

ಎಂಬಲ್ಲಿ, ನೀನು (ವಿಷ್ಣುವು) ವ್ಯಾಪ್ತನಾದ್ದರಿಂದ ಪವಿತ್ರವೂ ವ್ಯಾಪ್ತವಾದು-ದೆಂದು ಹೇಳಲ್ಪಟ್ಟಿದೆ.

*'ಪವಿತ್ರಂ ಚರಣಂ ಚಕ್ರಂ ಲೋಕದ್ವಾರಂ ಸುದರ್ಶನಮ್।*
*ಪರ್ಯಾಯವಾಚಕಾಹ್ಯೇತೇ ಚಕ್ರಸ್ಯ ಪರಮಾತ್ಮನಃ॥'*

ಎಂಬಲ್ಲಿ, ಪವಿತ್ರ-ಚರಣ-ಚಕ್ರ-ಸುದರ್ಶನ ಮೊದಲಾದ ಶಬ್ದಗಳು ಏಕ ವಸ್ತುವಾಚಕಗಳೆಂದು ಹೇಳಲಾಗಿದೆ. 'ಪವಿವತ್ ತ್ರಾಯತೇ ಲೋಕಾನಿತಿ ಪವಿತ್ರಂ'— ವಜ್ರಾಯುಧದಂತೆ (ಅದರಂತೆ ಮಾತ್ರವಲ್ಲ— ಅದಕ್ಕೂ ಅನಂತ ಮಡಿ) ಶತ್ರುಸಂಹಾರಕ ಸಾಮರ್ಥ್ಯದಿಂದ ಸಕಲ ಲೋಕಗಳನ್ನು ರಕ್ಷಿಸುವು-ದರಿಂದ **'ಪವಿತ್ರ'**ವೆಂದು, ವಿಷ್ಣುಚಕ್ರವು ಕರೆಯಲ್ಪಡುತ್ತದೆ.

(೩) ಶ್ರುತಿ ೧೧ರಲ್ಲಿ 'ಶೃತಾಸ ಇದ್ವಹಂ' ಎಂಬಲ್ಲಿರುವ **ಶೃತಾಸ** ಶಬ್ದಾರ್ಥವನ್ನು, ಧಾತ್ವರ್ಥದಿಂದ ೪ನೇ ನುಡಿಯಲ್ಲಿ ವಿವರಿಸಿರುವರು. **'ಶೃ'** ಎಂದರೆ ದಹಿಸೋಣವೆಂದರ್ಥ. *'ಅಗ್ನಿದೂರಸಮೀಪಸ್ಥ ವಸ್ತುನ್ಯಾತ್ಮತ್ವ-ಸಾಮ್ಯತಃ। ಶೃತಾಸ ಇತಿ ಶಬ್ದಾರ್ಥಾ ದಾಹವಂತೋ ನ ತಾಪಸಾಃ।'* 'ದಹಿಸಲ್ಪಟ್ಟವುಗಳು' ಎಂಬರ್ಥವು **'ಶೃತಾಸಃ'** ಎಂಬುದಕ್ಕೆ ಉಕ್ತವಾಗಿದೆ.

(೪) 'ಪವಿತ್ರಂ ತೇ....' ಉದಾಹೃತ ಶ್ರುತಿ ೧ ಎಂಬುದು ಋಗ್ವೇದ ವಾಕ್ಯ. *'ತಪ್ತಚಕ್ರಂ ದ್ವಿಭುಜೇ ಧಾರ್ಯಮಿತಿ। ಅಗ್ನಿನಾ ವೈ ಹೋತ್ರಾ ವಿಷ್ಣೋಃ-ಸಾಯುಜ್ಯಂ ಸಲೋಕತಾಮಾಪ್ನೋತಿ'* ಎಂಬುದು ಶುಕ್ಲಯಜುರ್ವೇದದ ಶತಪಥ ಬ್ರಾಹ್ಮಣವಾಕ್ಯವು.

*'ಅಗ್ನಿರ್ವೈ ಸಹಸ್ರಾರಃ ಸಹಸ್ರಾರೋ ನೇಮಿಃ ನೇಮಿನಾ ತಪ್ತತನುಃ ಸಾಯುಜ್ಯಂ ಸಾಯುಜ್ಯಂ ಪ್ರಾಪ್ನುಯಾತ್'* ಎಂಬುದು ಸಾಮವೇದದ ವಾಕ್ಯವು. ಹೀಗೆ ಮೂರು ವೇದಗಳಲ್ಲಿಯೂ ತಪ್ತಚಕ್ರಧಾರಣ ವಿಧಿಯು (ಇವುಗಳಂತೆಯೇ ಹೇಳುವ ಇತರ ನಾನಾ ವಾಕ್ಯಗಳಲ್ಲಿ ಸಹ) ನಿರೂಪಿತ-ವಾಗಿದೆ. ಈ ಮುಂತಾದ ಶ್ರುತ್ಯರ್ಥಗಳ ವಿವರಣಪೂರ್ವಕ ತಪ್ತಚಕ್ರ-ಧಾರಣೆಯ ಆವಶ್ಯಕತೆಯು ಶಿವ-ಪಾರ್ವತೀ ಸಂವಾದರೂಪದಿಂದ ಪುರಾಣ-ಗಳಲ್ಲಿ ನಿರೂಪಿತವಾಗಿರುವುದನ್ನು ಕಾಣುತ್ತೇವೆ. ೬ನೇ ನುಡಿಯು ಹೀಗೆಂಬು-ದನ್ನು ಸೂಚಿಸಿ, ಈ ಶ್ರುತ್ಯರ್ಥಗಳನ್ನು ತ್ಯಜಿಸಿ, ಅನ್ಯಾರ್ಥಗಳನ್ನು ಕಲ್ಪಿಸಿ, ತಪ್ತಮುದ್ರಾಧಾರಣೆಯು ಅವೈದಿಕವೆಂದು ವಾದಿಸುವುದು, ಶಿವನಿಗೂ ಅಸಮ್ಮತವಾದ್ದರಿಂದ ಯೋಗ್ಯವಲ್ಲೆಂಬ ಯುಕ್ತಿಯನ್ನು ಹೇಳುತ್ತದೆ.

**ಶ್ಲೋಕ ೨**

***ಪವಿತ್ರಂ ಬ್ರಹ್ಮಣಸ್ಪತ್ಯಂ ಜಗದ್ವ್ಯಾಪ್ತಂ ಹರಿಂ ಸದಾ।***
***ತೇನ ತಪ್ತತನೂರ್ಹ್ಯೇಷಾಂ ತೇನ ಯಾತಿ ಪರಾಂ ಗತಿಮ್॥***

**ಅರ್ಥ:** ಚತುರ್ಮುಖಬ್ರಹ್ಮನಿಂದ ಪೂಜ್ಯವೂ, ಸರ್ವತ್ರಪ್ರಾಪ್ತವೂ, ಶ್ರೀವಿಷ್ಣುಸ್ವರೂಪಾತ್ಮಕವೂ ಆದುದು ಪವಿತ್ರವೆಂದು ಕರೆಯಲ್ಪಡುವ ಚಕ್ರವು. ಅದರಿಂದ ತಪ್ತವಾದ ದೇಹವುಳ್ಳವರಿಗೆ, ಆ ತಪ್ತಚಕ್ರಧಾರಣೆಯ ಪ್ರಭಾವ-ದಿಂದ ಉತ್ತಮಗತಿಯಾಗುತ್ತದೆ.

**ವಿಶೇಷಾಂಶ:** ಹಿಂದಿನ ಪದದ ೬ನೇ ನುಡಿಯ ೨ನೇ ವಿಶೇಷಾಂಶ ಭಾಗವನ್ನು ನೋಡಬಹುದು.

**ಪದ ೩**

ರಾಗ-ನಾಟಿ; ತಾಳ-ರೂಪಕ

**ಸೋಮರಸವ ಶೋಭಿಸುವ ಜಾತಿಕವ್ಯಾಪ್ತ**
**ಕಾಮ ಹ ಚಕ್ರಸನ್ನಿಧಿಯ**
**ಧೀಮಂತರೆಲ್ಲ ಮಥಿಸಿ ಪವಿತ್ರ-**
**ನಾಮ ಶ್ರುತಿಯಿಂದ ಮಥಿಸುವರು** ॥೧॥

**ಅರ್ಥ:** ಶೋಭಿಸುವ—ವಿರಾಜಿಸುವ (ಶುಭಪ್ರದವಾದ), ಸೋಮರಸವ—(ಯಜ್ಞಶಿಷ್ಟ) ಸೋಮರಸವನ್ನು, ಜಾತಿಕ—ಹೋಲುವ (ಪವಿತ್ರವಸ್ತುಗಳ ಗುಂಪಿಗೆ ಸೇರಿದ) ವ್ಯಾಪ್ತ—ವ್ಯಾಪ್ತನಾದ, ಕಾಮ ಹ—ಕಾಮನೇ ಆಗಿರುವ, (ಕಾಮನೇ ಅಭಿಮಾನಿಯಾಗಿವುಳ್ಳ), ಚಕ್ರಸನ್ನಿಧಿಯ—(ಸ್ವರೂಪಾತ್ಮಕಚಕ್ರದ ಸನ್ನಿಧಾನವುಳ್ಳ) ಚಕ್ರಸಂಪರ್ಕದ (ದೇಹದಲ್ಲಿ ಧರಿಸುವುದರ) ಪ್ರಭಾವವನ್ನು, ಧೀಮಂತರೆಲ್ಲ—ಎಲ್ಲ ಜ್ಞಾನಿಗಳು, ಮಥಿಸಿ—ವಿಚಾರಮಾಡಿ, ಪವಿತ್ರನಾಮ-ಶ್ರುತಿಯಿಂದ—'ಪವಿತ್ರಂ ತೇ....' ಎಂಬ ಶ್ರುತಿಬಲದಿಂದ, ಮಥಿಸುವರು—ನಿರ್ಣಯವನ್ನು ಕಾಣುತ್ತಾರೆ.

**ಪಾವನವ ಮಾಡಿಸುವ ಶಕ್ತಿ ನಮ್ಮ ಶ್ರೀ-**
**ದೇವಿಯರಸನ ಚಕ್ರವೆಂಬುದನು**
**ಭಾವಜ್ಞರಿಗೆ ತೋರಿಸಲು ವಲಿಯ ಚಕ್ರವನೆ**
**ಪವಿತ್ರವೆಂಬ ನಾಮ ಶ್ರುತಿ ಕರೆಯಿತು** ॥೨॥

**ಅರ್ಥ:** ಪಾವನವ ಮಾಡಿಸುವ—(ಸತ್ಕರ್ಮಗಳು ಸಫಲವಾಗುವಂತೆ) ದೇಹವನ್ನು ಪವಿತ್ರಗೊಳಿಸುವ, ಶಕ್ತಿ—ಸಾಮರ್ಥ್ಯವು, ನಮ್ಮ ಶ್ರೀದೇವಿ-ಯರಸನ ಚಕ್ರವು—ನಮ್ಮ ಪ್ರಭು ಲಕ್ಷ್ಮೀಪತಿಯ ಚಕ್ರದ್ದೇ, ಎಂಬುದನು—ಎಂಬುದನ್ನು, ಭಾವಜ್ಞರಿಗೆ—ಯೋಗ್ಯಾರ್ಥವನ್ನು ಗ್ರಹಿಸಬಲ್ಲ ವಿವೇಕಿಗಳಿಗೆ, ತೋರಿಸಲು—ತಿಳಿಸಲಿಕ್ಕಾಗಿಯೇ, ವಲಿಯ ಚಕ್ರವನೆ—ಸುತ್ತಿಕೊಂಡಿರುವ ಚಕ್ರವನ್ನೇ (ಬಳೆಯಂತೆ ದುಂಡಗಿರುವ ಸುದರ್ಶನವನ್ನೇ), ಪವಿತ್ರವೆಂಬ ನಾಮ—ಪವಿತ್ರವೆಂಬ ಹೆಸರಿಂದ, ಶ್ರುತಿ ಕರೆಯಿತು—ವೇದವು ಹೇಳಿತು.

**ವಿಶೇಷಾಂಶ:** ಪವಿತ್ರಗೊಳಿಸುವ ಸಾಮರ್ಥ್ಯವು ಶ್ರೀಹರಿಚಕ್ರದ್ದೇ ಎಂಬು-ದನ್ನು ತಿಳಿಸಲಿಕ್ಕಾಗಿ ಚಕ್ರವನ್ನು 'ಪವಿತ್ರ'ವೆಂದೇ ಶ್ರುತಿಯು ಕರೆಯುತ್ತದೆ.

**ಶೋಧಿಸುವುದಕ್ಕೆ ಸಹಸ್ರಛಿದ್ರವುಳ್ಳ**
**ಮಾಧವನ ಪಾವನದ ಚಕ್ರ ಬೇಕೆಂದು**
**ಈ ದಿವ್ಯಚಕ್ರಮಂತ್ರವ ನ್ಯಾಯಕೋ-**
**ವಿದರಾದ ಮುನಿಗಳು ಮೂಲನಾಮ ಯೋಗಿಸುವರು** ॥೩॥

**ಅರ್ಥ:** ಶೋಧಿಸುವುದಕ್ಕೆ—ಹುಡುಕಿ ತೆಗೆಯುವುದಕ್ಕೆ (ದೋಷಗಳನ್ನು ನಿಶ್ಶೇಷವಾಗಿ ದಹಿಸಿ ಶುದ್ಧಗೊಳಿಸಲು), ಸಹಸ್ರಛಿದ್ರವುಳ್ಳ—ಸಾವಿರದಳ-

ಗಳುಳ್ಳ (ಕೊರೆದ ಹಲ್ಲುಗಳುಳ್ಳ), ಮಾಧವನ—ಶ್ರೀಹರಿಯ, ಪಾವನದ ಚಕ್ರ ಬೇಕೆಂಬ—ಪವಿತ್ರಕಾರಕ ಚಕ್ರವೇ ಬೇಕೆಂಬಂತೆ, ನ್ಯಾಯಕೋವಿದರಾದ ಮುನಿಗಳು—ಯುಕ್ತಿಚತುರರಾದ ಜ್ಞಾನಿಗಳು, ಈ ದಿವ್ಯಚಕ್ರಮಂತ್ರವ—ಈ ಶ್ರೇಷ್ಠ ಚಕ್ರಮಂತ್ರವನ್ನು, ಮೂಲನಾಮ ಯೋಗಿಸುವರು—(ದೋಷಗಳನ್ನು ಹುಡುಕಿ ನಾಶಮಾಡುವುದರಲ್ಲಿ ಕಾರಣವಾದ ಆಕೃತಿಯುಳ್ಳ ಚಕ್ರವನ್ನು) 'ಸಹಸ್ರಾರ'ವೆಂಬ ಅನ್ವರ್ಥನಾಮದಿಂದಲೇ ಕರೆದಿರುವರು (ಚಕ್ರವನ್ನು ನಿರ್ದೇಶಿಸಲು 'ಸಹಸ್ರಾರ' ಶಬ್ದವನ್ನೇ ಪ್ರಯೋಗಿಸುವರು).

**ವಿಶೇಷಾಂಶ:** ಸಹಸ್ರಾರವೆಂಬ ಚಕ್ರದ ಇನ್ನೊಂದು ನಾಮವೂ ಅನ್ವರ್ಥ-ವಾದುದೆಂದು ನಿರೂಪಿಸಲಾಗಿದೆ. ಆಳವಾದ ಜಲದಲ್ಲಿ ಅಡಗಿರುವ ಪಾತ್ರೆ ಮೊದಲಾದ ವಸ್ತುಗಳನ್ನು ಹುಡುಕಿ ತೆಗೆಯಲು, 'ಪಾತಾಳಗಡ'ವೆಂದು ಕರೆಯಲ್ಪಡುವ, ಕೊಕ್ಕೆಗಳಂತಿರುವ ಮೊನೆಯಾದ 'ಅರ'ಗಳುಳ್ಳ ಯಂತ್ರವನ್ನು ಉಪಯೋಗಿಸುವಂತೆ, ಜೀವಸ್ವರೂಪವನ್ನು ಶುದ್ಧಗೊಳಿಸಿ (ಅಸ್ವರೂಪಗಳಾದ ಅವಿದ್ಯಾಕಾಮ ಕರ್ಮಾದಿದೋಷಗಳನ್ನು ಉಳಿಯದಂತೆ ಪರಿಹರಿಸಿ) ಪ್ರಕಾಶಗೊಳಿಸಲು **'ಸಹಸ್ರಧಾರೆ'**ಯೇ ಸಮರ್ಥವೆಂಬ ಯುಕ್ತಿಯು ಅದರ ನಾಮದಿಂದಲೇ ಸೂಚಿತವೆನ್ನುತ್ತಾರೆ.

*'ಯಸ್ತ್ವಸ್ತಪ್ತಸುತನುಃ ಸೋಽತ್ತಿ ಮುಕ್ತಿಫಲಂ ಕಿಲ',*
*'ನೇಮೇತವಾಗ್ರೇ ಕಾಮಾದ್ಯಾ ನೇಮೇ ಜೀವಂತ್ಯಹೋ ದ್ವಿಷಃ'*

ಇತ್ಯಾದಿ (ಶ್ರೀವಾದಿರಾಜಕೃತ **'ಸಹಸ್ರಾರಸ್ತುತಿ'** ವಾಕ್ಯಗಳಲ್ಲಿ ಈ ಅರ್ಥ ವಿಶೇಷಗಳನ್ನು ಕಾಣುತ್ತೇವೆ.

**ಗಂಗೆಯುದಕದಿಂದ ತೊಳೆದ ವಸ್ತುವನ್ನು ಆ-**
**ಗಂಗಾಶಬ್ದದಿಂದ ಶ್ರೀಕರವಾದ**
**ತುಂಗಚಕ್ರಮಂತ್ರದಿಂದ ಮಂತ್ರಿಸೆ**
**ಮಂಗಳದ್ರವ್ಯವಪ್ಪುದೆ ಸೋಽಹಂ ಮಂತ್ರಾರ್ಥವಾಗದು ॥೪॥**

**ಅರ್ಥ:** ಗಂಗೆಯ—ಭಾಗೀರಥಿಯ, ಉದಕದಿಂದ ತೊಳೆದ—ಜಲದಿಂದ ತೊಳೆದ, ವಸ್ತುವನ್ನು—ಪದಾರ್ಥವನ್ನು, ಆ ಗಂಗಾಶಬ್ದದಿಂದ—ಅದೇ **'ಗಂಗಾ'** ಎಂಬ ಶಬ್ದದಿಂದಲೂ, ಶ್ರೀಕರವಾದ—ಮಂಗಳಕರವಾದ, ತುಂಗ-ಚಕ್ರಮಂತ್ರದಿಂದ—ಶ್ರೇಷ್ಠವಾದ ಸುದರ್ಶನ ಮಂತ್ರದಿಂದಲೂ, ಮಂತ್ರಿಸೆ—ಅಭಿಮಂತ್ರಿಸಿದರೆ (ಆ ವಸ್ತುವನ್ನು ಸ್ಪರ್ಶಿಸಿ ಮಂತ್ರವನ್ನು ಉಚ್ಚರಿಸಿದರೆ),

ಮಂಗಳದ್ರವ್ಯವು—ಶುಭಕರ್ಮಪ್ರಯೋಜಕವಸ್ತುವು, ಅಪ್ಪುದೆ—ಆಗುತ್ತದೆಯಷ್ಟೆ! ಸೋऽಹಂ ಮಂತ್ರಾರ್ಥವು—(ನಾನೇ ಆ ಪರಬ್ರಹ್ಮನೆಂಬರ್ಥದಿಂದ) 'ಸೋऽಹಂ ಬ್ರಹ್ಮ' ಎಂಬ ಮಂತ್ರೋಚ್ಚಾರದಿಂದ ಈ ಫಲವು (ಅಪ್ಪದೇ—ಆಗುವುದೇ?) ಆಗದು—ಸರ್ವಥಾ ಆಗುವುದಿಲ್ಲ.

**ಲೌಕಿಕಾನ್ನವ ಶುದ್ಧವ ಮಾಡುವುದಕೆ ವಿ-**
**ವೇಕಿಗಳು ವ್ಯಾಹೃತಿಯಿಂದ ಪ್ರೋಕ್ಷಿಸಿ**
**ಬೇಕಾದ ಗಾಯತ್ರಿಯಿಂದ ಮಂತ್ರಿಸಲದು**
**ಲೌಕಿಕಾನ್ನವು ಯತ್ಯರ್ಥವಪ್ಪುವುದು** ॥೫॥

**ಅರ್ಥ:** ಲೌಕಿಕಾನ್ನವ—ಪ್ರಾಕೃತಾನ್ನವನ್ನು (ಕೇವಲ ಬೇಯಿಸಿ ಸಿದ್ಧಗೊಳಿಸಿದ ಅನ್ನವನ್ನು), ಶುದ್ಧವ ಮಾಡುವುದಕೆ—(ಶ್ರೀಹರಿಗೆ ಅರ್ಪಿಸುವುದಕ್ಕೂ ನಂತರ ಇತರರು ಭೋಜನಮಾಡಲಿಕ್ಕೂ) ಯೋಗ್ಯವನ್ನಾಗಿ ಮಾಡಲು, ವಿವೇಕಿಗಳು—ಜ್ಞಾನಿಗಳು (ಶಾಸ್ತ್ರವಿಧಿಗಳನ್ನು ಬಲ್ಲವರು), ವ್ಯಾಹೃತಿಯಿಂದ—(ವ್ಯಾಹೃತಿ) 'ಭೂರ್ಭುವಃಸ್ವಃ' ಎಂಬ ಮಂತ್ರದಿಂದ, ಪ್ರೋಕ್ಷಿಸಿ—(ಪ್ರೋಕ್ಷಣೆಮಾಡಿ) ಅಭಿಮಂತ್ರಿತ ಜಲವನ್ನು ಸೇಚನಮಾಡಿ, ಬೇಕಾದ ಗಾಯತ್ರಿಯಿಂದ—ಅವಶ್ಯಕವಾದ (ಅಥವಾ ಅಭೀಷ್ಟವಾದ) ಗಾಯತ್ರೀಮಂತ್ರದಿಂದ (*ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್'* ಎಂಬ ಮಂತ್ರದಿಂದ), ಮಂತ್ರಿಸಲು—ಅಭಿಮಂತ್ರಿಸಿದರೆ, ಅದು—ಆ, ಲೌಕಿಕಾನ್ನವು—ಪಕ್ವತಂಡುಲ ಅಥವಾ ಇತರ ಭೋಜ್ಯವಸ್ತುಗಳು, ಯತ್ಯರ್ಥವಪ್ಪುವುದು—ಯತಿಗಳಿಗೂ ಸ್ವೀಕರಿಸಲು ಯೋಗ್ಯವಾದ ಪವಿತ್ರಾನ್ನವಾಗುವುದು.

**ವಿಶೇಷಾಂಶ:** ಶಂಖೋದಕವು ಅನ್ನ ಮೊದಲಾದ ಪದಾರ್ಥಗಳನ್ನು ಶುದ್ಧಗೊಳಿಸುವಂತೆ, ಚಕ್ರಧಾರಣವು, ಶ್ರೀವಿಷ್ಣು ಪ್ರೀತ್ಯರ್ಥಸತ್ಕರ್ಮಾಚರಣೆಯಲ್ಲಿ ಮುಖ್ಯೋಪಕರಣವಾದ ಮಾನವದೇಹವನ್ನು ಪವಿತ್ರಗೊಳಿಸಿ, ಕರ್ಮಯೋಗ್ಯವನ್ನಾಗಿ ಮಾಡುತ್ತದೆಂದು ಸೂಚಿಸುತ್ತಾರೆ.

**ಅದರಿಂದ ತ್ರಿಜಗದ್ಗುರುವಾದ ಶಿವನ ಆಜ್ಞದ**
**ವಿಧಿಯ ಮಾಡಿದ ಮುನಿಗೆ ಗುರುವಾದ**
**ಮದನವೈರಿಯ ಮತವು ಸೂತ್ರಕಾರರ ಮತವು**
**ಇದ ನಿರ್ಧರಿಸಲು ಪೊಂದೆ ಮತವಾಯಿತು.** ॥೬॥

**ಅರ್ಥ:** ಅದರಿಂದ—(ತಪ್ತಚಕ್ರಧಾರಣವು ದೇಹಶುದ್ಧಿಗೆ) ಆವಶ್ಯಕವಾದ್ದರಿಂದ, ತ್ರಿಜಗದ್ಗುರುವಾದ—ಮೂರು ಲೋಕದ ಪ್ರಜೆಗಳಿಗೂ ಜ್ಞಾನದಾತರಾದ, ಶಿವನ—ರುದ್ರದೇವನ, ಆಜ್ಞದ—ಆಜ್ಞೆಯಂತೆ (ತಪ್ತಮುದ್ರಾಧಾರಣೆಯನ್ನು ವಿಧಿಸುವ ಶ್ರುತಿಗಳ ತಾತ್ಪರ್ಯಾರ್ಥವನ್ನು, ಶಿವನು ಪಾರ್ವತಿಯ ಪ್ರಶ್ನೆಯನ್ನು ನಿಮಿತ್ತ ಮಾಡಿ, ಪದ್ಮಪುರಾಣದಲ್ಲಿ ವಿವರಿಸಿರುವುದಕ್ಕೆ ವಿರೋಧವಿಲ್ಲದಂತೆ), ವಿಧಿಯ ಮಾಡಿದ—ವಿಧಾನವನ್ನು ರಚಿಸಿ ಉಪದೇಶಿಸಿದ, (ವಿಷ್ಣುಭಕ್ತರು ಈ ಬಾಹ್ಯ ವಿಷ್ಣುದೀಕ್ಷೆಯನ್ನು ಅವಶ್ಯವಾಗಿ ಸ್ವೀಕರಿಸಲೇಬೇಕೆಂದು ವಿಧಿಸಿದ), ಮುನಿಗೆ—ಶ್ರೀಆನಂದತೀರ್ಥರಿಗೆ, ಗುರುವಾದ—ಗುರುಗಳಾದ, ಸೂತ್ರಕಾರರ—ಬ್ರಹ್ಮಸೂತ್ರಗಳನ್ನು ರಚಿಸಿದ ಶ್ರೀ ವೇದವ್ಯಾಸರ, ಮತವು—ಸಿದ್ಧಾಂತವೂ, ಮದನವೈರಿಯ ಮತವು—ಕಾಮವೈರಿಯ (ಶಿವನ) ಮತವೂ, ಇದ ನಿರ್ಧರಿಸಲು ತಪ್ತಚಕ್ರಧಾರಣವನ್ನು ಹೇಳುವ ಶ್ರುತ್ಯರ್ಥವನ್ನು ನಿರ್ಣಯಿಸಲು, ವೊಂದೆ ಮತವಾಯಿತು—ಒಂದೇ ಅಭಿಪ್ರಾಯವಾಯಿತು (ಆದ್ದರಿಂದ ಧರಿಸಬೇಕೆಂಬ ನಿರ್ಣಯವೇ ಸರಿ). ಅಥವಾ ವಿಧಿಯ ಮಾಡಿದ ಮುನಿಗೆ—ತಪ್ತಮುದ್ರೆಯನ್ನು ವಿಧಿಸುವ ಧರ್ಮಶಾಸ್ತ್ರಭಾಗವನ್ನು ರಚಿಸಿದ ಜ್ಞಾನಿಗೆ ಸಹ, ಗುರುವಾದ—ಗುರುವಾದ, ಮದನವೈರಿಯ—ಶಿವನ, ಮತವೂ ಸೂತ್ರಕಾರರಾದ ಶ್ರೀಬಾದರಾಯಣರ ಮತವೂ ಒಂದೇ ಆಯಿತು.

**ವಿಶೇಷಾಂಶ:** ಬ್ರಹ್ಮಸೂತ್ರಗಳ 'ಕರ್ತೃತ್ವಾಧಿಕರಣ'ದಲ್ಲಿ, ವಿಧಿನಿಷೇಧಗಳು ವ್ಯರ್ಥವಲ್ಲವೆಂದೂ, ಶಾಸ್ತ್ರವಿಧಿಗಳನ್ನು ಮುಮುಕ್ಷುಜೀವರು ತಪ್ಪದೇ ಆಚರಿಸಬೇಕೆಂಬುದರ ಆವಶ್ಯಕತೆಯನ್ನೂ ನಿರ್ಣಯಿಸಿ ಹೇಳಿರುವರು. 'ವಿಹಿತತ್ವಾಚ್ಚ ಆಶ್ರಮಕರ್ಮಾಪಿ' ಇತ್ಯಾದಿ ಸೂತ್ರಗಳಲ್ಲಿಯೂ, '*ವೇದೋಕ್ತಮೇವ ಕುರ್ವಾಣೋ ನಿಸ್ಸಂಗೋऽರ್ಪಿತಮೀಶ್ವರೇ*', '*ನೈಷ್ಕರ್ಮ್ಯಂ ಲಭತೇ ಸಿದ್ಧಿಂ...*' ಇತ್ಯಾದಿ ಭಾಗವತ ವಾಕ್ಯಗಳಲ್ಲಿ ಸಹ, ವೇದೋಕ್ತ ಕರ್ಮಗಳ ಅನುಷ್ಠಾನದ ಅವಶ್ಯಕತೆಯು ಸಾಧಿಸಲ್ಪಟ್ಟಿದೆ.

**ಇದನರಿಯದ ವಾದಿ ವಸ್ತ್ರದ ತುಂಡನ್ನು**
**ಪದದಿಂದ ಕರೆದನದಕೆ ಮೂಲ ಕಣ**
**ಪದುಮಪುರಾಣವ ಮುನಿಗಳೆಲ್ಲ ಬಲ್ಲರು**
**ಇದನರಿಯದ ಭಟ್ಟ ಭಾಸ್ಕರ ತಸ್ಕರ** ॥೭॥

**ಅರ್ಥ:** ಇದನರಿಯದ—ಈ ನಿರ್ಣಯವನ್ನು ತಿಳಿಯದ, ವಾದಿ—(ತಪ್ತ ಮುದ್ರಾಧಾರಣೆಯನ್ನು ಅವೈದಿಕವೆಂದು) ವಾದಿಸುವಾತನು, ವಸ್ತ್ರದ ತುಂಡನ್ನು —ಬಟ್ಟೆಯ ತುಂಡನ್ನು, ಪದದಿಂದ—ವಸ್ತ್ರವೆಂಬ ಪದದಿಂದ, ಕರೆದನು—ಹೇಳಿದನು, ('ಪವಿತ್ರಂ ತೇ'—ಇತ್ಯಾದಿ ತಪ್ತಚಕ್ರಧಾರಣೆಯನ್ನು ವಿಧಿಸುವ ವೇದವಾಕ್ಯಗಳಿಗೆ ತನಗೆ ಇಷ್ಟವಾದ ಒಂದರ್ಥವನ್ನು ತಿಳಿದು ಅದೇ ಪೂರ್ಣಾರ್ಥವೆಂದು ಭ್ರಮಿಸಿ ವಾದಿಸುತ್ತಾನೆಂದು ಭಾವ); ಅದಕೆ—ಹೀಗೆ ಹೇಳುವುದಕ್ಕೆ, ಮೂಲ ಕಣ—ಆ ಶ್ರುತಿವಾಕ್ಯದ ಮೂಲವನ್ನು (ನಿಜವಾದ ಹೃದಯವನ್ನು—ಪ್ರವೃತ್ತಿ ಮೂಲವನ್ನು) ತಿಳಿಯದಿರುವುದೇ ಕಾರಣ, ಅಥವಾ ಮೂಲ ಕಣ—ಇದೇ ಕಾರಣವೆಂದು ತಿಳಿ (ಕಾಣು); ಪದುಮಪುರಾಣ—ಪದ್ಮಪುರಾಣವನ್ನು, ಮುನಿಗಳೆಲ್ಲ ಬಲ್ಲರು—ಎಲ್ಲ ಜ್ಞಾನಿಗಳೂ ತಿಳಿದಿರುವರು; ಇದನರಿಯದ—(ಅಲ್ಲಿ ಶ್ರುತ್ಯರ್ಥಗಳನ್ನು ಹೇಳಿದ್ದರೂ) ಅದನ್ನು ತಿಳಿಯದೇ (ತಪ್ತಚಕ್ರಧಾರಣೆಯು ಅವೈದಿಕವೆಂದೂ ಶ್ರುತಿಗೆ ತಾವು ಹೇಳುವ ಅರ್ಥವೇ ಸರಿಯೆಂದೂ ವಾದಿಸುವ), ಭಟ್ಟಭಾಸ್ಕರ—ಕುಮಾರಿಲಭಟ್ಟ ಮತ್ತು ಭಾಸ್ಕರರು, ತಸ್ಕರ—ವೇದಾರ್ಥವನ್ನು ಕದಿಯುವ ಕಳ್ಳರು.

**ವಿಶೇಷಾಂಶ:** ಭಟ್ಟಭಾಸ್ಕರಾದಿಗಳು ತಪ್ತಮುದ್ರಾಧಾರಣೆಯನ್ನು ಅವೈದಿಕವೆನ್ನುತ್ತಾರೆ—ವೇದವಿಧಿಯಿಲ್ಲವೆನ್ನುತ್ತಾರೆ.

**ಶ್ಲೋಕ ೩**

***ಪವಿತ್ರಂ ಚರಣಂ ನೇಮೀ ಪವಿಶ್ಚಕ್ರಂ ಸುದರ್ಶನಮ್।***
***ಸಹಸ್ರಾರಂ ಪ್ರಾಕೃತಘ್ನಂ ಲೋಕಾಧಾರಂ ಮಹೌಜಸಮ್॥***

**ಅರ್ಥ:** ಪವಿತ್ರಂ—ಪವಿತ್ರ (ಪಾವನಕರವು), ಚರಣಂ—ಚರಣ (ರಥಚರಣ—ಚಕ್ರ), ನೇಮೀ—(ಚಕ್ರಾಕಾರದ ಆಯುಧ) ನೇಮಿ, ಪವಿ—ಪವಿ (ಇಂದ್ರನ ವಜ್ರಾಯುಧವನ್ನು ಮೀರಿದ್ದು), ಚಕ್ರಂ—ಚಕ್ರ, ಸುದರ್ಶನಂ—ಸುದರ್ಶನ (ಜ್ಞಾನದಾನದಿಂದ ಸಜ್ಜನರನ್ನು ರಕ್ಷಿಸುವುದು), ಸಹಸ್ರಾರ—ಸಹಸ್ರಾರ (ಸಹಸ್ರ ಅರಗಳುಳ್ಳದ್ದು—ನಿಶಿತವಾದ ಅರಗಳಿಂದ ಶತ್ರುಗಳನ್ನು ಸೀಳುವುದರಲ್ಲಿ ಅತಿಸಮರ್ಥವಾದುದು), ಪ್ರಾಕೃತಘ್ನಂ—(ಸಕಲ ಪ್ರಾಕೃತಶಕ್ತಿಗಳನ್ನು ಅತಿಕ್ರಮಿಸುವುದರಲ್ಲಿ ಸಮರ್ಥವಾದುದು) ಪ್ರಾಕೃತಘ್ನ, ಲೋಕಾಧಾರಂ—ಲೋಕಾಧಾರ (ಸಕಲ ಲೋಕಗಳಿಗೆ ಆಧಾರವು-ವ್ಯಾಪ್ತವಾದುದು), ಮಹೌಜಸಂ—ಮಹೌಜಸ (ಅಚಿಂತ್ಯಸಾಮರ್ಥ್ಯವುಳ್ಳದ್ದು), ಇವೆಲ್ಲವೂ

ಶ್ರೀಹರಿಚಕ್ರದ ನಾಮಗಳು (ಮಹಿಮೆಗಳನ್ನು ಹೇಳುವ ಯೌಗಿಕಾರ್ಥವುಳ್ಳ ನಾಮಗಳು).

**ಪದ ೪**

ರಾಗ-ನಾಟಿ; ತಾಳ-ರೂಪಕ

**ಎಂಬ ಶ್ರುತ್ಯರ್ಥವನು ತುಂಬಿಸಿ ಪೇಳಿದ ಪದವ**
**ನಂಬಿಕೊಳ್ಳಿರೋ ನಾವಂದುದೆ ತತ್ವ ||ಪಲ್ಲವಿ||**

**ಅರ್ಥ:** ಎಂಬ ಶ್ರುತ್ಯರ್ಥವನ—ಪವಿತ್ರಾದಿ ಪರ್ಯಾಯ ಶಬ್ದಗಳಿಂದ ಹೇಳುವ ಶ್ರುತಿಗಳ ಅರ್ಥವನ್ನು, ತುಂಬಿಸಿ—ಒಳಗೊಂಡು (ಹುದುಗಿಸಿ), ಪೇಳಿದ ಪದವ—ಹೇಳಿದ (ನಮ್ಮ) ಪದದ ಅರ್ಥವನ್ನು, ನಂಬಿಕೊಳ್ಳಿರೋ —ವಿಶ್ವಾಸದಿಂದ ಅಂಗೀಕರಿಸಿರಿ, ನಾವಂದುದೆ—ನಾವು ಹೇಳುವುದೇ, ತತ್ವ —ಸತ್ಯವು.

**ಪವಿತ್ರನಾಮ ಮೊದಲಾದ ಹತ್ತು ಪೆಸರು**
**ಮಾವರಚಕ್ರಪರ್ಯಾಯವಪ್ಪವೆಂದು**
**ಶಿವನೆ ಪೇಳಿದ ತತ್ವವ ಬಿಡುವರೆ ಮಾನವ**
**ಅವನರಿಯದರ್ಥವ ಯಿನ್ನಾವ ಬಲ್ಲ ||೧||**

**ಅರ್ಥ:** ಪವಿತ್ರನಾಮ ಮೊದಲಾದ—ಪವಿತ್ರವೆಂಬ ಮೊದಲಾದ (ಮೇಲಿನ ಶ್ಲೋಕದಲ್ಲಿ ಹೇಳಿರುವ), ಹತ್ತು ಪೆಸರು—(ಪವಿತ್ರ, ಚರಣ, ನೇಮಿ, ಪವಿ, ಚಕ್ರ, ಸುದರ್ಶನ, ಸಹಸ್ರಾರ, ಪ್ರಾಕೃತಘ್ನ, ಲೋಕಾಧಾರ ಮತ್ತು ಮಹೌಜಸಗಳೆಂಬ) ಹತ್ತು ಹೆಸರುಗಳು, ಮಾವರಚಕ್ರ-ಶ್ರೀಹರಿಯ ಚಕ್ರದ, (ಮಾ—ಲಕ್ಷ್ಮೀ, ವರ—ಪತಿ), ಪರ್ಯಾಯವಪ್ಪವೆಂದು—ಸಮಾನಾರ್ಥವುಳ್ಳ (ಏಕವಸ್ತುವಾಚಕ) ಶಬ್ದಗಳಾಗಿರುತ್ತವೆಂದು, ಅಥವಾ ('ಪರ್ಯಾಯವಚ್ಚವೆಂದೂ' ಎಂಬ ಪಾಠದಲ್ಲಿ, ಪರ್ಯಾಯಶಬ್ದಗಳಿದ್ದಂತೆಯೇ ಎಂದು) ಶಿವನೆ—ರುದ್ರದೇವನೇ, ಪೇಳಿದ ತತ್ವವ ಬಿಡುವರೆ—ಹೇಳಿದ ಸತ್ಯಾರ್ಥವನ್ನು ತ್ಯಜಿಸುವರೇ? (ಕೂಡದು); ಮಾನವ—ಹೇ ಅಲ್ಪಜ್ಞನಾದ ಮನುಷ್ಯ! (ಮಂದಬುದ್ಧಿಯೇ!), ಅವನರಿಯದರ್ಥವ—ಶಿವನು ತಿಳಿಯದ ಅರ್ಥವನ್ನು, ಇನ್ನಾವಬಲ್ಲ—ಬೇರಾವನು ತಿಳಿಯಬಲ್ಲನು?

**ಹರನ ಭಕ್ತಳೆಂಬ ಗಿರಿಜಾದೇವಿಗೆ**
**ಪುರಹರನೊಲಿದು ಹೇಳಿದ ತತ್ವವನೆ ಬಿಟ್ಟು**

**ನರನ ಮತ ನಂಬೀಶ್ವರನ ಉಕ್ತಿಯ ಜರೆದು**
**ಮರುಳೆ ತಾಯ ಮಾರಿ ತೊತ್ತ ಕೊಂಬುವಂತೆ ॥೨॥**

**ಅರ್ಥ:** ಹರನ ಭಕ್ತಳೆಂಬ— ಶಿವಭಕ್ತಳೆಂದು ಪ್ರಸಿದ್ಧಳಾದ, ಗಿರಿಜಾದೇವಿಗೆ — ಪಾರ್ವತೀದೇವಿಗೆ, ಪುರಹರನು— ತ್ರಿಪುರಸಂಹಾರಿಯು (ಶಿವನು), ಒಲಿದು — ಪ್ರಸನ್ನನಾಗಿ (ಆದರದಿಂದ), ಪೇಳಿದ— ಹೇಳಿದ, ತತ್ವವನೆ— ಪ್ರಮೇಯವನ್ನು (ಸತ್ಯಾರ್ಥವನ್ನು), ಬಿಟ್ಟು— ತಳ್ಳಿಹಾಕಿ, ನರನ ಮತ— (ಭಟ್ಟ, ಭಾಸ್ಕರಾದಿ) ಅಲ್ಪಮಾನವರ ಅಭಿಪ್ರಾಯವನ್ನು, ನಂಬಿ— ನಂಬಿಕೊಂಡು, ಈಶ್ವರನ ಉಕ್ತಿಯ— ಶಿವನ ಮಾತನ್ನು, ಜರೆದು— ತಿರಸ್ಕರಿಸಿ, ಮರುಳೆ— ಹೇ ಹುಚ್ಚ! ತಾಯ— ಹೆತ್ತಮ್ಮನನ್ನು, ಮಾರಿ— ಅನ್ಯರಿಗಿತ್ತು (ತ್ಯಜಿಸಿ), ತೊತ್ತ ಕೊಂಬುವಂತೆ— (ರಕ್ಷಣೆಗಾಗಿ) ದಾಸಿಯನ್ನು ಸ್ವೀಕರಿಸುವಂತಲ್ಲವೇ!

**ವಿಶೇಷಾಂಶ:** (೧) ಸತಿಗೆ ಪತಿಯೇ ಪರದೈವವು— ಅಂತೆಯೇ ಸತಿಯು, ಪತಿಯ ಪರಮಭಕ್ತಳು.

(೨) ಶಿವನು ತನ್ನ ಪ್ರಿಯತಮಳಾದ ಪತ್ನಿಗೆ ಸತ್ಯಾರ್ಥವನ್ನು ಹೇಳದೆ, ವಂಚಿಸಿ ದುರರ್ಥವನ್ನು ಹೇಳಬಹುದೇ— ತಾಯಿಯಾದ ದೇವಹೂತಿಗೆ ತತ್ತ್ವೋಪದೇಶಮಾಡಿದ ಕಪಿಲರೂಪನಾದ ಶ್ರೀಹರಿಯು, ತತ್ವವನ್ನು ಇದ್ದಂತೆ ಹೇಳಲಿಲ್ಲವೆನ್ನಬಹುದೇ? ಪತ್ನಿಪುತ್ರಾದಿಗಳ ಸಂಬಂಧವು ಉಪದೇಶಕ್ಕೆ ಅಯಥಾರ್ಥವನ್ನು ನಿರಾಕರಿಸುತ್ತದೆ.

**ಮುಕ್ಕಣ್ಣ ಪೇಳಿದರ್ಥವ ಬಿಟ್ಟು ಜಗದೊಳು**
**ಇಕ್ಕಣ್ಣರಾದ ಮಾನವರು**
**ಸೊಕ್ಕಿ ಮನಬಂದಂತೆ ನುಡಿಯೆ ಮೃಡ ಘುಡಿಘುಡಿಸಿ**
**ರಕ್ಕಸರ ಕೊಲ್ಲುವಂತೆ ಕೊಲ್ಲುವ ॥೩॥**

**ಅರ್ಥ:** ಮುಕ್ಕಣ್ಣ— ಮೂರುಕಣ್ಣುಗಳುಳ್ಳ ಮಹದೇವನು, ಪೇಳಿದರ್ಥವ ಹೇಳಿದ ಅರ್ಥವನ್ನು, ಬಿಟ್ಟು— ತ್ಯಜಿಸಿ, ಜಗದೊಳು— ಜಗತ್ತಿನಲ್ಲಿರುವ, ಇಕ್ಕಣ್ಣರಾದ ಮಾನವರು— ಎರಡು ಕಣ್ಣುಗಳುಳ್ಳ ಮನುಷ್ಯಸಾಮಾನ್ಯರು, ಸೊಕ್ಕಿ— ಗರ್ವಿತರಾಗಿ (ತಾವೇ ಪಂಡಿತರೆಂಬ ದುರಹಂಕಾರದಿಂದ), ಮನಬಂದಂತೆ— ಸ್ವೇಚ್ಛೆಯಿಂದ (ತಮ್ಮ ಇಷ್ಟಬಂದಂತೆ), ನುಡಿಯೆ— ಶ್ರುತ್ಯರ್ಥಗಳನ್ನು ಹೇಳಿದರೆ, ಮೃಡ— ಆ ಮಹದೇವನು, ಘುಡಿಘುಡಿಸಿ— ಕುಪಿತನಾಗಿ

(ಹುಂಕರಿಸುತ್ತ) ರಕ್ಕಸರ—ರಾಕ್ಷಸರನ್ನು (ದುಷ್ಟದೈತ್ಯರನ್ನು), ಕೊಲ್ಲುವಂತೆ ಕೊಲ್ಲುವ—ಕೊಂದಂತೆ ಕೊಲ್ಲುತ್ತಾನೆ.

**ವಿಶೇಷಾಂಶ:** ತಪ್ತಮುದ್ರೆಯನ್ನು ಧರಿಸಬೇಕೆಂದು ವಿಧಿಸುವ ಶ್ರುತಿಗಳಿಗೆ, ಅನ್ವಾರ್ಥವನ್ನು ತಿಳಿದವರು, ಸತ್ಯದಿಂದ ವಂಚಿತರಾಗಿ, ದುರ್ಗತಿಯನ್ನು ಹೊಂದುವರೆಂಬಲ್ಲಿ ಲೌಕಿಕಯುಕ್ತಿಯನ್ನು ತೋರಿಸುತ್ತಾರೆ. ರುದ್ರದೇವರನ್ನು ತಪಸ್ಸಿನಿಂದ ಒಲಿಸಿ ಅನೇಕ ದೈತ್ಯರು ವರಗಳನ್ನು ಪಡೆಯುತ್ತಾರೆಂಬುದು ನಿಜ. ಆದರೆ ತ್ರಿಪುರರಂತೆ ಲೋಕಕಂಟಕರಾದ ದೈತ್ಯರನ್ನು, ರುದ್ರದೇವರು ಸಂಹರಿಸಿ, ಸಜ್ಜನಲೋಕರಕ್ಷಕರೂ ಆಗಿರುವರೆಂಬುದನ್ನು ಗಮನಿಸಬೇಕು. ದೈತ್ಯರಿಗೆ ಅವರು ಕೊಡುವ, ವರಗಳಿಂದ ಸಹ, ದೈತ್ಯರು ತೃಪ್ತರಾಗಿ, ಪರಪೀಡೆಗಾಗಿ ಆ ವರ ಪ್ರಾಪ್ತಸಾಮರ್ಥ್ಯವನ್ನು, ದುರುಪಯೋಗಪಡಿಸಿ, ಸ್ವಯೋಗ್ಯ ದುರ್ಗತಿಗಳನ್ನೇ ಹೊಂದುವರೆಂಬುದನ್ನೂ ಮರೆಯಬಾರದು.

## ಶ್ರುತಿ ೨

*ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ॥*

**ಅರ್ಥ:** ಅಗ್ನೇ—ಹೇ ಶ್ರೀಹರೇ! ತೇ—ನಿನ್ನ, ಯತ್—ಯಾವ, ಪವಿತ್ರಂ—ಚಕ್ರವು, ಅರ್ಚಿಷಿ—ಸೂರ್ಯನಲ್ಲಿ, ಅಂತರಾ—ಒಳಗೆಲ್ಲಾ, ವಿತತಂ—ವ್ಯಾಪ್ತವಾಗಿದೆ.

**ವಿಶೇಷಾಂಶ:** *'ಅಗ್ನಿಮೀಳೇ ಪುರೋಹಿತಂ'* ಇತ್ಯಾದಿ ವೇದವಾಕ್ಯಗಳಲ್ಲಿ-ರುವ ಅಗ್ನಿ ಶಬ್ದದಂತೆ, ಇಲ್ಲಿಯೂ ಅಗ್ನಿಶಬ್ದವು ವಿಷ್ಣುವಾಚಕವು. ಅಗ್ನಿ ಶಬ್ದವು, ಪ್ರಸಿದ್ಧವಾದ ಅಗ್ನಿ, ಅಗ್ನ್ಯಂತರ್ಗತ ಪರಮಾತ್ಮ ಮತ್ತು ಶರೀರದಲ್ಲಿರುವ (ಅಧ್ಯಾತ್ಮದಲ್ಲಿ) ಶ್ರೀಹರಿ, ಹೀಗೆ ಮೂರು ವಸ್ತುಗಳನ್ನು ಹೇಳುವ ಪ್ರವೃತ್ತಿ-ಯುಳ್ಳದ್ದು. ಶ್ರೀಹರಿಪರವಾದ ಅಗ್ನಿಶಬ್ದದ ಮುಖ್ಯಾರ್ಥವು, ಶ್ರೀಹರಿಯ ಸರ್ವೋತ್ತಮತ್ವವನ್ನೇ ಹೇಳುತ್ತದೆ.

*'ಅಗ್ನಿಶಬ್ದೋಽಯಮಗ್ರ ಏವಾಭಿಪೂಜ್ಯತಾಂ*
*ಅಗ್ರ್ಯತ್ವಮಗ್ರನೇತೃತ್ವಮತ್ತಿ ಮಂಗಾಂಗನೇತೃತಾಮ್॥'*—(ಋಗ್ಭಾಷ್ಯ)

ವಾಕ್ಯದಲ್ಲಿ ಹೇಳಿರುವಂತೆ, ಶ್ರೀಹರಿಯು, ಸರ್ವದೇವತೆಗಳಲ್ಲಿ ಪ್ರಥಮ ಪೂಜ್ಯನೂ, ಸರ್ವನಿಯಾಮಕನೂ, ಸರ್ವಸಂಹಾರಕರ್ತನೂ, ದೇಹೇಂದ್ರಿಯ ಸ್ವತಂತ್ರಪ್ರವರ್ತಕನೂ ಆದ್ದರಿಂದ 'ಅಗ್ನಿ' ಎನಿಸುವನು.

## ಪದ ೫

ರಾಗ-ನಾಟಿ; ತಾಳ-ರೂಪಕ

**ಯತ್ತೇ ಪವಿತ್ರಮರ್ಚಿಷ್ಯಗ್ನೇಯೆಂಬ ಶ್ರುತಿ**
**ಮತ್ತೆ ನಿನ್ನ ಖಂಡವ ಸುಡದೇ**
**ಚಿತ್ತಜನಯ್ಯನ ಚಕ್ರವೆಂಬ ಪ-**
**ವಿತ್ರಕ್ಕೆ ತಪ್ತವಪ್ಪುವುದೆ** ॥೧॥

**ಅರ್ಥ:** ಯತ್ತೇಪವಿತ್ರಮರ್ಚಿಷ್ಯಗ್ನೇಯೆಂಬ ಶ್ರುತಿ—ಈ ಶಬ್ದಗಳುಳ್ಳ (ಶ್ರುತಿ ೨೮) ಅರ್ಥವು, ನಿನ್ನ ಖಂಡವ—ನಿನ್ನ ದೇಹದ ಮಾಂಸವನ್ನು, ಸುಡದೇ—ದಹಿಸದಿರುವುದೇ (ದಹಿಸುತ್ತದಷ್ಟೆ); ಮತ್ತೆ—ಹಾಗಲ್ಲದೇ, ಚಿತ್ತ-ಜನಯ್ಯನ—ಮನ್ಮಥಪಿತನ (ಶ್ರೀಹರಿಯ), ಚಕ್ರವೆಂಬ—ಚಕ್ರವೆಂದು ಕರೆ-ಯಲ್ಪಡುವ, ಪವಿತ್ರಕ್ಕೆ—ಪಾವನಕರ ಸುದರ್ಶನಕ್ಕೆ, ತಪ್ತವು ಅಪ್ಪುವುದೇ—ತಾಪವು ತಗಲುವುದೇ?

**ವಿಶೇಷಾಂಶ:** ಶ್ರೀಹರಿಯ ಚಕ್ರವು, ಈ ಹಿಂದೆ ಹೇಳಿದಂತೆ ಸರ್ವತ್ರ ವ್ಯಾಪ್ತವಾದುದು. ಸೂರ್ಯನಲ್ಲಿಯೂ ಇದ್ದು ಸೂರ್ಯನಿಗೆ ದಾಹಕ ಶಕ್ತಿ-ಯನ್ನು ಕೊಡುತ್ತದೆ. ಅದು ಮಾನವದೇಹದಲ್ಲಿಯೂ ಇದೆ. ಅದನ್ನು ಪ್ರಸನ್ನೀ-ಕರಿಸಿಕೊಳ್ಳಲು, ಅದರ ಮಹಿಮೆಯನ್ನರಿತು, ಪ್ರಾಕೃತಚಕ್ರವನ್ನು ಹೋಮಾಗ್ನಿ-ಯಲ್ಲಿ ದಹಿಸಿ, ದೇಹದಲ್ಲಿ ಲೇಪಿಸಿ ಚಿತ್ರಿಸಿಕೊಳ್ಳಬೇಕು. ಹಾಗಿಲ್ಲದಿದ್ದರೆ, ದೇಹದಲ್ಲಿ ವ್ಯಾಪ್ತವಾಗಿರುವ ಆ ಚಕ್ರವು ದೇಹವನ್ನೇ ದಹಿಸಿಬಿಡುತ್ತದೆ. (ದೇಹದಿಂದಾಗುವ ಸಕಲ ಸತ್ಕರ್ಮಗಳನ್ನು ನಾಶಮಾಡುತ್ತದೆ—ಹಾಗಾದರೆ ದೇಹವೇ ನಷ್ಟವಾದಂತಲ್ಲವೇ?) ಚಕ್ರವನ್ನು ಅಗ್ನಿಯಲ್ಲಿ ದಹಿಸಿದರೆ ಚಕ್ರಕ್ಕೆ ತಾಪವಾಗಬಲ್ಲದೇ—ಸರ್ವಥಾ ಇಲ್ಲ.

**ಶ್ವೇತೋರ್ಧ್ವಹಿರಣ್ಮಯವೆಂಬ ವೇದ**
**ಮತಿವಂತರ ಮನಕೆ ಒಪ್ಪುವುದೇ**
**ಸೂತಗೆ ಸೌವರಣೇನಪ್ರಕಾಮನೇದ-**
**ಚ್ಯುತನ ನೋಡು ಬಿಡು ದುರಾಗ್ರಹವ** ॥೨॥

**ಅರ್ಥ:** ಶ್ವೇತೋರ್ಧ್ವಹಿರಣ್ಮಯವೆಂಬ ವೇದ—ಶ್ವೇತ, ಊರ್ಧ್ವ, ಹಿರಣ್ಮಯಗಳೆಂಬ ಶಬ್ದಗಳುಳ್ಳ ಶ್ರುತಿವಾಕ್ಯವು, ಮತಿವಂತರ—ಜ್ಞಾನಿಗಳ,

ಮನಕೆ— ಮನಸ್ಸಿಗೆ, ವೊಪ್ಪುವುದೇ— ಸಮರ್ಪಕವೆನಿಸುವುದೇ? (ಈ ಶ್ರುತಿಯು ತಪ್ತಮುದ್ರಾಧಾರಣೆಯನ್ನು ವಿರೋಧಿಸುವುದೆಂಬ ನಿನ್ನ ಆ ಶ್ರುತ್ಯರ್ಥವು, ಜ್ಞಾನಿಗಳಿಗೆ ಸಮ್ಮತವಲ್ಲ); ಸೂತಗೆ— ಪುರಾಣಪ್ರವರ್ತಕ ಸೂತಾಚಾರ್ಯನಿಗೆ (ಒಪ್ಪಿಗೆಯಾದೀತೇ— ಇಲ್ಲ); ಸೌವರಣೇನಪ್ರಕಾಮನೇತ್— ಹಿರಣ್ಮಯವೆಂಬ ಶ್ರುತಿಯು, *'ತಪ್ತಚಕ್ರಂ ದ್ವಿಭುಜೇ ಧಾರಯೇತ್'* ಇತ್ಯಾದಿ ನಿರವಕಾಶ ಶ್ರುತ್ಯರ್ಥಗಳನ್ನೇ ಅಪೇಕ್ಷಿಸುತ್ತದೆ; ಅಚ್ಯುತನ ನೋಡು— (ಆದ್ದರಿಂದ ಚಕ್ರಾದಿಗಳನ್ನು ಧರಿಸಿರುವ) ಶ್ರೀಹರಿಯನ್ನು ತಿಳಿ; ದುರಾಗ್ರಹವ— (ವಿಷ್ಣುಲಾಂಛನ ಧಾರಣೆಯು ಆವಶ್ಯಕವಲ್ಲೆಂಬ) ದುಷ್ಟವಾದ ಆಗ್ರಹವನ್ನು, ಬಿಡು— ಪರಿತ್ಯಜಿಸು.

**ಶ್ಲೋಕ ೪**

***ದದ್ಯಾದ್ಗೋಭೂಹಿರಣ್ಯಾನಿ ಚಕ್ರಾಂಕಿತಭುಜಾಯ ವೈ।***
***ಅವೈಷ್ಣವಾಯ ದಾತವ್ಯಂ ನೋದಬಿಂದುಂ ನ ತಂಡುಲಮ್॥***

ವಿಷ್ಣುಲಾಂಛನಗಳನ್ನು ಧರಿಸಬೇಕಾದ ಆವಶ್ಯಕತೆಯನ್ನು ಹೇಳಿ, ಧರಿಸದವರು ವಿಷ್ಣುಭಕ್ತರಲ್ಲವೆಂದೂ, ದಾನಾದಿಗಳಿಗೆ ಯೋಗ್ಯಪಾತ್ರರಲ್ಲವೆಂದೂ ಉಪದೇಶಿಸುತ್ತಾರೆ.

**ಅರ್ಥ:** ಗೋಭೂಹಿರಣ್ಯಾದಿ— ಗೋವು, ಭೂಮಿ, ಸುವರ್ಣ ಇತ್ಯಾದಿ ಉತ್ಕೃಷ್ಟ ದಾನಗಳನ್ನು, ಚಕ್ರಾಂಕಿತಭುಜಾಯ— ಚಕ್ರದಿಂದ ಚಿಹ್ನಿತವಾದ ಭುಜಗಳುಳ್ಳವನಿಗೇ (ವಿಷ್ಣುದೀಕ್ಷೆಯುಳ್ಳವನಿಗೇ), ದದ್ಯಾತ್ ವೈ— ಕೊಡತಕ್ಕದ್ದೇ ಫಲಪ್ರದವೆಂಬುದು ಶ್ರುತಿಸಿದ್ಧವು; ಅವೈಷ್ಣವಾಯ— ವಿಷ್ಣುಭಕ್ತನಲ್ಲದವನಿಗೆ, ಉದಬಿಂದುಂ— ಒಂದು ಹನಿ ನೀರನ್ನಾಗಲಿ, ತಂಡುಲಂ— ಒಂದು ಅಕ್ಕಿ ಕಾಳನ್ನಾಗಲಿ, ನ ದಾತವ್ಯಂ— ಕೊಡತಕ್ಕದ್ದಲ್ಲ.

**ಪದ ೬**

ರಾಗ-ನಾಟಿ; ತಾಳ-ರೂಪಕ

**ಗೋಭೂಹಿರಣ್ಯಾದಿ ದಿವ್ಯದಾನಂಗಳ**
**ಸ್ವಭುಜದಿ ಚಕ್ರವಿಲ್ಲದವರಿಗೆ**
**ಈ ಭುವನದೊಳು ಕೊಡಬಾರದೆಂದು ನಾ-**
**ಗಭೂಷಣ ನಿರ್ಣೈಸಿದಲ್ಲೇ** ॥೧॥

**ಅರ್ಥ:** ಗೋಭೂಹಿರಣ್ಯಾದಿ ದಿವ್ಯದಾನಂಗಳ — ಗೋವು, ಭೂಮಿ, ಭಂಗಾರ ಇತ್ಯಾದಿ ದಾನಗಳನ್ನು, ಸ್ವಭುಜದಿ — ತನ್ನ ಭುಜಗಳಲ್ಲಿ, ಚಕ್ರವಿಲ್ಲ-ದವರಿಗೆ — ಚಕ್ರವನ್ನು ಧರಿಸದಿದ್ದವರಿಗೆ, ಈ ಭುವನದೊಳು — ಈ ಲೋಕ-ದಲ್ಲಿ, ಕೊಡಬಾರದೆಂದು — ಕೊಡತಕ್ಕದ್ದಲ್ಲವೆಂದು, ನಾಗಭೂಷಣ — ಸರ್ಪಭೂಷಣನು (ಶಿವನು), ನಿರ್ಣೈಸಿದಲ್ಲೇ — ನಿಶ್ಚಯಿಸಿರುವನಾದುದ-ರಿಂದಲೇ, (ಮುಂದಿನ ನುಡಿಯಿಂದ ಅನ್ವಯ).

**ಒಂದುದಕಬಿಂದು ಒಂದು ತಂಡುಲವನ್ನು**
**ಇಂದಿರೇಶನ ಅಭಕ್ತರಿಗೆ**
**ಎಂದೆಂದು ಕೊಡಬಾರದೆಂದು**
**ಇಂದುಮೌಳಿಯಂದುದಕೆ ಸಂದೇಹ ಸಲ್ಲ** ॥೨॥

**ಅರ್ಥ:** ಒಂದುದಕಬಿಂದು — ಒಂದು ಹನಿ ನೀರನ್ನಾಗಲಿ, ಒಂದು ತಂಡುಲವನ್ನು — ಒಂದು ಕಾಳು ಅಕ್ಕಿಯನ್ನಾಗಲಿ, ಇಂದಿರೇಶನ ಅಭಕ್ತರಿಗೆ — ವಿಷ್ಣುಭಕ್ತರಲ್ಲದವರಿಗೆ, ಎಂದೆಂದು — ಎಂದೂ, (ಯಾವ ಕಾಲದಲ್ಲಿಯೂ), ಕೊಡಬಾರದೆಂದು — ಕೊಡಕೂಡದೆಂದು, ಇಂದುಮೌಳಿಯು — ಶಿವನು, ಅಂದುದಕೆ — ಹೇಳಿದ ವಿಷಯಕ್ಕೆ, ಸಂದೇಹ ಸಲ್ಲ — ಸಂಶಯಪಡುವುದು ಯುಕ್ತವಲ್ಲ.

**ವಿಶೇಷಾಂಶ:** ನಾನಾ ದಾನಗಳಲ್ಲಿ ಗೋ ಭೂಹಿರಣ್ಯದಾನಗಳು ಶ್ರೇಷ್ಠ-ವಾದವು. ಅನ್ನದಾನವೇ ಶ್ರೇಷ್ಠವೆಂದು ಕೆಲವು ಆಗಮಗಳಲ್ಲಿ ಹೇಳುವುದು ವಿವಕ್ಷಾಭೇದದಿಂದ — ತತ್ಕಾಲದಲ್ಲಿ ತೃಪ್ತಿದಾಯಕವೆಂಬ ದೃಷ್ಟಿಯಿಂದ. ಗೋ ಭೂಹಿರಣ್ಯದಾನವು 'ದಿವ್ಯ'ದಾನವು — ಸತ್ಪಾತ್ರದಲ್ಲಿ ಕೊಡಲ್ಪಟ್ಟರೆ ಜ್ಞಾನ-ಸಾಧಕವಾದ ಮಹಾಪುಣ್ಯವನ್ನು ದೊರಕಿಸುತ್ತದೆ. ಶ್ರೀವಿಷ್ಣುಪ್ರೀತ್ಯರ್ಥ-ವಾಗಿಯೇ ಅರ್ಪಿಸಲಾಗುವ ದಾನವೇ 'ದಿವ್ಯದಾನ'ವು ಸತ್ಪಾತ್ರನ ಪ್ರಧಾನ-ಲಕ್ಷಣವೆಂದರೆ, ಚಕ್ರಾದಿ ವಿಷ್ಣುಲಾಂಛನಗಳನ್ನು ಧರಿಸಿರುವುದೇ ಆಗಿದೆ. ಈ ದೇಹವು ನನ್ನ ಪ್ರಭುವಾದ ಶ್ರೀವಿಷ್ಣುವಶವು — ನಾನು ಆತನ ನಿತ್ಯದಾಸ-ನೆಂಬುದನ್ನು ನಿರಂತರ ಸ್ಮರಣೆಗೆ ತಂದುಕೊಡುವುದೇ ಚಕ್ರಧಾರಣೆಯ ಮುಖ್ಯೋದ್ದೇಶವು.

ಯಾವುದೊಂದು ವಸ್ತು, ಒಬ್ಬನಿಗೆ ಸೇರಿದುದೆಂದು ತೋರಿಸಲು ಅದರ ಮೇಲೆ ಅವನ ಹೆಸರನ್ನು ಕೆತ್ತಿಸುವಂತೆ, ಜೀವಸಹಿತವಾದ ಈ ದೇಹವು ಸದಾ

ವಿಷ್ಣುವಶವೆಂದು ತಿಳಿದು, ಭಕ್ತಿಪೂರ್ವಕ ಚಕ್ರಾದಿಗಳನ್ನು ಧರಿಸುವವನೇ ನಿಜವಾದ ವಿಷ್ಣುಭಕ್ತನು—ನಟನಂತೆ ವೇಷಧಾರಿ ಮಾತ್ರನಲ್ಲ. ಭಕ್ತಿಯಿದ್ದವನು ಧರಿಸಬೇಕಾಗಿಲ್ಲವೆಂದೂ ಅಲ್ಲ—ಧರಿಸಲೇಬೇಕು—ತಪ್ಪದೇ ಧರಿಸುತ್ತಾನೆ. ವಿಷ್ಣುಚಿನ್ಹೆಗಳನ್ನು **ಆದರದಿಂದ** ಧರಿಸುವವನು ಮಂದನಾದರೂ (ಶಾಸ್ತ್ರ ಪಾಂಡಿತ್ಯ ರಹಿತನಾದರೂ) ಭಕ್ತನೇ ಸರಿ. ಶ್ರೀ ಜಗನ್ನಾಥದಾಸರು *'ಮಂದನಾದರು ಸರಿಯೆ ಗೋಪೀಚಂದನವ* ***ನಲವಿಂದ*** *ಧರಿಸುತ'* ಇತ್ಯಾದಿ ಮಾತುಗಳಿಂದ ಈ ಪ್ರಮೇಯವನ್ನೇ ಸಾರಿರುವರು. 'ಸರ್ವವೂ ವಿಷ್ಣುವಿನ ಅಧೀನವು —ನಮ್ಮದೆಂಬುದು ಯಾವುದೊಂದೂ ಇಲ್ಲ' ಎಂಬ ಅನುಸಂಧಾನವು ನಿತ್ಯದಲ್ಲಿ ಇರಲೆಂದೇ, ಗೃಹ, ವಸ್ತ್ರ, ಆಭರಣಾದಿ ಸಕಲ ವಸ್ತುಗಳ ಮೇಲೆ ಶ್ರೀಹರಿಯ ನಾಮ ಅಥವಾ ಚಕ್ರಾದಿಗಳನ್ನು ಗುರ್ತಿಸುವುದು ಪ್ರಾಚೀನ-ಸಂಪ್ರದಾಯವಾಗಿತ್ತು. ಈ ಸಂಪ್ರದಾಯವನ್ನು ಪ್ರಮಾಣೀಕರಿಸುವ ವಿಧಿ-ವಾಕ್ಯವು ಹೀಗಿದೆ:

*'ಶಿಶವಃ ಪಶವೋನ್ನಾನಿ ಪಾತ್ರಾಣ್ಯಾಭರಣಾನಿ ಚ।*
*ರಥಧ್ವಜಪತಾಕಾದಿ ಸರ್ವಮಜ್ಞಾನ ಉಚ್ಯತೇ॥'* (ವಿಷ್ಣುರಹಸ್ಯ)
*'ಏತೇಷಾಂ ಹಿ ಮದೀಯತ್ವಜ್ಞಾಪನಾಯ ಲಿಖೇತ್ಸ್ವಯಮ್'*

ಮಕ್ಕಳು, ಪಶುಗಳು, ಧಾನ್ಯ, ಪಾತ್ರೆ, ಆಭರಣ, ರಥ, ಧ್ವಜಪತಾಕಾದಿ-ಗಳೆಲ್ಲವೂ 'ಅಜ್ಞಾನ'ವೆನಿಸುತ್ತವೆ. (ನಮ್ಮವೆಂಬ ಅಜ್ಞಾನಕ್ಕೆ ಕಾರಣಗಳಾದ್ದ-ರಿಂದ, ಈ ಎಲ್ಲವೂ 'ಅಜ್ಞಾನ' ಶಬ್ದವಾಚ್ಯವು); 'ಈ ಎಲ್ಲವೂ ನನ್ನವು (ಶ್ರೀಹರಿಗೆ ಸೇರಿದವು) ಎಂಬುದನ್ನು ಜ್ಞಾಪಿಸಲು, ಪ್ರತಿಯೊಬ್ಬನೂ, ತಾನೇ ಅವುಗಳ ಮೇಲೆ ನನ್ನ ನಾಮ ಅಥವಾ ಚಕ್ರಾದಿ ಚಿಹ್ನೆಗಳನ್ನು ಚಿತ್ರಿಸಬೇಕು' ಎಂದು ಶ್ರೀಹಯಗ್ರೀವದೇವನು ಬ್ರಹ್ಮನಿಗೆ ಉಪದೇಶಿಸಿರುತ್ತಾನೆ. ಈ ಪ್ರಕಾರದ ಯತ್ನ ಮತ್ತು ಅಭ್ಯಾಸದಿಂದಲೂ ಯಾರಿಗೆ ಸರ್ವವೂ ವಿಷ್ಣ್ವಧೀನವೆಂಬ ಜ್ಞಾನವುಂಟಾಗುವುದಿಲ್ಲವೋ ಅವನೇ ಅವೈಷ್ಣವನು—ಅಭಕ್ತನು—ತಮೋ-ಯೋಗ್ಯನು. ಅಂಥವನಿಗೆ ಏನನ್ನೂ ಕೊಡಬಾರದೆಂದು (ಯಾವ ರೂಪದ ಸಹಾಯವನ್ನೂ ಮಾಡಕೂಡದೆಂದು) ಶಾಸ್ತ್ರವು ವಿಧಿಸುತ್ತದೆ. ಈ ವಿಧಿಯು, ಸ್ವರೂಪನಿಶ್ಚಯವುಳ್ಳ ಜ್ಞಾನಿಗೆ ಮಾತ್ರ ಅನ್ವಯಿಸುತ್ತದೆ. ಸಾಧನಾವಸ್ಥೆಯ ನಾನಾ ಹಂತಗಳಲ್ಲಿರುವ ಸ್ವರೂಪತಃ ವಿಷ್ಣುಭಕ್ತರಾದ (ಮುಕ್ತಿಯೋಗ್ಯರಾದ) ಜೀವರುಸಹ ವಿಷ್ಣುಚಿಹ್ನೆಗಳನ್ನು ಧರಿಸದಿರುವ ಪ್ರಸಂಗವಿರಬಹುದು—ಇರು-

ತ್ತದೆ. ಅಂಥವರಿಗೆ ಜಲಾದಿಗಳನ್ನು ಕೊಡಕೂಡದೆಂದಲ್ಲ. ಹಸಿದವನು ಅನ್ನಕ್ಕೂ, ತೃಷಾರ್ತನು; (ನೀರಡಿಕೆಯಿಂದ ಬಳಲುವವನು) ಜಲಕ್ಕೂ ಪಾತ್ರ-ರೆಂದು ಹೇಳುವ ಶಾಸ್ತ್ರವಾಕ್ಯಗಳೂ ಇವೆ.

*'ಅನ್ನಸ್ಯ ಕ್ಷುದಿತಂ ಪಾತ್ರಂ'*

ಹಸಿದವನು ಅನ್ನದಾನಕ್ಕೆ ಅರ್ಹ.

ಶ್ರೀಪುರಂದರದಾಸಾರ್ಯರು: ಒಂದು ಉಗಾಭೋಗದಲ್ಲಿ;

'ಚೋರನಾದರು ಸರಿಯೆ ಚಂಡಾಲನಾದರು ಸರಿಯೆ

ಬ್ರಹ್ಮಘ್ನಪಿತೃಘಾತಕಿಯಾದರೂ ಸರಿಯೆ

ಆವನಾದರು ಸರಿಯೆ ಮಧ್ಯಾಹ್ನಕಾಲಕ್ಕೆ ಅತಿಥಿಯಾಗಿ ಮನೆಗೆ ಬಂದರೆ ಅವನಿಗೆ ಅಶನವನಿತ್ತು ವಸುಧೀಶಪುರಂದರವಿಟ್ಠಲಗರ್ಪಿತವೆನ್ನು' ಎಂದಿದ್ದಾರೆ.

ಆದ್ದರಿಂದ ಈ ಪರಿಸ್ಥಿತಿಯಲ್ಲಿರುವವರಿಗೆ ಅನ್ನೋದಕಗಳನ್ನು ಕೊಡು-ವುದು, ಪ್ರಾಣಿದಯಾರೂಪಗುಣವೆನಿಸುತ್ತದೆ— ದಿವ್ಯದಾನದಲ್ಲಿ ಇದು ಸೇರು-ವುದಿಲ್ಲ.

*'ನೋದಬಿಂದುಂ ನ ತಂಡುಲಂ'* ಎಂಬುದರ್ಥಕ್ಕೆ ತೀರ್ಥಮಂತ್ರಾಕ್ಷತೆ-ಗಳೆಂಬರ್ಥವನ್ನೂ ಕೆಲವರು ತಿಳಿಯುತ್ತಾರೆ. ವಿಷ್ಣುಪ್ರಸಾದರೂಪದ ಇವು-ಗಳನ್ನು ವಿಷ್ಣುಚಿಹ್ನೆಗಳಿಲ್ಲದವರಿಗೆ ಕೊಡಲೇಕೂಡದೆಂಬರ್ಥವನ್ನೂ ಹೇಳು-ತ್ತಾರೆ. ಅನ್ನೋದಕಗಳನ್ನು ಸ್ವೀಕರಿಸುವ ವ್ಯಕ್ತಿಯ ಸ್ವರೂಪಜ್ಞಾನವಾಗದ ದಾನಿಗಳಿಗೆ ಈ ಅರ್ಥವು ಅನ್ವಯಿಸಬಹುದಲ್ಲವೇ? ಸರ್ವರ ಸ್ವರೂಪ-ಜ್ಞಾನವುಳ್ಳ ಭೀಮಸೇನದೇವರು ತಮೋಯೋಗ್ಯರಾದ ದುರ್ಯೋಧನ ದುಶ್ಯಾಸನಾದಿಗಳ ವಿಷಯದಲ್ಲಿ ವರ್ತಿಸಿದಂತೆ, ಎಲ್ಲರೂ ನಡೆದುಕೊಳ್ಳ-ಲಾದೀತೆ? ವಿಷ್ಣುಭಕ್ತನು ಮಂದನಾಗಲಿ, ಜ್ಞಾನಿಯಾಗಲಿ, ತಪ್ಪದೇ ವಿಷ್ಣು-ಚಕ್ರಾದಿಚಿಹ್ನೆಗಳನ್ನು ಧರಿಸುತ್ತಾನೆ. ಆದ್ದರಿಂದ ವ್ಯಕ್ತಿ ಸ್ವರೂಪಜ್ಞಾನವಿಲ್ಲದಾಗ ಮತ್ತು ಶಾಸ್ತ್ರೋಕ್ತ (ಗೀತಾ ೧೭ನೇ ಅಧ್ಯಾಯೋಕ್ತ ಇತ್ಯಾದಿ) ಲಕ್ಷಣಗಳಿಂದ ಸ್ವರೂಪವನ್ನು ಗುರ್ತಿಸಲವಕಾಶವಿಲ್ಲದ ಸಂದರ್ಭಗಳಲ್ಲಿ ಬಾಹ್ಯ ವಿಷ್ಣುದೀಕ್ಷೆ-ಯಿಲ್ಲದವನಿಗೆ ದಿವ್ಯದಾನಗಳನ್ನು ಕೊಡಲೇಕೂಡದು—ಆ ದಾನವು ವ್ಯರ್ಥವೇ ಆಗುತ್ತದೆ. ಅಂತೆಯೇ,

*'ಸದಾಚಾರರತೋಽಪಿ ಸ್ಯಾದ್ವಿಷ್ಣುದೀಕ್ಷಾ ವಿವರ್ಜಿತಃ।*
*ಸ ಚೋರವದ್ಬಹಿಷ್ಕಾರ್ಯಃ ತಸ್ಮೈದತ್ತಂ ಚ ನಿಷ್ಫಲಮ್॥'*

ಎಂದು (ವಿಷ್ಣುರಹಸ್ಯ)ದಲ್ಲಿ, 'ಸದಾಚಾರವುಳ್ಳವನೆಂದು ಅನ್ಯಲಕ್ಷಣಗಳಿಂದ ಕಂಡುಬಂದರೂ, ವಿಷ್ಣು (ಬಾಹ್ಯ) ದೀಕ್ಷಾರಹಿತನನ್ನು ಚೋರನಂತೆ ದೂರದಲ್ಲಿಡಬೇಕು—ಅವನಿಗೆ ಕೊಡುವ (ಗೋಭೂಹಿರಣ್ಯಾದಿ) ದಾನವು **'ನಿಷ್ಫಲವೇ ಸರಿ'** ಎಂದು ಹೇಳಲಾಗಿದೆ.

## ಶ್ರುತಿ ೩

*ದ್ವಿಭುಜಂ ಧಾರ್ಯತೇತಿ ದ್ವಿರೇಖಂ ಊರ್ಧ್ವಪುಂಡ್ರಂ ಕರೋತಿ॥*

**ಅರ್ಥ:** ಎರಡೂ ಭುಜಗಳಲ್ಲಿ, (ತಪ್ತಚಕ್ರವನ್ನು) ಧರಿಸುತ್ತಾನೆ—ಊರ್ಧ್ವಪುಂಡ್ರವನ್ನು (ಮಧ್ಯದಲ್ಲಿ ಎರಡು ರೇಖೆಗಳನ್ನಾಗಿ ಸೀಳಿ) ಮಾಡುತ್ತಾನೆ. ವಿಷ್ಣುಭಕ್ತನು ಧರಿಸುವ ಚಿಹ್ನೆಗಳನ್ನು ಈ ಶ್ರುತಿಯು ವಿವರಿಸುತ್ತದೆ.

## ಪದ ೭

ರಾಗ-ನಾಟಿ; ತಾಳ-ರೂಪಕ

**ಈ ಮಾಧ್ಯಂದಿನಶ್ರುತಿಗನೆರಡು ಖಂಡದಿ**
**ತಪ್ತಚಕ್ರಧಾರಣವ ನಿರ್ಣೈಸಿತು** ॥೧॥

**ಅರ್ಥ:** ಈ ಮಾಧ್ಯಂದಿನಶ್ರುತಿಗನು—ಈ **'ಮಾಧ್ಯಂದಿನ'** ಶ್ರುತಿಯು (ಶ್ರುತಿಪ್ರವರ್ತಕ ವೇದಪುರುಷನು), ಎರಡು ಖಂಡದಿ—ಎರಡು ಖಂಡಗಳಲ್ಲಿ, ತಪ್ತಚಕ್ರಧಾರಣೆಯನ್ನು, ನಿರ್ಣೈಸಿತು—ನಿರ್ಣಯಿಸಿ ಹೇಳಿರುವನು.

**ಇದು ಸ್ಪಷ್ಟವಚನವಾದುದರಿಂದ ಶಂಖಚಕ್ರ**
**ಅದುವಿಲ್ಲದವನೆ ವೇದಬಾಹ್ಯ**
**ಮದನನಯ್ಯನ ಪುರದಿ ಮುಕ್ತರಿಗಾವದು**
**ಇದನರಿಯದವರು ತಮವನ್ನೈದುವರು** ॥೨॥

**ಅರ್ಥ:** ಇದು—ಈ ಮಾಧ್ಯಂದಿನಶ್ರುತಿವಾಕ್ಯವು, ಸ್ಪಷ್ಟವಚನವಾದುದರಿಂದ—ಬೇರೆ ಅರ್ಥಕ್ಕೆ ಅವಕಾಶವಿಲ್ಲದಂತೆ ಹೇಳುವುದರಿಂದ, ಶಂಖಚಕ್ರ—ಶಂಖಚಕ್ರಲಾಂಛನವು, ಮದನನಯ್ಯನ ಪುರದಿ—ಶ್ರೀಹರಿಪುರದಲ್ಲಿ (ವೈಕುಂಠಾದಿ ಸ್ಥಾನಗಳಲ್ಲಿ), ಮುಕ್ತರಿಗೆ—ಮುಕ್ತಜೀವರಿಗೆ, ಆವದು—ಯಾವುದೋ (ಯಾವ ಶಂಖಚಕ್ರಚಿಹ್ನೆಗಳನ್ನು ಮುಕ್ತರೂ ಧರಿಸುವರೋ), ಅದುವೆ—ಆ ಲಾಂಛನವೇ, ಇಲ್ಲದವನು—ಇಲ್ಲದಿದ್ದವನು, (ಅದನ್ನು ತ್ಯಜಿಸಿ-

ದವನು), ವೇದಬಾಹ್ಯ— ವೇದಬಾಹ್ಯನು (ವೇದರೂಪದ ಶ್ರೀಹರಿಯಾಜ್ಞೆಯನ್ನು ಉಲ್ಲಂಘಿಸಿದವನು); ಇದನರಿಯದವರು— ಇದನ್ನು ತಿಳಿಯದ ಮತ್ತು ಆಚರಿಸದವರು, ತಮವನು— ತಮಸ್ಸನ್ನು, ಐದುವರು— ಹೊಂದುತ್ತಾರೆ.

**ಶ್ಲೋಕ ೫**

**ಯೇ ಕಂಠಲಗ್ನತುಳಸೀನಳಿನಾಕ್ಷಮಾಲಾಃ**
**ಯೇ ಬಾಹುಮೂಲಪರಿಶೋಭಿತಶಂಖಚಕ್ರಾಃ।**
**ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಃ।**
**ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ॥**

**ಅರ್ಥ:** ಯೇ— ಯಾರು, ಕಂಠಲಗ್ನತುಳಸೀನಳಿನಾಕ್ಷಮಾಲಾಃ— ಕಂಠದಲ್ಲಿ ಧರಿಸಿದ ತುಳಸೀ ಮತ್ತು ಪದ್ಮಾಕ್ಷಮಾಲೆಗಳುಳ್ಳವರೋ, ಯೇ— ಯಾರು, ಬಾಹುಮೂಲಪರಿಶೋಭಿತಶಂಖಚಕ್ರಾಃ— ಭುಜಗಳಲ್ಲಿ ಶೋಭಿಸುವ ಶಂಖ ಚಕ್ರ ಚಿನ್ಹೆಗಳುಳ್ಳವರೋ, ವಾ— ಮತ್ತು, ಯೇ— ಯಾರು, ಲಲಾಟಫಲಕೇ — ಹಣೆಯ ಮಧ್ಯದಲ್ಲಿ, ಲಸದೂರ್ಧ್ವಪುಂಡ್ರಾಃ— ವಿರಾಜಿಸುವ ಊರ್ಧ್ವಪುಂಡ್ರವುಳ್ಳವರೋ, ತೇ— ಆ, ವೈಷ್ಣವಾಃ— ವಿಷ್ಣುಭಕ್ತರು, (ಅವರೇ ವಿಷ್ಣುಭಕ್ತರು), ಭುವನಂ— ಲೋಕವನ್ನು (ಪ್ರಜೆಗಳನ್ನು), ಆಶು— ಶೀಘ್ರವಾಗಿ, ಪವಿತ್ರಯಂತಿ— ಶುದ್ಧಿಗೊಳಿಸುತ್ತಾರೆ (ಪಾಪಗಳನ್ನು ಪರಿಹರಿಸುತ್ತಾರೆ).

**ಪದ ೮**

ರಾಗ-ನಾಟಿ; ತಾಳ-ರೂಪಕ

**ಸಂತಪ್ತಶಂಖಚಕ್ರವು ಭುಜಯುಗದಲ್ಲಿ**
**ಮಂತ್ರಪೂರ್ವಕವಾಗಿ ಧರಿಸಿ**
**ಅಂತಕನ ಭಟರನಂಜಿಸಿ ಮೆರೆವ ಲಕುಮಿ-**
**ಕಾಂತನ ಭಕ್ತರಾದವರು ॥೧॥**

**ಅರ್ಥ:** ಸಂತಪ್ತಶಂಖಚಕ್ರವು— ತಪ್ತಮುದ್ರೆಗಳನ್ನು (ಶಂಖಚಕ್ರಗಳನ್ನು), ಭುಜಯುಗದಲ್ಲಿ— ಎರಡು ಭುಜಗಳಲ್ಲಿ, ಮಂತ್ರಪೂರ್ವಕವಾಗಿ— (ವಿಧಿಪೂರ್ವಕ ಹೋಮಾಗ್ನಿಯಲ್ಲಿ ಚಕ್ರಾದಿಮುದ್ರೆಗಳನ್ನು ದಹಿಸಿ, ವಿಧ್ಯುಕ್ತ ಮಂತ್ರಗಳನ್ನು ಉಚ್ಚರಿಸಿ), ಧರಿಸಿ— (ಭುಜಗಳಲ್ಲಿ) ಧಾರಣೆಮಾಡಿ, ಅಂತಕನ ಭಟರನು— ಯಮದೂತರನ್ನು, ಅಂಜಿಸಿ— ಭಯಗೊಳಿಸಿ, ಮೆರೆವ—

ವಿರಾಜಿಸುವ, ಲಕುಮಿಕಾಂತನ—ನಾರಾಯಣನ, ಭಕ್ತರಾದವರು—ದಾಸರಾದವರು (ಮುಂದಿನ ನುಡಿಯ 'ಇಳೆಯ ಪಾವನಮಾಡುವರು' ಎಂಬುದರಿಂದ ವಾಕ್ಯ ಪೂರ್ಣವಾಗುತ್ತದೆ).

**ಪೊಳೆವ ಪನ್ನೆರಡೂರ್ಧ್ವಪುಂಡ್ರಗಳಿಂದ ಶ್ರೀ-**
**ತುಳಸಿಪದ್ಮಾಕ್ಷಿಯ ಸರವ**
**ಅಲಸದೆ ಧರಿಸಿದ ಪರಮವೈಷ್ಣವರು ಈ**
**ಇಳೆಯ ಪಾವನಮಾಡುತಿಹರು ॥೨॥**

**ಅರ್ಥ:** ಪೊಳೆವ—ಹೊಳೆಯುವ (ಎದ್ದು ತೋರುವ), ಪನ್ನೆರಡು—ಹನ್ನೆರಡು(೧೨) ಊರ್ಧ್ವಪುಂಡ್ರಗಳಿಂದ—ಮೇಲೇರುವ ದ್ವಾದಶನಾಮಗಳಿಂದ (ಬುಡದಿಂದ ಮೇಲಕ್ಕೆ ದೀಪಜ್ವಾಲೆಯಂತೆ ಏರುವ ನಾಮಗಳಿಂದ), ಪೊಳೆವ—ಶೋಭಿಸುವ, ಮತ್ತು ಅಲಸದೆ—ಆಲಸ್ಯರಹಿತರಾಗಿ (ಬೇಸರದೆ—ಆದರದಿಂದ), ತುಳಸಿಪದ್ಮಾಕ್ಷಮಣಿಮಾಲೆಗಳನ್ನು, ಧರಿಸಿದ—ಧರಿಸಿರುವ, ಪರಮವೈಷ್ಣವರು—ಶ್ರೇಷ್ಠ ವಿಷ್ಣುಭಕ್ತರು, ಈ ಇಳೆಯ—ಈ ಭೂಲೋಕವನ್ನು (ಇಲ್ಲಿರುವ ಪ್ರಜೆಗಳನ್ನು), ಪಾವನಮಾಡುತಿಹರು—ಪವಿತ್ರಗೊಳಿಸುತ್ತಿರುವರು. (ತಾವು ಸಂಚರಿಸುವ ಭೂಪ್ರದೇಶಗಳನ್ನೂ ಪವಿತ್ರೀಕರಿಸುತ್ತಾರೆ).

**ಯೇ ಕಂಠಲಗ್ನವೆಂಬ ಪದ್ಮಪುರಾಣ**
**ಶ್ಲೋಕದಿ ಗೌರಿದೇವಿಗೆ**
**ಶ್ರೀಕಂಠ ತಾನೆ ನಿರ್ಣೈಸಿ ಪೇಳಿದನಾಗಿ**
**ಲೋಕರ್ಗೆ ಸಂಶಯ ಸಲ್ಲ ॥೩॥**

**ಅರ್ಥ:** ಯೇ ಕಂಠಲಗ್ನವೆಂಬ ಪದ್ಮಪುರಾಣಶ್ಲೋಕದಿ—ಹೀಗೆಂಬ ಹಿಂದೆ ವಿವರಿಸಿದ ಪದ್ಮಪುರಾಣಶ್ಲೋಕದಲ್ಲಿ, ಗೌರಿದೇವಿಗೆ—(ತನ್ನ ಪ್ರಿಯಪತ್ನಿಯಾದ) ಗೌರೀದೇವಿಗೆ, ಶ್ರೀಕಂಠ—ಶಿವನು, ತಾನೆ—ಸ್ವಯಂ, ನಿರ್ಣೈಸಿ—ನಿಶ್ಚಯಿಸಿ (ನಿರ್ಧಾರವಾಗಿ), ಪೇಳಿದನಾಗಿ—(ವಿಷ್ಣುಭಕ್ತರ ಲಕ್ಷಣವನ್ನೂ, ಅವರ ಕರ್ತವ್ಯವನ್ನೂ—ಅವರೇ ಲೋಕಪಾವನರೆಂದೂ) ಹೇಳಿರುವುದರಿಂದ, ಲೋಕರ್ಗೆ—(ಶಾಸ್ತ್ರಾರ್ಥಗಳನ್ನು ನಿರ್ಣಯಿಸಿಕೊಳ್ಳಲು ಅಶಕ್ತರಾದ ಅಜ್ಞ) ಜನರಿಗೆ, ಸಂಶಯ ಸಲ್ಲ—ಸಂದೇಹಪಡುವುದು ಯುಕ್ತವಲ್ಲ.

**ವಿಶೇಷಾಂಶ:** ಈ ಹಿಂದಿನ ನುಡಿಗಳಿಂದ ವಿಷ್ಣುಲಾಂಛನಧಾರಣವೆಂಬ ಬಾಹ್ಯದೀಕ್ಷೆಗಳನ್ನು ಸಯುಕ್ತಿಕವಾಗಿ, ಅತ್ಯವಶ್ಯಕವೆಂದು ಸಾಧಿಸಿ, ನುಡಿ ೧ ರಲ್ಲಿ, ಈ ದೀಕ್ಷೆಯುಳ್ಳ ಭಕ್ತರಿಗೆ ಯಮಲೋಕದಲ್ಲಿರುವ ಪ್ರಸಿದ್ಧ ನರಕಗಳ (ಯಾತನೆಗಳ) ಸಂಭವವೇ ಇಲ್ಲವೆಂದು, ಯಮನೂ ಯಮದೂತರೂ ಇವರ ಹತ್ತಿರ ಬರಲು ಸಹ ಭಯಪಡುವರೆಂಬ ಹೇತುವಿನಿಂದ, ಸಾಧಿಸುತ್ತಾರೆ.

*'ದೀಕ್ಷಿತೋ ಲಭತೇ ಪೂಜಾಂ ಯಮಾದಪಿ ಬಿಭೇತಿ ನ।*
*ನೃಪಾಮಾತ್ಯಃ ಕಥಂ ತ್ರಸ್ಯೇದನ್ಯಸ್ಮಾನ್ನೃಪಬಾಹ್ಯತಃ॥'*

ಎಂದು (ವಿಷ್ಣುರಹಸ್ಯದಲ್ಲಿಯೂ), ಮತ್ತು,

*'ಇತ್ಥಂ ಸ್ವಭರ್ತೃಗದಿತಂ ಭಗವನ್ಮಹಿತ್ವಂ*
*ಸಂಸ್ಮೃತ್ಯ ವಿಸ್ಮಿತಧಿಯೋ ಯಮಕಿಂಕರಾಸ್ತೇ।*
*ನೈವಾಚ್ಯುತಾಶ್ರಯಜನಂ ಪ್ರತಿಶಂಕಮಾನಾ*
*ದ್ರಷ್ಟುಂ ಚ ಬಿಭ್ಯತಿ ತತಃ ಪ್ರಭೃತಿಸ್ಮ ರಾಜನ್॥*

ಎಂದು (ಭಾಗವತದಲ್ಲಿಯೂ), ವಿಷ್ಣುಭಕ್ತರು ಹೇಗೆ ಭಯರಹಿತರಾಗಿ ಸುರಕ್ಷಿತರೆಂಬುದು ವರ್ಣಿತವಾಗಿದೆ.

**ಅರ್ಥ:** ದೀಕ್ಷಿತಃ— ವಿಷ್ಣುದೀಕ್ಷೆಯುಳ್ಳವನು, ಪೂಜಾಂ— (ಜನರಿಂದ) ಪೂಜ್ಯತೆಯನ್ನು, ಲಭತೇ— ಹೊಂದುತ್ತಾನೆ; ಯಮಾದಪಿ— ಯಮನಿಂದಲೂ ಸಹ, ನ ಬಿಭೇತಿ— ಹೆದರುವುದಿಲ್ಲ; ನೃಪಾಮಾತ್ಯಃ— ರಾಜಾಧೀನನಾದ ಮಂತ್ರಿಯು, ನೃಪಬಾಹ್ಯತಃ— ರಾಜನಿಂದ ಬೇರೆಯಾದ, ಅನ್ಯಸ್ಮಾತ್— ಮತ್ತೊಬ್ಬನಿಂದ, ಕಥಂ— ಹೇಗೆ, ತ್ರಸ್ಯೇತ್— ಹೆದರುವನು? (ರಾಜನ ವಿನಹ ಅನ್ಯರಿಂದ ಮಂತ್ರಿಯು ಹೆದರುವ ಕಾರಣವೇ ಇಲ್ಲವೆಂಬ ಲೋಕಾನುಭವಸಿದ್ಧಯುಕ್ತಿಯು ಸೂಚಿತವಾಗಿದೆ).

ಇತ್ಥಂ— ಹೀಗೆ, ಸ್ವಭರ್ತೃಗದಿತಂ— ತಮ್ಮ ಸ್ವಾಮಿಯಾದ ಯಮರಾಜನಿಂದ ಉಪದೇಶಿಸಲ್ಪಟ್ಟ, ಭಗವನ್ಮಹಿತ್ವಂ— (ವಿಷ್ಣ್ವಾಜ್ಞೆಯಿಂದ ವಿಷ್ಣುದೂತರು ಸದಾ ವಿಷ್ಣುಭಕ್ತರನ್ನು ರಕ್ಷಿಸುವರೆಂಬ) ವಿಷ್ಣುಮಹಿಮೆಯನ್ನು, ಸಂಸ್ಮೃತ್ಯ— ಸ್ಮರಿಸಿ (ಮನಸ್ಸಿನಲ್ಲಿಟ್ಟು), ಯಮಕಿಂಕರಾಃ— ಯಮದೂತರು, (ಅಜಾಮಿಳನನ್ನು ತರಲು ಹೋಗಿ ವಿಷ್ಣುದೂತರಿಂದ ತಿರಸ್ಕೃತರಾಗಿ ಬಂದ ಸ್ವಾನುಭವದಿಂದ ಸಹ), ವಿಸ್ಮಿತಧಿಯಃ— ಆಶ್ಚರ್ಯಚಕಿತರಾಗಿ, ಅಚ್ಯುತಾಶ್ರಯಜನಂ ಪ್ರತಿ— ವಿಷ್ಣುಭಕ್ತರ ವಿಷಯದಲ್ಲಿ, ಶಂಕಮಾನಾಃ— ಭಯಗೊಂಡು, ನೈವ— ಅವರ ಸಮೀಪಕ್ಕೆ ಹೋಗುವುದೇ ಇಲ್ಲ; ರಾಜನ್— ಹೇ ಪರೀಕ್ಷಿತ! ತತಃ

ಪ್ರಭೃತಿ — ಅಲ್ಲಿಂದ ಮುಂದೆ, ದ್ರಷ್ಟುಂಚ — (ವಿಷ್ಣುಭಕ್ತರನ್ನು) ನೋಡಲಿಕ್ಕೆ ಸಹ, ಬಿಭ್ಯತಿ — ಹೆದರುತ್ತಾರೆ.

ತ್ರಿವಿಧ ಜೀವರನ್ನು ಸೃಷ್ಟಿಯಲ್ಲಿ ತಂದು, ಅವರಿಂದ ಸ್ವಯೋಗ್ಯಸಾಧನೆಗಳನ್ನು ಮಾಡಿಸಿ, ದುಷ್ಟನಿಗ್ರಹ ಶಿಷ್ಟಪರಿಪಾಲನೆಯ ದ್ವಾರಾ, ಅವರವರ ಅಂತಿಮ ಗತಿಗಳನ್ನು ನೀಡುವ, ಶ್ರೀಹರಿಯ ಜಗತ್ಪಾವನ ಪ್ರಕಾರವನ್ನು ಈ ಮುಂದೆ ವರ್ಣಿಸುತ್ತಾರೆ.

**ಬ್ರಹ್ಮಚಾರಿಗೃಹಸ್ಥವಾನಪ್ರಸ್ಥದ**
**ಧರ್ಮದಿ ವಿಪ್ರರ ನಡೆಸಿ**
**ನಿಮ್ಮ ಮೈತುರಿಯ ಶ್ರೀಆದಿಮತವನಾ-**
**ನಮ್ಮ ಹರಿ ನಿರ್ಮಿಸಿದ ॥೪॥**

**ಅರ್ಥ:** ಬ್ರಹ್ಮಚಾರಿಗೃಹಸ್ಥವಾನಪ್ರಸ್ಥದ ಧರ್ಮದಿ — ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥಗಳೆಂಬ ಆಶ್ರಮಧರ್ಮಗಳನ್ನು ಆಚರಿಸುವುದರಲ್ಲಿ, ವಿಪ್ರರ — ಬ್ರಾಹ್ಮಣರನ್ನು, ನಡೆಸಿ — ಇಟ್ಟು (ಅವರಲ್ಲಿ ನಿಂತು ತಾನು ಮಾಡಿಸಿ), ನಿಮ್ಮ ಮೈತುರಿಯ — ನಿಮ್ಮನ್ನು ಮೈತುರಿಸಿಕೊಳ್ಳುವಂತೆ ಮಾಡುವ, (ನಿಮ್ಮ ತಲೆಕೆರೆದುಕೊಳ್ಳುವಂತೆ ಮಾಡುವ), ಶ್ರೀಆದಿಮತವನು — ಪರಮಮಂಗಳಕರವಾದ ಮೂಲ ಸಿದ್ಧಾಂತವನ್ನು, (ಅನಾದಿಯಾದ ತತ್ತ್ವವಾದಿಗಳ ಮತವನ್ನು), ಆ ನಮ್ಮ ಹರಿ — ನಮ್ಮ ಪ್ರಭುವಾದ ಮೂಲರೂಪೀ ನಾರಾಯಣನೇ (ವೇದವ್ಯಾಸರೂಪದಿಂದ), ನಿರ್ಮಿಸಿದ — (ಸಜ್ಜನರ ರಕ್ಷಣೆಗಾಗಿ) ರಚಿಸಿ ಉಪದೇಶಿಸಿದನು.

**ವಿಶೇಷಾಂಶ:** (೧) **'ಶ್ರೀ ಆದಿಮತವನು'** ಎಂಬುದರಿಂದ, ಅನಾದಿ ನಿತ್ಯ-ವೇದಗಳ ಮಹಾತಾತ್ಪರ್ಯವಾದ, ಶ್ರೀಹರಿಯ ಸರ್ವೋತ್ತಮತ್ವ — ಜಗತ್ಸತ್ಯತ್ವ — ಪಂಚಭೇದತಾರತಮ್ಯಾದಿ ಸಿದ್ಧಾಂತಗಳನ್ನು ನಿರೂಪಿಸುವ **'ತತ್ತ್ವವಾದ'** ಮತವೂ, ವೇದಗಳಂತೆ, ಅನಾದಿನಿತ್ಯವೇ ಎಂಬುದನ್ನು ಸೂಚಿಸಿರುವರು. ಪ್ರತಿ ಬ್ರಹ್ಮಕಲ್ಪದ ಸೃಷ್ಟಿಯು ಆರಂಭವಾದೊಡನೆಯೇ ಎಲ್ಲರಿಗೂ ಮೊದಲು ಸೃಷ್ಟನಾದ ಬ್ರಹ್ಮದೇವನಿಗೆ ಈ ಮತವನ್ನೇ ಶ್ರೀಹರಿಯು ಉಪದೇಶಿಸಿರುವುದರಿಂದ ಅದು **'ಆದಿಮತ'**ವೆಂದೂ ಕರೆಯಲ್ಪಡುತ್ತದೆ.

(೨) ನಾರಾಯಣಾಭಿನ್ನನಾದ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದುದೂ ಈ ಅನಾದಿಸಿದ್ಧಾಂತವನ್ನೇ.

*'ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ।*
*ಭಕ್ತೋಽಸಿ ಮೇ ಸಖಾಚೇತಿ ರಹಸ್ಯಂ ಹ್ಯೇತದುತ್ತಮಮ್॥'* (ಗೀತಾ)

ಎಂಬಲ್ಲಿ, ರಹಸ್ಯವಾದ ಮತ್ತು ಉತ್ಕೃಷ್ಟವಾದ ಅದೇ ಯೋಗವನ್ನು (ಜ್ಞಾನ ಮತ್ತು ಜ್ಞಾನಸಾಧನವನ್ನು), ನೀನು, ನನ್ನ ಸಖನೂ ಭಕ್ತನೂ ಆಗಿರುವೆಯೆಂಬ ಕಾರಣದಿಂದ, ಈಗ ಉಪದೇಶಿಸಿರುವೆನು, ಎಂದಿದ್ದಾನೆ. ಈ ಸಿದ್ಧಾಂತವು ದುಷ್ಟರ ದುರ್ವ್ಯಾಖ್ಯಾನಾದಿ ಧಾಳಿಗೊಳಗಾಗಿ, ಆಗಾಗ ನಷ್ಟಪ್ರಾಯವಾದ ಸ್ಥಿತಿಯನ್ನು ಹೊಂದುತ್ತದೆ. ಆಗ ಶ್ರೀಹರಿಯೇ ಅವತರಿಸಿ, ಸತ್ಸಿದ್ಧಾಂತವನ್ನು ಸ್ಥಾಪನೆಮಾಡುತ್ತಾನೆ.

(೩) ಜೀವೇಶ್ವರರ ಐಕ್ಯವನ್ನೂ, ಜಗನ್ಮಿಥ್ಯಾತ್ವವನ್ನೂ ಹೇಳುವ ತಮೋ-ಯೋಗ್ಯಜೀವರಿಗೆ **'ತತ್ತ್ವವಾದ'** ಮತವು ಎಂದೂ ರುಚಿಸುವುದಿಲ್ಲ. ಇಷ್ಟು ಮಾತ್ರವಲ್ಲ. ಅವರನ್ನು ರೊಚ್ಚಿಗೆಬ್ಬಿಸುತ್ತದೆ—ಅವರ ದ್ವೇಷವನ್ನು ಉದ್ರೇಕ-ಗೊಳಿಸುತ್ತದೆ—ಮೈತುರಿಯಂತೆ ದುಃಖಪ್ರದವಾಗುತ್ತದೆ. ಆ ಮತ ತತ್ತ್ವಗಳನ್ನು ಎದುರಿಸಲು (ಅಪ್ರಾಮಾಣಿಕವೆಂದು ಸಾಧಿಸಲು) ಅಸಮರ್ಥರಾಗಿ, ವಿಲಿ-ವಿಲಿ ಒದ್ದಾಡುತ್ತಾರೆ—ಕೋಪತಾಪಗಳಿಂದ ದಹಿಸಲ್ಪಡುತ್ತಾರೆ. ಈ ಭಾವ-ಗಳನ್ನು **'ಮೈತುರಿಯ'** ಎಂಬ ವಿಶೇಷಣದಿಂದ ಸೂಚಿಸಿರುವರೆಂದು ತಿಳಿಯ-ಬೇಕು.

**ಬ್ರಹ್ಮಕ್ಷತ್ರಿಯವೈಶ್ಯಶೂದ್ರರ ತಮ್ಮ ತಮ್ಮ**
**ಕರ್ಮಮಾರ್ಗದಲಿ ನಡೆಸಿದ**
**ಚಿನ್ಮಯರೂಪ ಯೆಲ್ಲರೊಳು ತಾನೆ ಪೊಕ್ಕು**
**ನಿರ್ಮಲಪಥಕೆರಗಿಸಿದ** ॥೫॥

**ಅರ್ಥ:** ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರ—ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದ ಪ್ರಜೆಗಳನ್ನು, ತಮ್ಮ ತಮ್ಮ ಕರ್ಮಮಾರ್ಗ-ದಲಿ—ಅವರವರ ವಿಹಿತ ಕರ್ಮಾಚರಣಮಾರ್ಗದಲ್ಲಿ, ನಡೆಸಿದ—ನಡೆಸು ತ್ತಾನೆ; ಆ ಚಿನ್ಮಯರೂಪ—(ಹೀಗೆ ಪ್ರವರ್ತನಾದ) ಚಿದಾನಂದಸ್ವರೂಪನಾದ ಶ್ರೀಹರಿಯು, ಎಲ್ಲರೊಳು—ಎಲ್ಲ ಜೀವರಲ್ಲಿ, ತಾನೆ—ಸ್ವಯಂ, ಪೊಕ್ಕು—ಪ್ರವಿಷ್ಟನಾಗಿದ್ದು (ಅಂತರ್ಯಾಮಿಯಾಗಿದ್ದು), ನಿರ್ಮಲಪಥಕೆ—ಸನ್ಮಾರ್ಗಕ್ಕೆ, ಎರಗಿಸಿದ—ಹೊಂದಿಕೊಂಡಿರುವಂತೆ ಮಾಡುತ್ತಾನೆ.

**ವಿಶೇಷಾಂಶ:** ಎಲ್ಲ ಜೀವರು ಪರಮಾತ್ಮನ ಪ್ರತಿಬಿಂಬರು. ಶ್ರೀಹರಿಯೇ ಎಲ್ಲರ ಬಿಂಬನು.

*'ತದಧೀನಸ್ತತ್ಸದೃಶೋ ಹರೇರ್ಜೀವೋ ನ ಸಂಶಯಃ।*
*ಪ್ರತಿಬಿಂಬಸ್ಯ ಶಬ್ದಾರ್ಥೋ ಹ್ಯಯಮೇವ ನ ಸಂಶಯಃ॥'* (ಬ್ರಹ್ಮಕಾಂಡ)

—ಜೀವನು ಪ್ರತಿಬಿಂಬನೆಂದರೆ ಬಿಂಬಾಧೀನನು ಮತ್ತು ಕಿಂಚಿತ್ (ಸ್ವಲ್ಪ-ಮಟ್ಟಿಗೆ) ಬಿಂಬಸದೃಶನು. ಇದೇ **'ಪ್ರತಿಬಿಂಬ'** ಶಬ್ದಾರ್ಥವೆಂದು ಹೇಳಲ್ಪಡುತ್ತದೆ. **ಬಿಂಬಾಧೀನನೆಂದರೆ,** ಅಂತರ್ಯಾಮಿಯಾದ ಶ್ರೀಹರಿಯ ಅಧೀನವಾದ ಸಕಲ ವ್ಯಾಪಾರ ಕ್ರಿಯೆಗಳುಳ್ಳವನು. ಇದರ ವಿವರಣೆಯು, ಹೀಗಿದೆ:

*'ಪ್ರತಿಬಿಂಬಕ್ರಿಯಾಯಾಃ ಬಿಂಬಕ್ರಿಯಾನುಸ್ಯೂತತಾ।*
*ಯದಾಶ್ನಾತಿ ತದಾಶ್ನಾತಿ ಯದಾ ವಕ್ತಿ ತದೈವ ಸಃ॥*
*ಕಿಮತ್ರ ಬಹುನೋಽಕ್ತೇನ ನಾಕೃತಂ ಕ್ರಿಯತೇ ಜನೈಃ॥'* (ಶಾಂಡಿಲ್ಯತತ್ವ)

—ಬಿಂಬನು ಉಂಡರೆ ಪ್ರತಿಬಿಂಬನು ಉಣ್ಣುವನು, ಮಾತನಾಡಿದರೆ ನುಡಿಯುವನು; ಹೆಚ್ಚು ಹೇಳನು, ಬಿಂಬ ಮಾಡದ ಏನನ್ನೂ ಪ್ರತಿಬಿಂಬನು ಮಾಡುವುದಿಲ್ಲ. ಪ್ರತಿಬಿಂಬದ ಪ್ರತಿಯೊಂದು ಕ್ರಿಯೆಯೂ ಬಿಂಬಕ್ರಿಯಾನುಸ್ಯೂತವಾದುದು—ಎಂದರೆ ಬಿಂಬಕ್ರಿಯಾಪ್ರವೇಶವುಳ್ಳದ್ದು—ಒಳಸೂಸಿರುವುದೆಂದರ್ಥ.

**ಕಾಲಕಾಲದಿ ಮಳೆ ಕರಿಸಿದ ಇಳೆಯೊಳು**
**ಕಾಲಕ್ಕೆ ಬೆಳೆ ಬೆಳಿಸಿದ**
**ಕಾಲಕಾಲದಿ ಕಳವ ನಿಲಿಸಿದ ಶ್ರೀಕೃಷ್ಣ**
**ಕಾಲದಿ ಫಲವ ಮೆಲ್ಲಿಸಿದ** ॥೬॥

**ಅರ್ಥ:** ಕಾಲಕಾಲದಿ—ಆಯಾ ಕಾಲದಲ್ಲಿ (ಯೋಗ್ಯಕಾಲದಲ್ಲಿ), ಮಳೆ-ಕರಿಸಿದ—ಮಳೆಯನ್ನು ಸುರಿಸುವನು; ಇಳೆಯೊಳು—ಭೂಮಿಯಲ್ಲಿ, ಕಾಲಕ್ಕೆ ತಕ್ಕ ಕಾಲದಲ್ಲಿ, ಬೆಳೆಬೆಳಿಸಿದ—ಫಲವನ್ನು (ಫಸಲನ್ನು) ಬೆಳೆಸುತ್ತಾನೆ (ಕೊಡುತ್ತಾನೆ); ಕಾಲಕಾಲದಿ—ಆಯಾ ಕಾಲದಲ್ಲಿ (ಯುಗಾನುಸಾರವಾಗಿ), ಕಳವ ನಿಲಿಸಿದ—ಕಳ್ಳತನ ಮುಂತಾದವುಗಳನ್ನು ನಿಲ್ಲಿಸುವನು (ಇಲ್ಲದಂತೆ ಮಾಡುತ್ತಾನೆ); ಶ್ರೀಕೃಷ್ಣ—ಪರಮಾತ್ಮನು, ಕಾಲದಿ—ಸಕಾಲದಲ್ಲಿ, ಫಲವ—(ಕರ್ಮಾನುಸಾರ) ಫಲಗಳನ್ನು, ಮೆಲ್ಲಿಸಿದ—(ಜೀವರಿಗೆ) ಉಣಿಸುವನು.

ಕೃತಯುಗದಲ್ಲಿ ಶ್ರೀಹರಿಯು ಪ್ರಜೆಗಳನ್ನು ಹೇಗಿಟ್ಟು ರಕ್ಷಿಸುವನೆಂಬುದನ್ನು ಮುಂದಿನ ನುಡಿಗಳಲ್ಲಿ ವರ್ಣಿಸುತ್ತಾರೆ:

**ವಿಧವೆಯರಿಲ್ಲ ಹರಿ ಪಾಲಿಸೊ ಕೃತಯುಗದಿ**
**ವಿಧುರರೆಂಬ ನರರಿಲ್ಲ**
**ಮದುವೆಯಿಲ್ಲದವರಿಲ್ಲ ವಿಧಿಯ ಮಿಕ್ಕುವರಿಲ್ಲ**
**ಅಧಮರೆಂಬ ನರರಿಲ್ಲ** ॥೭॥

**ಅರ್ಥ:** ಹರಿ ಪಾಲಿಸೊ—ಶ್ರೀಹರಿಯು ರಕ್ಷಿಸುವ, ಕೃತಯುಗದಿ—ಕೃತಯುಗದಲ್ಲಿ, ವಿಧವೆಯರಿಲ್ಲ—(ಪ್ರಜೆಗಳಲ್ಲಿ) ವಿಧವೆಯರಾದ ಸ್ತ್ರೀಯರಿಲ್ಲ; ವಿಧುರರೆಂಬ ನರರಿಲ್ಲ—ಹೆಂಡತಿಯ ಕಳಕೊಂಡ ಪುರುಷರಿಲ್ಲ; ಮದುವೆಯಿಲ್ಲದವರಿಲ್ಲ—(ವಿಧವೆ-ವಿಧುರರಿಲ್ಲವೆಂದರೆ ಯಾರೂ ಮದುವೆಯನ್ನೇ ಮಾಡಿಕೊಳ್ಳುವುದಿಲ್ಲವೇ ಎಂದರೆ) ಮದುವೆಯಾಗದವರೇ ಇಲ್ಲ; (ಬ್ರಹ್ಮಚಾರಿ ಮತ್ತು ಯತಿಗಳೇ ಇಲ್ಲವೆಂದರ್ಥವಲ್ಲ); ವಿಧಿಯ—ವಿಹಿತಕರ್ಮಾಚರಣೆಯನ್ನು, ಮಿಕ್ಕುವರಿಲ್ಲ—ಅತಿ ಕ್ರಮಿಸುವರಿಲ್ಲ—(ಎಲ್ಲರೂ ಸ್ವಾಭಾವಿಕವಾಗಿಯೇ — ರಾಜಶಾಸನಾದಿ ನಿರ್ಬಂಧಗಳ ಆವಶ್ಯಕತೆಯಿಲ್ಲದೇ—ವಿಧ್ಯುಕ್ತಕರ್ಮಗಳನ್ನು ತಪ್ಪದೇ ಆಚರಿಸುತ್ತಾರೆ); ಅಧಮರೆಂಬ ನರರಿಲ್ಲ—(ಈ ಕಾರಣದಿಂದ) ಪತಿತರೆಂಬುವರೇ ಇಲ್ಲ.

**ಬಂಜೆಯರಿಲ್ಲ ಪತಿಗಂಜದ ಸತಿಯರಿಲ್ಲ**
**ಸಂಜೆಲಿ ಮಲಗುವವರಿಲ್ಲ**
**ಕಂಜನಾಭನ ಮರೆವವರಿಲ್ಲ ಅತಿಥಿಗಳು**
**ಭುಂಜಿಸದೆ ಉಂಬುವವರಿಲ್ಲ** ॥೮॥

**ಅರ್ಥ:** ಬಂಜೆಯರಿಲ್ಲ—ಮಕ್ಕಳಿಲ್ಲದ ಸ್ತ್ರೀಯರಿಲ್ಲ; ಪತಿಗೆ—ತನ್ನ ಗಂಡನಿಗೆ, ಅಂಜದ—ಹೆದರದ, ಸತಿಯರಿಲ್ಲ—ಹೆಂಗಸರಿಲ್ಲ (ಎಲ್ಲರೂ ಪತಿಸೇವಾಪರಾಯಣೆಯರು—ಭಯಭಕ್ತಿಗಳುಳ್ಳವರು); ಸಂಜೆಲಿ—ಸಾಯಂಕಾಲದಲ್ಲಿ (ಉಪಲಕ್ಷಣದಿಂದ, ಅಕಾಲದಲ್ಲಿ—ಯೋಗ್ಯವಲ್ಲದ ಕಾಲದಲ್ಲಿ), ಮಲಗುವವರಿಲ್ಲ—ನಿದ್ರಿಸುವವರಿಲ್ಲ (ನಿಷಿದ್ಧವನ್ನು ಯಾರೂ ಆಚರಿಸುವುದಿಲ್ಲೆಂದರ್ಥ); ಕಂಜನಾಭನ—ಪದ್ಮನಾಭನ (ಶ್ರೀಹರಿಯ), ಮರೆವವರಿಲ್ಲ—ಮರೆಯುವವರಿಲ್ಲ (ಹರಿವಿಸ್ಮರಣೆಯೆಂಬುದು ಯಾರಿಗೂ ಇಲ್ಲ); ಅತಿಥಿಗಳು—ಕಾಲಕ್ಕೆ ಬಂದ ಅತಿಥಿಗಳು, ಭುಂಜಿಸದೆ—ಊಟಮಾಡದೇ—(ಅವರಿಗೆ ಭೋಜನಮಾಡಿಸದೆ), ಉಂಬುವವರಿಲ್ಲ—ಊಟಮಾಡುವರು ಯಾರೂ ಇಲ್ಲ.

**ಅಂಧಪಂಗುಗಳಿಲ್ಲ ನೂರು ವರುಷದಿಂ**
**ಕುಂದಿ ಬದುಕೊ ಮನುಜರಿಲ್ಲ**
**ನಿಂದ್ಯಮಾರ್ಗದಿ ನಡೆಯುವವರಿಲ್ಲ ನಮ್ಮ ಶ್ರೀಗೋ-**
**ವಿಂದ ಪಾಲಿಪ ಕಾಲದಲ್ಲಿ ॥೯॥**

**ಅರ್ಥ:** ಅಂಧಪಂಗುಗಳಿಲ್ಲ—(ಕೃತಯುಗದಲ್ಲಿ) ಕುರುಡರು ಹೆಳವರು ಇರುವುದಿಲ್ಲ; ನೂರು ವರುಷದಿಂ—ನೂರು ವರ್ಷಕ್ಕಿಂತ (ಶತಶಬ್ದವು ೧೦೦, ೧,೦೦೦, ೧೦,೦೦೦ ಇತ್ಯಾದಿ ಬಹುಸಂಖ್ಯಾವಾದ್ದರಿಂದ)—ಯುಗಾನುಸಾರವಾದ ಪೂರ್ಣಾಯುಷ್ಯಕ್ಕಿಂತ, ಕುಂದಿ—ಕಡಿಮೆಯಾಗಿ, ಬದುಕೊ ಮನುಜರಿಲ್ಲ—ಬದುಕುವ ಮನುಷ್ಯರಿಲ್ಲ; ನಮ್ಮ ಶ್ರೀಗೋವಿಂದ ಪಾಲಿಪ ಕಾಲದಲ್ಲಿ—ಶ್ರೀಹರಿಯು ರಕ್ಷಿಸುವ ಈ ಯುಗದಲ್ಲಿ, ನಿಂದ್ಯ-ಮಾರ್ಗದಿ—ದುರ್ಮಾರ್ಗದಲ್ಲಿ, ನಡೆಯುವವರಿಲ್ಲ—ನಡೆಯುವವರೇ ಇಲ್ಲ.

**ವಿಶೇಷಾಂಶ:** (೧) ಯದ್ಯಪಿ, ಕೃತಯುಗದ ಪ್ರಜೆಗಳಲ್ಲಿ ಸುಜೀವರಿಗೂ ದುಃಖಕಾರಣಗಳಾದ ಹಿಂದಿನ ಪಾಪಕರ್ಮಗಳಿರಬಹುದು; ಆದರೆ ಆ ಕಾಲ-ದಲ್ಲಿ ಶ್ರೀಹರಿಯು ದುಃಖಫಲವನ್ನುಣ್ಣುವಂತೆ ಮಾಡುವುದಿಲ್ಲ. ಕರ್ಮ ಫಲ-ಗಳನ್ನು ಜೀವರ ಭೋಗಕ್ಕೆ ತಂದುಕೊಡುವವನೂ ಸ್ವತಂತ್ರನಾದ ಸರ್ವಕರ್ತ-ನಾದ ಶ್ರೀಹರಿಯೇ.

(೨) ಶ್ರೀರಾಮಚಂದ್ರನು ಪಟ್ಟಾಭಿಷಿಕ್ತನಾಗಿ ಪ್ರಜೆಗಳನ್ನು ಪಾಲಿಸುತ್ತಿರಲು ಆಗ ತ್ರೇತಾಯುಗವಾದರೂ, ಕೃತಯುಗದ ಪರಿಸ್ಥಿತಿಗಳೇ ಇದ್ದುವೆಂದು ರಾಮ-ರಾಜ್ಯದ ಪ್ರಭಾವವು ವರ್ಣಿತವಾಗಿದೆ. '*ಜನೋಽಖಿಲೋ ವಿಷ್ಣುಪರೋ-ಬಭೂವ ನ ಧರ್ಮಹಾನಿಶ್ಚ ಬಭೂವ ಕಸ್ಯಚಿತ್। ಗುಣೈಶ್ಚ ಸರ್ವೈರುದಿತಾಶ್ಚ ಸರ್ವೇ ಯಥಾ ಯಥಾ ಯೋಗ್ಯತಯೋಚ್ಚ ನೀಚಾಃ॥ ಸ್ತ್ರಿಯೋ ನ ಚಾ ಸನ್ವಿಧವಾಃ ಕಥಂಚಿತ್ ನ ವೈ ಪುಮಾಂಸೋ ವಿಧುರಾ ಬಭೂವುಃ। ನಾನಿಷ್ಟ-ಯೋಗಶ್ಚ ಬಭೂವ ಕಸ್ಯಚಿನ್ನ ಚೇಷ್ಟಹಾನಿರ್ನ ಚ ಪೂರ್ವಮೃತ್ಯುಃ॥*' (ಭಾ.ತಾ.ನಿ) ಎಂದರೆ, 'ಸಕಲಪ್ರಜೆಗಳು ವಿಷ್ಣುಪರರಾಗಿ ಇರುತ್ತಿದ್ದರು; ಯಾರೂ ಧರ್ಮಚ್ಯುತರಾಗುತ್ತಿರಲಿಲ್ಲ; ಎಲ್ಲರೂ, ತಂತಮ್ಮ ಉಚ್ಚನೀಚ ಭಾವದ ತಾರತಮ್ಯಾನುಸಾರವಾಗಿರುತ್ತಿದ್ದರು: ವಿಧವೆಯರಾಗಲಿ, ವಿಧುರ-ರಾಗಲಿ ಇರುತ್ತಿರಲಿಲ್ಲ; ಯಾರಿಗೂ ಇಷ್ಟಹಾನಿ ಮತ್ತು ಅನಿಷ್ಟಪ್ರಾಪ್ತಿಯಾಗು-ತ್ತಿರಲಿಲ್ಲ; ಪೂರ್ವಮೃತ್ಯುರಹಿತರೂ ಪೂರ್ಣಾಯುಷ್ಮಂತರೇ ಆಗಿರುತ್ತಿದ್ದರು.

—'ಎಲ್ಲರೂ ಪೂರ್ಣಾಯುಷ್ಮಂತರಾದರೆ, ಸ್ತ್ರೀಯರೂ ಪುರುಷರೂ ಸಮಾನ-ವಾದ ಆಯುಷ್ಯವುಳ್ಳವರಾಗಬೇಕು. ಹಾಗಾದರೆ ವಿಧವೆಯರೂ, ವಿಧುರರೂ ಇಲ್ಲವೆಂಬುದು ಹೇಗೆ ಕೂಡುತ್ತದೆ? ದಂಪತಿಗಳು ಒಂದೇ ಕ್ಷಣದಲ್ಲಿ ಮೃತ-ರಾಗುತ್ತಿದ್ದರೆಂದು ತಿಳಿಯಬೇಕಾಗುವುದಿಲ್ಲವೇ? ಎಂಬ ಸಂಶಯವನ್ನು, *'ಸ್ತ್ರೀಣಾಂ ಪುಂಸಾಂ ಚ ಸಮಾನಾಯುಷ್ಟ್ವೇ ಸಹಸ್ರಾಯುಷ್ಟ್ವಾಯೋಗಃ ಇತಿ ಚೇತ್, ಪುಂಸಾಮೇವ ಅಯಂ ನಿಯಮಃ ಸ್ತ್ರೀಣಾಂ ಕಿಂಚಿದೂನತ್ವೇಪಿ ನ ಹಾನಿಃ'* (ಭಾವಪ್ರಕಾಶಿಕಾ)—'ಸ್ತ್ರೀಪುರುಷರಿಬ್ಬರಿಗೂ ಸಮಾನವಾದ ಆಯುಷ್ಯ-ವೆಂಬುದು ಹೇಗೆ ಕೂಡುತ್ತದೆಂಬ ಸಂಶಯಬೇಡ; ಸಹಸ್ರವರ್ಷ ಆಯುಷ್ಯ-ವೆಂಬುದು ಪುರುಷರಿಗೆ—ಸ್ತ್ರೀಯರಿಗೆ ಅತ್ಯಲ್ಪಕಡಿಮೆ, ಎಂದಿಟ್ಟುಕೊಳ್ಳುವುದ ರಿಂದ ಏನೂ ಹಾನಿಯಿಲ್ಲ—ಪೂರ್ಣಾಯುಷ್ಮಂತರೆಂಬ ಕೃತಯುಗದ ನಿಯಮಕ್ಕೆ ಹಾನಿಯಿಲ್ಲ'ವೆಂದು ಪರಿಹಾರ ಮಾಡಿಕೊಳ್ಳಬೇಕು.

ಕೃತಯುಗದ ಪ್ರಜೆಗಳು ಧರ್ಮಮಾರ್ಗದಲ್ಲಿರುತ್ತ, ಯಥೇಷ್ಟವಾದ ಸುಖ-ಭೋಗಗಳನ್ನು ಅನುಭವಿಸುವ ಪರಿಯನ್ನು ಮುಂದಿನ ಕೆಲವು ನುಡಿಗಳಲ್ಲಿ ವರ್ಣಿಸುತ್ತಾರೆ: ಮುಂದಿನ ತ್ರೇತಾದಿ ಯುಗಗಳಲ್ಲಿ ಧರ್ಮವು ಹ್ರಾಸವಾಗುತ್ತ, ಅಧರ್ಮವು ಹೆಚ್ಚುತ್ತ ಹೋಗುವುದೆಂಬುದು ನಿಜ. ಶ್ರೀಹರಿಯು, ಯುಗಾನು-ಸಾರವಾಗಿ ಪ್ರಜೆಗಳನ್ನು ನಡೆಸಿ, ಅವರವರ ಗತಿಗಳನ್ನು ಮುಟ್ಟಿಸುತ್ತಾ-ನೆಂಬುದು, ಸತ್ಯಸಂಕಲ್ಪನಾದ ಆತನ ಪಾಲನಕ್ರಮವು. ಕೃತಯುಗವನ್ನುಳಿದು ಇತರ ಯುಗಗಳಲ್ಲಿ ಶ್ರೀಹರಿಯು ರಕ್ಷಕನಲ್ಲವೆಂದು ತಿಳಿಯಕೂಡದು. ಸರ್ವದಾ ಸರ್ವರಕ್ಷಕನು ಆತನೇ. ರಕ್ಷಕತ್ವದ ಮಹತ್ವವು ಹೆಚ್ಚು ಸ್ಪಷ್ಟವಾಗಿ ತೋರುವ ಕೃತಯುಗದ ರಕ್ಷಣಪ್ರಕಾರವು ವರ್ಣಿಸಲ್ಪಟ್ಟಿದೆ.

**ಎಲ್ಲಿ ನೋಡಲು ವೇದಘೋಷಗಳು ಮ-**
**ತ್ತೆಲ್ಲಿ ನೋಡಲು ತಪಸ್ವಿಗಳು**
**ಎಲ್ಲಿ ನೋಡಲು ಧನಧಾನ್ಯಗಳು ಮ-**
**ತ್ತೆಲ್ಲಿ ನೋಡಲು ಕೃಷ್ಣಪರರು** ॥೧೦॥

[ಇಲ್ಲಿಂದ ೨೫ನೇ ನುಡಿಯವರೆಗಿನ ಗ್ರಂಥಭಾಗವು ಸ್ಪಷ್ಟವಾದ ಸುಲಭ-ಶೈಲಿಯಲ್ಲಿರುವುದರಿಂದ, ಅವುಗಳಲ್ಲಿ ಕೆಲವು ಶಬ್ದಗಳಿಗೆ ಮಾತ್ರ ಮತ್ತು ಸಂದರ್ಭೋಚಿತವಾಗಿ ತಿಳಿಯಬೇಕಾದ ವಿಶೇಷಗಳನ್ನು ಮಾತ್ರ ಸೂಚಿಸ-ಲಾಗುತ್ತದೆ.]

**ಅರ್ಥ:** ಎಲ್ಲಿ ನೋಡಲು—ನೋಡುವ ಬಹುಸ್ಥಳಗಳಲ್ಲಿ (ಸರ್ವತ್ರವೆಂದಲ್ಲ); ಮತ್ತೆಲ್ಲಿ ನೋಡಲು—ತಿರುಗಿ ನೋಡುವ (ದೃಷ್ಟಿಹರಿಸಬಹುದಾದ) ಬೇರೆ ಕಡೆಗಳಲ್ಲಿ; ತಪಸ್ವಿಗಳು—ಧ್ಯಾನದಲ್ಲಿರುವವರು; ಕೃಷ್ಣಪರರು—ನಾನಾಪ್ರಕಾರದ ಹರಿಸೇವೆಯಲ್ಲಿ ತೊಡಗಿರುವರು.

**ಎಲ್ಲಿ ನೋಡಲು ದಾನ ಎಲ್ಲಿ ನೋಡಲು ಗಾನ**
**ಎಲ್ಲಿ ನೋಡಲು ಹರಿಧ್ಯಾನ**
**ಎಲ್ಲಿ ನೋಡಲು ಸ್ನಾನ ಎಲ್ಲಿ ನೋಡಲು ಜ್ಞಾನ**
**ಎಲ್ಲಿ ನೋಡಲು ವ್ಯಾಖ್ಯಾನ** ॥೧೧॥

**ಅರ್ಥ:** ಎಲ್ಲಿ ನೋಡಲು ಜ್ಞಾನ—ನೋಡುವ ಬಹುಸ್ಥಳಗಳಲ್ಲಿ ಶಾಸ್ತ್ರಶ್ರವಣ—ಪ್ರವಚನಾದಿ ಜ್ಞಾನಕಾರ್ಯಗಳು.

**ಎಲ್ಲಿ ನೋಡಲು ಭಕ್ತಿ ಎಲ್ಲಿ ನೋಡಲು ಭುಕ್ತಿ**
**ಎಲ್ಲಿ ನೋಡಲು ವಿರಕ್ತಿ**
**ಎಲ್ಲಿ ನೋಡಲು ಯುಕ್ತಿ ಎಲ್ಲಿ ನೋಡಲು ಶಕ್ತಿ**
**ಎಲ್ಲಿ ನೋಡಲು ವಿಪ್ರವೃತ್ತಿ** ॥೧೨॥

**ಅರ್ಥ:** ಎಲ್ಲಿ ನೋಡಲು ಭಕ್ತಿ—ಜನರೆಲ್ಲರೂ ಶ್ರೀಹರಿಯಲ್ಲಿ ಭಕ್ತಿಯುಳ್ಳವರು; ಭುಕ್ತಿ—ಅನ್ನಾಹಾರಾದಿಗಳು; ಯುಕ್ತಿ—ತತ್ವವಿಷಯಕ ಯುಕ್ತಿಸಹಿತ ವಿವೇಚನಗಳು; ಶಕ್ತಿ—ಪ್ರಜೆಗಳೆಲ್ಲರೂ ದೈಹಿಕ ಬೌದ್ಧಿಕ ಬಲಶಾಲಿಗಳು; ವಿಪ್ರವೃತ್ತಿ—ವಿಶೇಷವಾಗಿ ಅಧಿಕ ಫಲವುಳ್ಳ ಕರ್ಮಗಳಲ್ಲಿ ಆಸಕ್ತರು ಅಥವಾ ವಿಗತವಾದ (ಅಪೇಕ್ಷಾರಹಿತವಾದ—ನಿಷ್ಕಾಮ) ಫಲಾಶಾಯುಕ್ತ ಕರ್ಮಾಸಕ್ತರು ಅಥವಾ ವಿಪ್ರ—ಬ್ರಾಹ್ಮಣಯೋಗ್ಯ ಕೃತಿಗಳುಳ್ಳವರು (ಬ್ರಹ್ಮಜ್ಞಾನಸಾಧಕ ವ್ಯಾಪಾರಗಳುಳ್ಳವರು).

**ಎಲ್ಲಿ ನೋಡಲು ದಿವ್ಯಸ್ಥಾನಂಗಳು ಮ-**
**ತ್ತೆಲ್ಲಿ ನೋಡಲು ರಥೋತ್ಸವವು**
**ಎಲ್ಲಿ ನೋಡಲು ಮುತ್ತು ರತ್ನದ ಸರಗಳು**
**ಎಲ್ಲಿ ನೋಡಲು ದಿವ್ಯನಗರ** ॥೧೩॥

**ಅರ್ಥ:** ದಿವ್ಯಸ್ಥಾನಂಗಳು—ದೇವಾಲಯಗಳು; ದಿವ್ಯನಗರ—ಅನ್ಯಯುಗ ವಿಲಕ್ಷಣಸಂಪದ್ಭರಿತ ಪಟ್ಟಣಗಳು.

**ಎಲ್ಲಿ ನೋಡಲು ಪರಿಪರಿಯ ನಾಟ್ಯಂಗಳು ಮ-**
**ತ್ತಲ್ಲಿ ನೋಡಲು ನೃತ್ಯವಾದ್ಯ**
**ಎಲ್ಲಿ ನೋಡಲು ಚಿತ್ರ ಭೂಷಣಂಗಳ ತೇಜ**
**ಚೆಲುವನಾರೀನರಸ್ತೋಮ** ॥೧೪॥

**ಅರ್ಥ:** ತೇಜ-ಕಾಂತಿ; ಚೆಲುವ-ಸುಂದರ.

**ಗಂಧಕರ್ಪೂರಕುಂಕುಮಾದಿ ರಂಜಿಪರಾಗ-**
**ದಿಂದ ಮಾಡಿದರು ಓಕಳಿಯ**
**ಚಂದದಿರೊಬ್ಬೊಬ್ಬರಲ್ಲಲ್ಲೆ ಚೆಲ್ಲಿದ**
**ಚಂದ್ರವದನೆಯರುತ್ಸಹದಿ** ॥೧೫॥

**ಅರ್ಥ:** ರಂಜಿಪ—ರಂಜಿಸುವ; ರಾಗದಿಂದ—ಕೆಂಪುವರ್ಣದಿಂದ, ಅಥವಾ ರಂಜಿಪ ಓಕಳಿಯನ್ನು, ರಾಗದಿಂದ—ಸಂತೋಷದಿಂದ (ಪ್ರೇಮದಿಂದ); ಚಂದದಿ ಇರೆ ಒಬ್ಬೊಬ್ಬರು—ಸಂತೋಷದಿಂದ ಕ್ರೀಡಿಸುವ ಪ್ರತಿಯೊಬ್ಬರೂ ಅಥವಾ ಪರಸ್ಪರವಾಗಿ; ಉತ್ಸಹದಿ—ಉತ್ಸಾಹದಿಂದ.

**ಒಂದು ಗರ್ಭದಿ ಕೂಸು ಒಂದು ಶಿಶು ಉಡಿಯೊಳಗೆ**
**ಒಂದು ಬೆನ್ನಿಲಿ ಕಟ್ಟಿಕೊಂಡು**
**ಒಂದನಾಡಿಸುತಲಿ ಇಂದುಮುಖಿಯರ**
**ಸಂದಣಿ ಸಂದಣಿ ಮನೆಮನೆಯಲ್ಲಿ** ॥೧೬॥

**ಅರ್ಥ:** ಸಂದಣಿ—ಸಂದಣಿ (ಗುಂಪು); ಮಕ್ಕಳ ಸುಖದಿಂದಲೂ ಪ್ರಜೆ-ಗಳು ಪೂರ್ಣರು—ಒಬ್ಬ ಸ್ತ್ರೀ ಗರ್ಭಿಣಿಯಾಗಿದ್ದರೆ ಮತ್ತೊಬ್ಬಳಿಗೆ ಉಡಿಯಲ್ಲಿ ಶಿಶು ಇತ್ಯಾದಿ. **ಅಥವಾ** ಒಬ್ಬ ಸ್ತ್ರೀಯಳೇ, ಆಟವಾಡುತ್ತ ನಲಿಯುವ ಮಕ್ಕಳನ್ನೂ, ಸ್ತನ್ಯಪಾನ ಮಾಡುತ್ತ ಮುಖನೋಡಿ ಮನಹಿಗ್ಗಿಸುವ ಶಿಶುವನ್ನು ಗರ್ಭದಲ್ಲಿ ಶಿಶುವನ್ನೂ ಉಳ್ಳವಳು, ಎಂದರೆ ಮನೆತುಂಬ ಮಕ್ಕಳುಳ್ಳವಳು.

**ಒಳಗೆ ಮೊಸರು ಕಡೆವ ಸಂಭ್ರಮ ಹೊರಗೆ ಆ-**
**ಕಳ ಕರೆವ ರವಸ ತುಂಬಿಹದೋ**
**ಅಳುವ ಮಕ್ಕಳ ತೊಟ್ಟಿಲೊಳಗಿಟ್ಟು ಪಾಡುವ**
**ಲಲನೆಯರ್ಗಂಭೀರವಾದ** ॥೧೭॥

**ಅರ್ಥ:** ರವಸ—ರಭಸ (ವೇಗಯುಕ್ತ ಧ್ವನಿವಿಶೇಷ); ಲಲನೆಯರ್ಗಂಭೀರ-ವಾದ—ಲಲನೆಯರ ಗಂಭೀರವಾದ ಪ್ರೇಮದ ಮಾತುಕತೆಗಳು.

**ಯತಿಗಳ ಪೂಜೆ ವಿಪ್ರರ ಪೂಜೆ ಮನೆಮನೆಯ**
**ಅತಿಥಿ ಅಭ್ಯಾಗತರ ಪೂಜೆ**
**ಶ್ರುತಿಪುರಾಣವು ನಿತ್ಯನೈಮಿತ್ತ ಕರ್ಮಗಳು**
**ವಿತತವಾಯಿತು ಲೋಕದೊಳಗೇ ॥೧೮॥**

**ಸೂಚನೆ:** ಇಲ್ಲಿನ ಮುಂದಿನ ೬ ನುಡಿಗಳಲ್ಲಿ ಮನೆಮನೆಗಳಲ್ಲಿ ನಡೆಯುವ ಮಂಗಳೋತ್ಸವಗಳ ವರ್ಣನೆಯಿದೆ.

**ಅರ್ಥ:** ಮನೆಮನೆಯ— ಒಂದೊಂದು ಮನೆಯಲ್ಲಿಯೂ; ನಿತ್ಯನೈಮಿತ್ತಿಕ-ಕರ್ಮಗಳು— ಸಂಧ್ಯಾದಿ (ತುಳಸೀಪೂಜೆ ಮುಂತಾದ) ನಿತ್ಯಕರ್ಮಗಳು ಮತ್ತು ನೈಮಿತ್ತಿಕ (ವ್ರತ— ಶ್ರಾದ್ಧಾದಿ ಕಾಲವಿಶೇಷಗಳಲ್ಲಿ ಆಚರಿಸುವ) ಕರ್ಮ ಕಲಾಪಗಳು, ವಿತತವಾಯಿತು— ವಿಸ್ತಾರವಾಗಿ ನಡೆಯುತ್ತಿರುವುವು.

**ಗಂಡುಮಕ್ಕಳ ಮದುವೆ ಮುಂಜಿಗಳು ಅಲ್ಲಿ**
**ತಂಡ ತಂಡದ ಕನ್ನಿಕೆಯರ**
**ಉಂಡುಟ್ಟುಕೊಂಬುವುದಕ್ಕೆ ಉಳ್ಳ ಮನೆಗಳ**
**ಕಂಡು ಕೂಡ್ರುವ ಸಂಭ್ರಮವನ್ನೆ ॥೧೯॥**

**ಅರ್ಥ:** ಅಲ್ಲಲ್ಲಿ ನಡೆಯುತ್ತಿರುವ ಉಪನಯನ ವಿವಾಹಾದಿ ಶುಭ-ಕರ್ಮಗಳ ಸಂಭ್ರಮವನ್ನು ಕಾಣುತ್ತೇವೆನ್ನುತ್ತಾರೆ. ತಂಡತಂಡದ— ಗುಂಪು-ಗುಂಪಾದ; ಉಂಡುಟ್ಟುಕೊಳ್ಳುವುದಕ್ಕೆ ಉಳ್ಳ— ಅನ್ನವಸ್ತ್ರಗಳಿಗೆ ಕೊರತೆಯಿಲ್ಲದ; ಕಂಡು ಕೂಡ್ರುವ ಸಂಭ್ರಮ— ಪರಸ್ಪರ ಕಂಡು ಕೂತು ಸಂತೋಷದಿಂದ ಮಾತನಾಡುವ ಸಂಭ್ರಮ.

**ನವಗ್ರಹಹೋಮ ನಾಂದಿಯ ಪೂಜೆಯನೆ ಮಾಳ್ಪ**
**ಭುವನದೇವರಿಗೆ ದಕ್ಷಿಣೆಯ**
**ತವಕದಿಂದಲಿ ಕೊಡಲು ಮಂಗಳಾರತಿಯನೆ-**
**ತ್ತುವರು ಮುದದಿ ಮುತ್ತೈದೆಯರು ॥೨೦॥**

**ಅರ್ಥ:** ಭುವನದೇವರಿಗೆ— ಬ್ರಾಹ್ಮಣರಿಗೆ (ಭೂಸುರರೆಂದರೆ ಬ್ರಾಹ್ಮಣರು); ತವಕದಿಂದಲಿ— ಸಂಭ್ರಮದಿಂದ.

**ಆಯತ್ತವಾದ ಜೋಯಿಸರು ಓದುವ**
**ಪ್ರಿಯದಿ ಮಂಗಳಾಷ್ಟಕಗಳ**

**ಧವಲಶೋಭನಂಗಳ**
**ಗಾಯನ ತುಂಬಿತುಳುಕಿದವು ॥೨೧॥**

**ಅರ್ಥ:** ಆಯತ್ತವಾದ—ಸಿದ್ಧರಾದ (ನಿಯತರಾದ—ಗೊತ್ತಾದ); ಆಯ-ತಾಕ್ಷಿಯರ—ವಿಶಾಲಾಕ್ಷಿಯರ; ಧವಲ—ಪವಿತ್ರ; ಶೋಭನಂಗಳ ಗಾಯನ—ಮಂಗಳಹಾಡುವಿಕೆ.

**ಮುತ್ತೈದೆಯರು ಬಂದು ಮುತ್ತು ರತ್ನಗಳಿಂದ**
**ಅರ್ಥಿಲಿ ಭಿಕ್ಷವಿಕ್ಕುವರು**
**ತೆತ್ತಿಗರೆಲ್ಲರು ಕೂಡಿ ಉತ್ಸವದೊಳು**
**ಸುತ್ತಿಂದ ತಂದುಕೊಡುವರು ॥೨೨॥**

**ಅರ್ಥ:** ಅರ್ಥಿಲಿ—ಪ್ರೀತಿಯಿಂದ (ಅರ್ಥಿ—ಆಸಕ್ತಿ—ಅರ್ತಿ—ಅಭಿಮಾನ—ವಿಶ್ವಾಸ); ಭಿಕ್ಷವಿಕ್ಕುವರು—ವಟುಗಳಿಗೆ ಭಿಕ್ಷೆಯನ್ನು ಹಾಕುವರು, ತೆತ್ತಿಗ-ರೆಲ್ಲರು—ಪರಿವಾರದವರೆಲ್ಲರೂ (ಉಡುಗೊರೆ ಕೊಡುವವರೆಲ್ಲರೂ); ಸುತ್ತಿಂದ—ಸುತ್ತಲಿಂದ.

**ಪರಿಪರಿ ಭಕ್ಷರಸಾಯನಗಳು ಮಾಡಿ**
**ಪರಿಪರಿ ಕಲಸೋಗರಗಳು**
**ವಿರಚಿಸಿ ವಿಪ್ರರೂಡಿ ಉತ್ಸಹದೊಳು**
**ಸರಸದಿಂದುಂಬೊ ಸಂಭ್ರಮವ ॥೨೩॥**

**ಅರ್ಥ:** ಕಲಸೋಗರಗಳು—ಕಲಸನ್ನಗಳು (ಕಲಿಸಿದ ಅನ್ನಗಳು—ಕೇಸರಿ ಭಾತು, ಚಿತ್ರಾನ್ನ ಇತ್ಯಾದಿ). ಊಡಿ—(ಗಂಧ) ಲೇಪಿಸಿಕೊಂಡು;

**ಮಂಗಳದೇವಿಯರಸನ ಓದುವವರಿಗೆ**
**ಮಂಗಳವೀಯಲೆಂದೆಂದು-**
**ತ್ತುಂಗಭಾಗ್ಯಗಳು ಸಂಗಡಿಸುತಿರಲೆಂದು**
**ಅಂಗನೆಯರು ಹರಸಿದರು ॥೨೪॥**

**ಅರ್ಥ:** ಮಂಗಳದೇವಿಯ ಅರಸನ—ಲಕ್ಷ್ಮೀದೇವಿಯ ಒಡೆಯನ (ನಾರಾಯಣನ); ಓದುವವರಿಗೆ—(ಮಹಿಮೆಗಳನ್ನು) ಪ್ರವಚನಮಾಡು-ವವರಿಗೆ (ಈ ಗ್ರಂಥವನ್ನು ಪಠಿಸುವವರಿಗೆ), ಉತ್ತುಂಗ—ಶ್ರೇಷ್ಠವಾದ; ಸಂಗಡಿಸುತಿರಲಿ—ಲಭಿಸುತ್ತಿರಲಿ (ಮೇಲಿಂದಮೇಲೆ ಪೂರ್ಣವಾಗುತ್ತಿರಲಿ).

**ಚಕ್ರವರ್ತಿಗಳ ಸೃಷ್ಟಿಸಿ ಕಾಲದಿ ಭೂ-**
**ಚಕ್ರಪಾಲಕರ ಮಾಡಿಸಿದ**
**ವಿಕ್ರಮನವರಿಗೆ ಕೊಟ್ಟು ಮತ್ತವರಿಂದ**
**ಸತ್ಕರ್ಮಂಗಳ ನಡೆಸಿದ ॥೨೫॥**

ಈ ಮುಂದೆ ಶ್ರೀಹರಿಯು, ಅಂತರ್ಯಾಮಿರೂಪಗಳಿಂದಲೂ, ಅವತಾರ ರೂಪಗಳಿಂದಲೂ ಜಗತ್ತನ್ನು ಪಾಲಿಸುವ ಪ್ರಕಾರವನ್ನು ವರ್ಣಿಸುತ್ತಾರೆ:

**ಅರ್ಥ:** ಚಕ್ರವರ್ತಿಗಳ—ಚಕ್ರವರ್ತಿಗಳನ್ನು (ಆ ಪದದ ಗುಂಪಿನ ಜೀವ-ರನ್ನು), ಸೃಷ್ಟಿಸಿ—ಹುಟ್ಟಿಸಿ, ಕಾಲದಿ—ಆಯಾ ಕಾಲದಲ್ಲಿ, ಭೂಚಕ್ರಪಾಲಕರ—ಭೂಮಂಡಲದ ರಕ್ಷಕರನ್ನಾಗಿ, ಮಾಡಿಸಿದ—(ಅವರೊಳಗಿದ್ದು) ಮಾಡಿ-ದನು (ಅವರಿಂದ ರಕ್ಷಣೆಯನ್ನು ಮಾಡಿಸಿದನು); ವಿಕ್ರಮವನು—(ಸಪ್ತ-ದ್ವೀಪಗಳಿಂದ ಕೂಡಿದ ಎಲ್ಲ ಪೃಥ್ವಿಯನ್ನು ರಕ್ಷಿಸುವ) ಸಾಮರ್ಥ್ಯವನ್ನು, ಅವರಿಗೆ—ಆ ಚಕ್ರವರ್ತಿಗಳಿಗೆ, ಕೊಟ್ಟು—ಇತ್ತು, ಮತ್ತೆ—ಹಾಗೂ, ಅವ-ರಿಂದ—ಆ ಚಕ್ರವರ್ತಿಗಳಿಂದ, ಸತ್ಕರ್ಮಂಗಳ—(ನಾನಾ ಯಜ್ಞಾದಿ) ಸತ್ಕರ್ಮ-ಗಳನ್ನು, ನಡೆಸಿದ—ಮಾಡಿಸಿದನು (ಪ್ರಜೆಗಳೂ ಸತ್ಕರ್ಮಗಳಲ್ಲಿರುವಂತೆ ಮಾಡಿಸಿದನು).

**ಮತ್ಸ್ಯಕೂರ್ಮನಾದ ಮತ್ತೆ ಮಹಿಯನೆತ್ತಿ**
**ಕೀರ್ತಿಯ ಪಡೆದ ಕಿಂಕರನ**
**ಮೃತ್ಯುವ ಬಿಡಿಸಿದ ಮತ್ತೆ ಬಲಿಯ ಕಿತ್ತು**
**ಕ್ಷತ್ರಿಯರ ಉಕ್ಕು ತಗ್ಗಿಸಿದ ॥೨೬॥**

**ಅರ್ಥ:** ಮತ್ಸ್ಯಕೂರ್ಮನಾದ—(ಶ್ರೀಪದ್ಮನಾಭನು) ಮೀನು, ಕೂರ್ಮ ರೂಪಗಳಿಂದ ಅವತರಿಸಿದನು, (ವೇದಗಳನ್ನು ಕದ್ದ ದೈತ್ಯನನ್ನು ಮತ್ಸ್ಯರೂಪ-ದಿಂದ ಸಂಹರಿಸಿ, ಚತುರ್ಮುಖನಿಗೆ ವೇದಗಳನ್ನು ತಂದುಕೊಟ್ಟವನೇ ಕೂರ್ಮ-ರೂಪನೂ ಆಗಿ, ಪರ್ವತವನ್ನು ಬೆನ್ನಮೇಲೆ ಹೊತ್ತು ಸಮುದ್ರವನ್ನು ಮಥಿಸಿ ಅಮೃತವನ್ನು ದೊರಕಿಸಲು ಅಣಿಮಾಡಿಕೊಟ್ಟನು); ಮತ್ತೆ—ಪುನಃ (ಆತನೇ), ಮಹಿಯನೆತ್ತಿ—(ವರಾಹರೂಪದಿಂದ ಹಿರಣ್ಯಾಕ್ಷನನ್ನು ಸಂಹರಿಸಿ) ಭೂಮಿ-ಯನ್ನು ಎತ್ತಿ ತಂದು, ಕೀರ್ತಿಯ—ಕೀರ್ತಿಯನ್ನು, ಪಡೆದ—ಹೊಂದಿದ; ಕಿಂಕರನ—ಭಕ್ತನಾದ ಪ್ರಹ್ಲಾದನ, ಮೃತ್ಯುವ—ಮೃತ್ಯುವನ್ನು (ಹಿರಣ್ಯಕನಿಂದ

ಕೊಲ್ಲಲ್ಪಡುವುದನ್ನು), ಬಿಡಿಸಿದ— ತಪ್ಪಿಸಿ ರಕ್ಷಿಸಿದನು; ಮತ್ತೆ— ಪುನಃ (ಆತನೇ), ಬಲಿಯ ಬಲಿಚಕ್ರವರ್ತಿಯನ್ನು, ಕಿತ್ತು—(ವಾಮನರೂಪದಿಂದ ನಿಗ್ರಹಿಸಿ), ಸ್ವರ್ಗಾಧಿಪತ್ಯದಿಂದ ಕಿತ್ತೊಗೆದು, ಕ್ಷತ್ರಿಯರ—(ಪರಶುರಾಮರೂಪದಿಂದ) ದುಷ್ಟಕ್ಷತ್ರಿಯರ, ಉಕ್ಕ ತಗ್ಗಿಸಿದ— ಕೆಚ್ಚನ್ನು ಮುರಿದನು.

**ಸೀತೆಗಭಯವಿತ್ತ ಸೇತುಬಂಧನರಾಮ**
**ಮಾತುಳ ಕಂಸನ ಮಡುಹಿ**
**ಖ್ಯಾತಬುದ್ಧನಾಗಿ ಕಾಪಥಗಳ ತೋರ್ದ**
**ಭೀತಿ ಕಲಿಯ ಬಿಟ್ಟುಕೊಟ್ಟ**

**ಅರ್ಥ:** ಸೇತುಬಂಧನರಾಮ— ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ ಶ್ರೀರಾಮನು, ಸೀತೆಗೆ— ಜಾನಕಿಗೆ, ಅಭಯವಿತ್ತ— ಅಭಯವಿತ್ತನು (ರಾವಣಾದಿಗಳ ಭಯವನ್ನು ಪರಿಹರಿಸಿದನು); ಮಾತುಳ ಕಂಸನ—(ಶ್ರೀಕೃಷ್ಣರೂಪದಿಂದ) ಸೋದರಮಾವನಾದ ಕಂಸನನ್ನು, ಮಡುಹಿ—(ಭೂಮಿಯಲ್ಲಿ ಎತ್ತೊಗೆದು) ಕೊಂದು; ಖ್ಯಾತಬುದ್ಧನಾಗಿ— ಪ್ರಸಿದ್ಧಬುದ್ಧರೂಪದಿಂದ, ಕಾಪಥಗಳ—(ದೈತ್ಯರಿಗೆ ಯೋಗ್ಯವಾದ): ದುರ್ಮಾರ್ಗಗಳನ್ನು; ತೋರ್ದ— ತೋರಿಸಿದನು (ತ್ರಿಪುರಾಸುರರ ಸಂಹಾರಕ್ಕವಕಾಶಮಾಡಲು, ಅವರ ಪತ್ನಿಯರಿಗೆ 'ಉಪಪತಿಯನ್ನು ಸ್ವೀಕರಿಸುವುದು ಧರ್ಮವೆಂದೂ' ಜಿನಾದಿಗಳಿಗೆ ವೇದಗಳು ಅಪ್ರಮಾಣವೆಂದೂ ವೇದೋಕ್ತಕರ್ಮಾಚರಣೆಯು ವ್ಯರ್ಥವೆಂದೂ, ಉಪದೇಶಿಸಿದನು); ಕಲಿಯ ಭೀತಿ—(ಕಲ್ಕಿರೂಪದಿಂದ) ಕಲಿಯ ಭಯವನ್ನು, ಬಿಟ್ಟುಕೊಟ್ಟು— ಬೀಳ್ಕೊಟ್ಟು (ಪರಿಹರಿಸಿದನು).

**ವಿಶೇಷಾಂಶ:** ಬುದ್ಧಾವತಾರಗಳು ಎರಡು.

'ಯಸ್ತ್ರೈಪುರಾಣಾಂ ಪ್ರಥಮೋಽತ್ರ
ಜಾತಃ ಶುದ್ಧೋದನೇತ್ಯೇವ ಜಿನೇತಿ ಚೋಕ್ತಃ।
ಕ್ಷೇತ್ರೇ ಗಯಾಖ್ಯೇಽಸ್ಯ ಶಿಶುಂ ಪ್ರಜಾತಂ
ಸಂಪ್ರಾಸ್ಯ ದೂರೇಽತ್ರ ಬಭೂವ ವಿಷ್ಣುಃ॥' (ಭಾ.ತಾ.ನಿ)

'ತ್ರಿಪುರಾಸುರರಲ್ಲಿ ಮುಖ್ಯನಾದ ಅಸುರನು ಶುದ್ಧೋದನನೆಂಬ ನಾಮದಿಂದ ಭೂಮಿಯಲ್ಲಿ ಹುಟ್ಟಿದನು; ಅವನಿಗೆ **'ಜಿನ'**ನೆಂದೂ ಹೆಸರು. ಗಯಾದಲ್ಲಿ (**ಗಯಾ**ನಾಮಕ ಅವನ ಪತ್ನಿಯಲ್ಲಿ) ಜಿನನಿಗೆ ಒಂದು ಶಿಶು ಜನಿಸಿತು; ಅದನ್ನು ದೂರ ಎಸೆದು ವಿಷ್ಣುವು ಅಲ್ಲಿ ಶಿಶುರೂಪದಿಂದ ಮಲಗಿದನು' ಎಂದು ವರ್ಣಿತವಾದುದು **ಒಂದು ಬುದ್ಧರೂಪ**;

*'ಲೋಕಾನ್ ಘ್ನತಾಂ ಮತಿವಿಮೋಹಮತಿಪ್ರಲೋಭಂ*
*ವೇಷಂ ವಿದಾಯ ಯದಭಾಷತ ಔಪಧರ್ಮ್ಯಂ'* (ಭಾಗವತ)

—'ತ್ರಿಪುರಸ್ತ್ರೀಯರ ಪಾತಿವ್ರತ್ಯದ ಹಾನಿಯಾಗದೆ ಆ ಅಸುರರ ಸಂಹಾರವಾಗುವಂತಿರದ ಪ್ರಯುಕ್ತ, ಆ ಸ್ತ್ರೀಯರಿಗೆ ಉಪಪತಿಯನ್ನು ಸ್ವೀಕರಿಸಬಹುದೆಂದು ಒಪ್ಪಿಸಿದನು' ಎಂದು ಹೇಳಲಾಗಿರುವುದೊಂದು; ಹೀಗೆ **ಎರಡು ಬುದ್ಧರೂಪಗಳು.** *'ಜಿನಸುತತಯಾಪ್ಯೇಕವಾರಂ ಬುದ್ಧಾವತಾರೋಽಸ್ತಿ ಔಪಧರ್ಮ್ಯಮಿತಿ ದ್ವಿತೀಯಸ್ಕಂಧವಚನಾತ್ ಏಕವಾರಂ ಬುದ್ಧಾವತಾರೋಽಸ್ತೀತಿ ಜ್ಞೇಯಂ'* ಎಂಬುದಾಗಿ ಶ್ರೀವಾದಿರಾಜರು ತಮ್ಮ 'ಭಾವ ಪ್ರಕಾಶಿಕೆಯಲ್ಲಿ, ಬುದ್ಧಾವತಾರಗಳೆರಡೆಂಬುದನ್ನು ಸ್ಪಷ್ಟಗೊಳಿಸಿದ್ದಾರೆ.

**ಶಿವನ ವೈರಿಯ ಕೊಂದ ಶ್ರುತಿಯ ನೀರೊಳು ತಂದ**
**ಭುವನಪಾವನ ಭವ್ಯಚರಿತ**
**ಇವನ ಪೋಲುವರಾರು ಈ ಜಗದೊಳಗಿನ್ನು**
**ಜವನ ಭಟರ ಜಡಿವನು ॥೨೮॥**

**ಅರ್ಥ:** ಶಿವನ ವೈರಿಯ—ತ್ರಿಪುರಾಸುರನ, ಕೊಂದ—ಕೊಲ್ಲಿಸಿದ, ನೀರೊಳು—ಕುಂಡದ ಜಲದಲ್ಲಿ (ಮೃತರನ್ನು ಬದುಕಿಸುವ ಸಂಜೀವಿನೀರಸವುಳ್ಳ ಸರೋವರದಲ್ಲಿ), ಶ್ರುತಿಯ ತಂದ—ಶ್ರುತ್ಯುಕ್ತ ತನ್ನ ಮಹಿಮೆಯನ್ನು (ಗೋರೂಪದಿಂದ ಆ ರಸವನ್ನೆಲ್ಲ ಪಾನಮಾಡಿ) ಪ್ರಕಟಿಸಿದ, ಭುವನಪಾವನ—ಜಗತ್ತನ್ನೇ ಪವಿತ್ರಗೊಳಿಸುವ; ಭವ್ಯಚರಿತ—ಅದ್ಭುತಲೀಲೆಯುಳ್ಳವನು (ಮಹಾಮಹಿಮನು ಶ್ರೀಹರಿ); ಇನ್ನು ಈ ಜಗದೊಳಗೆ—ಹೀಗಿರಲು ಈ ಜಗತ್ತಿನಲ್ಲಿ, ಇವನ—ಶ್ರೀಹರಿಯನ್ನು, ಪೋಲುವರಾರು—ಹೋಲುವವರುಂಟೇ? (ಸಮರಾದವರು ಯಾರೂ ಇಲ್ಲ—ಉತ್ತಮರಂತೂ ಇಲ್ಲವೇ ಇಲ್ಲ); ಜವನ ಭಟರ—ಯಮದೂತರನ್ನು, ಜಡಿವನು—ಮರ್ದನಮಾಡುತ್ತಾನೆ (ತನ್ನ ಭಕ್ತರ ಮೇಲೆ ಕೈಮಾಡುವ ಯಮದೂತರನ್ನು ನಿರ್ವೀರ್ಯರನ್ನಾಗಿ ಮಾಡುತ್ತಾನೆ).

**ಇಂತು ಜಗಂಗಳ ಸಂತತ ಪೊರೆವ ದು-**
**ರಂತದೈತ್ಯಕೃತಾಂತ**
**ಚಿಂತೆಯ ನುಗ್ಗೊತ್ತಿ ಸಂತೋಷವಿತ್ತು ಶ್ರುತಿ-**
**ಕಾಂತ ಸಂತರ ಭಾರವ ಹೊತ್ತ ॥೨೯॥**

**ಅರ್ಥ:** ಇಂತು — ಹೀಗೆ (ಅಂತರ್ಯಾಮಿ — ಅವತಾರರೂಪಗಳಿಂದ), ಜಗಂಗಳ — ಲೋಕಗಳನ್ನು (ಅನಂತಬ್ರಹ್ಮಾಂಡಗಳನ್ನು), ಸಂತತ — ಎಲ್ಲ ಕಾಲದಲ್ಲಿ, ಪೊರೆವ — ರಕ್ಷಿಸುತ್ತಾನೆ; ದುರಂತದೈತ್ಯಕೃತಾಂತ — ಅವಧ್ಯರೆಂಬ ಸಕಲ ದೈತ್ಯರ ಸಂಹಾರಕನಾದ (ದೈತ್ಯರಿಗೆ ಯಮಸ್ವರೂಪನಾದ), ಶ್ರುತಿಕಾಂತ — ವೇದದೊಡೆಯನು (ವೇದಾಭಿಮಾನಿ ಲಕ್ಷ್ಮೀದೇವಿಯ ಪತಿಯು), ಚಿಂತೆಯನುಗ್ಗೊತ್ತಿ — ಸಕಲ ವ್ಯಥೆಗಳನ್ನು ತಡೆದು (ಶಿರಮೆಟ್ಟಿ), ಸಂತೋಷವಿತ್ತು — ಸಂತೋಷವನ್ನುಂಟುಮಾಡುತ್ತ, ಸಂತರ — ಸಜ್ಜನರ, ಭಾರವ ಹೊತ್ತು — ರಕ್ಷಿಸುವ ಭಾರವನ್ನು ವಹಿಸಿರುವನು.

**ಸಕಲಸದ್ಗುಣಪೂರ್ಣ ಸಜ್ಜನದಾತಾರ**
**ಭಕ್ತವತ್ಸಲ ಭಯನಾಶ**
**ಸುಖಚಿನ್ಮಯಕ ಶುದ್ಧ ದೋಷವಿದೂರ**
**ನಿಖಿಲೇಶ ನಿನ್ನ ನಂಬಿದೆನೋ** ॥೩೦॥

**ಅರ್ಥ:** ಸಕಲಸದ್ಗುಣಪೂರ್ಣ — ಅನಂತ ಕಲ್ಯಾಣಗುಣಪೂರ್ಣನೂ, ಸಜ್ಜನದಾತಾರ — ಸಜ್ಜನರಿಗೆ ಸರ್ವಾಭೀಷ್ಟಪ್ರದನೂ, ಭಕ್ತವತ್ಸಲ — ಭಕ್ತಪ್ರೇಮಿಯೂ, ಭಯನಾಶ — ಸರ್ವಭಯ ಪರಿಹಾರಕನೂ, ಸುಖಚಿನ್ಮಯಕ — ಆನಂದ ಜ್ಞಾನಗಳೇ ದೇಹವಾಗುಳ್ಳವನೂ (ಸರ್ವತ್ರ ಪ್ರಾಕೃತದೇಹರಹಿತನೂ), ಶುದ್ಧ — (ಆದ್ದರಿಂದಲೇ) ಪರಮಪವಿತ್ರನೂ, ದೋಷವಿದೂರ — (ದುಃಖ, ಅಜ್ಞಾನಾದಿ) ದೋಷಗಳಿಂದ ಅತಿದೂರನೂ ಆದ, (ದೋಷಗಳನ್ನು ತನ್ನ ಹತ್ತಿರ ಸುಳಿಯಗೊಡದವನೂ), ನಿಖಿಲೇಶ — ಹೇ ಸರ್ವಸ್ವಾಮಿನ್! ನಿನ್ನ ನಂಬಿದೆನೋ — (ನಿನ್ನನ್ನೇ ರಕ್ಷಕನೆಂದು) ತಿಳಿದು ಶರಣುಹೊಂದಿರುವೆನು ಸ್ವಾಮಿ.

**ಉಂಬೋದು ಉಡುವೋದು ಲಕುಮಿದೇವಿಯ ತಲೆ-**
**ಗಿಂಬಿಟ್ಟು ಮಲಗುವ ನೆಲವ**
**ಇಂಬು ಕುಂಭಿನಿಯೊಳು ಈವನಾಳ್ವನಲ್ಲೆಂಬ**
**ಡಂಭಕನೆಲ್ಲಿಹನೆಂತೆಂಬ** ॥೩೧॥

**ಉಂಡಮನೆಗೆರಡನ್ನು ಬಗೆವ ಭಂಡರ ಕಂಡು**
**ಪಂಡಿತಜನರು ಮನ್ನಿಸರು**

**ಕಂಡಕಂಡವರ ಮಾತ ಕೇಳದೆ ಬಲ್ಲವರು**
**ಪಾಂಡವಪ್ರಿಯನ ಮನ್ನಿಸಿರೋ** ॥೩೨॥

**ಅರ್ಥ:** ಉಂಬೋದು ಉಡುವೋದು—ಅನ್ನವಸ್ತ್ರಗಳನ್ನು, (ಅನ್ನಾದಿ ಆಹಾರವನ್ನೂ, ವಸ್ತ್ರಭೂಷಣಾದಿ ಸುಖಭೋಗಗಳನ್ನೂ), ತಲೆಗಿಂಬಿಟ್ಟು ಮಲಗುವ ನೆಲವ—(ಅಷ್ಟೇಕೆ) ತಲೆಯಿಟ್ಟು ಮಲಗುವ ಭೂಮಿಯನ್ನೂ (ಆಶ್ರಯಸ್ಥಾನವಾದ ಭೂಮಿಯನ್ನು ವರಾಹರೂಪದಿಂದ ಎತ್ತಿ ಸ್ಥಾಪಿಸಿದನಷ್ಟೆ) ಕುಂಭಿನಿಯೊಳು—ಜಗತ್ತಿನಲ್ಲಿ, ಇಂಬು ಈವನ—ಆಶ್ರಯವನ್ನು ಕೊಡುವವನನ್ನು, ಲಕುಮಿದೇವಿಯ—(ಈ ಎಲ್ಲಕ್ಕೂ ಅಭಿಮಾನಿದೇವತೆಯಾದ) ಲಕ್ಷ್ಮೀದೇವಿಯನ್ನು, ಆಳ್ವನಲ್ಲ—ಆಳುವ ಪ್ರಭುವಲ್ಲ, ಎಂಬ—ಎಂದು ತಿಳಿಯುವ, ಮತ್ತು ಎಲ್ಲಿಹನೆಂತೆಂಬ—ಅವನೆಲ್ಲಿರುವನೆಂಬ (ಅವನು ಇಲ್ಲವೇ ಇಲ್ಲ—ಅವನೇ ನಾನು ಇತ್ಯಾದಿಯಾಗಿ ತಿಳಿಯುವ), ಡಂಭಕನ—ದುರಹಂಕಾರವುಳ್ಳ ಮತ್ತು, ಉಂಡಮನೆಗೆರಡನ್ನು ಬಗೆವ—ಆಶ್ರಯದಾತನಿಗೆ ಕೃತಜ್ಞನಾಗಿರದೇ, ಪ್ರತಿಯಾಗಿ ಕೇಡನ್ನೇ ಚಿಂತಿಸುವ (ಪ್ರಥಮಕರ್ತವ್ಯವಾದ ಕೃತಜ್ಞತೆಯನ್ನು ಬಿಟ್ಟು ಎರಡನೆ ಪ್ರಕಾರದ ವಂಚಿಸುವ ಅಥವಾ ದ್ವೇಷಿಸುವ ಭಾವವನ್ನು ತಾಳುವ), ಭಂಡರ ಕಂಡು—ನಿರ್ಲಜ್ಜರಾದ ದುಷ್ಟರನ್ನು ನೋಡಿ, ಪಂಡಿತಜನರು—ಜ್ಞಾನಿಗಳು, ಮನ್ನಿಸರು—ಸಹಿಸರು (ಒಪ್ಪುವುದಿಲ್ಲ); ಬಲ್ಲವರು—ವಿವೇಕವುಳ್ಳ ಸುಜನರು, ಕಂಡಕಂಡವರ—ಸಿಕ್ಕವರ (ಯಾರು ಹೇಳಿದರೆ ಅವರ), ಮಾತ ಕೇಳದೆ—ಮಾತುಗಳನ್ನು ಗಮನಿಸದೇ, ಪಾಂಡವಪ್ರಿಯನ—ಪಾಂಡವಪ್ರಿಯನಾದ ಶ್ರೀಕೃಷ್ಣನನ್ನು, ಮನ್ನಿಸಿರೋ—ಪೂಜಿಸಿರಿ (ಸರ್ವೋತ್ತಮನೆಂದು ಅಂಗೀಕರಿಸಿ—ಒಪ್ಪಿ, ಆಶ್ರಯಿಸಿರಿ).

**ವಿಶೇಷಾಂಶ:** 'ಉಂಬೋದು ಉಡುವೋದು ಇಂಬು ಕುಂಭಿನಿಯೊಳು ಈವನ-ಅನ್ನವಸ್ತ್ರಾದಿಗಳೆಲ್ಲವನ್ನೂ ಕೊಡುವ, ಲಕುಮಿದೇವಿಯ ತಲೆಗಿಂಬಿಟ್ಟು ಮಲಗುವ ನೆಲವ—ಲಕ್ಷ್ಮೀದೇವಿಯನ್ನೇ ತಲೆಗೆ ಆಶ್ರಯಮಾಡಿಕೊಂಡು, ಆಕೆಯನ್ನೇ—ಆಕೆಯ ತೊಡೆಯನ್ನೇ ಮಲಗುವ ನೆಲವನ್ನಾಗಿವುಳ್ಳ, ಅಥವಾ (ವಟಪತ್ರರೂಪದಿಂದಿರುವ ಲಕ್ಷ್ಮಿಯಲ್ಲಿ ಶಯನಮಾಡುವ) ಶ್ರೀಹರಿಯನ್ನು (ಲಕ್ಷ್ಮೀಪತಿಯನ್ನು) ಆಳ್ವನಲ್ಲೆಂಬ—ಆಳುವ ಪ್ರಭುವಲ್ಲವೆಂದು ಹೇಳುವ' ಎಂಬ ರೀತಿಯಲ್ಲಿ ಸಹ ಅನ್ವಯಿಸಿಕೊಳ್ಳಬಹುದು.

**ಆದರಿಂದ ಸಕಲ ವಾದಿಗಳು ನಾರಾಯಣನ**
**ಪದಪದುಮವ ನಂಬಬೇಕು**

**ಇದು ಪಕ್ಷಪಾತದ ನುಡಿಯಲ್ಲವೆಂಬುದು**
**ಬುಧರು ತಾವೆ ವಿಚಾರಿಸಿರೋ ||೩೩||**

**ಅರ್ಥ:** ಅದರಿಂದ—ಹೀಗೆ ಶ್ರೀಹರಿಯೇ ಜಗತ್ಪಾಲಕನಾದ್ದರಿಂದ, ಸಕಲ ವಾದಿಗಳು—ಸತ್ಯವನ್ನು ತಿಳಿಯಲು ಉತ್ಸಾಹಿಸುವ ಎಲ್ಲ ಜಿಜ್ಞಾಸುಗಳು, ನಾರಾಯಣನ—ಶ್ರೀಹರಿಯ, ಪದಪದುಮವ—ಪಾದಪದ್ಮವನ್ನು, ನಂಬ-ಬೇಕು—ವಿಶ್ವಾಸದಿಂದ ಆಶ್ರಯಿಸಬೇಕು; ಇದು—ನಾರಾಯಣನ ಪಾದ-ಕಮಲವೇ ಗತಿಯೆಂಬುದು, ಪಕ್ಷಪಾತದ—ಸ್ವಮತಾಭಿಮಾನದ, ನುಡಿ-ಯಲ್ಲವೆಂಬುದು—ಮಾತುಗಳಲ್ಲವೆಂಬುದನ್ನು, ಬುಧರು ತಾವೆ ವಿಚಾರಿ-ಸಿರೋ—ವಿವೇಕಿಗಳಾದ ನೀವೇ (ಅಂತರಂಗದಲ್ಲಿ) ವಿಚಾರಮಾಡಿ ತಿಳಿಯಿರಿ.

ಶ್ರೀಹರಿಯ ರಾಮಕೃಷ್ಣಾದಿ ಅವತಾರಗಳು ದುಃಖಾಜ್ಞಾನಾದಿದೋಷ-ವುಳ್ಳವೆಂದೂ, ಶಿವನೇ ಶ್ರೇಷ್ಠನೆಂದೂ, ರಾಮಾಯಣ-ಭಾರತಾದಿಗಳಿಂದ ತೋರಬಹುದಾದ ಸಂಶಯವನ್ನು ಸಯುಕ್ತಿಕವಾಗಿ ಪರಿಹರಿಸಿಕೊಳ್ಳಬೇಕಾದ ಮಾರ್ಗವನ್ನು ಈ ಮುಂದಿನ ನುಡಿಗಳಲ್ಲಿ, ನಿದರ್ಶನಮಾಡುತ್ತಾರೆ.

**ಸೀತೆಗೆ ಚಿಂತಿಸಿ ಭೀತಿಯ ತೋರಿಸಿ**
**ಭೂತನಾಥನ ಯಾತ್ರೆ ಮಾಡಿ**
**ಪ್ರೀತಿಯಿಂದ ಮುನಿಗಳಿಗೆ ನಮಿಸಿ ನಮಿಸಿ ಕೃಷ್ಣ**
**ದೈತ್ಯರಿಗೆ ಮೋಹವಿತ್ತ ||೩೪||**

**ಅರ್ಥ:** ಸೀತೆಗೆ—(ರಾಮಾವತಾರದಲ್ಲಿ) ಸೀತೆಗೋಸ್ಕರ, ಚಿಂತಿಸಿ—(ಅಜ್ಞನಂತೆ ದುಃಖಿಸಿ) ಚಿಂತಿಸಿಯೂ, ಭೀತಿಯ ತೋರಿಸಿ—ಭಯ-ಗೊಂಡವನಂತೆ ವರ್ತಿಸಿ, ಭೂತನಾಥನ ಯಾತ್ರೆ ಮಾಡಿ—(ಕೃಷ್ಣಾವತಾರ-ದಲ್ಲಿ) ಪುತ್ರಾರ್ಥಿಯಾಗಿ ಕೈಲಾಸಕ್ಕೆ ರುಕ್ಮಿಣೀಸಮೇತನಾಗಿ ಹೋಗಿ, ಶಿವನನ್ನು ಕುರಿತು ತಪಸ್ಸುಮಾಡಿ, ಮತ್ತು, ಪ್ರೀತಿಯಿಂದ—ಆದರಪೂರ್ವಕ, ಮುನಿ-ಗಳಿಗೆ—ನಾನಾ ಋಷಿಗಳಿಗೆ, ನಮಿಸಿ ನಮಿಸಿ—ಪದೇ ಪದೇ ನಮಸ್ಕರಿಸುತ್ತ, ಕೃಷ್ಣ—ಶ್ರೀಹರಿಯು, ದೈತ್ಯರಿಗೆ—ತಮೋಯೋಗ್ಯರಿಗೆ, ಮೋಹವಿತ್ತ—(ತಾನೇ ಗುಣಪೂರ್ಣನೂ ನಿರ್ದೋಷನೂ, ಸರ್ವೋತ್ತಮನೂ, ಗತಿಪ್ರದನೂ ಎಂಬ, ಜ್ಞಾನವಾಗದಂತೆ, ತಾನು ಅಜ್ಞಾನಾದಿ ದೋಷಗಳುಳ್ಳವನೂ, ಅವರನೂ ಎಂಬ) ಮೋಹವನ್ನುಂಟುಮಾಡಿದನು.

ಹೀಗೆ ದೈತ್ಯರನ್ನು ಮೋಹಿಸಿದರೆ, ಭಕ್ತರಿಗೆ ನಿಜಮಹಿಮೆಗಳನ್ನು ಪ್ರಕಟಿಸಿ ಅನುಗ್ರಹಿಸಿದ ಪರಿಯನ್ನು ವರ್ಣಿಸುತ್ತಾರೆ:

**ಬಾಯೊಳು ಈರೇಳು ಜಗವ ತಾಯಿಗೆ ತೋರಿ**
**ಕೈಯಲ್ಲಿ ಬಲುಗಿರಿಯನೆತ್ತಿ**
**ಮೈಯಲ್ಲಿ ವಿಶ್ವರೂಪವ ತೋರಿಸಿ ಕೃಷ್ಣನು**
**ಪ್ರಿಯರಿಗೆ ಜ್ಞಾನವಿತ್ತ** ||೩೫||

**ಅರ್ಥ:** ಬಾಯೊಳು—(ಶ್ರೀಕೃಷ್ಣನು) ತನ್ನ ಮುಖದಲ್ಲಿ, ತಾಯಿಗೆ—ಯಶೋದೆಗೆ, ಈರೇಳು ಜಗವ—ಹದಿನಾಲ್ಕು ಲೋಕಗಳನ್ನು, ತೋರಿ—ತೋರಿಸಿ, ಕೈಯಲ್ಲಿ—ಕೈಬೆರಳಿನ ಮೇಲೆ, ಬಲು ಗಿರಿಯನೆತ್ತಿ—ದೊಡ್ಡ (ಗೋವರ್ಧನ) ಬೆಟ್ಟವನ್ನು ಎತ್ತಿಹಿಡಿದು, ಮೈಯಲ್ಲಿ—ತನ್ನ ದೇಹದಲ್ಲಿ, ವಿಶ್ವರೂಪವ ತೋರಿಸಿ—(ಅರ್ಜುನನಿಗೆ) ವಿಶ್ವರೂಪವನ್ನು ತೋರಿಸಿ, ಕೃಷ್ಣನು—ಶ್ರೀಹರಿಯು, ಪ್ರಿಯರಿಗೆ—ತನ್ನ ಭಕ್ತರಿಗೆ, ಜ್ಞಾನವಿತ್ತ—ತನ್ನ ಮಹಿಮೆಗಳ ಯಥಾರ್ಥಜ್ಞಾನವನ್ನೇ ಕರುಣಿಸಿದನು.

**ಮೊಲೆಯನುಂಡಾಳು ಶಿಶು ಪಾಲಕೊಂಬಾತ ಸತ್-**
**ಕುಲಕೆ ಸಮ್ಯಕ್‌ಜ್ಞಾನ ಬಂತು**
**ಜಲದೊಳಗೆ ಮೊಲೆಯ ಪಿಡಿದ ಜಿಗಳಿಗಳಂತೆ**
**ಖಳರು ತಾವು ಕೆಟ್ಟು ಪೋಗುವರು** ||೩೬||

**ಅರ್ಥ:** ಪಾಲಕೊಂಬಾತ—ಹಾಲುಕುಡಿಯುವವನಾದ, ಶಿಶು—(ಏಳು-ದಿನದ) ಮಗುವಾದ ಶ್ರೀಕೃಷ್ಣನು, ಮೊಲೆಯನು—(ಪೂತನಾರಕ್ಕಸಿಯ) ಸ್ತನ್ಯ-ವನ್ನು, ಉಂಡಾಳು—ಉಂಡ ಮನುಷ್ಯ (ಮೊಲೆಯನ್ನು ಹೀರಿ, ಉಂಡ—ಸಂಹರಿಸಿದ, ಆಳು—ವ್ಯಕ್ತಿ—ಮನುಷ್ಯರೂಪದಿಂದ ಅವತರಿಸಿದ ಶ್ರೀಹರಿ); ಸತ್ಕುಲಕೆ—(ಈ ವಿಧ ಮಹಿಮೆಗಳ ಪ್ರದರ್ಶನದಿಂದ) ಸಜ್ಜನಸಮೂಹಕ್ಕೆ, ಸಮ್ಯಕ್‌ಜ್ಞಾನ—ಶ್ರೀಕೃಷ್ಣನ ನಿಜಸ್ವರೂಪಜ್ಞಾನವು, ಬಂತು—ದೊರೆಯಿತು; ಜಲದೊಳಗೆ—ನೀರಿನಲ್ಲಿ, ಜಿಗಳಿಗಳಂತೆ—(ಹಿಡಿದು ರಕ್ತವನ್ನು ಹೀರುವ) ಜಿಗಳಿ(ಕ್ರಿಮಿವಿಶೇಷ)ಗಳಂತೆ, ಮೊಲೆಯ ಪಿಡಿದ—ಆ ಪೂತನಿಯ ಮೊಲೆ-ಯನ್ನು ಹಿಡಿದನು (ಪ್ರಾಣವನ್ನೇ ಹೀರಿದನು); ಖಳರು—(ಈ ಮಹಿಮೆಗಳನ್ನು ಅರ್ಥಮಾಡಿಕೊಳ್ಳದ) ದುರ್ಜನರು, ತಾವು—ತಾವೇ, ಕೆಟ್ಟುಪೋಗುವರು—ನಷ್ಟವಾಗುತ್ತಾರೆ (ದುರ್ಗತಿಯನ್ನೇ ಹೊಂದುತ್ತಾರೆ).

**ವಿಶೇಷಾಂಶ:** ಮಿಥ್ಯಾಜ್ಞಾನವು ದುರ್ಜನರನ್ನು (ತಮೋಯೋಗ್ಯರನ್ನು) ಜಿಗಳಿಯಂತೆ ಹಿಡಿದು, ಅವರ ವಿನಾಶಕ್ಕೆ ಕಾರಣವಾಗುತ್ತದೆ. ಆದ್ದರಿಂದ,

ಜಿಗಳಿಯಂತೆ ಆತ್ಮನಾಶಕ್ಕೆ (ತಮಃಪ್ರಾಪ್ತಿಗೆ) ಕಾರಣವಾಗುವ ಮಿಥ್ಯಾ ಜ್ಞಾನದಿಂದ (ದುರ್ಮತಗಳ ಸಿದ್ಧಾಂತಗಳಿಂದ) ವಿವೇಕಿಗಳು ಬಹು ಜಾಗರೂಕರಾಗಿರಬೇಕೆಂಬ ತಾತ್ಪರ್ಯವನ್ನೂ ಈ ನುಡಿಯಿಂದ ಗ್ರಹಿಸಬಹುದು—ಗ್ರಹಿಸಬೇಕು.

**ಮಿಶ್ರಚರಿತ್ರದಿಂ ಮಿಶ್ರಜೀವರಿಗೆ ಸ-**
**ಮ್ಮಿಶ್ರಜ್ಞಾನವನೆ ಬೆರಸುವ**
**ವಿಸ್ಮಯವವರಿಗಲ್ಲದೆ ಮಾತಾಡದೆ**
**ಸ್ವಸ್ವಯೋಗ್ಯತೆಗೆ ಮನವಿತ್ತ** ॥೩೭॥

**ಸೂ:** ನಿತ್ಯಸಂಸಾರಿಗಳೆಂಬ ಮಧ್ಯಮವರ್ಗದ ಜೀವರಿಗೆ ತನ್ನ ಲೀಲೆಗಳಿಂದ ಮಿಶ್ರಜ್ಞಾನವನ್ನೇ ಉಂಟುಮಾಡುತ್ತಾನೆನ್ನುತ್ತಾರೆ.

**ಅರ್ಥ:** ಮಿಶ್ರಚರಿತ್ರದಿಂ—(ಶುದ್ಧ ಜ್ಞಾನ ಮತ್ತು ಮೋಹಗಳೆಂಬ ಎರಡರ ಮಿಶ್ರಜ್ಞಾನವನ್ನುಂಟುಮಾಡುವ) ಉಭಯವಿಧದ ತನ್ನ ಕೃತಿಗಳಿಂದ, (ಸರ್ವಶಕ್ತನೆಂದೂ—ಅಶಕ್ತನೆಂದೂ ಸರ್ವಜ್ಞನೆಂದೂ, ಅಜ್ಞನೆಂದೂ, ಇತ್ಯಾದಿ ತಿಳಿಯಲವಕಾಶವಾಗುವ ಉಭಯವಿಧ ಲೀಲೆಗಳಿಂದ), ಮಿಶ್ರಜೀವರಿಗೆ—ಮಧ್ಯಮ ಜೀವರಿಗೆ, ಮಿಶ್ರಜ್ಞಾನವನೆ—(ಶ್ರೀಕೃಷ್ಣನು ಸರ್ವೋತ್ತಮನೂ ಇರಬಹುದು—ನಮ್ಮಂತೆ ಸಾಮಾನ್ಯ ಮನುಷ್ಯನೂ ಇರಬಹುದು ಎಂಬ) ಸಂಶಯಾತ್ಮಕಜ್ಞಾನವನ್ನೇ, ಬೆರಸುವ—ಕೂಡಿಸಿಯೇ ಉಂಟುಮಾಡುವನು; ವಿಸ್ಮಯವು—(ಉಭಯ ವಿಧ ಕೃತಿಗಳಿಂದ ನಿಶ್ಚಯವನ್ನು ತಿಳಿಯದಂತಾಗುವ) ಆಶ್ಚರ್ಯವು, ಅವರಿಗೆ—ಆ ಮಧ್ಯಮ ಜೀವರಿಗೆ ಮಾತ್ರ, ಅಲ್ಲದೆ—ಹಾಗಲ್ಲದೆ (ಶ್ರೀಕೃಷ್ಣನೇ ಅದ್ಭುತ ಮಹಿಮನೆಂಬ ನಿಶ್ಚಯಜ್ಞಾನವಾದೀತೇ!), ಮಾತಾಡದೆ—ಸುಮ್ಮನೆ (ಲೀಲೆಯಿಂದ—ಇಚ್ಛಾಮಾತ್ರದಿಂದ ಅಥವಾ ನಿಶ್ಚಯ-ಜ್ಞಾನವನ್ನುಂಟುಮಾಡುವ ಯಾವ ಮಾತುಗಳನ್ನೂ ಅರ್ಜುನಾದಿಗಳಿಗೆ ಮಾಡಿದಂತೆ ಯಾವ ಉಪದೇಶವನ್ನೂ ಮಾಡದೆ), ಸ್ವಸ್ವಯೋಗ್ಯತೆಗೆ—ಅವರವರ ಸ್ವರೂಪಯೋಗ್ಯತೆಗೆ ತಕ್ಕಂತೆ ತಿಳಿಯಲೆಂದು, ಮನವಿತ್ತ—ಸಂಕಲ್ಪಿಸಿದನು (ಅದರಂತೆ ವರ್ತಿಸಿದನು).

**ಶ್ಲೋಕ ೬-೭-೮**

***ನಿತ್ಯಜ್ಞಾನಾನಂದಬಲಾದೇವಾ ನೈವಂ ತು ದಾನವಾಃ।***
***ದುಃಖೋಪಲಬ್ಧಿಮಾತ್ರಾಸ್ತೇ ಮಾನುಷಾಸ್ತೂಭಯಾತ್ಮಕಾಃ॥***

***ತೇಷಾಂ ಯದನ್ಯಥಾ ಜಾತಂ ತದುಪಾಧಿಕೃತಂ ಮತಮ್।***
***ವಿಜ್ಞಾನೇನಾತ್ಮಯೋಗ್ಯೇನ ತಚ್ಚ ವೀರ್ಯಮುಪಸ್ಥಿತಮ್॥***
***ಸಮ್ಯಕ್‌ಜ್ಞಾನಂ ತು ದೇವಾನಾಂ ಮಾನುಷಾಣಾಂ ತು ಮಿಶ್ರಿತಮ್।***
***ವಿಪರೀತಂ ತು ದೈತ್ಯಾನಾಂ ಜ್ಞಾನಂ ತ್ರೇಧಾ ವ್ಯವಸ್ಥಿತಮ್॥***

**ಅರ್ಥ:** ನಿತ್ಯಜ್ಞಾನಾನಂದಬಲಾಃ—ನಿತ್ಯವಾದ ಜ್ಞಾನ, ಆನಂದ, ಬಲವುಳ್ಳವರು, ದೇವಾಃ—ದೇವತೆಗಳು (ದೇವತೆಗಳ ಸ್ವರೂಪದೇಹಗಳು). ದಾನವಾಃ—ದೈತ್ಯರು (ತಮೋಯೋಗ್ಯರು), ನೈವ—ಆ ಗುಣಗಳುಳ್ಳ ಸ್ವರೂಪದವರು ಅಲ್ಲವೇ ಅಲ್ಲ, ತೇ—ಅವರು, ದುಃಖೋಪಲಬ್ಧಿಮಾತ್ರಾಃ—ನಿತ್ಯದುಃಖವನ್ನೇ ಹೊಂದಲರ್ಹವಾದ ಸ್ವರೂಪವುಳ್ಳವರು; ಮಾನುಷಾಃ ತು—ಮನುಷ್ಯರಾದರೋ, ಉಭಯಾತ್ಮಕಾಃ—ಈ ಉಭಯ ಧರ್ಮವುಳ್ಳ (ಸುಖದುಃಖಮಿಶ್ರವಾದ) ಸ್ವರೂಪವುಳ್ಳವರು. ॥೬॥

ತೇಷಾಂ—(ಹೀಗೆ ದೇವ, ದಾನವ, ಮಾನವ ಭೇದದಿಂದ ತ್ರಿವಿಧರಾದ) ಜೀವರಿಗೆ, ಯತ್—ಯಾವುದು, ಅನ್ಯಥಾ ಜಾತಂ—ಬೇರೆಯಾಗಿ ಉಂಟಾಗುವುದೋ (ಸ್ವರೂಪದಲ್ಲಿದ್ದು, ಎಂದರೆ ದೇವತೆಗಳಿಗೆ ದುಃಖಾದಿಗಳೂ, ದಾನವರಿಗೆ ಸುಖಾದಿಗಳೂ ಸಂಸಾರಾವಸ್ಥೆಯಲ್ಲಿ ಕಂಡುಬರುವುವೋ), ತತ್—ಅದು, ಉಪಾಧಿಕೃತಂ—ಕಾರಣಾಂತರದಿಂದ ಉಂಟಾದುದು (ಉಪಾಧಿಯಿಂದಾದುದು—ಪ್ರಾಕೃತವಾದುದು—ದೇಹಾದಿಗಳ ಪ್ರಾಪ್ತಿಗೆ ಕಾರಣವಾದ ಪ್ರಕೃತಿಯೇ ಪ್ರಧಾನ ಕಾರಣವಾಗುಳ್ಳದ್ದು—ಅಸ್ವಾಭಾವಿಕವು); ಮತಂ—ಹೀಗೆಂಬುದು ನಿಶ್ಚಿತವು (ಜ್ಞಾನಿಸಮ್ಮತವು); ಆತ್ಮಯೋಗ್ಯೇನ—ಸ್ವರೂಪಯೋಗ್ಯವಾದ, ವಿಜ್ಞಾನೇನ—ವಿಶೇಷಜ್ಞಾನದಿಂದ, ತಚ್ಚ—ಆ ಸುಖದುಃಖಲಕ್ಷಣವಾದರೋ, ವೀರ್ಯಂ—ಪ್ರಾಬಲ್ಯವನ್ನು, ಉಪಸ್ಥಿತಂ—ಹೊಂದಿರುತ್ತದೆ. ॥೭॥

ದೇವಾನಾಂ—ದೇವತೆಗಳಿಗೆ, ಸಮ್ಯಕ್‌ಜ್ಞಾನಂ—ಯಥಾರ್ಥಜ್ಞಾನವೂ, ಮಾನುಷಾಣಾಂ—ಮನುಷ್ಯರಿಗೆ, ಮಿಶ್ರಿತಂ—ಸಂಶಯಾತ್ಮಕವೂ, ದೈತ್ಯಾನಾಂ ತು—ದೈತ್ಯರಿಗಾದರೋ, ವಿಪರೀತಂ—ಮಿಥ್ಯಾಜ್ಞಾನವೂ (ಸತ್ಯಕ್ಕೆ ವಿರುದ್ಧವಾದುದೂ), ಎಂದು, ಜ್ಞಾನಂ—(ಜೀವ) ಜ್ಞಾನವು, ತ್ರೇಧಾ—ಮೂರು ಪ್ರಕಾರವಾದುದೆಂದು, ವ್ಯವಸ್ಥಿತಂ—ಸಿದ್ಧವಾಗಿದೆ (ಪ್ರತ್ಯೇಕವೆಂಬ ವ್ಯವಸ್ಥೆಯಿದೆ). ॥೮॥

ಸೂಚನೆ: ಈ ಪ್ರಮೇಯಗಳ ವಿವರಣಾತ್ಮಕವಾದುದು ಮುಂದಿನ ೯ನೇ ಪದ.

## ಪದ ೯

ರಾಗ-ನಾಟಿ; ತಾಳ-ರೂಪಕ

**ಸುಖದುಃಖರೂಪರು ಮಧ್ಯಮಜೀವರು**
**ಸುಖಮಾನ್ಯರು ಸುರೋತ್ತಮರು**
**ಸುಖಹೀನರೂಪರು ದುಃಖಜೀವರು ಪರ-**
**ವಿಕೃತಿಯಧಮರು ಎಂದೆಂದೂ** ॥೧॥

**ಅರ್ಥ:** ಮಧ್ಯಮಜೀವರು— (ತ್ರಿವಿಧಜೀವರಲ್ಲಿ ಮಧ್ಯಮರು) ಮಧ್ಯಮ-ವರ್ಗದ ಜೀವರು, ಸುಖದುಃಖಮಿಶ್ರವಾದ ಸ್ವರೂಪವುಳ್ಳವರು; ಸುರೋ-ತ್ತಮರು— ಉತ್ತಮವರ್ಗದವರಾದ ದೇವತೆಗಳು, ಸುಖಮಾನ್ಯರು— ದುಃಖ ರಹಿತ ಸುಖಸ್ವರೂಪವುಳ್ಳವರು (ಅಥವಾ ಸುಖಸ್ವರೂಪರು ಮತ್ತು ಪೂಜ್ಯರು); ಅಧಮರು— ಅಧಮವರ್ಗದ ಜೀವರು, ಸುಖಹೀನರೂಪರು— ಸುಖ-ಲೇಶವೂ ಇಲ್ಲದ ಸ್ವರೂಪವುಳ್ಳವರು, ಎಂದೆಂದೂ— ಯಾವ ಕಾಲಕ್ಕೂ, ಪರವಿಕೃತಿಯ— ತಮ್ಮಿಂದ ಭಿನ್ನವಾದ ಸರ್ವವನ್ನೂ ವಿಪರೀತವಾಗಿಯೇ ತಿಳಿಯುವ (ಮಿಥ್ಯಾಮತಿಗಳಾದ), ದುಃಖಜೀವರು— ದುಃಖಸ್ವರೂಪರು (ನಿತ್ಯದುಃಖವನ್ನೇ ಅಂತ್ಯದಲ್ಲಿ ಹೊಂದುವವರು).

**ನಿತ್ಯಸುಖವೇ ಕೈವಲ್ಯಮಾತ್ರಾಧಮರಿಗೆ**
**ನಿತ್ಯಅಂಧತಮವು**
**ಈ ನ್ಯಾಯದಿಂದ ಸ್ವರೂಪಸುಖದುಃಖವು**
**ಮಾನುಷರಿಗೆ ನಿತ್ಯಬದ್ಧ** ॥೨॥

**ಅರ್ಥ:** ಕೈವಲ್ಯಮಾತ್ರ— ಮೋಕ್ಷವು ಮಾತ್ರ, ನಿತ್ಯಸುಖವೇ— ನಿತ್ಯ ಸುಖಾನುಭವರೂಪವಾದುದೇ ಸರಿ; ಅಧಮರಿಗೆ— ಅಧಮಜೀವರಿಗೆ, ನಿತ್ಯ ಅಂಧತಮವು— ಅಂಧತಮಸ್ಸೆಂಬ ನಿತ್ಯನರಕವು; ಈ ನ್ಯಾಯದಿಂದ (ಸ್ವರೂಪ-ದಲ್ಲಿದ್ದ ಸುಖದುಃಖಗಳೇ ಜೀವರಿಗೆ ಅಂತ್ಯಕ್ಕೆ ದೊರೆಯುವುದೆಂಬ) ಈ ನಿಯಮದಿಂದ, ಮಾನುಷರಿಗೆ— ಮಧ್ಯಮಜೀವರಿಗೆ, ಸ್ವರೂಪ ಸುಖದುಃಖವು — ಸ್ವರೂಪದಲ್ಲಿಯೇ ಇರುವ ಸುಖದುಃಖಗಳೆರಡರ ನಿತ್ಯಾನುಭವವನ್ನು ಹೊಂದುವರು; ನಿತ್ಯಬದ್ಧ— (ಈ ಕಾರಣದಿಂದ) ನಿತ್ಯಬದ್ಧರೆನಿಸುತ್ತಾರೆ.

**ವಿಶೇಷಾಂಶ:** ೧ ಮತ್ತು ೨ನೇ ನುಡಿಗಳಲ್ಲಿ ತ್ರಿವಿಧಜೀವಸ್ವರೂಪ ಲಕ್ಷಣಗಳನ್ನೂ, ಅವರಿಗೆ ದೊರೆಯುವ ಅಂತ್ಯಗತಿಗಳನ್ನೂ ಸಂಗ್ರಹವಾಗಿ ನಿರೂಪಿಸುವರು. ಜೀವಸ್ವರೂಪತ್ರೈವಿಧ್ಯವನ್ನು ನಿರವಕಾಶಶಬ್ದಗಳಿಂದ ಸಾರುವ ಶ್ರುತಿಯೂ ಇದೆ. ಅದು ಹೀಗಿದೆ: *'ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತಿ ಆಸುರೀಮೇವ ಚಾಸುರಾಃ ನೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ॥'* ಮತ್ತು ಈ ಶ್ರುತ್ಯರ್ಥವನ್ನು ವಿವರಿಸುವ ಸ್ಕಾಂದಪುರಾಣವಾಕ್ಯಗಳು ಹೀಗಿವೆ:

*'ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ।*
*ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್॥*

*ದೇವಾ ದೇವಸ್ವಭಾವೇನ ಕರ್ಮಣಾ ಚಾಪ್ಯಸಂಶಯಮ್।*
*ಸಮ್ಯಕ್ ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಮ್॥*

*ನಾನಯೋರನ್ಯಥಾ ಭಾವಃ ಕದಾಚಿತ್ ಕ್ವಾಪಿ ವಿದ್ಯತೇ।*
*ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋಽಪಿ ಚ॥*

ಈ ಶ್ರುತಿಸ್ಮೃತಿಗಳು, ಬ್ರಹ್ಮಸೂತ್ರದ ಉಭಯಲಿಂಗಾಧಿಕರಣದಲ್ಲಿ *'ಓಂ ಅನಭಿಭವಂ ಚ ದರ್ಶಯತಿ ಓಂ'* ಎಂಬ ಸೂತ್ರದ ಭಾಷ್ಯಭಾಗದಲ್ಲಿ ಉದಾಹರಿಸಲ್ಪಟ್ಟಿವೆ.

**ಅರ್ಥ:** ದೇವಾಃ—ದೇವತೆಗಳು, ದೈವೀಮೇವ ಸಂಪತ್ತಿಂ—ದೇವಸ್ವಭಾವದ ನಿತ್ಯಗತಿಯನ್ನೇ, ಅಭಿಗಚ್ಛಂತಿ—ಹೊಂದುತ್ತಾರೆ; ಅಸುರಾಃ—ದೈತ್ಯರು, ಆಸುರೀಮೇವ—ಅಸುರಸ್ವಭಾವದ ಗತಿಯನ್ನೇ (ಬೇರೆಯಲ್ಲ); ಕದಾಚಿತ್—ಎಂದೂ, ಏತಯೋಃ—ಈ ಉಭಯರ ಸ್ವಭಾವಗಳಿಗೆ, ಅಭಿಭವಃ—ತಿರಸ್ಕಾರವಿಲ್ಲ (ಕುಂದಿಲ್ಲ—ವ್ಯತ್ಯಾಸಹೊಂದುವುದೆಂಬುದಿಲ್ಲ—ಅನ್ಯಥಾ ಭಾವವಿಲ್ಲ); ಹಿ—ಏಕೆಂದರೆ, ಸ್ವಭಾವ ಏವ—(ಅವರವರ) ಸ್ವಭಾವವೇ, ಅವತಿಷ್ಠತೇ—ಕೊನೆಗೂ ನಿಲ್ಲುತ್ತದೆ (ಶಾಶ್ವತವಾಗಿ ಉಳಿಯುತ್ತದೆ) (ಶ್ರುತಿ).

ಅಸುರಾಃ—ದೈತ್ಯರು, ಆಸುರೇಣೈವ ಸ್ವಭಾವೇನ—ಅಸುರಸ್ವಭಾವದಿಂದಲೇ, ಕರ್ಮಣಾ ಚ—ಆ ವಿಧಕರ್ಮದಿಂದಲೂ, ವಿಪರೀತೇನ ಜ್ಞಾನೇನ—ಮಿಥ್ಯಾಜ್ಞಾನದಿಂದಲೂ, ವಿನಿಶ್ಚಯಾತ್—ನಿಶ್ಚಯವಾಗಿ (ತಪ್ಪದೇ), ತಮೋ ಯಾಂತಿ—ತಮಸ್ಸನ್ನೇ ಹೊಂದುತ್ತಾರೆ; ದೇವಾಃ—ದೇವತೆಗಳು, ದೇವಸ್ವಭಾವೇನ ಕರ್ಮಣಾ ಚಾಪಿ—ದೇವಸ್ವಭಾವದಿಂದಲೂ ತದನುಗುಣವಾದ

ಕರ್ಮದಿಂದ ಸಹ, ಅಸಂಶಯಂ—ನಿಶ್ಚಯವಾಗಿ, ಸಮ್ಯಕ್‌ಜ್ಞಾನೇನ—(ಹೊಂದಲ್ಪಟ್ಟ) ಯಥಾರ್ಥ ಜ್ಞಾನದಿಂದ, ಪರಮಾಂ—ಉತ್ಕೃಷ್ಟವಾದ, ವೈಷ್ಣವೀಂ ಗತಿಂ—ವೈಕುಂಠಾದಿ ವಿಷ್ಣುಲೋಕಗಳನ್ನು, ಗಚ್ಛಂತಿ—ಹೊಂದುತ್ತಾರೆ.

**ಲಿಂಗದೇಹವೆಂಬ ಪ್ರಾಕೃತ ದೇಹವು**
**ಸಂಗದಿ ಸಂಸಾರದಲ್ಲಿ**
**ಕಂಗೊಳಿಸವು ಗಡ ಈ ಲಿಂಗದೇಹವು**
**ಭಂಗವಪ್ಪಂ ತೋರುವವು** ॥೩॥

**ಅರ್ಥ:** ಸಂಸಾರದಲ್ಲಿ—(ಜೀವನು) ಸಂಸಾರಾವಸ್ಥೆಯಲ್ಲಿರುವಾಗ, ಲಿಂಗ ದೇಹವೆಂಬ—ಲಿಂಗದೇಹವೆಂದು ಕರೆಯಲ್ಪಡುವ, ಪ್ರಾಕೃತದೇಹವು—ಸೂಕ್ಷ್ಮ ಪ್ರಕೃತ್ಯಂಶಗಳಿಂದ ನಿರ್ಮಿತವಾದ ದೇಹವು, ಸಂಗದಿ—(ಜೀವಸ್ವರೂಪವನ್ನು ಮುಚ್ಚಿ) ಜೊತೆಯಲ್ಲಿಯೇ ಇರುತ್ತದೆ; ಕಂಗೊಳಿಸವು ಗಡ—(ಈ ಜೀವರನ್ನಾಚ್ಛಾದಿಸುವ ಲಿಂಗದೇಹಗಳು ಸ್ವರೂಪದಿಂದ ಭಿನ್ನವೆಂದು ತಿಳಿಯಲಾಗದಂತೆ ಅತ್ಯಂತ ನಿಕಟವಾಗಿ ಹೊಂದಿಕೊಂಡು) ಪ್ರತ್ಯೇಕವಾಗಿ ಕಾಣಲ್ಪಡುವುದಿಲ್ಲ, ಆಶ್ಚರ್ಯ! ಈ ಲಿಂಗದೇಹವು—ಹೀಗಿರುವ ಲಿಂಗದೇಹವು, ಭಂಗವಪ್ಪಂ—ಭಂಗ ಹೊಂದಿದಾಗ (ಸ್ವರೂಪದಿಂದ ಬೇರೆಯಾಗಿ ತೊಲಗಿದಾಗ), ತೋರುವವು—ಕಾಣುತ್ತವೆ.

**ವಿಶೇಷಾಂಶ:** ಅನಾದಿಯಾದ ಲಿಂಗದೇಹವು ಸ್ವರೂಪದೇಹಕ್ಕೆ ತೊಡಿಸಿದ ಕಂಚುಕದಂತಿದೆ. ಗಜ್ಜುಗದ ಉದಾಹರಣೆಯನ್ನು ಕೊಟ್ಟು, ಅದರೊಳಗಿನ ಬೀಜವನ್ನು ಮುಚ್ಚಿಕೊಂಡಿರುವ ಮೇಲಿನ ಚಿಪ್ಪಿನಂತಿರುವುದೆಂದು ಹೇಳುವುದೂ ಉಂಟು. ಸ್ವರೂಪದ ಆಕೃತಿಸೂಚಕವಾದ, ತತ್ಸದೃಶವಾದ ಆಕಾರವುಳ್ಳದ್ದಾದುದರಿಂದ, **'ಲಿಂಗ'** ಶಬ್ದದಿಂದ ಕರೆಯಲ್ಪಡುತ್ತದೆ. ಲಿಂಗ ಶಬ್ದಾರ್ಥವು, ಲಕ್ಷಣ—ನಿರ್ಧಾರಕಹೇತು—ಸೂಚಕ ಇತ್ಯಾದಿಯಾಗಿದೆ. ವಿರಜಾ ಸ್ನಾನದಿಂದ ಲಿಂಗದೇಹವು ಕಳಚಿಹೋದಾಗ, ಆ ನದೀಜಲದಲ್ಲಿ ತೇಲಿಕೊಂಡು ಹೋಗುವುದನ್ನು ಕಾಣಬಹುದೆಂದೂ ಹೇಳಲಾಗುತ್ತದೆ. ಸರ್ಪದ ದೇಹವನ್ನು ಮುಚ್ಚಿ ಅದಕ್ಕೆ ಅಂಟಿಕೊಂಡಿರುವ 'ಪೊರೆ ಅಥವಾ ಪರೆ'ಯು, ಪ್ರತ್ಯೇಕವಾಗಿ ನಮಗೆ ಕಾಣದಿದ್ದರೂ, ದೇಹದಿಂದ ಬಿಡಲ್ಪಟ್ಟ ಪೊರೆಯನ್ನು ಕಾಣುತ್ತೇವೆ. ಲಿಂಗದೇಹವನ್ನೂ ಹೀಗೆಂದು ತಿಳಿಯಬಹುದು. ಆದರೆ ದೃಷ್ಟಾಂತದಲ್ಲಿ ಸರ್ವಸಾಮ್ಯವನ್ನು ಅಪೇಕ್ಷಿಸಬಾರದು.

**ಹಿಂಗಿದ ಸುಖದುಃಖವೆಲ್ಲರಿಗು ಸರಿ**
**ಭಾಗ್ಯವಿದೆಂತುಟೋ ಬರಿದೆ**
**ಮೆಲುಗೊಬ್ಬ ಸುಖದುಃಖವೆರಡು ಕೂಡಿಹುದೇ**
**ಸಂಸಾರವೆಂದು ಸಕಲ ಬುಧರಿಗು ಸಮ್ಮತವು ॥೪॥**

**ಅರ್ಥ:** ಸುಖದುಃಖವೆರಡು ಕೂಡಿಹುದೇ—ಸುಖದುಃಖಗಳೆರಡೂ ಸೇರಿರುವುದೇ (ಒಂದರ ಮೇಲೊಂದರಂತೆ ಎರಡರ ಅನುಭವವೂ ಆಗುತ್ತಿರುವುದೇ—*'ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ'* ಎಂಬಂತೆ), ಸಂಸಾರವೆಂದು—ಸಂಸಾರವೆಂಬುದು, ಸಕಲ ಬುಧರಿಗು—ಎಲ್ಲ ಜ್ಞಾನಿಗಳಿಗೂ, ಸಮ್ಮತವು—ಒಪ್ಪಿತವು (ಸಮಾನವಾದ ಅಭಿಪ್ರಾಯವು); ಹಿಂಗಿದ—ನಷ್ಟವಾದ, ಸುಖದುಃಖವು—ಸಾಂಸಾರಿಕ ಸುಖದುಃಖಗಳುಳ್ಳವರೆಂಬುದು, ಎಲ್ಲರಿಗು ಸರಿ—ಎಲ್ಲ ಜೀವರಿಗೂ ಸಮಾನವೇ (ಲಿಂಗದೇಹಭಂಗದ ನಂತರ ಸ್ವಸ್ವರೂಪಸ್ಥಿತಿಯನ್ನು ಹೊಂದುವುದರಿಂದ, ಸಂಸಾರಾವಸ್ಥೆಯಲ್ಲಿ ಅನುಭವಿಸುತ್ತಿದ್ದ ಸುಖದುಃಖಗಳು ಆ ಮುಂದೆ ಇಲ್ಲವೆಂಬುದು ಎಲ್ಲ ಜೀವರಿಗೂ ಸಮವೇ); ಒಬ್ಬ—ಅದರಲ್ಲಿ ಒಂದು ವರ್ಗದ ಜೀವಸಮೂಹವು (ಮುಕ್ತಿಯೋಗ್ಯಜೀವಜಾತವು), ಬರಿದೆ—ಕೇವಲ, ಮೆಲುಗೆ—ಮೆಲ್ಲಲು (ಸುಖವನ್ನೇ ಆನಂತರವೂ ಅನುಭವಿಸುತ್ತಿರಲು), ಭಾಗ್ಯವಿದೆಂತುಟೋ—ಈ ಭಾಗ್ಯವೇ ಎಷ್ಟು ಅತಿಶಯವು? (ಉತ್ತಮಜೀವರು ನಿತ್ಯಾನಂದವನ್ನನುಭವಿಸುವರೆಂಬುದು ಅವರ ದೊಡ್ಡ ಭಾಗ್ಯವೇ ಸರಿ).

**ಪ್ರಕೃತಿ ಪೋದಮೇಲೆ ಚಿದ್ರೂಪ ಸುಖದುಃಖ**
**ವಿಕೃತಿಯದಕೆ ಭಾವವಿಲ್ಲ ॥೫॥**

**ಅರ್ಥ:** ಪ್ರಕೃತಿ ಪೋದಮೇಲೆ—ಪ್ರಕೃತಿಸಂಬಂಧವೇ ತಪ್ಪಿದಮೇಲೆ (ಲಿಂಗದೇಹಸಹ ಭಂಗವಾದ ನಂತರ), ಚಿದ್ರೂಪ—ಚೇತನಸ್ವರೂಪವಾದ, ಸುಖದುಃಖ—ಸುಖ ಅಥವಾ ದುಃಖ ಅಥವಾ ಅವುಗಳ ಮಿಶ್ರಣದ ಅನುಭವವು (ಉಂಟಾಗುತ್ತದೆ); ಅದಕೆ ವಿಕೃತಿಯ ಭಾವವಿಲ್ಲ—(ಈ ಅನುಭವವು ನಿತ್ಯವಾದುದು—ಚೇತನಸ್ವರೂಪವು ನಿತ್ಯವಾದ್ದರಿಂದ) ಅದಕ್ಕೆ ವಿಕಾರಹೊಂದುವುದೆಂಬುದಿಲ್ಲ.

**ಅದರಿಂದ ತನುಭೃತ್ಸ್ವಭಾವಸಂಪ್ರಾಪ್ತಿಯೆಂಬು-**
**ದಿದೆ ಮಿಕ್ಕುದೆಲ್ಲುಪಾಧಿಕ**

**ಬುಧರೆಲ್ಲ ನೋಡಿ ಈ ಫಲಕೆ ತುದಿಯೊಳು ತ್ರಿ-**
**ವಿಧರಿಗು ಲಿಂಗಭಂಗ ಬೇಕು ॥೬॥**

**ಅರ್ಥ:** ಅದರಿಂದ—ಜೀವರು ವಿಕಾರರಹಿತನಿತ್ಯಸ್ವರೂಪವುಳ್ಳವರಾದ್ದ-ರಿಂದ, ತನುಭೃತ್ಸ್ವಭಾವಸಂಪ್ರಾಪ್ತಿ (ಪ್ರಾಕೃತದೇಹಸಂಬಂಧವನ್ನು ತೊರೆದು) ದೇಹಧಾರಿಗಳು ತಮ್ಮ ಸ್ವಭಾವಸ್ಥಿತಿಯನ್ನು ಚೆನ್ನಾಗಿ ಹೊಂದುವುದು, ಎಂಬು-ದಿದೆ—ಎಂಬುವುದುಂಟು (ಸೃಷ್ಟ್ಯಾದಿರೂಪ ಶ್ರೀಹರಿಕ್ರೀಡೆಯು ಇದಕ್ಕಾಗಿಯೇ —ಜೀವರಿಗೆ ಸ್ವಸ್ವರೂಪಗಳನ್ನು ಹೊಂದಿಸಲಿಕ್ಕಾಗಿಯೇ); ಮಿಕ್ಕುದೆಲ್ಲ—(ಸ್ವಭಾವವನ್ನುಳಿದು) ಇತರವೆಲ್ಲವೂ (ಸಾಂಸಾರಿಕ ಸುಖದುಃಖಾದಿ ಸರ್ವವೂ), ಉಪಾಧಿಕ—(ಲಿಂಗದೇಹಾದಿ) ಕಾರಣದಿಂದಾದುದು; ಬುಧರೆಲ್ಲ ನೋಡಿ—ವಿವೇಕಿಗಳೆಲ್ಲರೂ ವಿಚಾರದಿಂದ ತಿಳಿದುನೋಡಿರಿ; ಈ ಫಲಕ್ಕೆ, ತುದಿಯೊಳು —ಕೊನೆಗೆ, ತ್ರಿವಿಧರಿಗು—ತ್ರಿವಿಧ ಜೀವರಿಗೂ, ಲಿಂಗಭಂಗ ಬೇಕು—ಲಿಂಗದೇಹದ ನಾಶವೆಂಬುದು ಬೇಕೇ ಬೇಕು (ಅತ್ಯವಶ್ಯಕವಲ್ಲವೇ?)

**ವಿಶೇಷಾಂಶ:** ೩ನೇ ಸೃಷ್ಟಿಸಂಧಿಯ ಶ್ಲೋಕ ೩ರ ಅರ್ಥವಿವರಣೆಯನ್ನು ನೋಡಬೇಕು. ಆ ಶ್ಲೋಕದಲ್ಲಿರುವ 'ತನುಭೃತ್ಸ್ವಭಾವಸಂಪ್ರಾಪ್ತಯೇ' ಎಂಬುದು ಮಿಶ್ರಸ್ವಭಾವದ ಜೀವರಿಗೆ ಸಹ ಲಿಂಗಭಂಗದಿಂದ ಸ್ವರೂಪಸ್ಥಿತಿ-ಯನ್ನು ಹೊಂದುವುದೆಂಬುದು ಸಿದ್ಧವಾಗುತ್ತದೆನ್ನುತ್ತಾರೆ.

ಈ ಮುಂದಿನ ೧೧ ಮತ್ತು ೧೨ನೇ ನುಡಿಗಳ ವಿವರಣೆಗಳನ್ನು ನೋಡಬೇಕು.

**ಅಲ್ಲದಿದ್ದರೆ ತ್ರಿವಿಧಜೀವಸ್ವಭಾವಕ್ಕೆ**
**ಕಲಹಾಕಿದ ಕೋವಿದರು**
**ಅಲ್ಲಿಯೋ ಇಲ್ಲಿಯೋ ಯಿಲ್ಲದ ಕಾರಣ**
**ಬಲ್ಲವರಿದ ಸ್ವಭಾವವೆನರು ॥೭॥**

**ಅರ್ಥ:** ಕೋವಿದರು ಕಲಹಾಕಿದ—ಪಂಡಿತರು ಪ್ರಮಾಣಗಳ ಮೇಳನ-ದಿಂದ, ತ್ರಿವಿಧಜೀವಸ್ವಭಾವಕ್ಕೆ—ನಿರ್ಣೈಸಿದ, ತ್ರಿವಿಧಜೀವರ ಸ್ವಭಾವಗಳಿಗೆ, ಅಲ್ಲದಿದ್ದರೆ—(ಲಿಂಗಭಂಗದಿಂದ ಸ್ವರೂಪಪ್ರಾಪ್ತಿಯೆಂಬುದು) ಇಲ್ಲದಿದ್ದರೆ, ಬಲ್ಲವರು—ವಿವೇಕಿಗಳು, ಇದ—(ನಿತ್ಯಸಂಸಾರಿಗಳೆಂಬ ಮಧ್ಯಮವರ್ಗ-ದವರ) ಸ್ವರೂಪವನ್ನು, ಅಲ್ಲಿಯೋ ಇಲ್ಲಿಯೋ ಯಿಲ್ಲದ ಕಾರಣ—ಎಲ್ಲಿಯೂ ಇಲ್ಲದ್ದರಿಂದ, (ಇಲ್ಲಿಯೋ—ಸಂಸಾರಾವಸ್ಥೆಯಲ್ಲಿಯೋ, ಅಲ್ಲಿಯೋ ನಂತ-

ರವೋ — ಮುಕ್ತಿಯೋಗ್ಯರು ತಂತಮ್ಮ ಸ್ವರೂಪದ ಆವಿರ್ಭಾವವನ್ನು ಹೊಂದಿದಾಗ ಸಹ) ಸ್ವರೂಪದ ಆವಿರ್ಭಾವವೇ ಇಲ್ಲದೇ ನಿತ್ಯವೂ ಸಂಸಾರದಲ್ಲಿಯೇ ಇರುವರೆಂದು ಹೇಳಿದರೆ, ಸ್ವಭಾವವು ಎನರು — (ಸ್ವರೂಪಪ್ರಾಪ್ತಿಯಿಲ್ಲವೆಂಬುದನ್ನು) ಆ ಜೀವರ ಸ್ವಭಾವವೆಂದು ಹೇಳುವುದಿಲ್ಲ. **ಅಥವಾ** ತ್ರಿವಿಧಜೀವಸ್ವಭಾವಗಳಿಗೂ ಸ್ವರೂಪಪ್ರಾಪ್ತಿಯೆಂಬುದು ಇಲ್ಲದಿದ್ದರೆ, ಕೋವಿದರು — ಜ್ಞಾನಿಗಳು, ಕಲಹಾಕೆ — ಈ ವಿಷಯದಲ್ಲಿ (ನಿತ್ಯಸಂಸಾರಿಗಳಿಗೆ ಲಿಂಗಭಂಗದಿಂದ ಸ್ವರೂಪಪ್ರಾಪ್ತಿಯಿಲ್ಲವೆಂಬ ವಿಷಯದಲ್ಲಿ) ವಿವಾದಮಾಡುವುದಕ್ಕೆ, ಇದ — ಇದನ್ನು (ಮಧ್ಯಮವರ್ಗದ ಜೀವರು ನಿತ್ಯವೂ ಸಂಸಾರದಲ್ಲಿಯೇ ಇರುವರೆಂಬುದನ್ನು), ಅಲ್ಲಿಯೋ ಇಲ್ಲಿಯೋ ಇಲ್ಲದ ಕಾರಣ, ಇದ — ಎಲ್ಲಿಯೂ ಇಲ್ಲದ ಇದನ್ನು (ಎಂದೂ ಅಭಿವ್ಯಕ್ತವಾಗದುದನ್ನು), ಬಲ್ಲವರು — ವಿವೇಕಿಗಳು, ಸ್ವಭಾವವೆನರು — ಸ್ವಭಾವವೆಂದು ಕರೆಯುವುದಿಲ್ಲ. (ಆದ್ದರಿಂದ ಆ ವರ್ಗದ ಜೀವರಿಗೂ ಲಿಂಗಭಂಗದಿಂದ ಸ್ವಭಾವಪ್ರಾಪ್ತಿಯನ್ನು ಒಪ್ಪಲೇಬೇಕು).

**ಬಲ್ಲಿದ ಹರಿಗೆ ವ್ಯರ್ಥಸ್ತುತಿ ಸಲ್ಲದು**
**ಛಲವ್ಯಾತಕೆ ಮನುಜನಿಗೆ**
**ಎಲ್ಲಿ ಪೋದರು ಬರಿದೆ ಅವಧಾನದಿ ಕಾಲ-**
**ದಲ್ಲಿ ಮಾಡಿದ ಸಾಧನಗಳು** ॥೮॥

**ಅರ್ಥ:** ಬಲ್ಲಿದ ಹರಿಗೆ — ಸರ್ವಶಕ್ತನಾದ ಶ್ರೀಹರಿಗೆ, ವ್ಯರ್ಥಸ್ತುತಿ — ಅರ್ಥವಿಲ್ಲದ ಸ್ತೋತ್ರವು, ಸಲ್ಲದು — ಕೂಡುವುದಿಲ್ಲ (ಜೀವರಿಗೆ ಅವರವರ ಸ್ವಭಾವಗಳನ್ನು ಹೊಂದಿಸಲಿಕ್ಕಾಗಿ ಸೃಷ್ಟ್ಯಾದಿಗಳನ್ನು ನಡೆಸುವ ಮಹಿಮೆಯುಳ್ಳವನೆಂಬ ಸ್ತುತಿಯು ವ್ಯರ್ಥವಾಗುತ್ತದೆ); ಮನುಜನಿಗೆ — ಅಲ್ಪಜ್ಞನಾದ ಮಾನವನಿಗೆ, ಛಲವ್ಯಾತಕೆ — (ತನ್ನ ವಾದವೇ ಸರಿಯೆಂಬ) ಆಗ್ರಹವೇಕೆ? ಕಾಲದಲ್ಲಿ — ಯೋಗ್ಯಕಾಲದಲ್ಲಿ, ಅವಧಾನದಿ — ಏಕಚಿತ್ತನಾಗಿ, ಮಾಡಿದ — ನಡೆಸುವ, ಸಾಧನಗಳು — ಪ್ರಯತ್ನಗಳು (ಫಲ ಪ್ರಾಪ್ತಿಗಾಗಿ ಕೈಗೊಳ್ಳುವ ನಾನಾ ಉಪಾಯಗಳು), ಎಲ್ಲಿ ಪೋದರು — ಎಲ್ಲಿಯಾದರೂ (ಜಗತ್ತಿನಲ್ಲಿ ಎಲ್ಲಿ ಹೋಗಿ ನೋಡದರೂ), ಬರಿದೆ — ವ್ಯರ್ಥವಾಗುವುದುಂಟೇ? (ಮಧ್ಯಮ ಜೀವರ ಸಾಧನೆಗಳು, ಅವರ ಸ್ವಭಾವಪ್ರಾಪ್ತಿಗೆ ಕಾರಣವಲ್ಲೆಂದರೆ, ವ್ಯರ್ಥ-

ವಾಗಬೇಕಾಗುತ್ತದೆಂಬ ಅನ್ವಯುಕ್ತಿಯಿಂದ ಸಹ ನಿತ್ಯಸಂಸಾರಿಗಳಿಗೆ ಲಿಂಗ-ಭಂಗವುಂಟೆಂದು ಸಾಧಿಸುತ್ತಾರೆ).

**ಮೂರು ವಿಧದ ಸಾಧನದಿಂದ ಮೂವರಿಗು**
**ಬೇರೆಬೇರೆ ಫಲ ಬೇಕು**
**ಓರಂತೆ ಶಾಸ್ತ್ರದಕೃತಹಾನಿಗಳು ಈಗ**
**ಬಾರದಿಹದು ಇಂತಲ್ಲದಡೆ** ॥೯॥

ಸೂ: ಇದೇ ವಿಷಯದಲ್ಲಿ ಬೇರೆ ಯುಕ್ತಿಯನ್ನೂ ತೋರಿಸುತ್ತಾರೆ:

**ಅರ್ಥ:** ಮೂವರಿಗು—ತ್ರಿವಿಧ ಜೀವರಿಗೂ, ಮೂರು ವಿಧದ ಸಾಧನ-ದಿಂದ—ಮೂರು ಪ್ರಕಾರದ ಸಾಧನಗಳಿಂದ, ಬೇರೆಬೇರೆ—ಭಿನ್ನಭಿನ್ನ, ಫಲ ಬೇಕು—ಫಲವು ದೊರೆಯಬೇಕು; ಇಂತಲ್ಲದಡೆ—ಹೀಗಲ್ಲದಿದ್ದರೆ (ಶಾಸ್ತ್ರ-ಗಳಲ್ಲಿ ಹೇಳಲಾಗುವ ಉತ್ತಮಾಧಮಮಧ್ಯಮರ ಭಿನ್ನ ಸಾಧನೆಗಳಿಗೆ ಭಿನ್ನ-ಫಲಗಳಿಲ್ಲದಿದ್ದರೆ), ಓರಂತೆ (ವೋರಂತೆ)—ನಿಯಮೇನ (ತಪ್ಪದೇ), ಶಾಸ್ತ್ರದ —ಶಾಸ್ತ್ರವಿಧಿಗಳ, ಅಕೃತ ಹಾನಿಗಳು—ತ್ಯಾಗದಿಂದ ನಷ್ಟಗಳು, ಈಗ—ವಿರುದ್ಧವಾದದಲ್ಲಿ, ಬಾರದಿಹದು—ಉಂಟಾಗದೆ ಇರಬೇಕಾಗುವುದು. (ವಿಧಿತ್ಯಾಗದಿಂದ ಹಾನಿ ಇದ್ದೇ ಇದೆ).

**ಭಕ್ತಿದ್ವೇಷಗಳಿಗೆ ಫಲವುಂಟೆಂಬ ವೇದ**
**ಯುಕ್ತಿ ಮಧ್ಯಮಜೀವರಲ್ಲಿ**
**ವ್ಯರ್ಥವಾದರೆ ಶ್ರುತಿ ವ್ಯರ್ಥ ತಪ್ಪಿಹೋದು**
**ನಿತ್ಯಶ್ರುತಿ ವ್ಯರ್ಥಗೊಡದಿರು** ॥೧೦॥

**ಅರ್ಥ:** ಭಕ್ತಿದ್ವೇಷಗಳಿಗೆ—(ಶ್ರೀಹರಿಯಲ್ಲಿ ಜೀವರು ಮಾಡುವ) ಭಕ್ತಿ ಮತ್ತು ದ್ವೇಷಗಳಿಗೆ, ಫಲವುಂಟೆಂಬ—(ಅನುಗ್ರಹ-ನಿಗ್ರಹರೂಪದ) ಫಲ-ವಿರುತ್ತದೆಂದು ಹೇಳುವ, ವೇದಯುಕ್ತಿ—ವೇದದಲ್ಲಿ ತೋರಿಸುವ ಯುಕ್ತಿಯು, ಮಧ್ಯಮಜೀವರ ವಿಷಯದಲ್ಲಿ, ವ್ಯರ್ಥವಾದರೆ—ನಿರುಪಯೋಗಿಯೆಂದರೆ (ಅನ್ವಯಿಸುವುದಿಲ್ಲವೆಂದರೆ), ಶ್ರುತಿ—ವೇದವು, ವ್ಯರ್ಥ ತಪ್ಪಿಹೋದು—ಅರ್ಥವಿಲ್ಲದ ಯುಕ್ತಿಯನ್ನು ತೋರಿಸಿ ತಪ್ಪು ಮಾಡಿರುವುದೆಂದು ಹೇಳ-ಬೇಕಾಗುವುದು; ನಿತ್ಯಶ್ರುತಿ—ನಿತ್ಯಶ್ರುತಿಗಳನ್ನು (ಸರ್ವದಾ ಪರಮಪ್ರಮಾಣ-ಗಳಾದ ವೇದಗಳನ್ನು), ವ್ಯರ್ಥಗೊಡದಿರು—ವ್ಯರ್ಥಗೊಳಿಸಬೇಡ. (ಉಭ-

ಯಾತ್ಮಕಸಾಧನೆಗೆ ಉಭಯಾತ್ಮಕ ಸುಖದುಃಖಮಿಶ್ರ—ಫಲವಿಲ್ಲೆಂದು ಬಗೆದು, ಕೆಡಬೇಡ—ತಪ್ಪಾಗಿ ತಿಳಿದು ನಷ್ಟನಾಗಬೇಡ).

**ಆದರಿಂದ ತ್ರಿವಿಧ ಜೀವರಿಗು ಲಿಂಗದೇಹ**
**ತುದಿಯೊಳು ಹೋಹದೆಂಬುವುದು**
**ಬುಧರುಗಳಿಗು ಸಮತ ಯಿದನರಿಯದ ಮೂಢ**
**ಒದರಿದರೇನು ಫಲವಾಹೋದು ॥೧೧॥**

**ಅರ್ಥ:** ಆದರಿಂದ—ಈ ಹಿಂದೆ ಹೇಳಿದ ಯುಕ್ತಿಸಹಿತ ಪ್ರಮಾಣವಾಕ್ಯ-ಗಳಿಂದ ಸಿದ್ಧವಾಗುವುದರಿಂದ, ತ್ರಿವಿಧ ಜೀವರಿಗು—ಉತ್ತಮ-ಮಧ್ಯಮ-ಅಧಮರೆಂಬ ಮೂರು ವರ್ಗದ ಜೀವರಿಗೂ, ತುದಿಯೊಳು—ಅಂತ್ಯಕ್ಕೆ (ಅವರವರ ಸಾಧನ ಕಾಲವು ಮುಗಿಯಲು), ಲಿಂಗದೇಹವು—(ಅನಾದಿ-ಯಾದ) ಲಿಂಗದೇಹವೆಂಬ ಆಚ್ಛಾದನೆಯು, ಹೋಹದೆಂಬುವುದು—ಬಿಟ್ಟು-ಹೋಗುತ್ತದೆಂಬುವುದು, ಆ ಬುಧರುಗಳಿಗು—(ವಿಚಾರಪರರಾದ) ಎಲ್ಲ ಜ್ಞಾನಿಗಳಿಗೂ, ಸಮತ—ಸಮ್ಮತವೇ ಸರಿ (ಭಿನ್ನಾಭಿಪ್ರಾಯವಿಲ್ಲ); ಇದನು—ಹೀಗೆ ಜ್ಞಾನಿಸಮ್ಮತವೆಂಬುದನ್ನು, ಅರಿಯದ—ತಿಳಿಯದ, ಮೂಢ—ಅಜ್ಞಾನಿ (ಅಥವಾ ದುರಾಗ್ರಹಿಯು), ಒದರಿದರೆ—ಗಟ್ಟಿಯಾಗಿ ಕೂಗಿದರೆ (ಮಧ್ಯಮಜೀವರಿಗೆ ಲಿಂಗಭಂಗವಿಲ್ಲೆಂದು ಅರಚಿದರೆ), ಏನು ಫಲ-ವಾಹೋದು—ಏನು ಪ್ರಯೋಜನ? (ಏನೂ ಇಲ್ಲ—ವ್ಯರ್ಥವೇ ಸರಿ).

**ವಿಶೇಷಾಂಶ:** (೧) ಭಗವಂತನಲ್ಲಿ ಜೀವರು ಮಾಡುವ ಭಕ್ತಿ ದ್ವೇಷಗಳಿಗೆ ಫಲವನ್ನು ಹೇಳುವ ವೇದವು, 'ಭಕ್ತಿಯಿದ್ದರೆ ಹರಿಪ್ರಸಾದ—ಇಲ್ಲದಿದ್ದರೆ ಇಲ್ಲ' (ಅನ್ವಯ—ವ್ಯತಿರೇಕ) ಅನುಮಾನಗಳನ್ನು ಸೂಚಿಸುತ್ತದೆ.

*'ತತ್ರಾಮೃತಂ ಸುರಗಣಾ ಫಲಮಂಜಸಾಪುಃ*
*ಯತ್ಪಾದಕಂಜರಜಸಾಶ್ರಯಣಾನ್ನ ದೈತ್ಯಾಃ॥'*—(ಭಾಗವತ)

ಎಂಬ ಮುಂತಾದ ಸ್ಮೃತಿವಾಕ್ಯಗಳಲ್ಲಿ, ಈ ಯುಕ್ತಿಯ ಸ್ಪಷ್ಟಸೂಚನೆಯನ್ನು ಕಾಣುತ್ತೇವೆ. ಇಲ್ಲಿ, ದೇವಾಸುರರು ದೇಶ, ಕಾಲ, ಫಲೋದ್ದೇಶ, ಸಾಧನ-ಗಳು ಮೊದಲಾದವುಗಳಿಂದ ಸಮರಾಗಿದ್ದರೂ, ದೇವತೆಗಳು ಶ್ರೀಹರಿಪಾದ ರಜಸ್ಸನ್ನು ಭಕ್ತಿಯಿಂದ ಆಶ್ರಯಿಸಿದ್ದರಿಂದ (ಹೇತು) ಅಮೃತವನ್ನು ಹೊಂದಿ-ದರು—ದೈತ್ಯರಿಗೆ ದೊರೆಯಲಿಲ್ಲವೆಂಬ ಯುಕ್ತಿಯ ಪ್ರತಿಪಾದನೆಯು ಸ್ಪಷ್ಟ-

ವಿದೆ. ಎಲ್ಲ ಸಾಧನೆಗಳಿದ್ದು ಭಕ್ತಿಯಿಲ್ಲದಿದ್ದರೆ ಫಲವಿಲ್ಲ; ಹೀಗೆಯೇ ಹರಿದ್ವೇಷದಿಂದ ನಿತ್ಯನರಕದ ಪ್ರಾಪ್ತಿಯೂ ಸಾಧಿಸಲಾಗಿದೆ. ಭಕ್ತಿದ್ವೇಷಗಳೆಂಬ ಉಭಯಾತ್ಮಕ ಭಾವನೆಗಳು ನಿಷ್ಫಲವೆಂದು ತಿಳಿಯುವುದು ಯುಕ್ತಿವಿರುದ್ಧವೇ ಸರಿ. ಭಕ್ತಿ-ದ್ವೇಷಗಳಿಗೆ, ಸಂಸಾರದಲ್ಲಿ ಮಾತ್ರ, ತಾತ್ಕಾಲಿಕ ಸುಖದುಃಖಗಳೇ ಫಲಗಳಲ್ಲ. ಭಕ್ತಿಯಿಂದ ನಿತ್ಯಾನಂದಸ್ಥಿತಿರೂಪದ ಅಮೃತವೂ (ಮೋಕ್ಷವೂ), ದ್ವೇಷದಿಂದ ನಿತ್ಯದುಃಖಸ್ಥಿತಿರೂಪದ ತಮಸ್ಸೂ ಫಲಗಳೆಂಬುದು ವೇದಾದಿ ಶಾಸ್ತ್ರಗಳ ತಾತ್ಪರ್ಯ. ಹೀಗಿರಲು ಭಕ್ತಿ ದ್ವೇಷಗಳೆರಡೂ ಉಳ್ಳವರಿಗೆ ನಿತ್ಯ-ಸುಖದುಃಖ ಮಿಶ್ರರೂಪ ಫಲವಿರಬೇಕಲ್ಲವೇ? ಮಧ್ಯಮಜೀವರ ಜ್ಞಾನವು ಸಂಶಯಾತ್ಮಕವಾದುದು. ಯಥಾರ್ಥ—ಮಿಥ್ಯಾಜ್ಞಾನಗಳೆಂಬ ಉಭಯವಿಧ-ಜ್ಞಾನದಲ್ಲಿ ಯಾವುದೊಂದರಲ್ಲಿಯೂ ದಾರ್ಢ್ಯ(ನಿಶ್ಚಯ)ವಿಲ್ಲದ್ದು. ಯಥಾರ್ಥ-ನಿಶ್ಚಯವೇ ಭಕ್ತಿಮಿಥ್ಯಾಜ್ಞಾನವೇ ದ್ವೇಷ. (ಜ್ಞಾನಸ್ಯ ಭಕ್ತಿಭಾಗತ್ವಾತ್ ಭಕ್ತಿ-ರ್ಜ್ಞಾನಮಿತೀರ್ಯತೇ).

(೨) ಸೃಷ್ಟಿಸಂಧಿಯ ೩ನೇ ಶ್ಲೋಕಭಾಗವನ್ನು ಪುನಃ ಓದಿಕೊಳ್ಳಬೇಕು. ಅಲ್ಲಿ ಉದಾಹರಿಸಿರುವ *'ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್'* ಇತ್ಯಾದಿಗಳೊಂದಿಗೆ, *'ತ್ರಿದಿವನಿರಯಭೂಗೋಚರಾನ್ನಿತ್ಯಬದ್ಧಾನ್'* ಎಂದರೆ, 'ಸ್ವರ್ಗನರಕಭೂಮಿಗಳಲ್ಲಿ ಸುತ್ತುವ ನಿತ್ಯಬದ್ಧರನ್ನೂ' ಎಂದು ವಾಯು ಸ್ತುತಿಯಲ್ಲಿ ಹೇಳಿರುವುದನ್ನೂ, *'ನಿತ್ಯಾವರ್ತಾಸ್ತು ಮಾಧ್ಯಮಾಃ— 'ಸೃತಿ-ಯೋಗ್ಯಾಃ ಸದೈವ ಹಿ'*— 'ನಿತ್ಯದಲ್ಲಿ ಸುತ್ತುತ್ತಿರುವರು ಮಧ್ಯಮರು—ಸರ್ವದಾ ಸಂಸಾರಯೋಗ್ಯರು' ಇತ್ಯಾದಿ ಮಧ್ಯಮವರ್ಗದ ಜೀವರ ಸ್ವರೂಪವನ್ನು ಹೇಳುವ ವಾಕ್ಯಗಳನ್ನೂ, ಆಧಾರವಾಗಿಟ್ಟುಕೊಂಡು, ಮಧ್ಯಮವರ್ಗದವರಿಗೆ ಲಿಂಗಭಂಗದಿಂದ ಸ್ವರೂಪಪ್ರಾಪ್ತಿಯಿಲ್ಲವೆಂದು ಕೆಲವರು ತಿಳಿಯುತ್ತಾರೆ. ಆದರೆ ಮತ್ತೆ ಕೆಲವರು (ಈ ಗ್ರಂಥಕರ್ತರಾದ ಶ್ರೀವಾದಿರಾಜಸ್ವಾಮಿಗಳೂ ಸಹ), ನಾನಾ ಪ್ರಮಾಣವಾಕ್ಯಗಳನ್ನೂ ಯುಕ್ತಿಗಳನ್ನೂ ಆಶ್ರಯಿಸಿ, ಅವರಿಗೂ ಸ್ವರೂಪಪ್ರಾಪ್ತಿಯುಂಟೆಂದು ತಿಳಿಯುತ್ತಾರೆ.

**ಇದರ ವಾದವು ಹೀಗಿದೆ:** ಸೃಷ್ಟಿಸಂಧಿಯ ೩ನೇ ಶ್ಲೋಕದಲ್ಲಿ (ಭಾ.ತಾ.ನಿ), *'ತನುಭೃತ್ಸ್ವಭಾವಸಂಭೂತಯೇ'* ಎಂದು ಹೇಳಿ, ಸಂಸಾರಿ-ಜೀವರ *'ಸುಖದುಃಖಮಧ್ಯಸಂಪ್ರಾಪ್ತಯೇ'* ಸುಖ, ದುಃಖ ಮತ್ತು ದುಃಖ ಮಿಶ್ರಸುಖರೂಪಗಳಾದ ತ್ರಿವಿಧಜೀವರ ಸ್ವಭಾವಗಳನ್ನು ಹೊಂದಲಿಕ್ಕಾಗಿಯೇ

ಶ್ರೀಹರಿಯ ಸೃಷ್ಟಿವ್ಯಾಪಾರವೆಂದು ಸ್ಪಷ್ಟಪಡಿಸಲಾಗಿದೆ. '*ಓಂ ಪುಂಸ್ತ್ವಾದಿವತ್ತ್ವಸ್ಯ ಸತೋऽಭಿವ್ಯಕ್ತಿಯೋಗಾತ್ ಓಂ*' ಎಂದು (ಬ್ರಹ್ಮಸೂತ್ರ)ದಲ್ಲಿ, ಸ್ವಭಾವಗುಣಗಳ ಅಭಿವ್ಯಕ್ತಿಯು, ಜೀವರಿಗುಂಟೆಂದು ನಿರ್ಣಯಿಸಲಾಗಿದೆ. ಪುಂಸ್ತ್ವಾದಿವತ್ತು—ಪುರುಷತ್ವಾದಿಗಳಂತೆಯೇ, ಸತಃ—ಮೊದಲಿನಿಂದಲೂ ಇರುವ, ಅಸ್ಯ—ಜೀವಸ್ವರೂಪದ (ಸ್ವಭಾವಗುಣಗಳ), ಅಭಿವ್ಯಕ್ತಿಯೋಗಾತ್—ಪ್ರಕಟವಾಗುತ್ತದೆಂಬುದು ಯುಕ್ತವಾಗುವುದರಿಂದ (ಸಾಧನಪೂರ್ತಿಯ ನಂತರ ಜೀವಸ್ವರೂಪವು ಆವಿರ್ಭಾವಗೊಳ್ಳುತ್ತದೆ). 'ಶಿಶುಗಳಲ್ಲಿರುವ ಪುರುಷತ್ವ—ಸ್ತ್ರೀತ್ವಗಳು, ಪ್ರಾಪ್ತವಯಸ್ಕರಾದ ನಂತರ ಮಾತ್ರ ಪ್ರಕಟವಾಗುವಂತೆ, ಜೀವನು ಸಾಧನಪೂರ್ತಿಯನ್ನು ಹೊಂದಿದ ನಂತರ ಅವನ ಸ್ವರೂಪಗುಣಗಳು ಪ್ರಕಟವಾಗುತ್ತವೆ.' ಈ ಸೂತ್ರಭಾಷ್ಯಭಾಗದಲ್ಲಿ:

*'ತೇಷಾಂ ಯದನ್ಯಥಾ ದೃಶ್ಯಂ ತದುಪಾಧಿಕೃತಂ ಮತಮ್।*
*ವಿಜ್ಞಾನೇನಾತ್ಮ ಯೋಗ್ಯೇನ ನಿಜರೂಪೇ ವ್ಯವಸ್ಥಿತಿಃ॥*

*ಸಮ್ಯಕ್‌ಜ್ಞಾನಂ ತು ದೇವಾನಾಂ ಮಾನುಷಾಣಾಂ ವಿಮಿಶ್ರಿತಮ್।*
*ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋऽಪಿ ಚ॥'*

ಇತ್ಯಾದಿ ಪ್ರಮಾಣಗಳಿಂದ, ಜೀವರು ಸ್ವಯೋಗ್ಯಜ್ಞಾನವನ್ನು ಹೊಂದಿ ನಿಜರೂಪದಿಂದ ಇರುವ ಸ್ಥಿತಿಯನ್ನು ಹೊಂದುವರೆಂದೂ, ಮನುಷ್ಯರು ಮಿಶ್ರ ಜ್ಞಾನದಿಂದ ಮಿಶ್ರಗತಿಯನ್ನೇ ಹೊಂದುವರೆಂದೂ, ವಿವರಿಸಲಾಗಿದೆ. ಆದ್ದರಿಂದ ತ್ರಿವಿಧ ಜೀವರಿಗೂ ಸ್ವಯೋಗ್ಯಜ್ಞಾನಪರಿಪೂರ್ತಿಯಾಗಿ, ಸ್ವಸ್ವರೂಪದಿಂದಿರುವ ಗತಿಯುಂಟೆಂದು ಸಿದ್ಧವಾಗುತ್ತದೆ. ಸ್ವರ್ಗ, ಭೂ, ನರಕಗಳಲ್ಲಿ ಸುತ್ತುವ ಮಧ್ಯಮವರ್ಗದ ಜೀವರು, ಉತ್ತಮರಂತೆ ಯಥಾರ್ಥಜ್ಞಾನನಿಶ್ಚಯಕ್ಕಾಗಿ ನಿಷ್ಕಾಮಕರ್ಮಾದಿಗಳಲ್ಲಾಗಲಿ, ತಮೋಯೋಗ್ಯರಾದ ಅಧಮರಂತೆ, ಮಿಥ್ಯಾ ಜ್ಞಾನದಲ್ಲಿ ದುರಾಗ್ರಹವನ್ನು ಹೊಂದುವುದರಲ್ಲಿಯಾಗಲಿ ತೊಡಗುವುದಿಲ್ಲವೆಂಬ ಅರ್ಥವನ್ನು ಮಾತ್ರ, '*ತ್ರಿದಿವನಿರಯಭೂಗೋಚರಾನ್*' ಇತ್ಯಾದಿ ವಾಕ್ಯಗಳಿಗೆ ತಿಳಿಯಬೇಕು. ಸ್ವರೂಪಾವಿರ್ಭಾವದ ನಂತರ ಸಹ, ಸುಖದುಃಖಗಳ ಸಂಬಂಧವುಳ್ಳವರೆಂಬರ್ಥವನ್ನು 'ನಿತ್ಯಬದ್ಧ'ರೆಂಬುದಕ್ಕೆ ತಿಳಿಯಬೇಕು.

'ನಿತ್ಯಸಂಸಾರಿ' ಎಂಬುದಕ್ಕೆ, ಸ್ವಸ್ವರೂಪವನ್ನು ಲಿಂಗಭಂಗದಿಂದ ಹೊಂದಿದ ನಂತರವೂ, ನಿತ್ಯವೂ ಸುಖದುಃಖಗಳೆಂಬ ಉಭಯಾತ್ಮಕ ಅನುಭವಗಳಲ್ಲಿ

ಸಂಚರಿಸುವವನು, (ನಿಯಮೇನ ಉಳ್ಳವನು), ಎಂಬರ್ಥವನ್ನು ತಿಳಿಯಬೇಕು.

ಈ ಉಭಯ ವಾದಗಳ ಬಲಾಬಲಗಳು ಗಮನಾರ್ಹವಾಗಿವೆ. ಶ್ರೀವಾದಿರಾಜರ ನಿರ್ಣಯವು ಯುಕ್ತಿಯುಕ್ತವೂ ಅಂಗೀಕಾರಾರ್ಹವೂ ಆಗಿರುವುದೆಂದು ಹೇಳಬೇಕಾಗಿಲ್ಲ.

**ತತ್ವಜ್ಞಾನ ಮಿಶ್ರಜ್ಞಾನ ಮಿಥ್ಯಾಜ್ಞಾನ**
**ಶಕ್ತಿಯಿಂದ ಲಿಂಗದೇಹವು**
**ಉತ್ತಮಮಧ್ಯಮಾಧಮ ಜೀವರೊಳು ಪೊಕ್ಕು**
**ಮತ್ತೆ ತ್ರಿವಿಧಭೋಗವಹವು** ॥೧೨॥

ಸೂ: ಜೀವರೂಪಜ್ಞಾನವು ತ್ರಿವಿಧಜೀವರಲ್ಲಿ ತ್ರಿವಿಧವಾಗಿಯೇ ಇದ್ದು, ಅದರ ಪ್ರಭಾವದಿಂದ, ಲಿಂಗದೇಹವಿರುವ ಸಂಸಾರಾವಸ್ಥೆಯಲ್ಲಿ ಸಹ, ಸುಖ ದುಃಖಾದಿ ಭೋಗವೂ ತ್ರಿವಿಧವಾಗಿಯೇ ಇರುತ್ತದೆಂಬ ಸಾಮಾನ್ಯ ನಿಯಮವನ್ನು ಹೇಳುತ್ತಾರೆ. ವಿಶೇಷ ಕಾರಣಗಳಿಂದ ವಿಭಿನ್ನಭೋಗಗಳು ಸಂಭವಿಸುವುದು ಉಂಟು— ಅದು ಸಾಮಾನ್ಯ ನಿಯಮಕ್ಕೆ ಅಪವಾದ ಮಾತ್ರ.

**ಅರ್ಥ:** ತತ್ವಜ್ಞಾನ— ಯಥಾರ್ಥಜ್ಞಾನ, ಮಿಶ್ರಜ್ಞಾನ— ಸಂಶಯಾತ್ಮಕ ಜ್ಞಾನ, ಮಿಥ್ಯಾಜ್ಞಾನ— ವಿಪರೀತಜ್ಞಾನಗಳ, ಶಕ್ತಿಯಿಂದ— ಪ್ರಭಾವದಿಂದ, ಲಿಂಗದೇಹವು— (ಸ್ವರೂಪವನ್ನು ಮುಚ್ಚಿರುವ) ಲಿಂಗದೇಹವು, ಉತ್ತಮಮಧ್ಯ ಮಾಧಮಜೀವರೊಳು— ತ್ರಿವಿಧಜೀವರ ಸ್ವರೂಪಗಳಲ್ಲಿ (ಸ್ವರೂಪಾಂತಃಕರಣದಲ್ಲಿ), ಪೊಕ್ಕು— ಪ್ರವೇಶಿಸಿ, ತ್ರಿವಿಧಭೋಗವಹವು— (ಲಿಂಗದೇಹಗತ ಪ್ರಾಕೃತಾಂತಃಕರಣದ ಅನುಭವಗಳು) ಸುಖ, ದುಃಖ ಮತ್ತು ಸುಖದುಃಖಮಿಶ್ರಗಳೆಂಬ ತ್ರಿವಿಧಭೋಗಗಳಿಗೆ ಕಾರಣವಾಗುತ್ತವೆ. (ತ್ರಿವಿಧವಾದ ಭೋಗಗಳು ತ್ರಿವಿಧ ಜೀವರಿಗೆ ಪ್ರತ್ಯೇಕವಾಗಿ ಉಂಟಾಗುತ್ತವೆ).

**ವಿಶೇಷಾಂಶ:** ಈ ನುಡಿಯಲ್ಲಿ ಸಂಗ್ರಹಿಸಿ ಹೇಳಲಾಗಿರುವ ರಹಸ್ಯ ಪ್ರಮೇಯದ ವಿವರಣೆಯನ್ನು ಸತ್ತತ್ವರತ್ನಮಾಲಾಗ್ರಂಥಕಾರರು ಹೀಗೆ ಮಾಡಿರುವರು.

*'ನೀಚಮಧ್ಯೋಚ್ಚಭೇದೇನ ಜೀವಾಸ್ತೇ ತ್ರಿವಿಧಾ ಮತಾಃ।*
*ನೀಚಾಸ್ತತ್ರ ತಮೋಯೋಗ್ಯಾ ದುಃಖಾಜ್ಞಾನಾದಿರೂಪಿಣಃ॥*

*ನಿತ್ಯಸಂಸಾರಿಣೋ ಯೇ ತು ಮಧ್ಯಮಾಸ್ತೇ ಪ್ರಕೀರ್ತಿತಾಃ।*
*ವ್ಯಾಮಿಶ್ರಯಾಜಿನಸ್ತೇ ಸ್ಯುರ್ವಿಷ್ಣ್ವಾಧಿಕ್ಯೇ ಸಸಂಶಯಾಃ॥*
*ಉಚ್ಚಾಸ್ತು ಮೋಕ್ಷಯೋಗ್ಯಾ ಹಿ ಸದಾ ನಾರಯಣಪ್ರಿಯಾಃ।*
*ಸಮ್ಯಗ್‌ಜ್ಞಾನಾನಂದಭಕ್ತ್ಯಾದಿ ಗುಣರೂಪಕಾಃ॥'*

*'ಪರಮೇಶ್ವರೇಚ್ಛಾಪ್ರೇರಿತಾ ಮಹಾಲಕ್ಷ್ಮೀಃ ಷೋಡಶಕಲಾತ್ಮಕಲಿಂಗ ದೇಹೇನ ಜೀವಮಾವೃತ್ಯ ತದ್ಗತ ಬಾಹ್ಯಾಂತಃಕರಣಮಧಿಷ್ಠಾಯ ದೃಢತರಂ ಅಭಿಮಾನಮುತ್ಪಾದ್ಯ ಅವಿದ್ಯಮಾನಸ್ವಾತಂತ್ರ್ಯಾದಿವಿಷಯಕ ವಿವಿಧವಿಭ್ರಮಂ ಸಂಪಾದ್ಯ ಜಪಾಕುಸುಮಸನ್ನಿಧಾನೇನ ಸ್ಫಟಿಕೇ ರಕ್ತಿಮಾನಮಿವ ಜೀವ ಸ್ವರೂಪೇ ಸುಖದುಃಖಾದ್ಯಾತ್ಮನಾ ವಿಕೃತಬಾಹ್ಯಾಂತಃಕರಣಸ್ಯ ಅಂಗಾರ-ವಹ್ನಿವತ್ ಸ್ವರೂಪಾಂತಃಕರಣೇ ಅತಿಮಿಶ್ರೀಭಾವರೂಪಸನ್ನಿಧಾನಬಲೇನ ನೀಚೋಚ್ಚಾದಿಚಿಂತನಾರೂಪಂ ವಿಕ್ರಿಯಾವಿಶೇಷಂ ಜನಯಂತೀ ಕಾಮ-ಕರ್ಮಾದಿ ಪ್ರವಾಹಂ ವರ್ಧಯಂತೀ ಸರ್ವತ್ರ ಪರಮಪ್ರಯೋಜಕಂ ವಾಣೀ-ವಲ್ಲಭಂ ಅವಾಂತರಪ್ರಯೋಜಕಾನ್ ಶಿವಶಕ್ರಾದಿದೇವಾಂಶ್ಚ ನಿಯಾಮ-ಯಂತೀ ಖಲುಬಂಧಿಕಾ॥'*— ಈ ವಾಕ್ಯಗಳು ಜೀವಸ್ವರೂಪತ್ರೈವಿಧ್ಯವನ್ನೂ, ಶ್ರೀಹರೀಚ್ಛೆಯಂತೆ ಲಕ್ಷ್ಮೀದೇವಿಯು, ಜೀವರನ್ನು ಸಂಸಾರದಲ್ಲಿ ಬಂಧಿಸಿ, ವಿವಿಧ ಭೋಗಗಳನ್ನು ಕೊಡುವ ಪ್ರಕಾರವನ್ನೂ ನಿರೂಪಿಸುತ್ತವೆ. ಈ ವಾಕ್ಯಗಳ ತಾತ್ಪರ್ಯವೇನೆಂದರೆ: 'ನೀಚ, ಮಧ್ಯ, ಉಚ್ಚಗಳೆಂಬ ಭೇದದಿಂದ ಜೀವರು ತ್ರಿವಿಧರು. ನೀಚರು ತಮೋಯೋಗ್ಯರು ಮತ್ತು ದುಃಖ, ಅಜ್ಞಾನಾದಿ ಸ್ವರೂಪವುಳ್ಳವರು; ಮಧ್ಯಮರು ನಿತ್ಯಸಂಸಾರಿಗಳೆಂಬುವರು— ಇವರು ವಿಷ್ಣುಸರ್ವೋತ್ತಮತ್ವವಿಷಯದಲ್ಲಿ ಸಂಶಯಜ್ಞಾನವುಳ್ಳವರು— ವಿಷ್ಣುವನ್ನೂ ಅನ್ಯದೇವತೆಗಳನ್ನೂ ಸೇವಿಸುವ ಸ್ವಭಾವದವರು; ಉತ್ತಮರು ನಾರಾಯಣ-ಪ್ರಿಯರು— ಯಥಾರ್ಥಜ್ಞಾನ, ಆನಂದ, ಭಕ್ತಿ ವೈರಾಗ್ಯಾದಿಗುಣಸ್ವರೂಪರು— ಇವರೇ ಮುಕ್ತಿಯೋಗ್ಯರು.'

'ಸ್ವತಂತ್ರನಾದ ಶ್ರೀಹರಿಯ ಇಚ್ಛೆಯಿಂದ ಪ್ರೇರಿತಳಾದ ಲಕ್ಷ್ಮೀದೇವಿಯು, ಷೋಡಶ (೧೬) ಕಲೆಗಳಿಂದಾದ ಮತ್ತು ಜೀವರನ್ನು ಅನಾದಿಕಾಲದಿಂದ ಆವರಿಸಿರುವ, ಲಿಂಗದೇಹದಲ್ಲಿರುವ ಪ್ರಾಕೃತ (ಬಾಹ್ಯ) ಅಂತಃಕರಣದಲ್ಲಿದ್ದು, (ಜೀವಸ್ವರೂಪಜ್ಞಾನಗಳಾದ, ಸಮ್ಯಕ್, ಮಿಶ್ರ, ಮಿಥ್ಯಾಜ್ಞಾನಗಳನ್ನು ನಿಮಿತ್ತ-ವಾಗಿಟ್ಟುಕೊಂಡು), ದೃಢವಾದ ಅಭಿಮಾನವನ್ನು ಹುಟ್ಟಿಸಿ, ಜೀವರಲ್ಲಿಲ್ಲದ

ಸ್ವಾತಂತ್ರ್ಯಾದಿ ವಿಭ್ರಮ(ಮೋಹ)ವನ್ನುಂಟುಮಾಡಿ, ಜಪಾಕುಸುಮವು ಕೆಂಪು ದಾಸವಾಳದ ಹೂವು ಸಮೀಪದಲ್ಲಿರಲು ಶುದ್ಧ ಸ್ಫಟಿಕಮಣಿಯಲ್ಲಿ ಕೆಂಪು-ಬಣ್ಣವು ತೋರುವಂತೆ, ಬಾಹ್ಯಾಂತಃಕರಣದಲ್ಲಿ (ಜಡಮನಸ್ಸಿನಲ್ಲಿ) ಹುಟ್ಟುವ ಸುಖದುಃಖರೂಪವಿಕಾರಗಳನ್ನು, ಅತಿ ಸಾಮೀಪ್ಯಕಾರಣವಾದ ಜೀವ-ಸ್ವರೂಪಾಂತಃಕರಣದಲ್ಲಿ ತಂದು, (ಅಗ್ನಿಯು ಕೆಂಡದಲ್ಲಿ ಹೇಗೋ ಹಾಗೆ), ಹಿಗ್ಗುಕುಗ್ಗುಗಳೆಂಬ ವಿಕಾರವಿಶೇಷಗಳನ್ನು ಉತ್ಪಾದನೆಮಾಡಿ, ಕಾಮಕರ್ಮಾದಿ ಪ್ರವಾಹವನ್ನು ವೃದ್ಧಿಗೊಳಿಸಿ, ಈ ತನ್ನ ವ್ಯಾಪಾರದಲ್ಲಿ ಮುಖ್ಯಪ್ರಯೋಜಕ-ನಾದ (ಸಹಾಯಕನಾದ) ಭಾರತೀಪತಿ ಮುಖ್ಯಪ್ರಾಣನನ್ನೂ, ಅವಾಂತರ-ಪ್ರಯೋಜಕರಾದ ರುದ್ರೇಂದ್ರಾದಿ ಇತರ ದೇವತೆಗಳನ್ನೂ ತಾನೇ ನಿಯಮಿ-ಸುತ್ತ, ಜೀವರನ್ನು ಸಂಸಾರದಲ್ಲಿ ಬಂಧಿಸುತ್ತಾಳೆ.'

**ವಿರಜೆಯೆಂಬ ಪುಣ್ಯನದಿಯಿಂದ ಕೆಲವರಿಗೆ**
**ಪರಿದುಪೋಪುದು ಲಿಂಗದೇಹ**
**ಉರಗನ ಹೆಡೆಯಂತೆ ಜ್ಞಾನ ಪಕ್ವ ವಾ-**
**ದರೆ ಇರಲರಿಯದವರಿಗೆ** ॥೧೩॥

**ಅರ್ಥ:** ಕೆಲವರಿಗೆ—ಉತ್ತಮಜೀವರಿಗೆ (ಮುಕ್ತಿಯೋಗ್ಯರಿಗೆ), ಲಿಂಗ-ದೇಹ—(ಅವರ) ಲಿಂಗದೇಹವು, ವಿರಜೆಯೆಂಬ—**'ವಿರಜಾ'** ಎಂಬ ನಾಮದ, ಪುಣ್ಯನದಿಯಿಂದ—(ಲಕ್ಷ್ಮ್ಯಾತ್ಮಕ) ಪವಿತ್ರನದೀಸ್ನಾನದಿಂದ, ಪರಿದುಪೋಪುದು —ತುಂಡಾಗಿಹೋಗುತ್ತದೆ. (ಹರಿದು ಹೋಗುತ್ತದೆ—ತೊಲಗುತ್ತದೆ **ಅಥವಾ** ಹರಿದು—ಜಲಪ್ರವಾಹದಲ್ಲಿ ತೇಲಿಕೊಂಡು ಹೋಗುತ್ತದೆ); ಉರಗನ—ಸರ್ಪದ, ಹೆಡೆಯಂತೆ—ಫಣದಂತೆ, ಜ್ಞಾನ ಪಕ್ವವಾದರೆ—ಜ್ಞಾನವು ಪೂರ್ಣ-ವಾದರೆ, ಅವರಿಗೆ—(ಸಾಧನಪೂರ್ತಿಯಾದ) ಜೀವರಿಗೆ, ಇರಲು ಅರಿಯದು —(ಲಿಂಗದೇಹವು ಬಂಧಿಸಿಕೊಂಡು) ಇರಲು ಶಕ್ಯವಿಲ್ಲ (ಬಂಧನ ಸಾಮರ್ಥ್ಯ-ವಿಲ್ಲದೆ ಕಳಚಿ ಹೋಗುತ್ತದೆ).

**ವಿಶೇಷಾಂಶ:** (೧) 'ಉರಗನ ಹೆಡೆಯಂತೆ' ಎಂಬುದರಿಂದ, ಎರಡಂಶ-ಗಳು ಸೂಚಿತವೆಂದು ತಿಳಿಯಬೇಕು. ನಾಗನ ಫಣವು ಬಿಚ್ಚಿಕೊಂಡು ದೊಡ್ಡ-ರೂಪದಿಂದ ಅಗಲವಾಗಿ ನಿಲ್ಲುವಂತೆ, ಜೀವನ ಸ್ವರೂಪಜ್ಞಾನವು ಪೂರ್ಣ ವಿಸ್ತಾರವನ್ನು ಹೊಂದಬೇಕೆಂಬುದು ಒಂದು. ಎರಡನೆಯ ಅಂಶವೆಂದರೆ—ಫಣವನ್ನೂ ಆವರಿಸಿರುವ ಪೊರೆಯು ಪಕ್ವವಾದಾಗ ಮಾತ್ರ ಕಳಚಿಬೀಳುತ್ತದೆ.

ಪೊರೆಯಂತಿರುವ ಲಿಂಗದೇಹವು, ಜೀವಸ್ವರೂಪ ಜ್ಞಾನವು ಪಕ್ವವಾದಾಗ, ಅದರಿಂದ ದಹಿಸಲ್ಪಟ್ಟು, ಮೊದಲಿನಂತೆ ಅಂಟಿಕೊಂಡಿರಲು ಅಸಮರ್ಥ-ವಾಗಿ, ಬಿದ್ದುಹೋಗುತ್ತದೆ. ಹೀಗೆ ಜ್ಞಾನದ ವಿಸ್ತಾರವೂ ಪರಿಪಕ್ವತೆಯೂ ಪೂರ್ಣವಾದಾಗ ಲಿಂಗದೇಹವು ಹೇಗೆ ನಿಲ್ಲಬಲ್ಲದು?

(೨) ಮುಕ್ತಿಯೋಗ್ಯರಿಗೆ ವಿರಜಾಸ್ನಾನದಿಂದ ಲಿಂಗಭಂಗವು. ತಮೋ-ಯೋಗ್ಯರಿಗೆ ವಾಯುಗದಾಪ್ರಹಾರದಿಂದ ಲಿಂಗಭಂಗವು, ಮಧ್ಯಮರಾದ ನಿತ್ಯ ಸಂಸಾರಿಗಳಿಗೆ ಲಿಂಗಭಂಗವು ವಾಯುದೇವನ ಹುಂಕಾರದಿಂದ ಎಂದು, ಮುಂದಿನ ನುಡಿಯ 'ಜ್ಞಾನಕ್ಕೆ ಹಿರಿಯತನವ ಕೊಡಬೇಕೆಂದು' ವಿರಜಾ-ನದಿಯಲ್ಲಿ ಶ್ರೀಹರಿಯು ಸ್ನಾನಮಾಡಿಸುವನೆಂಬುದರಿಂದ ಸೂಚಿತವೆಂದು ತಿಳಿಯಬಹುದು. ಇದರ ನಿರ್ಣಯವನ್ನು ಜ್ಞಾನಿಗಳನ್ನು ಪ್ರಶ್ನಿಸಿ ತಿಳಿಯಬೇಕು.

**ಜ್ಞಾನಕ್ಕೆ ಹಿರಿಯತನವ ಕೊಡಬೇಕೆಂದು**
**ಶ್ರೀನಾಥ ವಿರಜಾನದಿಯಲ್ಲಿ**
**ಜ್ಞಾನಿಗಳ ಮುಣುಗಿಸಿ ಸಿದ್ಧರನ್ನೆ ಮಾಡಿ**
**ತನ್ನ ಜಗದೊಳಿಟ್ಟುಕೊಂಬ ॥೧೪॥**

**ಅರ್ಥ:** ಜ್ಞಾನಕ್ಕೆ—(ಯಥಾರ್ಥಜ್ಞಾನ—ಸಂಶಯಜ್ಞಾನ— ಮಿಥ್ಯಾಜ್ಞಾನ-ಗಳ ಮಧ್ಯದಲ್ಲಿ) ಯಥಾರ್ಥಜ್ಞಾನಕ್ಕೆ (ತತ್ವಜ್ಞಾನಕ್ಕೆ), ಹಿರಿಯತನವ ಕೊಡ-ಬೇಕೆಂದು—(ಇರುವ) ಪ್ರಾಶಸ್ತ್ಯವನ್ನು (ತನ್ನ ವಿಶೇಷಪ್ರೀತಿಗೆ ಪಾತ್ರವೆಂಬು-ದನ್ನು) ಪ್ರಕಟಮಾಡಲಿಕ್ಕಾಗಿ, ಶ್ರೀನಾಥ—ಲಕ್ಷ್ಮೀಪತಿಯು, ವಿರಜಾನದಿಯಲ್ಲಿ —(ಲಕ್ಷ್ಮೀಸ್ವರೂಪದ) ವಿರಜಾನದಿಯಲ್ಲಿ, ಜ್ಞಾನಿಗಳ-(ತತ್ವಜ್ಞಾನಿಗಳಾದ) ಮುಕ್ತಿಯೋಗ್ಯರನ್ನು, ಮುಣುಗಿಸಿ-ಅವಗಾಹಸ್ನಾನ ಮಾಡಿಸಿ, ಸಿದ್ಧರನ್ನೆ ಮಾಡಿ —(ಲಿಂಗದೇಹವನ್ನು ಕಳೆದು) ಪರಮಪುರುಷಾರ್ಥ ಪಡೆದವರನ್ನು ಮಾಡಿ, ತನ್ನ ಜಗದೊಳು—ವೈಕುಂಠಾದಿ ಲೋಕಗಳಲ್ಲಿ (ಅಥವಾ ಪ್ರಳಯಕಾಲದಲ್ಲಿ ಅವ್ಯಕ್ತಭಾವವನ್ನು ಹೊಂದಿ ತನ್ನ ಉದರಪ್ರವೇಶ ಮಾಡಿದ ಆ ಲೋಕ-ಗಳಲ್ಲಿ), ಇಟ್ಟುಕೊಂಬ—ಇಟ್ಟುಕೊಳ್ಳುತ್ತಾನೆ.

**ವಿಶೇಷಾಂಶ:** *'ಜ್ಞಾನೇನೈವ ಅಮೃತೀಭವತಿ' 'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'* ಇತ್ಯಾದಿ ಶ್ರುತಿಸ್ಮೃತಿಗಳು ಸಾರುವ ಜ್ಞಾನದ ಶ್ರೇಷ್ಠತೆ-ಯನ್ನು, ಮಲಿನವಸ್ತ್ರದಂತಿರುವ ಲಿಂಗದೇಹವನ್ನು ಬಿಡಿಸುವುದು ಮಾತ್ರ-ವಲ್ಲದೇ, ಪರಮಪವಿತ್ರ ತೀರ್ಥಸ್ನಾನವನ್ನೂ ಮಾಡಿಸಿ, ವ್ಯಕ್ತಗೊಳಿಸುತ್ತಾನೆ.

**ಹೀನರಿಗೆ ಮೈಲಿಗೆವಸ್ತ್ರ ಪೋದಮೇಲೆ**
**ಜ್ಞಾನವರಿಗೆ ಬೇರೆ ಬೇಡ**
**ಜ್ಞಾನಿಗಳಾವಸ್ತ್ರ ಪೋದಮೇಲೆ ಶುದ್ಧ-**
**ಜ್ಞಾನಬೇಕೆಂದು ಸರ್ವಸಿದ್ಧ** ||೧೫||

**ಅರ್ಥ:** ಹೀನರಿಗೆ—(ಮುಕ್ತಿಯೋಗ್ಯರಲ್ಲದ) ಕೀಳುವರ್ಗದ ಜೀವರಿಗೆ, (ನಿತ್ಯಸಂಸಾರಿ ಮತ್ತು ತಮೋಯೋಗ್ಯರಿಗೆ), ಮೈಲಿಗೆವಸ್ತ್ರ ಪೋದಮೇಲೆ—ಮಲಿನವಸ್ತ್ರವು ಹೋದಮೇಲೆ (ಲಿಂಗದೇಹವು ತೊಲಗಿದ ನಂತರ), ಅವರಿಗೆ ಬೇರೆ ಜ್ಞಾನಬೇಡ—ಅವರಿಗೆ ಹೆಚ್ಚಿನ ಜ್ಞಾನ ಬೇಕಿಲ್ಲ (ಸ್ವರೂಪಜ್ಞಾನದ ಅಧಿಕ ಸ್ವಚ್ಛತೆ—ಸ್ಫುಟತೆಗಳಿಲ್ಲ); ಜ್ಞಾನಿಗಳ ಆ ವಸ್ತ್ರ—ಮುಕ್ತಿಯೋಗ್ಯರ (ಮಲಿನ-ವಸ್ತ್ರವು) ಲಿಂಗದೇಹವು; ಪೋದಮೇಲೆ—ಬಿದ್ದುಹೋದಮೇಲೆ, ಶುದ್ಧಜ್ಞಾನ-ಬೇಕೆಂದು—ಸ್ವರೂಪಜ್ಞಾನದ ಪರಿಶುದ್ಧತೆಯು ಬೇಕೆಂಬುದು, ಸರ್ವಸಿದ್ಧ—ಸರ್ವರ ಅನುಭವಸಿದ್ಧವೇ ಆಗಿದೆ.

**ಅಥವಾ**

ಹೀನರಿಗೆ—(ಮುಕ್ತಿಯೋಗ್ಯರಲ್ಲಿ) ಕೀಳಾದ ಜೀವರಿಗೆ, ಮೈಲಿಗೆವಸ್ತ್ರ ಪೋದಮೇಲೆ—ಲಿಂಗದೇಹ ಹೋದಮೇಲೆ, (ಲಿಂಗದೇಹ ಹೋಗಲಿಕ್ಕೆ ಸಾಕಾಗುವ ಅಪರೋಕ್ಷಜ್ಞಾನ ಮಾತ್ರ ಸಾಕು), ಬೇರೆ ಜ್ಞಾನ ಬೇಡ—ಅದಕ್ಕಿಂತ ಹೆಚ್ಚಿನ ಜ್ಞಾನ ಬೇಡ (ಅಪರೋಕ್ಷಜ್ಞಾನಾನಂತರ ಅಧಿಕ ಜ್ಞಾನ ಬೇಕಿಲ್ಲ); ಜ್ಞಾನಿಗಳಿಗೆ—ಉತ್ತಮರಿಗಾದರೋ ಆ ವಸ್ತ್ರ ಪೋದಮೇಲೆ—ಲಿಂಗಭಂಗಕ್ಕೆ ಕಾರಣವಾಗುವ ಅಪರೋಕ್ಷಜ್ಞಾನವು ಮೊದಲೇ ಇದ್ದರೂ, ಶುದ್ಧಜ್ಞಾನ ಬೇಕು—ಅದರ (ಆ ಅಪರೋಕ್ಷದ) ಆಧಿಕ್ಯ ಮತ್ತು ಪರಿಸ್ಫುಟತೆ-ಗಳು ಬೇಕು; ಎಂದು ಸರ್ವಸಿದ್ಧ—ಎಂಬುದು ಸರ್ವಪ್ರಮಾಣಗಳಿಂದ ಸಿದ್ಧವಾಗಿದೆ.

**ವಿಶೇಷಾಂಶ:** (೧) ಅಲ್ಪಜೀವರಿಗೆ ಅಪರೋಕ್ಷಜ್ಞಾನವಾಯಿತೆಂದರೆ ಸಾಧನ ಪರಿಪೂರ್ತಿಯಾದಂತೆಯೇ ಸರಿ. ಪ್ರಾರಬ್ಧಭೋಗಾನಂತರ ಲಿಂಗ-ಭಂಗಕ್ಕೆ ಸಿದ್ಧರಾಗುತ್ತಾರೆ. ಅವರು ಸ್ವಯೋಗ್ಯ ಅಪರೋಕ್ಷದಿಂದ ತೃಪ್ತರು. ಉತ್ತಮಾಧಿಕಾರಿಗಳಾದ ತಾತ್ವಿಕದೇವತೆಗಳಿಗೆ ಹಾಗಲ್ಲ.

*'ಪಾರೋಕ್ಷ್ಯೇಣ ತು ಪೂರ್ಣಂ ಸ್ಯಾತ್ತೇಷಾಂ ಜ್ಞಾನಂ ಸದೈವ ಹಿ।*
*ವಿಶೇಷೇಣಾಪರೋಕ್ಷ್ಯಾಚ್ಚ ಕ್ರಮಾತ್ ವೃದ್ಧಿರಿತೀರತಾ॥*
*ಅನಾದಿತೋಪ್ಯಾಪರೋಕ್ಷಯುಕ್ತಾ ರೂಪೇಷು ಚ ಕ್ವಚಿತ್॥'*—(ಸ.ರ.ಮಾ)

ತಾತ್ವಿಕದೇವತೆಗಳ ಸಾಮಾನ್ಯಲಕ್ಷಣಗಳನ್ನು ನಿರೂಪಿಸುತ್ತ, 'ಅವರ ಜಗದ್ವಸ್ತುವಿಷಯಕ ಜ್ಞಾನವು, ಸದಾ ಪೂರ್ಣವಾಗಿರುವುದು; ಅವರಿಗೆ ಅನಾದಿ ಕಾಲದಿಂದ ಭಗವಂತನ ಸಾಮಾನ್ಯಾಪರೋಕ್ಷವೂ ಇರುತ್ತದೆ— ಸಾಧನೆಯಿಂದ ಭಗವದ್ದರ್ಶನದಲ್ಲಿ ಹೆಚ್ಚು ಸ್ಪಷ್ಟತೆಯೂ, ಅನ್ಯಭಗವದ್ರೂಪ-ಗಳ ದರ್ಶನವೂ ಆಗುತ್ತಾ, ಜ್ಞಾನವೃದ್ಧಿಯಾಗುತ್ತದೆ' ಎಂದು ಹೇಳಲಾಗಿದೆ. ಇದರಿಂದ ಉತ್ತಮಾಧಿಕಾರಿಗಳಿಗೆ ಲಿಂಗದೇಹಭಂಗವೂ, ಮೋಕ್ಷವೂ ನಿಶ್ಚಿತ-ವಾಗಿದ್ದರೂ, ಜ್ಞಾನಾಧಿಕ್ಯರೂಪದ ಫಲಕ್ಕಾಗಿಯೇ ಅವರ ಸಾಧನೆಯೆಂದು ವ್ಯವಸ್ಥಿತವಾಗುತ್ತದೆ.

(೨) ಲೋಕದಲ್ಲಿ ಸಹ ಈ ವಿಧ ತಾರತಮ್ಯವನ್ನು ಕಾಣುತ್ತೇವೆ. ಕೆಲವರು, ಮಲಿನ ವಸ್ತ್ರವನ್ನು ಬಿಟ್ಟು ವಸ್ತ್ರಾಂತರಮಾತ್ರದಿಂದ ಶುದ್ಧರಾದೆವೆಂದು ತಿಳಿದರೆ, ಮತ್ತೆ ಕೆಲವರು, ಸ್ನಾನವನ್ನಪೇಕ್ಷಿಸುತ್ತಾರೆ. ಇನ್ನೂ ಕೆಲವರು, ಸ್ನಾನದಿಂದಲೂ ತೃಪ್ತರಾಗದೇ, ಜ್ಞಾನತೀರ್ಥದಲ್ಲಿ ಮೀಯಬೇಕೆನ್ನುತ್ತಾರೆ. ಕ್ರಮವಾಗಿ, ಇವರು ಒಬ್ಬರಿಂದೊಬ್ಬರು ಉತ್ತಮರಲ್ಲವೇ? ಮಲಿನ ವಸ್ತ್ರದಂತೆ ಲಿಂಗದೇಹವು.

(೩) ಮುಕ್ತಿಯೋಗ್ಯರಿಗೆ ವಿರಜಾಸ್ನಾನವು ಕೇವಲ ಲಿಂಗದೇಹವನ್ನು ತ್ಯಜಿಸಲಿಕ್ಕಾಗಿ ಅಲ್ಲ. ಸ್ವರೂಪವು ಅತ್ಯಂತ ಪರಿಶುದ್ಧವಾಗಿ, ಧ್ಯಾನದಲ್ಲಿ ತೊಡಗಿ ಆನಂದಭರಿತರಾಗಲು ಆ ಜೀವರನ್ನು ಸಿದ್ಧಗೊಳಿಸಲು ಸಹ ಆಗಿದೆ. ಲಿಂಗದೇಹವನ್ನು ತೊರೆದು, ಭಗವಂತನ ಉದರವನ್ನು ಪ್ರವೇಶಿಸಿ, ಪುನಃ ಸೃಷ್ಟಿಕಾಲ ಬರುವವರೆಗೂ (ಪ್ರಳಯಕಾಲದಲ್ಲಿ) ಧ್ಯಾನಮಗ್ನರಾಗಿರುತ್ತಾರೆ ಅವರು.

**ಇಂತು ಶ್ರೀಕಾಂತ ಮೂವರಿಗು ಮೂರು ಗತಿ**
**ಅಂತು ತುದಿಯಲ್ಲಿ ಕೊಡುವನು**
**ಸಂತತ ಉತ್ತಮಾಧಮಲೋಕ**
**ಅಂತರಂತದಿ ತುಂಬಿಹವು** ॥೧೬॥

**ಅರ್ಥ:** ಇಂತು—ಹೀಗೆ, ಶ್ರೀಕಾಂತ—ಲಕ್ಷ್ಮೀಪತಿಯು, ಮೂವರಿಗು—ತ್ರಿವಿಧಜೀವರಿಗೂ, ಮೂರು ಗತಿ—(ಲಿಂಗದೇಹಭಂಗದಿಂದ) ಸುಖ, ದುಃಖ ಮತ್ತು ಉಭಯಮಿಶ್ರಗಳೆಂಬ ಮೂರು ಗತಿಗಳನ್ನು, ಅಂತು ತುದಿಯಲ್ಲಿ—ಈ ಪ್ರಕಾರದಿಂದ ಅಂತ್ಯಕ್ಕೆ, ಕೊಡುವನು—ಕೊಡುತ್ತಾನೆ; ಸಂತತ—ಸರ್ವಕಾಲ-ದಲ್ಲಿಯೂ, ಉತ್ತಮಾಧಮಲೋಕ—ತ್ರಿವಿಧ ಜೀವಸಮೂಹವು, ಅಂತ-

ರಂತದಿ— ಪ್ರತಿಬ್ರಹ್ಮಕಲ್ಪದಲ್ಲಿ— **ಅಥವಾ** ಪ್ರತಿಮನ್ವಂತರದಲ್ಲಿ (**ಅಥವಾ** ಅಣು ಪ್ರದೇಶವನ್ನೂ ಬಿಡದೇ ಪೂರಾ ಬ್ರಹ್ಮಾಂಡದಲ್ಲಿ), ತುಂಬಿಹವು — ತುಂಬಿರುತ್ತದೆ.

**ವಿಶೇಷಾಂಶ:** ಜೀವರಾಶಿಗಳು ಅನಂತವಾಗಿವೆ. ಒಂದೊಂದು ರಾಶಿಯಲ್ಲಿ ಅಸಂಖ್ಯಾತ ಜೀವರಿದ್ದಾರೆ. ತ್ರಿವಿಧಜೀವರೂ ಪ್ರತಿಬ್ರಹ್ಮಕಲ್ಪದಲ್ಲಿ ಲಿಂಗಭಂಗ- ದಿಂದ, ತಿರುಗಿ ಹುಟ್ಟದಿದ್ದರೂ (ಮುಂದಿನ ಕಲ್ಪಗಳಲ್ಲಿ ಸಂಸಾರಕ್ಕೆ ಬರ- ದಿದ್ದರೂ), ಜಗತ್ಪ್ರವಾಹವು ಒಂದು ಕಾಲಕ್ಕೆ ನಿಲ್ಲಬೇಕಾಗುತ್ತದೆಂಬ ಶಂಕೆಗೆ ಅವಕಾಶವಿಲ್ಲ. ಅನಂತಕಾಲಕ್ಕೂ ಮುಗಿಯದಿರುವ ಅನಂತಜೀವರಿಂದ ಕೂಡಿದ ಅನಂತಜೀವರಾಶಿಗಳಿವೆ.

*'ಅನಾಗತಾ ಅತೀತಾಶ್ಚ ಯಾವಂತಃ ಸಹಿತಾಃ ಕ್ಷಣಾಃ।*
*ಅತೀತಾನಾಗತಾಶ್ಚೈವ ಯಾವಂತಃಪರಮಾಣವಃ॥*
*ತತೋಽಪ್ಯನಂತಗುಣಿತಾ ಜೀವಾನಾಂ ರಾಶಯಃ ಪೃಥಕ್।'*

ಎಂದು ಜೀವಸಂಖ್ಯಾನಂತ್ಯವು ವರ್ಣಿತವಾಗಿದೆ. ಭವಿಷ್ಯತ್ಕಾಲ ಲಕ್ಷಣಗಳ (ಇವು ಅನಂತ), ತ್ರಿಕಾಲಗಳಲ್ಲಿ ಸೃಷ್ಟವಾಗುವ ಅನಂತಬ್ರಹ್ಮಾಂಡಗಳಲ್ಲಿರುವ ಪರಮಾಣುಗಳ (ಇವು ಅನಂತವೇ) ಸಂಖ್ಯೆಯು ಕಲ್ಪನೆಗೂ ನಿಲುಕದುದು. ಒಂದೊಂದು ಪ್ರತ್ಯೇಕ ಜೀವಗಣವೂ ಈ ಕಲ್ಪನಾತೀತ ಸಂಖ್ಯೆಯ ಅನಂತಪಟ್ಟು ಅಧಿಕವಾಗಿದೆಯೆಂದರ್ಥ. ೩ನೇ ಸೃಷ್ಟಿಸಂಧಿಯ ೩ನೇ ಪದ, ನುಡಿ ೧೮ ವಿಶೇಷಾಂಶ ಭಾಗವನ್ನು ಇಲ್ಲಿ ನೋಡಿಕೊಳ್ಳಬೇಕು.

## ಶ್ಲೋಕ ೯

*ಕಾಲೋಽಯಂ ದ್ವಿಪರಾರ್ಧಾಖ್ಯೋ ನಿಮೇಷ ಉಪಚರ್ಯತೇ।*
*ಅವ್ಯಾಕೃತಸ್ಯಾನಂತಸ್ಯ ಅನಾದೇರ್ಜಗದಾತ್ಮನಃ॥* (ಭಾಗ. ೩-೧೨-೩೭)

**ಅರ್ಥ:** ಅನಾದೇಃ— ಉತ್ಪತ್ತಿರಹಿತನಾದ, ಅನಂತಸ್ಯ— ನಾಶರಹಿತನಾದ (ದೇಶಕಾಲಗುಣಗಳಿಂದ ಅಪರಿಚ್ಛಿನ್ನನಾದ), ಅವ್ಯಾಕೃತಸ್ಯ— (ಕಾಲಾದಿಕೃತ) ವಿಕಾರಶೂನ್ಯನಾದ, ಜಗದಾತ್ಮನಃ— ಬ್ರಹ್ಮಾದಿ ವಿಶ್ವದ ಸ್ವತಂತ್ರ ಪ್ರಭುವಾದ (ಜಗದಂತರ್ಯಾಮಿಯಾದ) ಶ್ರೀಹರಿಗೆ, ಅಯಂ— ಈ, ದ್ವಿಪರಾರ್ಧಾಖ್ಯಃ — ಎರಡು ಪರಾರ್ಧಗಳೆಂಬ (ಬ್ರಹ್ಮದೇವನ ೧೦೦ ವರ್ಷಗಳೆಂಬ), ಕಾಲಃ — ಕಾಲವು, ನಿಮೇಷಃ— ನಿಮೇಷವೆಂದು (ಕಣ್ಣುರೆಪ್ಪೆ ಬಡಿಯುವಷ್ಟು ಕಾಲ- ಮಾತ್ರವೆಂದು), ಉಪಚರ್ಯತೇ— (ಕಾಲಾನಂತ್ಯದ ಕಲ್ಪನೆಯನ್ನು ಅಜ್ಞಾನಿ-

ಗಳಿಗೆ ಉಂಟುಮಾಡಲು ಮಾತ್ರ) ಉಪಚಾರಕ್ಕೆ (ಅತ್ಯಲ್ಪವೆಂದು ತಿಳಿಸಲಿಕ್ಕೆ ಮಾತ್ರ—ಗಣನಾರ್ಥವಾಗಿ ಅಲ್ಲವೇ ಅಲ್ಲ) ಹೇಳಲ್ಪಡುತ್ತದೆ.

**ವಿಶೇಷಾಂಶ:** (೧) **'ಪರ'**ವೆಂದರೆ ಬ್ರಹ್ಮದೇವನ ೧೦೦ ವರ್ಷಗಳು. **'ಪರಾರ್ಧ'**ವೆಂದರೆ ಅದರ ಅರ್ಧ ೫೦ ವರ್ಷಗಳು. **'ನಿಮೇಷ'**ವೆಂದರೆ ಅತ್ಯಂತಸೂಕ್ಷ್ಮವಾದ ಕಾಲವಿಭಾಗ. ಇಲ್ಲಿ, ಲಯಸಂಧಿಯ ಪದ ೧ ನುಡಿ ೬ರ ವಿಶೇಷಾಂಶ ೧ನ್ನು ಓದಿಕೊಳ್ಳಬೇಕು.

(೨) ಕಾಲಗಣನೆಯು **'ಪರಮಾಣು'**ವಿನಿಂದ ಆರಂಭವಾಗಿ ದ್ವಿಪರಾರ್ಧ ಪರ್ಯಂತವಾಗಿ ಮಾಡಲ್ಪಟ್ಟು, ಈ ಅವಧಿಯು ಶ್ರೀಹರಿಗೆ **'ನಿಮೇಷ'** ಮಾತ್ರವೆಂದು, ಅದೂ ಸಹ ಉಪಚಾರಾರ್ಥವಾಗಿ, ಹೇಳಲ್ಪಡುತ್ತದೆ.

*ಯಾವಂತಂ ದೇವಲೋಕಸ್ಥೋ ಮಾನುಷಸ್ತ್ವವಧಾರಯೇತ್।*
*ಮಹಾಪ್ರಾಜ್ಞೋ ದೇವಜೂಕಃ ಸ ಕಾಲಃ ಪರಮಾಣುಕಃ॥*

(ಭಾಗ.ತಾ.ನಿ.ಬ್ರಹ್ಮತರ್ಕ)

'ಯಾಗಾದಿಗಳಿಂದ ಶ್ರೀಹರಿಪ್ರಸಾದವನ್ನು ಹೊಂದಿ, ದೇವಲೋಕದಲ್ಲಿರುವ ಮಹಾಪ್ರಾಜ್ಞನಾದ ಮನುಷ್ಯನು, ಯಾವ ಕಾಲವನ್ನು ಅಂಶಾಶಿತ್ವ ವಿಭಾಗವಿಲ್ಲದ್ದನ್ನಾಗಿ ಗ್ರಹಿಸುವನೋ, ಆ ಕಾಲವು ಪರಮಾಣುವೆನಿಸುತ್ತದೆ. (ಯದ್ಯಪಿ ಅದೂ ಸಹ ಅನಂತಾಂಶಗಳಿಂದ ಕೂಡಿದುದೇ ಆಗಿದೆ.)' ಎಂದು ಪರಮಾಣು ಕಾಲದ ನಿರೂಪಣೆಯಿದೆ.

*'ಅಣುರ್ದ್ವೌ ಪರಮಾಣೂ ಸ್ಯಾತ್ತ್ರಸರೇಣುಸ್ತ್ರಯಃ ಸ್ಮೃತಃ।*
*ಜಾಲಾರ್ಕರಶ್ಮ್ಯವಗತಃ ಖಮೇವಾನುಪತನ್ನಗಾತ್॥'* (ಭಾಗವತ)

—ಎಂದರೆ, ೨ ಪರಮಾಣು ಕಾಲಗಳು ಸೇರಿ ಒಂದು ದ್ವ್ಯಣುಕಕಾಲವೆನಿಸುತ್ತದೆ. ೩ ದ್ವ್ಯಣುಕಕಾಲಗಳು ಸೇರಿದರೆ ಒಂದು ತ್ರ್ಯಣುಕಕಾಲವು. ಈ ತ್ರ್ಯಣುಕವು ಕಿಟಕಿಯಿಂದ ಪ್ರವೇಶಿಸುವ ಸೂರ್ಯಕಿರಣನಿಮಿತ್ತ, ಸಾಮಾನ್ಯ ಮನುಷ್ಯರ ಪ್ರತ್ಯಕ್ಷವಿಷಯವಾಗುತ್ತದೆ. ೩ ತ್ರ್ಯಣುಕಗಳಿಗೆ ೧ ತ್ರುಟಿ, ೩ ತ್ರುಟಿಗಳಿಗೆ ೧ ವೇಧ, ೩ ವೇಧಗಳಿಗೆ ೧ ಲವ, ೩ ಲವಗಳಿಗೆ ೧ ನಿಮೇಷ, ೩ ನಿಮೇಷಗಳಿಗೆ ೧ ಕ್ಷಣ, ೫ ಕ್ಷಣಗಳಿಗೆ ೧ ಕಾಷ್ಠ, ೧೫ ಕಾಷ್ಠಗಳಿಗೆ ೧ ಲಘು, ೧೫ ಲಘುಗಳಿಗೆ ೧ ಘಳಿಗೆ, ೨॥ ಘಳಿಗೆಗೆ ೧ ಮುಹೂರ್ತ, ೭॥ ಘಳಿಗೆಗೆ ೧ ಯಾಮ, ೮ ಯಾಮಗಳಿಗೆ ೧ ದಿನ (ಅಹೋರಾತ್ರಿ ಸೇರಿ); ೧೫ ದಿನಗಳು ೧ ಪಕ್ಷ; ೨ ಪಕ್ಷಗಳು ಸೇರಿ ೧ ಮಾಸ, ೧೨ ಮಾಸಗಳು ೧

ಸಂವತ್ಸರ; ೧೦೦ ವರ್ಷಗಳು ಮನುಷ್ಯನ ಪೂರ್ಣಾಯುಷ್ಯವು. ಇತ್ಯಾದಿ ಕಾಲವಿಭಾಗಗಳನ್ನೂ, ಕಾಲಾಂತರ್ಯಾಮಿಯಾಗಿ, ಪರಮಾಣು ಮೊದಲಾದ ಕಾಲನಿಮಿತ್ತವಾದ ಲೇಶಮಾತ್ರ ವಿಕಾರವೂ ಇಲ್ಲದೇ ಕಾಲನಿಯಾಮಕನಾದ, ಕಾಲನಾಮಕ ಶ್ರೀಹರಿ ಮಹಿಮೆಗಳನ್ನೂ ಭಾಗವತ ತೃತೀಯ ಸ್ಕಂಧದ ೧೨ನೇ ಅಧ್ಯಾಯದ, ಗುರು ದ್ವಾರ ಮಾಡುವ ಅಧ್ಯಯನದಿಂದ ತಿಳಿಯಬಹುದು.

## ಪದ ೧೦

ರಾಗ-ನಾಟಿ; ತಾಳ-ರೂಪಕ

**ಒಮ್ಮೊಮ್ಮೆ ಕಣ್ದೆರೆದು ಮುಚ್ಚುವ ಕಾಲದಲಿ**
**ಜನನಮರಣವನೈದುವ**
**ಬ್ರಹ್ಮಾದಿ ಜೀವರ ಹರಿಗೆ ಸರಿಯೆಂಬ**
**ದುರ್ಮತದವರನೇನೆಂಬೆ** ॥೧॥

**ಅರ್ಥ:** ಒಮ್ಮೊಮ್ಮೆ—(ಶ್ರೀಹರಿಯು) ಒಂದಾವರ್ತಿ, ಕಣ್ದೆರೆದು ಮುಚ್ಚುವ ಕಾಲದಲಿ—ಕಣ್ಣುತೆಗೆದು ಮುಚ್ಚುವಷ್ಟು ಕಾಲದಲ್ಲಿ, ಜನನಮರಣವನು ಐದುವ—ಹುಟ್ಟಿ ಸಾಯುವ, ಬ್ರಹ್ಮಾದಿ ಜೀವರ—ಬ್ರಹ್ಮನೇ ಮೊದಲಾದ ಜೀವರನ್ನು, ಹರಿಗೆ—(ಕಾಲವಿಕಾರ ರಹಿತನೂ, ಅನಂತಕಾಲದಲ್ಲಿ ಏಕ ಪ್ರಕಾರವಿರುವವನೂ ಆದ) ಶ್ರೀಹರಿಗೆ, ಸರಿಯೆಂಬ—ಸಮರೆಂಬ (ಶ್ರೀಹರಿ-ಸ್ವರೂಪರೇ ಎಂಬ ಅಥವಾ ಆತನ ಸಮಾನರೆಂಬ), ದುರ್ಮತದವರನು—ದುಷ್ಟಸಿದ್ಧಾಂತವುಳ್ಳವರನ್ನು, ಏನೆಂಬೆ—ಏನೆಂದು ಕರೆಯಲಿ! (ಕಾಲವಶರಾಗಿ ದೇಹಯೋಗ ವಿಯೋಗಗಳಿಂದ ಸಂಸಾರದಲ್ಲಿ ಸುತ್ತುವ ಅಲ್ಪಜೀವರನ್ನು ಶ್ರೀಹರಿಗೆ ಸಮರೆಂದು ಅಥವಾ ಆತನಿಂದ ಅಭಿನ್ನರೆಂದು ತಿಳಿಯುವುದು ಏನು ಸಾಹಸ! ಎಂಥ ಮೂರ್ಖರು ಇವರು! ಆಶ್ಚರ್ಯ).

**ಹರಿಗಿದು ನಿಮಿಷ ಉಪಚರ್ಯತೇಯೆಂದು**
**ಸಿರಿಭಾಗವತ ಪೇಳಿತಾಗಿ**
**ಭರದಿ ನಿಮಿಷದಿರ ಲವಲವಕಾಲದ**
**ಇರವನರಿವ ಕವಿ ಯಾವ** ॥೨॥

**ಅರ್ಥ:** ಹರಿಗೆ—ಶ್ರೀಹರಿಗೆ, ಇದು—ಈ ಬ್ರಹ್ಮನ ೧೦೦ ವರ್ಷಕಾಲವು, ನಿಮಿಷ—ನಿಮಿಷವೆಂದು, ಉಪಚರ್ಯತೇ—ಉಪಚಾರಕ್ಕಾಗಿ ಹೇಳಲ್ಪಡು-ತ್ತದೆ. (ನಿಮಿಷ—ಕಣ್ಣುರೆಪ್ಪೆ ಹಾಕುವಷ್ಟು ಕಾಲವೂ ಅಲ್ಲ), ಎಂದು—ಎಂಬು-

ದಾಗಿ, ಸಿರಿ ಭಾಗವತ—ಶ್ರೀಭಾಗವತವೇ, ಪೇಳಿತಾಗಿ—ಹೇಳಿರುತ್ತ-ದಾದರೂ, ಭರದಿ—ವೇಗದಿಂದ (ಉತ್ಸಾಹದಿಂದ), ನಿಮಿಷದಿರ— ರೆಪ್ಪೆ-ಹಾಕದಿರುವುದಿಲ್ಲ (ನಮ್ಮೆಲ್ಲರೊಂದಿಗೆ ಶ್ರೀಹರಿಯು ರೆಪ್ಪೆಹಾಕುತ್ತಲೇ ಇರು-ವನು); ಲವಲವಕಾಲದ—ಅತಿ ಸೂಕ್ಷ್ಮಲವಕಾಲದಲ್ಲಿ ಸಹ, ಇರವನು—(ಶ್ರೀಹರಿಯ) ಇರುವಿಕೆಯನ್ನು (ಕಾಲನಿಯಾಮಕತ್ವವನ್ನು), ಅರಿವ — ತಿಳಿಯುವ, ಕವಿ ಯಾವ—ಪಂಡಿತನಾರು? (ಯಾವನೂ ಇಲ್ಲ).

**ವಿಶೇಷಾಂಶ:** ಬ್ರಹ್ಮನ ಪೂರ್ಣಾಯುಷ್ಯಕಾಲವು ಶ್ರೀಹರಿಗೆ **'ಲವ'** ಕಾಲವೂ ಅಲ್ಲ. ಹೀಗಿರುವ ಶ್ರೀಹರಿಯ ಆಯುಷ್ಯವೇನೆಂದು ಚಿಂತಿಸುವುದು ಮೂರ್ಖತನದ ಪರಮಾವಧಿಯು. ನಿಮೇಷವೆಂಬುದೇ ಇಲ್ಲದ ಶ್ರೀಹರಿಯು ಸರ್ವರಲ್ಲಿ ಸರ್ವನಿಮೇಷಣವ್ಯಾಪಾರವನ್ನು, ತಾನೂ ಮಾಡಿ, ಮಾಡಿಸು-ತ್ತಿರುವ ಅದ್ಭುತ ಮಹಿಮೆಯನ್ನು ನಿರೂಪಿಸಿರುವರು.

**ಅಂತದಿ ಯಿರದೆ ಸಂತರ ಸುರ ಸುಖಿಪ ನಿ-**
**ಶ್ಚಿಂತಮಹಿಮ ನಾರಾಯಣನು**
**ಇಂತು ಪರತದಿ ಉಳಿದು ಹೋಹರಿಗೆ**
**ಅಂತರನು ನೀವೆ ನೋಡಿರೋ** ॥೩॥

**ಅರ್ಥ:** ನಿಶ್ಚಿಂತಮಹಿಮ—ಚಿಂತಾಸಂತಾಪಾದಿ ಸಕಲದೋಷ ದೂರ-ನಾದ (ಮಹಾಮಹಿಮನಾದ), ನಾರಾಯಣನು—ಶ್ರೀಹರಿಯು, ಸಂತರ ಸುರ—ಸಜ್ಜನರ ಆರಾಧ್ಯದೇವನಾದ (ಸಜ್ಜನರ ಸ್ವರೂಪದಲ್ಲಿದ್ದು ಕ್ರೀಡಿಸುವ) ತಾನು, ಅಂತದಿ—ಪ್ರಳಯಕಾಲದಲ್ಲಿ ಸಹ (**ಅಥವಾ** ಜೀವರು ತಮ್ಮ ದೇಹದಲ್ಲಿರುವ ಕೊನೆಯ ಕ್ಷಣದವರೆಗೂ), ಅವರೊಳಗಿದ್ದು, ಯಿರದೆ—ಬಿಡದೆ (ನಿರಂತರವಾಗಿ), ಸುಖಿಪ—ಆನಂದದಿಂದಿರುತ್ತಾನೆ (ಜೀವರಿಗೆ ಸುಖವನ್ನು ಕೊಡಲಿಕ್ಕಾಗಿ ಶುಭವಿಷಯಗಳನ್ನು ಭೋಗಿಸಿ ಸುಖಿಸುತ್ತಾನೆ); ಇಂತು—ಹೀಗೆ, ಪರತದಿ ಉಳಿದು—ಹೊರಗುಳಿದು (ಕಾಲದೊಂದಿಗಿರಲು ಅಸಮರ್ಥರಾಗಿ), ಹೋಹರಿಗೆ—ಹೋಗುವವರಿಗೆ (ಅತ್ಯಲ್ಪಕಾಲಮಾತ್ರ-ವಿದ್ದು ಹೋಗುವವರಿಗೆ) **ಅಥವಾ** ಇಂತು ಪರತದಿ ಉಳಿದು ಹೀಗೆ ಕೊನೆಯಲ್ಲಿ ಉಳಿಯುವ ಶ್ರೀಹರಿಯು, (ಶಿಷ್ಯತೇ ಶೇಷಸಂಜ್ಞಃ ಇತ್ಯಾದಿ ಹೇಳಿದಂತೆ), ಹೋಹರಿಗೆ—(ಪರಾಧೀನರಾಗಿ—ದೇಹಗಳನ್ನು ಹೊಂದಿ ಅಲ್ಪಕಾಲವಿದ್ದು) ಹೋಗುವವರಿಗೆ, ಅಂತರನು—(ನಿತ್ಯನೂ ಆನಂದ-ಸ್ವರೂಪನೂ ಆದ ಶ್ರೀಹರಿಯು), ಅತ್ಯಂತ ವಿಲಕ್ಷಣನೆಂಬುದನ್ನು, ನೀವೇ

ನೋಡಿರೋ—ನೀವೇ ತಿಳಿದುನೋಡಿರಿ (ಜೀವರು ಶ್ರೀಹರಿಯ ಸಮರೆನ್ನಬಹುದೇ? ಈ ಯುಕ್ತಿಯನ್ನಾದರೂ ಗಮನಿಸಿರಿ).

ಜಯಘೋಷದೊಡನೆ ಗ್ರಂಥಪರಿಸಮಾಪ್ತಿಯ ಮಂಗಳವನ್ನು ಹಾಡುತ್ತಾರೆ:

**ಹರಿ ಸರ್ವೋತ್ತಮ ಹರಿಯೆ ಪರದೇವತೆ**
**ಹರಿಯೆ ಸಕಲವೇದವೇದ್ಯ**
**ನಿರುಪಮಶಕ್ತಿಯೆ ನಿತ್ಯನಿರ್ಮಲಮೂರ್ತಿ ಸು-**
**ಚಕ್ರವರ್ತಿಯೆ ಜಯತು** ॥೪॥

**ಅರ್ಥ:** ಹರಿ ಸರ್ವೋತ್ತಮ—ಶ್ರೀಹರಿಯೇ ಸರ್ವೋತ್ತಮನು; ಹರಿಯೆ ಪರದೇವತೆ—ಶ್ರೀಹರಿಯೇ ಪರಮೋಪಾಸ್ಯನು; ಹರಿಯೆ ಸಕಲವೇದವೇದ್ಯ—ಸಕಲ ವೇದಪ್ರತಿಪಾದ್ಯನು ಶ್ರೀಹರಿಯೇ (ವೇದೈಕಗಮ್ಯನು—ಶ್ರೀಹರಿಯ ಸರ್ವೋತ್ಕರ್ಷವೇ ಸಕಲ ವೇದಗಳ ಮಹಾತಾತ್ಪರ್ಯವು); ನಿರುಪಮಶಕ್ತಿಯೆ ಅಸದೃಶವಾದ ಅಚಿಂತ್ಯಸಾಮರ್ಥ್ಯವುಳ್ಳ, ನಿತ್ಯನಿರ್ಮಲಮೂರ್ತಿ—ನಿತ್ಯವೂ ಶುದ್ಧವೂ (ಅಪ್ರಾಕೃತವೂ—ಆನಂದಾದಿಸದ್ಗುಣಸ್ವರೂಪವೂ) ಆದ ದೇಹವುಳ್ಳವನೂ, ಸುಚಕ್ರವರ್ತಿಯೆ—ಸಜ್ಜನರಕ್ಷಕನಾದ ಸರ್ವಾಧಿಪತೇ! ಜಯತು—ನಿತ್ಯ-ಜಯಶೀಲನಾದ ನಿನಗೆ ಜಯ ಜಯ, ಪ್ರಭೋ!

**ಶ್ರೀಹಯವದನಾಶ್ರಿತಜನಮೋಹನ್ನ**
**ಮೋಹಾಂಧಕಾರಮಾರ್ತಾಂಡ**
**ಸೋऽಹಂ ಯೆಂಬುವರಿಗೆ ಶೋಕವನೀವ ನಿ-**
**ರಹಂಕಾರಿಗಳ ರಕ್ಷಿಸುವ** ॥೫॥

**ಅರ್ಥ:** ಶ್ರೀಹಯವದನ—ಶ್ರೀಹಯಗ್ರೀವದೇವನು, ಅಶ್ರಿತಜನ ಮೋಹನ್ನ—ಭಕ್ತಜನರಿಗೆ ಅತಿಪ್ರಿಯನು (ಆಶ್ಚರ್ಯಜನಕನು, ಮೋಹ—ಆಶ್ಚರ್ಯ, ಅಥವಾ ಪ್ರೇಮಾತಿಶಯದಿಂದ ಭಕ್ತರಿಗೆ ತನ್ನ ಹುಚ್ಚು ಹಿಡಿಯುವಂತೆಯೇ ಮಾಡುತ್ತಾನೆ), ಮೋಹಾಂಧಕಾರಮಾರ್ತಾಂಡ—(ಮೋಹ-ಅಜ್ಞಾನ) ಭಕ್ತರ ಅಜ್ಞಾನವೆಂಬ ಕಗ್ಗತ್ತಲೆಯನ್ನು ನಿರ್ಮೂಲಗೊಳಿಸುವ ಸೂರ್ಯನು; ಸೋऽಹಂಯೆಂಬುವರಿಗೆ—ಆತನು ನಾನೇ ಎಂಬುವರಿಗೆ (ಜೀವ ಬ್ರಹ್ಮೈಕ್ಯವನ್ನು ತಿಳಿಯುವ ಮಿಥ್ಯಾಜ್ಞಾನಿಗಳಿಗೆ), ಶೋಕವನು ಈವ—ನಿತ್ಯದುಃಖವನ್ನು ಕೊಡುವನು (ಅಂಧತಮಸ್ಸನ್ನು ಹೊಂದಿಸುವನು); ನಿರಹಂಕಾರಿಗಳ—

ಅಭಿಮಾನವನ್ನು ತೊರೆದು ತನ್ನನ್ನೇ ಶರಣುಹೊಂದಿದವರನ್ನು, ರಕ್ಷಿಸುವ— (ಸರ್ವತ್ರ-ಸರ್ವವಿಧದಿಂದ) ಕಾಪಾಡುತ್ತಾನೆ (ಭಕ್ತಜನಪರಿಪಾಲಕನು).

**ಮುತ್ತುರತ್ನಗಳನ್ನು ಕೆತ್ತಿಸುವಂತೆ ಸು-**
**ತತ್ವಸಾರದ ವಿಸ್ತಾರಗಳ**
**ಯುಕ್ತಿಯಿಂದಲೆ ಪೇಳ್ದ ವಾದಿರಾಜೋಕ್ತಿಯೊಳು**
**ಅರ್ತಿಯು ಚತುರ್ಥಸಂಧಿ** **॥೬॥**

**ಅರ್ಥ:** ಮುತ್ತುರತ್ನಗಳನ್ನು ಕೆತ್ತಿಸುವಂತೆ (ಉದಾರವಾಗಿ ನೀಡುವಂತೆ), ಸುತತ್ವಸಾರ— ಮಂಗಳಪ್ರದವಾದ ಈ **'ತತ್ವಸಾರ'**ವೆಂಬ ಗ್ರಂಥದ, ವಿಸ್ತಾರ-ಗಳ— ವಿವರಗಳನ್ನು (ಸತ್ಸಿದ್ಧಾಂತಪ್ರಮೇಯಗಳ ವಿಸ್ತಾರವನ್ನು), ಯುಕ್ತಿ-ಯಿಂದಲೆ— ಯುಕ್ತಿಗಳನ್ನೇ ಪ್ರಧಾನವಾಗಿ ಆಶ್ರಯಿಸಿ, ಪೇಳ್ದ— ಹೇಳಿದ, ವಾದಿರಾಜೋಕ್ತಿಯೊಳು— ವಾದಿರಾಜನಾದ ನನ್ನ ನುಡಿಗಳಲ್ಲಿ, ಅರ್ತಿಯ— ಪ್ರಿಯವಾದ (ಸಂತೋಷವನ್ನುಂಟುಮಾಡುವ— ರಮ್ಯವಾದ), ಚತುರ್ಥ ಸಂಧಿ— ನಾಲ್ಕನೆಯ ಸಂಧಿಯು (ಪೂರ್ಣವಾಯಿತು).

ಉಪಾಸ್ಯನಾದ ಶ್ರೀಲಕ್ಷ್ಮೀಹಯಗ್ರೀವಸ್ವಾಮಿಯ ದಯೆಯಿಂದಲೇ ತಾವು ರಚಿಸಿದ ಈ ಕಾವ್ಯವನ್ನು ಶ್ರೀಹರಿಯಲ್ಲಿ ಅರ್ಪಿಸುತ್ತಾರೆ.

**ಶ್ರೀಧರ ಹಯವದನರಾಯನ ದಯದಿಂದ**
**ವಾದಿರಾಜೇಂದ್ರ ರಚಿಸಿದ**
**ಈ ದಿವ್ಯಕಾವ್ಯದಿ ಸ್ಥಿತಿಯನೊರೆದ ರಮ್ಯವಾದ**
**ತುದಿಯ ಸಂಧಿಯು ಪೊಸಗೆ** **॥೭॥**

**ಅರ್ಥ:** ಶ್ರೀಧರ— ಲಕ್ಷ್ಮೀವಕ್ಷನಾದ, ಹಯವದನರಾಯನ— ಶ್ರೀಹಯ-ಗ್ರೀವಸ್ವಾಮಿಯ, ದಯದಿಂದ, ಅನುಗ್ರಹದಿಂದ (ಕೃಪೆಯಿಂದ), ವಾದಿ-ರಾಜೇಂದ್ರ— ವಾದಿರಾಜೇಂದ್ರನೆಂಬ (ಅನ್ವರ್ಥನಾಮವುಳ್ಳ) ಯತಿಯು, ರಚಿಸಿದ— ನಿರ್ಮಿಸಿದ, ಈ ದಿವ್ಯಕಾವ್ಯದಿ— ಈ ಶ್ರೇಷ್ಠ (ತತ್ವಸಾರವಾದ್ದ-ರಿಂದ, ಅಲೌಕಿಕ ಪ್ರಮೇಯಗಳನ್ನೊಳಗೊಂಡ) ಕಾವ್ಯದಲ್ಲಿ, ಸ್ಥಿತಿಯನೊರೆದ — ಶ್ರೀಹರಿಯ ಜಗತ್ಪಾಲನರೂಪಮಹಿಮೆಯನ್ನು ವರ್ಣಿಸಿದ, ರಮ್ಯವಾದ — ಮನೋಹರವಾದ (ಸಜ್ಜನಮನಾಕರ್ಷಕವಾದ), ತುದಿಯ ಸಂಧಿ— ಕೊನೆಯ ಸಂಧಿಯು, ಪೊಸಗೆ— ಮುಗಿದುದು (ವಿರಾಜಿಪುದು).

## ಫಲಶ್ರುತಿ

ರಾಗ-ನಾಟಿ; ತಾಳ-ರೂಪಕ

**ಈ ಪದವೆ ಶುಭಪದ ಈ ಪದ ವರ್ತಿಯ ಪದ**
**ಈ ಪದವೆ ಸಂಪದಾಸ್ಪದದ ಪದ**
**ಈ ಪದವೆ ಹರಿಪದ ಈ ಪದ ನೆನೆವ ಪದ**
**ಈ ಪದವೆ ಆಪದಂತಕಪದ** ॥೧॥

**ಅರ್ಥ:** ಈ ಪದವೆ—ಪದ್ಯರೂಪದ ಈ ಕಾವ್ಯವು, **ಶುಭಪದ—ಮಂಗಳ ಗ್ರಂಥವು** (ವಾಕ್ಯಸಮೂಹವು); ಈ ಪದ—ಇದರಲ್ಲಿನ ಒಂದೊಂದು ಪದ್ಯವೂ, ವರ್ತಿಯ ಪದ—ಬುಗ್ಗೆಯಂತಿರುವ ಪದ್ಯವು (ತೋಡುವವನ ಶಕ್ತಿಗನುಸಾರವಾಗಿ ಆಳವಾಗಿ ಹೋದಂತೆ ಸ್ವಚ್ಛವಾದ ಅಧಿಕ ಜಲವನ್ನು ಕೊಡುವ ವರ್ತಿಯಂತೆ, **ಅಥವಾ** ಈ ಪದವರ್ತಿಯ ಪದ—ಈ ಪದವು ಅರ್ತಿಯ ಪದ—ಒಂದೊಂದು ಪದ್ಯವೂ ಪ್ರೇಮದಿಂದ (ಜ್ಞಾನಾರ್ಥಿಗಳ ಮೇಲಿನ ಆದರದಿಂದ—ಹರಿಭಕ್ತಿಯಿಂದ ಸಹ) ಬರೆದುದು (ಸುಜೀವಿಗಳಾದ ಓದುಗರಲ್ಲಿ ಹರಿಭಕ್ತಿಯನ್ನು ಉದ್ರೇಕಿಸುವುದು ಆಗಿದೆ); ಈ ಪದವೆ—ಇಲ್ಲಿ ಪ್ರತಿಪಾದ್ಯನಾದ ಶ್ರೀಹರಿಯ ಪಾದಪದ್ಮವೇ, ಸಂಪದಾಸ್ಪದದ—ಇಹಪರ-ಭಾಗ್ಯಲಾಭಕ್ಕೆ ಕಾರಣವಾದ, ಪದ—ಪಾದವು; ಈ ಪದವೆ—ಈ ಕಾವ್ಯವು, ಹರಿಪದ—ಶ್ರೀಹರಿಯ ಸ್ವರೂಪವು (ಶ್ರೀಹರಿಯಿಂದ ಅಭಿನ್ನಗಳಾದ ಆತನ ಮಹಿಮೆಗಳನ್ನೇ ನಿರೂಪಿಸುತ್ತದೆ; ಈ ಪದವೆ—ಶ್ರೀಹರಿಪಾದವೇ, ನೆನೆವ ಪದ—ನಿರಂತರ ಸ್ಮರಣೆಯೋಗ್ಯವಾದುದು; **ಅಥವಾ** ಈ ಪದವೆ—ಶ್ರೀಹರಿ-ಮಹಿಮೆಗಳನ್ನು ಕೊಂಡಾಡುವ ಗ್ರಂಥವೇ, ನೆನೆವ ಪದ—ಸಂತತ ಸ್ಮರಣೆಗೆ (ಮನನಕ್ಕೆ ಸಹ) ಯೋಗ್ಯವಾದ ಮಾತು. ಈ ಪದವೆ—ಶ್ರೀಹರಿಚರಣವೇ, ಆಪದಂತಕಪದ—**ಸರ್ವವಿಪತ್ಪರಿಹಾರಕವು.**

**ಭಯವ ಹರಿಸುವ ಪದ ನಯವ ತೋರಿಪ ಪದ**
**ಪ್ರಿಯಮುಕ್ತಿಪದನ್ನೈದಿಸುವ ಪದ**
**ಹಯವದನದೇವನ್ನ ದಯಕೆ ಪಾತುರನಾಗಿ**
**ಜಯಿಸುವ ವಾದಿರಾಜನ ಪದವು** ॥೨॥

**ಅರ್ಥ:** ಭಯವ ಹರಿಸುವ ಪದ-ಸಂಸಾರಭಯವನ್ನು ಪರಿಹರಿಸುವುದು, ಈ ಕಾವ್ಯ, (ಇಲ್ಲಿ ಪ್ರತಿಪಾದಿಸಲಾದ ಶ್ರೀಹರಿಮಹಿಮೆಗಳ ದೃಢಜ್ಞಾನವು

ಸಂಸಾರವೆಂಬ ಮಹಾಭಯವನ್ನೇ ಪರಿಹರಿಸಲು ಸಮರ್ಥವಾಗಿರಲು, ಸಂಸಾರದಲ್ಲಿ ಪ್ರತಿನಿತ್ಯವೂ ಬರುವ ವಿವಿಧ ಭಯಗಳನ್ನು ದೂರಮಾಡುವುದೆಂದು ಹೇಳಲೇನು); ನಯವ ತೋರಿಪ ಪದ—ಸನ್ಮಾರ್ಗವನ್ನು ತೋರಿಸುವ ಉಪದೇಶ ವಾಕ್ಯಸಮೂಹವು (**ಅಥವಾ,** ನಯ-ನ್ಯಾಯ-ಯುಕ್ತಿಗಳಿಂದ ತತ್ವಗಳನ್ನು ಸಾಧಿಸಿಕೊಡುವ ಕಾವ್ಯ); ಪ್ರಿಯಮುಕ್ತಿಪದನ—ಸರ್ವಾಪೇಕ್ಷಿತವಾದ ಮೋಕ್ಷ ಸ್ಥಾನವನ್ನು, ಐದಿಸುವ ಪದ—ಹೊಂದಿಸುವ ಕಾವ್ಯ, (ಮೋಕ್ಷಸಾಧಕಕಾವ್ಯ ಗ್ರಂಥವಿದು); ಹಯವದನದೇವನ್ನ—ಶ್ರೀಲಕ್ಷ್ಮೀಹಯಗ್ರೀವಸ್ವಾಮಿಯ, ದಯಕೆ—ಕೃಪೆಗೆ, ಪಾತುರನಾಗಿ—ಪಾತ್ರನಾಗಿ, ಜಯಿಸುವ, ಅಥವಾ ಪರವಾದಿಗಳನ್ನು ಗೆಲ್ಲುವಂತೆ ಮಾಡುವ, ವಾದಿರಾಜನ ಪದವು—ವಾದಿರಾಜಯತಿಯ ಕಾವ್ಯವು.

**ವಿಶೇಷಾಂಶ:** *'ತ್ರಿಭಾಷಾಂ ಯೋ ನ ಜಾನಾತಿ ರೀತೀನಾಂ ಶತಮೇವ ಚ।*
*ವ್ಯತ್ಯಾಸಾದೀನ್ ಸಪ್ತಭೇದಾನ್ ವೇದಾದ್ಯರ್ಥಂ ತಥಾ ವದೇತ್।*
*ಸ ಯಾತಿ ನಿರಯಂ ಘೋರಂ ಅನ್ಯಥಾಜ್ಞಾನಸಂಭವಮ್॥'*

ಎಂದು ಶ್ರೀಬಾದರಾಯಣಪ್ರಣೀತ ಲಕ್ಷಣಶಾಸ್ತ್ರದಲ್ಲಿ: 'ಮೂರು ಭಾಷೆಗಳನ್ನೂ (ದರ್ಶನ-ಗುಹ್ಯ-ಸಮಾಧಿಗಳೆಂಬ ಭಾಷಾತ್ರೈವಿಧ್ಯ), ನೂರು ರೀತಿಗಳನ್ನೂ ವೈದರ್ಭೀ, ಗೌಡೀ ಮೊದಲಾದ ಪದಾಕ್ಷರವಿನ್ಯಾಸಪದ್ಧತಿಗಳನ್ನೂ ಏಳು ಭೇದಗಳನ್ನೂ ತಿಳಿಯದೇ, ವೇದಾರ್ಥಗಳನ್ನು ಸ್ವಬುದ್ಧಿಯಿಂದ ಹೇಳುವವನು ವಿಪರೀತಜ್ಞಾನದಿಂದಾಗುವ ಘೋರನರಕಗಳನ್ನು ಹೊಂದುತ್ತಾನೆ' ಎಂದು ಹೇಳಲಾಗಿದೆ.

*'ವ್ಯತ್ಯಾಸಃ ಪ್ರಾತಿಲೋಮ್ಯಂ ಚ ಗೋಮೂತ್ರೀ ಪ್ರಘಸಸ್ತಥಾ।*
*ಉಕ್ಷಣಃ ಸುಧುರಃ ಸಾಧುಃ ಸಪ್ತ ಭೇದಾಃ ಪ್ರಕೀರ್ತಿತಾಃ॥'*

ಎಂದು ಸಪ್ತ ಭೇದಗಳನ್ನು ನಿರೂಪಿಸಲಾಗಿದೆ. ಇವುಗಳ ಅರ್ಥವಿವರಗಳನ್ನು ಮಹಾಭಾರತ ತಾತ್ಪರ್ಯನಿರ್ಣಯ ಗ್ರಂಥದ ಆಳವಾದ ಅಭ್ಯಾಸದಿಂದ ತಿಳಿಯಬಹುದು. ಪ್ರಕೃತ, ಈ ಸಪ್ತಭೇದಗಳಲ್ಲಿ ಒಂದಾದ **'ಸುಧುರ'**ವೆಂಬುದನ್ನು ಈ ೧-೨ನೇ ನುಡಿಗಳಲ್ಲಿ ಕಾಣುತ್ತೇವೆ. ಸಪ್ತಭೇದಾದಿಗಳನ್ನು ತಿಳಿದು, ವೇದತಾತ್ಪರ್ಯಗಳನ್ನು ನಿರೂಪಿಸುವ ಅಧಿಕಾರವುಳ್ಳ ಮಹಾಜ್ಞಾನಿಗಳು ಶ್ರೀವಾದಿರಾಜರು, ಎಂಬುದನ್ನು ಈ ನುಡಿಗಳು ಜ್ಞಾಪಿಸುತ್ತವೆ. **'ಸುಧುರ'**ವೆಂದರೆ, *'ವಾಸುದೇವಪರಾ ವೇದಾಃ, ವಾಸುದೇವಪರಾ ಮಖಾಃ, ವಾಸುದೇವಪರಾ ಯೋಗಾಃ'* ಎಂಬಲ್ಲಿ ಪರಶಬ್ದವನ್ನು ಪ್ರಯೋಗಿಸಿರುವಂತೆ

ವಿವಿಧಾರ್ಥಗಳನ್ನು ಮನಸ್ಸಿನಲ್ಲಿಟ್ಟು ಒಂದೇ ಪದವನ್ನು ಅನ್ಯಪದಗಳೊಂದಿಗೆ ಚೆನ್ನಾಗಿ ಯೋಜನೆ ಮಾಡಿ, ಪ್ರಯೋಗಿಸುವ ಕುಶಲತೆ. ಮೇಲಿನ ಉದಾಹರಣೆಯಲ್ಲಿ **'ಪರ'** ಶಬ್ದವು ವೇದ-ಮಖ-ಯೋಗಶಬ್ದಗಳ ಜೊತೆ-ಯಲ್ಲಿ ಹೇಗೆ ಭಿನ್ನಾರ್ಥಗಳಿಗೆ ಅವಕಾಶವಾಗುವಂತೆ ಪ್ರಯೋಗಿಸಲ್ಪಟ್ಟಿರು-ತ್ತದೆಂಬುದನ್ನು ಕಾಣಬಹುದು—ವೇದಗಳು, ವಾಸುದೇವನನ್ನೇ ಹೇಳುತ್ತವೆ —ಯಜ್ಞಗಳು ವಾಸುದೇವನ ಪ್ರಿತ್ಯರ್ಥವಾಗಿಯೇ ಇವೆ—ಯೋಗಗಳೆಲ್ಲ ವಾಸುದೇವನ ಪ್ರಾಪ್ತಿಗಾಗಿಯೇ. ಇಲ್ಲಿ **'ಪದ'** ಎಂಬ ಶಬ್ದವು ನಾನಾರ್ಥಗಳಲ್ಲಿ ಪ್ರಯೋಗಿಸಲಾಗಿದೆ.

**ಭಕ್ತಿಯೊಳಾಡಲಿ ಮುಕ್ತಿಯ ಬೇಡಲಿ**
**ಸುಖದ ರಾಶಿಯ ಮುಂದಲೆ ನೋಡಲಿ**
**ವಿಕೃತಿಗಳೋಡಲಿ ಸುಕೃತಿಗಳ ಕೂಡಲಿ**
**ಅಖಿಲರೀಕಥೆಗಳನು ಪಾಡಲಿ** ॥೩॥

**ಅರ್ಥ:** ಅಖಿಲರು—ಸಕಲ ಸಜ್ಜನರೂ, ಈ ಕಥೆಗಳನು—(ಈ ಕಾವ್ಯದಲ್ಲಿ ನಿರೂಪಿಸಿರುವ) ಹರಿಮಹಿಮೆಗಳನ್ನು, ಪಾಡಲಿ—ಭಕ್ತಿಯಿಂದ ಹಾಡಲಿ; ಭಕ್ತಿಯೊಳು—(ಅದರಿಂದ ಉದ್ರೇಕಗೊಳ್ಳುವ) ಭಕ್ತಿ ಸುಧೆಯಲ್ಲಿ, ಆಡಲಿ—ಆನಂದದಿಂದ ವಿಹರಿಸಲಿ; ಮುಕ್ತಿಯ ಬೇಡಲಿ—(ಶ್ರೀಹರಿಯಲ್ಲಿ ಅನ್ಯವನ್ನೇ-ನನ್ನೂ ಬೇಡದೆ) ಮೋಕ್ಷವನ್ನೇ ಪ್ರಾರ್ಥಿಸಲಿ; ಸುಖದ ರಾಶಿಯ—ಆನಂದ-ಸಾಗರದ (ಅಖಂಡ ಮೋಕ್ಷಾನಂದದ), ಮುಂದಲೆ—ಮುಂಭಾಗವನ್ನು (ಸುಳಿವನ್ನು—ಎಳೆಯನ್ನು—ಅದರ ಸೆಲೆಯನ್ನು—ಅದು ಹೇಗಿರುತ್ತದೆಂಬು-ದನ್ನು), ನೋಡಲಿ—(ಭಕ್ತಿರಸದಲ್ಲಿ ವಿಹರಿಸುವಾಗಲೇ) ಕಾಣುವಂತಾಗಲಿ; ವಿಕೃತಿಗಳು—(ಮೋಕ್ಷವಿರೋಧಿಗಳಾದ ವಿರುದ್ಧಕರ್ಮಗಳು (ನಿಷಿದ್ಧಕರ್ಮ-ಗಳು), ಓಡಲಿ—(ಅವರನ್ನು) ಬಿಟ್ಟು ತೊಲಗಲಿ; (ಹಿಂದಿನ ದುಷ್ಕರ್ಮ-ಸಂಚಿತ ಪಾಪಗಳು ಹರಿಗುಣಗಾನದಿಂದ ನಷ್ಟಗೊಳ್ಳುತ್ತಿರಲು, ಮುಂದೆ ನಿಷಿದ್ಧಕರ್ಮಗಳು ಅವರಿಂದ ಸಂಭವಿಸದಿರಲಿ) (ದುಷ್ಟಸಂಗ ತೊಲಗಲಿ); ಸುಕೃತಿಗಳ ಕೂಡಲಿ—(ಅವರು) ಸತ್ಕರ್ಮಗಳನ್ನು ಸೇರಲಿ (ಭಗವತ್ಪ್ರಿಯವಾದ ಕರ್ಮಗಳನ್ನು ಆಚರಿಸುವುದರಲ್ಲಿಯೇ ಅವರ ಮನಸ್ಸು ಎರಗಲಿ, ಅಥವಾ ಭಗವದ್ಭಕ್ತರ (ಸುಕೃತಿಗಳ) ಸಹವಾಸವೇ ದೊರೆಯಲಿ—ಸಾಧುಸಂಗದಲ್ಲಿಯೇ ಇರಲಿ).

**ಆಯುಷ್ಯ ಹೆಚ್ಚಲಿ ಸಿರಿಯರಸ ಮೆಚ್ಚಲಿ**
**ಶ್ರೇಯಃಶುಭಮಾರ್ಗ ಮನ ಮೆಚ್ಚಲೀ**
**ಮಾಯಿಮತ ಬೆಚ್ಚಲಿ ಆಯಾಸ ಬಿಚ್ಚಲಿ**
**ಬಾಯಿ ಬಿಚ್ಚುವ ಕುವಾದಿಗಳ ಕೊಚ್ಚಲಿ** ॥೪॥

**ಅರ್ಥ:** ಆಯುಷ್ಯ—ಆಯುಷ್ಯವು (ಜೀವಿತಕಾಲವು), ಹೆಚ್ಚಲಿ—(ಈ ಕಾವ್ಯವನ್ನು ಸೇವಿಸುವವರಿಗೆ) ವೃದ್ಧಿಗೊಳ್ಳಲಿ; ಸಿರಿಯರಸ—ಲಕ್ಷ್ಮೀಪತಿಯು, ಮೆಚ್ಚಲಿ—ಪ್ರಸನ್ನನಾಗಲಿ; ಶ್ರೇಯಃಶುಭಮಾರ್ಗ—(ಇಹಪರಗಳ) ಶ್ರೇಯಸ್ಸಿಗೆ ಕಾರಣವಾದ ಸನ್ಮಾರ್ಗವನ್ನು, ಮನ ಮೆಚ್ಚಲಿ—ಅವರ ಮನಸ್ಸು ಆದರಿಸಲಿ; ಮಾಯಿಮತ—ಜೀವಬ್ರಹ್ಮೈಕ್ಯವನ್ನೂ ಜಗನ್ಮಿಥ್ಯಾತ್ವವನ್ನೂ ಹೇಳುವ ದುರ್ಮತವು, ಬೆಚ್ಚಲಿ—(ಅವರ ಮನಸ್ಸಿನಿಂದ) ಹೆದರಿ ಓಡಲಿ; ಆಯಾಸ ಬಿಚ್ಚಲಿ—(ಯಥಾರ್ಥವನ್ನು ತಿಳಿಯಲು, ಅಜ್ಞಾನಮಿಥ್ಯಾಜ್ಞಾನನಿಮಿತ್ತವಾದ ಸಂಶಯಗಳನ್ನು ಎದುರಿಸಿ ಹೋರಾಡುತ್ತಿದ್ದ) ಶ್ರಮವು, ಪರಿಹಾರವಾಗಲಿ; ಬಾಯಿ ಬಿಚ್ಚುವ—ಇಂಥ ಭಕ್ತರ ಎದುರು ಬಾಯಿ ಬಿಡುವ (ವಾದಿಸಲು ಬರುವ) ಕುವಾದಿಗಳ—ದುರ್ವಾದಿಗಳನ್ನು ಕೊಚ್ಚಲಿ—ಲೀಲೆಯಿಂದ ಖಂಡಿಸುವಂತಾಗಲಿ

**ವಿಶೇಷಾಂಶ:** (೧) ಈ ಕಾವ್ಯಸೇವನೆಯಿಂದ, ಯೋಗ್ಯಜೀವರು, ಇದನ್ನು ಹಾಡುತ್ತಿರುವಾಗಲೇ, ಭಕ್ತಿರಸದಲ್ಲಿ ಮುಳುಗಿ ಮೋಕ್ಷಾನಂದದ ಸೊಬಗನ್ನು ರುಚಿ ನೋಡುವರೆಂದೂ, ಅವರಿಗೆ ಆಯುಷ್ಯ, ಐಶ್ವರ್ಯ, ತತ್ವಜ್ಞಾನ, ವಾದಿನಿಗ್ರಹಶಕ್ತಿ, ಮುಂತಾದ ಫಲಗಳು ತಪ್ಪದೆ ದೊರೆಯುವುವೆಂದೂ ಸೂಚಿಸುತ್ತ, ಹಾಗೆ ಶ್ರೀಹರಿಯು ಅನುಗ್ರಹಿಸಲೆಂದು ಪ್ರಾರ್ಥಿಸುತ್ತಾರೆ.

(೨) ಪ್ರಾಸಬದ್ಧವಾದ ಈ ಕಾವ್ಯದಲ್ಲಿ ವಿವಿಧ ಪ್ರಾಸಗಳನ್ನು ಪ್ರದರ್ಶಿಸಿದ್ದಾರೆ. ಆದಿ, ಮಧ್ಯ, ಅಂತ್ಯಭೇದದಿಂದ ಪ್ರಾಸಗಳು ಮುಖ್ಯವಾಗಿ ಮೂರು ವಿಧ. ಪ್ರತಿಪಾದದ ಎರಡನೇ ವರ್ಣವು ಒಂದೇ ವಿಧದ್ದಾಗಿರುವುದು, ಆದಿಪ್ರಾಸವು, ಇದನ್ನೇ ಹೆಚ್ಚಾಗಿ ಉಪಯೋಗಿಸಿರುವರು. ೩-೪ನೇ ಪಾದಗಳು 'ಅಂತ್ಯ' ಪ್ರಾಸವುಳ್ಳವು. ಶ್ರೀವಾದಿರಾಜರ ಸಂಸ್ಕೃತಕಾವ್ಯಗಳು ಶ್ರೇಷ್ಠತರಗತಿಗೆ ಸೇರಿದವು. ಅವರ **'ರುಕ್ಮಿಣೀಶವಿಜಯ'** ಕಾವ್ಯವು ಮಹಾಕಾವ್ಯ ಲಕ್ಷಣಗಳಿಂದ ಪೂರ್ಣವಾಗಿದ್ದು, ಕಾವ್ಯಜಗತ್ತಿನಲ್ಲಿ ಪ್ರಸಿದ್ಧಿಪಡೆದು ಶೋಧಿಸುತ್ತಲಿದೆ. ಅವರ **'ಯುಕ್ತಿಮಲ್ಲಿಕಾ'** ಮುಂತಾದ ಶಾಸ್ತ್ರಗ್ರಂಥಗಳು ಸಹ, ಅವರ ಕವಿತಾ-

ಚಾತುರ್ಯವನ್ನು ಎತ್ತಿ ತೋರುತ್ತವೆ. ಕನ್ನಡ ಭಾಷೆಯ ಕಾವ್ಯಗಳನ್ನು ರಚಿಸುವುದರಲ್ಲಿ ಸಹ, ಅವರ ಆ ಚಾತುರ್ಯವೂ, ಪ್ರೌಢಿಮೆಯೂ, ಪಾಂಡಿತ್ಯವೂ, ಅಸದೃಶವೆಂದು ಈ ಗ್ರಂಥದಿಂದ ತಿಳಿಯಬಹುದಾಗಿದೆ.

**ನೆನೆವೆ ನಾರಾಯಣನ ನೆನೆವೆ ನಾರಾಯಣಿಯ**
**ನೆನೆವೆ ನಾರಾಯಣನ ಭಕ್ತರ**
**ನೆನೆವೆ ಹರಿಮಂಚವ ನೆನೆವೆ ಹರಿವಾಹನನ**
**ನೆನೆವೆ ಹರಮುಖ್ಯರಾದ ಸುರರ** ॥೫॥

**ಸೂಚನೆ:** ಶ್ರೀಹರಿಯನ್ನು ಆತನ ಪರಿವಾರದವರೊಡನೆ ಸ್ಮರಿಸಬೇಕಾದ ಕರ್ತವ್ಯವನ್ನು ಈ ನುಡಿಯಿಂದ ಸೂಚಿಸುತ್ತಾರೆ:

**ಅರ್ಥ:** ನಾರಾಯಣನ— ನಾರಾಯಣನನ್ನು, ನೆನೆವೆ— ಸ್ಮರಿಸುತ್ತೇನೆ; ನಾರಾಯಣಿಯ ನೆನೆವೆ— ಶ್ರೀಮಹಾಲಕ್ಷ್ಮಿಯನ್ನೂ ಸ್ಮರಿಸುವೆನು; ನಾರಾಯಣನ ಭಕ್ತರ ನೆನೆವೆ— ಸಕಲ ಹರಿಭಕ್ತರನ್ನು ಸ್ಮರಿಸುತ್ತೇನೆ; ಹರಿಮಂಚವ— ಶ್ರೀಹರಿಗೆ ಪರ್ಯಂಕನಾದ ಶೇಷದೇವನನ್ನು, ನೆನೆವೆ; ಹರಿವಾಹನನ— ವಾಹನನಾದ ಗರುಡದೇವನನ್ನು (**ಅಥವಾ** ಮುಖ್ಯವಾಹನನಾದ ಮುಖ್ಯಪ್ರಾಣನನ್ನು ನೆನೆವೆ), ಹರಮುಖ್ಯರಾದ ಸುರರ— ರುದ್ರನೇ ಮೊದಲಾದ ದೇವತೆಗಳನ್ನು, ನೆನೆವೆ — ಚಿಂತಿಸುತ್ತೇನೆ.

**ವಿಶೇಷಾಂಶ:** *'ರಮಾಬ್ರಹ್ಮಾದಯಸ್ತಸ್ಯ ಪರಿವಾರತಯಾ ತಥಾ'* ಇತ್ಯಾದಿಗಳಲ್ಲಿ ಹೇಳಿರುವಂತೆ, ಶುದ್ಧವಾದ ವಿಷ್ಣುಸರ್ವೋತ್ತಮತ್ವಜ್ಞಾನಕ್ಕೆ ರಮಾಬ್ರಹ್ಮಾದಿ ಸಕಲ ದೇವತೆಗಳನ್ನು ತಾರತಮ್ಯಜ್ಞಾನಪೂರ್ವಕ ಸ್ಮರಿಸುವುದು ಆವಶ್ಯಕ. ಅಲ್ಪನಾದ ತಾನು ಶ್ರೀಹರಿಯ ನಿತ್ಯದಾಸಾನುದಾಸನೆಂಬ ಅನುಸಂಧಾನಸ್ಥಿರತೆಗೆ ಸಹಾಯಕವಾಗುತ್ತದೆ.

**ಈ ದಿವ್ಯಕೃತಿಕಮಲ ಕೃಷ್ಣಗರ್ಪಿತವಾಗಿ**
**ಶ್ರೀದೇವಿಯು ಇದನೆ ಕೈಪಿಡಿಯಲಿ**
**ಮೋದದಿ ಸದಮಲಸಂಪದವನೀಯಲಿ**
**ವಾದಿರಾಜೇಂದ್ರಗುರುಯೋಗಿವರಗೆ** ॥೬॥

ಸೂ: ಗ್ರಂಥವನ್ನು ಶ್ರೀಕೃಷ್ಣನಿಗೆ ಅರ್ಪಿಸಿ ವಿಶೇಷಪ್ರಸನ್ನತಾಭಾಗ್ಯವನ್ನು ಪ್ರಾರ್ಥಿಸುತ್ತಾರೆ.

**ಅರ್ಥ:** ಈ ದಿವ್ಯಕೃತಿಕಮಲ—ಹರಿಗುಣಗಾನರೂಪದ ಈ ಕಾವ್ಯ-ಕಮಲವು, ಕೃಷ್ಣಗೆ—ಶ್ರೀಹರಿಗೆ, ಅರ್ಪಿತವಾಗಿ (ಪ್ರೀತಿಕರವಾಗಿ, ಸಮರ್ಪಿ-ಸುವುದಕ್ಕಾಗಿ), ಶ್ರೀದೇವಿಯು—ಲಕ್ಷ್ಮೀದೇವಿಯು, ಇದನೆ—ಈ ಕಮಲ-ಪುಷ್ಪವನ್ನು, ಕೈಪಿಡಿಯಲಿ—ತನ್ನ ಕೈಯಲ್ಲಿ ತೆಗೆದುಕೊಳ್ಳಲಿ; ಮೋದದಿ—(ಶ್ರೀಹರಿಯು ಸ್ವೀಕರಿಸಿ ಸಂತೋಷದಿಂದ) ಪ್ರಸನ್ನನಾಗಿ, **ವಾದಿರಾಜೇಂದ್ರ ಗುರುಯೋಗಿವರಗೆ**—ವಾದಿರಾಜೇಂದ್ರನೆಂಬ, ಗುರುಪೀಠದಲ್ಲಿರುವ ಯತಿ-ಶ್ರೇಷ್ಠನಿಗೆ, ಸದಮಲ ಸಂಪದವನು—ಪರಿಶುದ್ಧವಾದ ಭಾಗ್ಯವನ್ನು (ಜ್ಞಾನಾ-ಧಿಕ್ಯ ಮತ್ತು ಆನಂದಾತಿಶಯಗಳಿಗೆ ಕಾರಣವಾದ ತನ್ನ ಪರಮಪ್ರಸಾದವನ್ನು), ಈಯಲಿ—ದಯಪಾಲಿಸಲಿ.

**ವಿಶೇಷಾಂಶ:** ಶ್ರೀಹರಿಗೆ ಭಕ್ತರು ಅರ್ಪಿಸುವ ಎಲ್ಲ ಸೇವೆಗಳನ್ನು ಕೃಪೆಮಾಡಿ ಶ್ರೀಲಕ್ಷ್ಮೀದೇವಿಯೇ ಶ್ರೀಹರಿಯಲ್ಲಿ ಒಪ್ಪಿಸಬೇಕಲ್ಲದೇ, ನೇರವಾಗಿ ಶ್ರೀಹರಿಗೆ ಅರ್ಪಿಸುವ ಅಧಿಕಾರ (ಯೋಗ್ಯತೆಯು) ಯಾರಿಗೂ ಇಲ್ಲ.

**ಇನ್ನು ಹಯವದನ ಎನ್ನ ಇಹಪರಗತಿಗೆ**
**ನಿನ್ನ ಕಾರುಣ್ಯಕಾರಣವೋ**
**ಅನ್ಯರನರಿಯೆ ಕೈವಿಡಿದು**
**ಇನ್ನು ರಕ್ಷಿಪ ಭಾರ ನಿನ್ನದೋ** ॥೭॥

ಸೂ: ಅನನ್ಯಶರಣಾಗತಿಯ ಲಕ್ಷಣವನ್ನು ಸೂಚಿಸುತ್ತಾರೆ:

**ಅರ್ಥ:** ಇನ್ನು—ಇದಕ್ಕಿಂತ ಹೆಚ್ಚೇನನ್ನು ಮಾಡಬಲ್ಲೆ ನಾನು. **ಹಯವದನ**—ಹೇ ಹಯಗ್ರೀವದೇವ! ಎನ್ನ—ನನ್ನ, ಇಹಪರಗತಿಗೆ—ಇಹದಲ್ಲಿ (ನಿನ್ನನ್ನು ಸೇರುವವರೆಗೆ) ಮತ್ತು ಪರದಲ್ಲಿ (ಮುಕ್ತಿಯಲ್ಲಿ ಸಹ) (ಗತಿಗೆ) ನನ್ನಿಂದಾಗ-ಬೇಕಾದ ಸರ್ವಕ್ಕೂ, ನಿನ್ನ ಕಾರುಣ್ಯ ಕಾರಣವೋ—ನಿನ್ನ ಕೃಪೆ ಮಾತ್ರ ಕಾರಣವು; ಅನ್ಯರನು ಅರಿಯೆ—ಇನ್ನೊಬ್ಬರನ್ನು ಕಾಣೆನು (ಹೀಗೆ ಶರಣು-ಹೊಂದಲು ಯೋಗ್ಯನಾದ ಮತ್ತೊಬ್ಬ ಸ್ವತಂತ್ರ ಸರ್ವಶಕ್ತಪ್ರಭುವಿಲ್ಲೆಂದು ಚೆನ್ನಾಗಿ ತಿಳಿದಿದ್ದೇನೆ); ಇನ್ನು—ಮುಂದೆ, ರಕ್ಷಿಪ ಭಾರ—ನನ್ನನ್ನು ರಕ್ಷಿಸುವ ಹೊರೆಯು, (ಜವಾಬ್ದಾರಿಯು—ಇವನ ರಕ್ಷಣೆಯು ನನ್ನದೆಂದು ಸಂಕಲ್ಪಿಸು-ವುದು), ನಿನ್ನದೋ—ನಿನಗೇ ಸೇರಿದೆ ಪ್ರಭೋ!

**ವಿಶೇಷಾಂಶ:**

*'ರಕ್ಷತ್ಯೇವೇತಿ ವಿಶ್ವಾಸಃ ತದೀಯೋಽಹಮಿತಿ ಸ್ಮೃತಿಃ।*
*ಶರಣಾಗತಿರೇಷಾ ಸ್ಯಾದ್ವಿಷ್ಣೌ ಮೋಕ್ಷಪ್ರದಾಯಿನೀ॥'* (ವಿಷ್ಣುರಹಸ್ಯ)

ಎಂದು ಶರಣಾಗತಿಯ ಲಕ್ಷಣವು ನಿರೂಪಿತವಾಗಿದೆ. 'ನಾನು ಅವನ ದಾಸನು —ಆತನು ನನ್ನನ್ನು ತಪ್ಪದೇ ರಕ್ಷಿಸುತ್ತಾನೆಂಬ ದೃಢವಿಶ್ವಾಸಯುಕ್ತ ಸಂತತ ವಿಷ್ಣುಸ್ಮರಣೆಯೇ ಮೋಕ್ಷಪ್ರದಶರಣಾಗತಿಯು' ಎಂದರ್ಥ.

**ತತ್ವಸಾರದ ಸೊಬಗಿನ ಸೊನೆಯನು ಹರಿ-**
**ಭಕ್ತನೆನಿಪ ವಾದಿರಾಜ**
**ಭಕ್ತಿಭರಿತನಾಗಿ ಹೇಳಿದ ಕಥೆ ಕೇಳಿ**
**ಸತ್ಸಭೆ ಸಂತೋಷಿಸಲಿ ॥೮॥**

**ಅರ್ಥ:** ತತ್ವಸಾರದ—**'ತತ್ವಸಾರ'**ವೆಂಬ ಈ ಗ್ರಂಥದ (ಹರಿಮಹಿಮೆಗಳ ಸಾರದ), ಸೊಬಗಿನ—ರಮ್ಯವಾದ, ಸೊನೆಯನು—ರಸಾಯನವನ್ನು, ಹರಿ ಭಕ್ತನೆನಿಪ—ವಿಷ್ಣುಭಕ್ತನೆಂದು ಪ್ರಸಿದ್ಧನಾದ, **ವಾದಿರಾಜ**—ವಾದಿರಾಜನೆಂಬ ನಾನು, ಭಕ್ತಿಭರಿತನಾಗಿ—ಭಾವಪೂರ್ಣಹೃದಯದಿಂದ, ಹೇಳಿದ ಕಥೆ—ನುಡಿದ ಹರಿಮಹಿಮಾನುವಾದವನ್ನು, ಸತ್ಸಭೆ—ಸಜ್ಜನವೃಂದವು, ಕೇಳಿ—ಶ್ರವಣಪಠನಾದಿಗಳಿಂದ ಸೇವಿಸಿ, ಸಂತೋಷಿಸಲಿ—ಆನಂದವನ್ನು, ಹೊಂದಲಿ.

**ಅದುಭುತವಲ್ಲವೆ ಹಯವದನ ತನ್ನ**
**ಪದಪದುಮದ ಸನ್ನಿಧಿಯ**
**ಹುದುಗಿಸಿ ವಾದಿರಾಜೇಂದ್ರನ್ನ ಪಾದೋದಕ**
**ವಾದಿಗೆ ವಿನೋದದಟ್ಟುವುದು ॥೯॥**

ಸೂ: ಶ್ರೀವಾದಿರಾಜರ ಪಾದೋದಕವನ್ನು ಧರಿಸಿದ ಶಿಷ್ಯರು ಪರವಾದಿ-ಗಳನ್ನು ಅನಾಯಾಸದಿಂದ ಜಯಿಸುವರೆಂಬ ಪ್ರಸಿದ್ಧಪಾದೋದಕ-ಮಹಿಮೆಯು ತಮ್ಮದಲ್ಲವೆನ್ನುತ್ತಾರೆ.

**ಅರ್ಥ:** ಹಯವದನ—ಶ್ರೀಹಯಗ್ರೀವಸ್ವಾಮಿಯು, ತನ್ನ ಪದಪದುಮದ ಸನ್ನಿಧಿಯ—ತನ್ನ ಪಾದಪದ್ಮದ ಸನ್ನಿಧಾನವನ್ನು, ಹುದುಗಿಸಿ—ಒಳಗಿಟ್ಟು, ವಾದಿರಾಜೇಂದ್ರನ್ನ—ವಾದಿರಾಜರ, ಪಾದೋದಕ—ಪಾದೋದಕವು (ಅಭಿಷಿಕ್ತ ಜಲವು), ವಾದಿಗೆ—ಪ್ರತಿಕಕ್ಷಿಯನ್ನು (ವಾದದಲ್ಲಿ ಎದುರಿಸುವಾತನನ್ನು), ವಿನೋದದಿ—ಆಯಾಸವಿಲ್ಲದೆ (ತತ್ಕಾಲದಲ್ಲಿ ಸ್ಫೂರ್ತಿಗೊಂಡ ಪ್ರಾಮಾಣಿಕ ಯುಕ್ತಿಗಳಿಂದಲೇ—ಅವುಗಳನ್ನು ಪ್ರಯೋಗಿಸುವ ವಿನೋದಕರವಾದ ಮಾತು-ಗಳಿಂದಲೇ), ಅಟ್ಟುವುದು—ಜಯಿಸಿ ಓಡಿಸುವುದು, ಅದುಭುತವಲ್ಲವೆ—

ಅದ್ಭುತ ಮಹಿಮೆಯಲ್ಲವೇ? (ಶ್ರೀಹರಿಪಾದಪದ್ಮ ಸನ್ನಿಧಾನವೇ ಪಾದೋದಕಮಹಿಮೆಯ ಮೂಲವು).

**ಭೂತಪ್ರೇತಗಳಿವನ ಪಾದೋದಕದಿಂದ**
**ಭೀತಿಕಾತರಿಸಿ ಓಡುವುವು**
**ಪ್ರೀತಿಯಿಂದ ಜನರು ಕೊಂಡಾಡಲು ಜನ್ಮ ಜ-**
**ನ್ಮಾಂತರದ ಕರ್ಮ ಭೂಮಿಯಲಿ** ॥೧೦॥

**ಅರ್ಥ:** ಇವನ — ಈ **ವಾದಿರಾಜಯತಿಯ,** ಪಾದೋದಕದಿಂದ — (ಹರಿಪಾದಸನ್ನಿಧಾನಯುಕ್ತ) ಪಾದೋದಕದಿಂದ, ಭೂತಪ್ರೇತಗಳು — ಭೂತ, ಪ್ರೇತ, ಪಿಶಾಚಾದಿಗಳು, ಭೀತಿಕಾತರಸಿ — ಭಯದಿಂದ ನಡುಗುತ್ತ, ಓಡುವುವು — ಓಡಿಹೋಗುತ್ತವೆ, ಭೂಮಿಯಲಿ — ಭೂಲೋಕದಲ್ಲಿ, ಜನರು — ಪ್ರಜೆಗಳು, ಪ್ರೀತಿಯಿಂದ — ಭಕ್ತಿಶ್ರದ್ಧೆಗಳಿಂದ, ಕೊಂಡಾಡಲು — (ಶ್ರೀವಾದಿರಾಜರನ್ನು) ಸ್ತುತಿಸಿದರೆ, ಜನ್ಮಜನ್ಮಾಂತರದ ಕರ್ಮ — ಜನ್ಮಾಂತರಗಳ ದುಷ್ಕರ್ಮಗಳು, ಓಡುವುವು — ತೊಲಗುವುವು; (ಇದೂ **ಶ್ರೀಹಯವದನನ ಮಹಿಮೆಯೇ** ಎನ್ನುತ್ತಾರೆ).

**ಬ್ರಹ್ಮರಾಕ್ಷಸನಾಗಿ ಇಳೆಯೊಳು ಜನಿಸಿ**
**ಅಮ್ಮಮ್ಮ ಇವರಿಗ್ಹಣವ ಕೊಡಿಸಿ**
**ಜನ್ಮಾಂತರದಿ ಬಹಳ ಪಿಶಾಚ ಸರ್ವವು**
**ತಮ್ಮ ಋಣ ಸಂದಿಪೋಗುವುವು** ॥೧೧॥

**ಅರ್ಥ:** ಇಳೆಯೊಳು — ಭೂಮಿಯಲ್ಲಿ, ಬ್ರಹ್ಮರಾಕ್ಷಸನಾಗಿ — ಬ್ರಹ್ಮರಾಕ್ಷಸ ಜನ್ಮದಲ್ಲಿ, ಜನಿಸಿ — ಹುಟ್ಟಿ, ಇವರಿಗೆ — ಶ್ರೀವಾದಿರಾಜರಿಗೆ, ಹಣವ ಕೊಡಿಸಿ — (ಭೂತರಾಜನಾಗಿ ಜನರು ತನಗರ್ಪಿಸುವ ಕಾಣಿಕೆಗಳ ರೂಪದ) ಹಣವನ್ನು ಕೊಡಿಸಿ. (ಅದರಿಂದ) ಜನ್ಮಾಂತರದಿ ಹಿಂದಿನ ಒಂದು ಜನ್ಮದಲ್ಲಿ, ಪಿಶಾಚ — ಆ ಪಿಶಾಚವು (ಬ್ರಹ್ಮರಾಕ್ಷಸನು), ಬಹಳ — ಬಹಳವಾದ (ಬಹಳವಾಗಿ ಕೊಡಬೇಕಾಗಿದ್ದ) ತಮ್ಮ ಋಣ — ತಮ್ಮ ಋಣವು (ತಮಗೆ ಬರಬೇಕಾಗಿದ್ದ ಸಾಲವು), ಸರ್ವವು — ಎಲ್ಲಾ (ಪೂರ್ಣವಾಗಿ), ಸಂದಿಪೋಗುವುವು — ಮುಟ್ಟುತ್ತದೆ (ತೀರಿಹೋತ್ತದೆ); ಅಮ್ಮಮ್ಮ — ಆಶ್ಚರ್ಯವು!

**ವಿಶೇಷಾಂಶ:** ಶ್ರೀರಾಮನು, ರಾವಣಹತ್ಯದಿಂದ ತನಗೆ ಬಂತೆಂಬ ಬ್ರಹ್ಮಹತ್ಯಾದೋಷವನ್ನು, ತನ್ನಿಂದ ಸ್ವೀಕರಿಸುವವರಿಗೆ ಅನುಗ್ರಹ ಮಾಡುವೆನೆಂದು

ಘೋಷಿಸಿದನಂತೆ. ಆಗ ತಪಸ್ವಿಯಾಗಿದ್ದ ಭಾವೀರುದ್ರನು (ಮುಂದೆ ರುದ್ರ-ಪದವಿಗೆ ಬರುವಾತನು), 'ನಾನು ಸ್ವೀಕರಿಸಿ ಶ್ರೀರಾಮನ ದೋಷವನ್ನು ಪರಿಹರಿಸುತ್ತೇನೆ' ಎಂದು ಮುಂದೆ ಬಂದು ಗರ್ವದಿಂದ ನುಡಿದನಂತೆ. ಶ್ರೀರಾಮಚಂದ್ರನಿಗೆ ಬ್ರಹ್ಮಹತ್ಯಾದೋಷವೇ? ಅದನ್ನು ಸ್ವೀಕರಿಸುವವನು ಈ ತಪಸ್ವಿಯೇ! ಶ್ರೀರಾಮಚಂದ್ರನ ಮೋಹಕಮಾತಿಗೆ ಮರುಳಾಗಿ ಸ್ವಪ್ರತಿಷ್ಠಾ-ಖ್ಯಾಪನೆಗಾಗಿ, ಮುಂದೆ ಬಂದ ತಪಸ್ವಿಯನ್ನು ಬ್ರಹ್ಮರಾಕ್ಷಸನಾಗೆಂದು ಶ್ರೀರಾಮನು ಶಪಿಸಿದನಂತೆ—ಮುಂದೆ ವಾದಿರಾಜರ ಸೇವೆಯಿಂದ ಬ್ರಹ್ಮ-ರಾಕ್ಷಸತ್ವವನ್ನು ಕಳೆದುಕೊಂಡು, ಕಾಲದಲ್ಲಿ ನಿನ್ನ ಪದವನ್ನು ಹೊಂದುವಿ-ಯೆಂದು ವಿಶಾಪವನ್ನು ಅನುಗ್ರಹಿಸಿದನಂತೆ. ಆ ಭಾವೀರುದ್ರನು ಬ್ರಹ್ಮರಾಕ್ಷಸ-ನಾಗಿ ಬದರಿಕಾಶ್ರಮದ ಅರಣ್ಯದಲ್ಲಿ ಅಲೆಯುತ್ತಿದ್ದನಂತೆ. ಕಲಿಯುಗದಲ್ಲಿ ವಾದಿರಾಜರ ಸೇವೆಗಾಗಿ, ಒಂದಂಶದಿಂದ **ನಾರಾಯಣಾರ್ಯನೆಂಬ** ಬ್ರಾಹ್ಮಣನಾಗಿ ಹುಟ್ಟಿ, ಶ್ರೀ ವಾದಿರಾಜರ ಶಿಷ್ಯನಾದನಂತೆ. ಈ ಹಿಂದಿನ ಮತ್ತೊಂದು ಜನ್ಮದಲ್ಲಿ ಈತನೇ ವಾದಿರಾಜರಿಗೆ ಋಣಿಯಾಗಿದ್ದನಂತೆ (ಸಾಲ ಕೊಡಬೇಕಾಗಿತ್ತಂತೆ). ನಾರಾಯಣಾಚಾರ್ಯನು ಪಾಂಡಿತ್ಯಮದದಿಂದ ಸದ್ಬ್ರಾಹ್ಮಣರ ತೇಜೋವಧೆ ಮಾಡಿ, ಶ್ರೀವಾದಿರಾಜರ ಶಾಪದಿಂದ ಬ್ರಹ್ಮ-ರಾಕ್ಷಸನಾದನಂತೆ. ಮಾರ್ಗಮಧ್ಯದಲ್ಲಿ ಅವರನ್ನು ಎದುರಿಸಿ, ವಾದದಲ್ಲಿ ಸೋತು, ಪಣತೊಟ್ಟ ಪ್ರಕಾರವಾಗಿ, ಅದೃಶ್ಯನಾಗಿ ಅವರ ಮೇನೆಯನ್ನು ಹೊರುತ್ತಿದ್ದನಂತೆ. ಮುಂದೆ, ಶ್ರೀ ವಾದಿರಾಜರು ತಮ್ಮ ಪ್ರವೇಶಕ್ಕಾಗಿ ತಾವೇ ವೃಂದಾವನವನ್ನು ನಿರ್ಮಾಣಮಾಡಿಸಿದಾಗ, ಬ್ರಹ್ಮರಾಕ್ಷಸನನ್ನು ಅನುಗ್ರಹಿಸಿ, ವೃಂದಾವನದ ಸಮೀಪದಲ್ಲಿ, **'ಭೂತರಾಜ'**ನೆಂಬ ನಾಮದಿಂದ ಪ್ರತಿಷ್ಠೆ ಮಾಡಿದರಂತೆ (ತಮ್ಮನ್ನು ಸೇವಿಸಿಕೊಂಡಿರಲು ಸ್ಥಳವನ್ನು ಕಲ್ಪಿಸಿಕೊಟ್ಟರಂತೆ). ಶ್ರೀ ವಾದಿರಾಜರ ಭಕ್ತರಿಗೆ ಭೂತಪ್ರೇತಾದಿಗಳ ಭಯಪೀಡಾದಿಗಳನ್ನು ಪರಿ-ಹರಿಸುತ್ತಾ, ಅವರು ತನಗೆ ಅರ್ಪಿಸುವ ಕಾಣಿಕೆಗಳನ್ನು ರಾಜರಲ್ಲಿ ಅರ್ಪಿಸಿ, ಜನ್ಮಾಂತರಋಣದಿಂದ ಮುಕ್ತ ನಾಗುವನಂತೆ

*'ಸ ಬ್ರಹ್ಮರಾಕ್ಷಸೋ ಭೂತ್ವಾ ಬದರೀಕಾನನೇಽವಸತ್।*
*ಏಕಾಂಶೇನಾಥ ಸಂಜಜ್ಞೇ ದ್ವಿಜವಂಶೇ ಕಲೌಯುಗೇ॥*
*ನಾರಾಯಣಾಚಾರ್ಯನಾಮಾ ನಾರಲಗ್ರಾಮಗೋ ದ್ವಿಜಃ।*
*ಶ್ರೀವಾದಿರಾಜಭೃತ್ಯಃಸನ್ನುವಾಸ ಗುರುಸನ್ನಿಧೌ॥'*

ಇತ್ಯಾದಿ ವಾಕ್ಯಗಳಲ್ಲಿ ಮತ್ತು

*'ವಸನ್ನಗ್ರೇ ವಹನ್ ದೋಲಾಂ ಮದೀಯಾಂ ಸುಕೃತೀ ಭವೇಃ।*

*ಭಾವಿಜನ್ಮನಿ ರುದ್ರಸ್ತ್ವಂ ಭವಿತಾ ನಾತ್ರ ಸಂಶಯಃ॥'*

ಇತ್ಯಾದಿ ವಾಕ್ಯಗಳಲ್ಲಿ ಸಹ, ಮೇಲೆ ವಿವರಿಸಿದ ಕಥಾಭಾಗವು **'ಶ್ರೀವಾದಿರಾಜಗುರುವರಚರಿತಾಮೃತ'** ಎಂಬ ಗ್ರಂಥದಲ್ಲಿ, ಪ್ರಸಕ್ತವಾಗಿ ವರ್ಣಿಸಲ್ಪಟ್ಟಿದೆ. ಈ ನುಡಿಯ ಪಾಠಾಂತರವು ಈ ಅರ್ಥವನ್ನು ಹೆಚ್ಚು ಸ್ಪಷ್ಟಗೊಳಿಸುವಂತಿದೆ. ಅದು ಹೀಗಿದೆ:

**'ಜನ್ಮಾಂತರದ ಋಣದಿ ಕರ್ಮಭೂಮಿಯೊಳು**
**ಬೊಮ್ಮರಕ್ಕಸನಾಗಿ ಜನಿಸಿ**
**ಅಮ್ಮಮ್ಮ ಈ ಮುನಿಗೆ ಹಣವವರಿಂದ ಕೊಡಿಸಿ**
**ತಮ್ಮ ಋಣ ತೀರಿತೆಂದೊಪ್ಪುವರು॥'**

(ಬೇಲೂರು ಕೇಶವದಾಸರ ಕರ್ನಾಟಕ ಭಕ್ತವಿಜಯ)

**ವಾಗೀಶ್ವರಿದೇವಿ ವದನದಿ ನಿಲ್ಲಿಸಿ ಸ-**
**ರ್ವಾಗಮತತ್ವಸಾರವನು**
**ಯೋಗಿಗಳೆಲ್ಲರು ಈ ಕಥೆಯ ಮನ್ನಿಸುತಿರಲು**
**ವಾಗ್ದೇವನೆಂದೆನಿಸುವದು ॥೧೨॥**

**ಅರ್ಥ:** ವಾಗೀಶ್ವರಿದೇವಿ—ವಾಗಭಿಮಾನಿ ಭಾರತೀದೇವಿಯು (**ಅಥವಾ** ಮುಖ್ಯಾಭಿಮಾನಿ ಲಕ್ಷ್ಮೀದೇವಿಯು), ಸರ್ವಾಗಮತತ್ವಸಾರವನು—ಸಕಲ ಶಾಸ್ತ್ರಾರ್ಥಸಾರವನ್ನು, ವದನದಿ ನಿಲ್ಲಿಸಿ—(ನನ್ನ) ಮುಖದಲ್ಲಿ ನಿಲ್ಲಿಸಿ, ಯೋಗಿಗಳೆಲ್ಲರು—ಜ್ಞಾನಿಗಳೆಲ್ಲರು, ಕಥೆಯ—(ಈ ಗ್ರಂಥರೂಪದಿಂದಿರುವ) ತತ್ವಗಳ ಅನುವಾದವನ್ನು, (ತತ್ವಸಾರದ ನಿರೂಪಣೆಯನ್ನು), ಮನ್ನಿಸುತಿರಲು—ಅಂಗೀಕರಿಸಿ ಗೌರವಿಸುತ್ತಿರಲು, ವಾಗ್ದೇವನು—(ಈ ಅನುವಾದಕನು) ವಾಚಸ್ಪತಿಯು (ಸರ್ವಜ್ಞನು), ಎಂದೆನಿಸುವುದು—ಎಂದು (ಆ ವಾಗ್ದೇವಿಯು) ನನ್ನ ಮುಖದಲ್ಲಿ ನಿಲ್ಲಿಸಿದ ತತ್ವಸಾರವು) ಕರೆಸುತ್ತದೆ.

**ವಿಶೇಷಾಂಶ:** ಶ್ರೀವಾಗ್ದೇವಿಯ ಅನುಗ್ರಹಬಲದಿಂದಲೇ ಈ ಕಾವ್ಯರಚನೆ-ಯೆಂದು ನಿರೂಪಿಸುತ್ತ, ತಮ್ಮ ಸ್ವತಂತ್ರಕರ್ತೃತ್ವಾಭಿಮಾನರಾಹಿತ್ಯವನ್ನು, ಸ್ಪಷ್ಟಗೊಳಿಸಿರುತ್ತಾರೆ.

**ದೇಶದೇಶದಿಂದ ಕಪ್ಪಕಾಣಿಕೆಗಳ**
**ಆ ಸರ್ವೋತ್ತಮನೆ ತರಿಸುವ**
**ಸ್ವಸೇವಕರ ಕೈಯ ರಥೋತ್ಸವವ ಮಾಡಿಸಿದ**
**ಭೂಸುರವೇಷ ವಿಸ್ತರಿಸೆ** ॥೧೩॥

**ಅರ್ಥ:** ಭೂಸುರವೇಷ—ಯತಿರೂಪವು (ಶ್ರೀವಾದಿರಾಜರು ಯತಿಶ್ರೇಷ್ಠರೆಂಬ ಮಹಿಮೆಯು), ವಿಸ್ತರಿಸೆ—(ಜಗತ್ತಿನಲ್ಲಿ) ಹರಡಲು, ದೇಶದೇಶದಿಂದ—ನಾನಾ ದೇಶಗಳಿಂದ, ಕಪ್ಪಕಾಣಿಕೆಗಳ—ಪೂಜ್ಯಭಾವದಿಂದ ಅರ್ಪಿಸುವ ಹೇರಳ ದ್ರವ್ಯಾದಿ ಕಾಣಿಕೆಗಳನ್ನು (ಕಾಣಿಕೆ—ಬರಿಗೈಯಿಂದ ದೊಡ್ಡವರ ದರ್ಶನ ಮಾಡಿಕೊಳ್ಳಕೂಡದಾದ್ದರಿಂದ, ದರ್ಶನ ಮಾಡಿಕೊಳ್ಳುವಾಗ ಅರ್ಪಿಸುವ ಫಲಪುಷ್ಪದ್ರವ್ಯಾದಿ ವಸ್ತು) ಆ ಸರ್ವೋತ್ತಮನೆ ತರಿಸುವ—(ಜನಗಳನ್ನು ಪ್ರೇರಿಸಿ ಸರ್ವೋತ್ತಮನಾದ ಶ್ರೀಕೃಷ್ಣನು) ತಾನೇ ತರಿಸುತ್ತಾನೆ; ಸ್ವಸೇವಕರ—ತನ್ನ ಭಕ್ತರ, ಕೈಯ—ಕೈಯಿಂದ (ಸಹಾಯ-ಸಹಕಾರಗಳಿಂದ), ರಥೋತ್ಸವವ—(ಶ್ರೀ ತ್ರಿವಿಕ್ರಮದೇವರ) ರಥೋತ್ಸವವನ್ನು, ಮಾಡಿಸಿದ—(ವಿಜೃಂಭಣೆಯಿಂದ) ನಡೆಸಿದನು.

**ವಿಶೇಷಾಂಶ:** (೧) 'ಭೂಸುರವೇಷ ವಿಸ್ತರಿಸೆ' ಎಂಬುದರಿಂದ, ಗಮನಿಸಬಹುದಾದ ಅಂಶ: ಶ್ರೀಕೃಷ್ಣನ ಪರ್ಯಾಯೋತ್ಸವ ಸಮಯದಲ್ಲಿ, ಪರ್ಯಾಯ ಪೀಠದಲ್ಲಿದ್ದ ಶ್ರೀವಾದಿರಾಜರಿಗೆ, ಉತ್ಸವ ವೆಚ್ಚಕ್ಕೆ ಮುಂದೆ ಬಂದು ಬ್ರಾಹ್ಮಣವೇಷದಿಂದ ಶ್ರೀಕೃಷ್ಣನೇ ಹೇರಳ ದ್ರವ್ಯವನ್ನು ಒದಗಿಸಿದನೆಂಬ, ಭಕ್ತರು ಆದರದಿಂದ ಹೇಳುವ, ಕಥೆಯು ಸೂಚಿತವೆಂದೂ ತಿಳಿಯಬಹುದು.

(೨) ಸೋದೆಯಲ್ಲಿ ತಮ್ಮಿಂದಲೇ ಪ್ರತಿಷ್ಠಿತವಾದ ಶ್ರೀತ್ರಿವಿಕ್ರಮದೇವರ ಮೂರ್ತಿಯನ್ನು, ಭೂತರಾಜನಿಂದ, ಬದರಿಕಾಶ್ರಮದಿಂದ ಶೀಘ್ರವಾಗಿ (ಆಕಾಶ ಮಾರ್ಗದಿಂದ) ತರಿಸಿದರೆಂಬ, ಅವರ ಮಹಿಮೆಯೂ, ತಮ್ಮ ಪ್ರವೇಶಕ್ಕಾಗಿ ತಮ್ಮಿಂದಲೇ ನಿರ್ಮಾಣ ಮಾಡಿಸಲ್ಪಟ್ಟ ವೃಂದಾವನವನ್ನು, ಪ್ರವೇಶಿಸುವ ಪೂರ್ವದಲ್ಲಿ, ಶ್ರೀತ್ರಿವಿಕ್ರಮದೇವರ ರಥೋತ್ಸವವನ್ನು ಸಾಂಗವಾಗಿ ಮಹಾವೈಭವದಿಂದ ನೆರವೇರಿಸಿದ ಮಹಿಮೆಯೂ, ಈ ನುಡಿಯಲ್ಲಿ ಸೂಚಿತವಾಗಿದೆ.

(೩) ರಾಜರಿಂದ, ಪ್ರಜಾಪ್ರಮುಖರಿಂದ ಬಹುರತ್ನಾಭರಣಗಳನ್ನು ಪಡೆದು ಉಡುಪಿಯಲ್ಲಿ ಶ್ರೀಕೃಷ್ಣಮಠದ ಐಶ್ವರ್ಯವನ್ನು ಬೆಳೆಸಿ, ಅಷ್ಟಮಠಗಳ

ಸಂಪದಭಿವೃದ್ಧಿಗೂ ಕಾರಣರಾಗಿ, ಶ್ರೀಕೃಷ್ಣಮಠವನ್ನು, ವಿಶೇಷ ಕಟ್ಟಡಗಳು ಹಾಗೂ ಮೇಲ್ಮುಚ್ಚುಗಳಿಂದ ಅಭಿವೃದ್ಧಿಗೊಳಿಸಿ, ಸೋದೆಯಲ್ಲಿ ದೊಡ್ಡ ಮಠ, ಧವಳಗಂಗೆಯ ಸರೋವರ, ತ್ರಿವಿಕ್ರಮ ದೇವಸ್ಥಾನ ಇತ್ಯಾದಿಗಳನ್ನು ನಿರ್ಮಿಸಿ, ಸೋದೆಯನ್ನು ಅತ್ಯಂತ ಪವಿತ್ರವಾದ ಯಾತ್ರಾಸ್ಥಳವನ್ನಾಗಿ ಮಾಡಿದುದು, ಇತ್ಯಾದಿಗಳಿಂದಲೂ, ತಮ್ಮಿಂದ ಪ್ರಕಟವಾದ ವಿವಿಧ ಪವಾಡಗಳಿಂದಲೂ, ರಚಿತವಾದ ಗ್ರಂಥಗಳಿಂದಲೂ ಸಂಪಾದಿತವಾದ ಮಹಾಕೀರ್ತಿ, ಪ್ರಭಾವ-ಗಳೆಲ್ಲವೂ, ತಮ್ಮ ಉಪಾಸ್ಯದೇವನಾದ ಶ್ರೀಲಕ್ಷ್ಮೀಹಯಗ್ರೀವ ಸ್ವಾಮಿಯ ಕೀರ್ತಿಪ್ರಭಾವಗಳಲ್ಲದೆ ತಮ್ಮದೇನೂ ಇಲ್ಲವೆಂಬ ಅನುಸಂಧಾನದಿಂದ, **ಹಯವದನಾಭಿನ್ನ ಶ್ರೀಕೃಷ್ಣನಲ್ಲಿ** ಸರ್ವವನ್ನೂ ಸಮರ್ಪಿಸಿರುವರು.

*ವೈಕುಂಠವರ್ಣನಂ ಶ್ರೀಮದ್ವಾದಿರಾಜವಿನಿರ್ಮಿತಮ್।*
*ಅಪರಂ ನಾಮಚಾಸ್ಯೈವ ತತ್ವಸಾರ ಇತಿ ಶ್ರುತಮ್॥*

*ತಥಾ ಚ ಗುರುರಾಜಸ್ಯ ಲಕ್ಷ್ಮೀಶೋಭಾನನಾಮಕಃ।*
*ಗ್ರಂಥಶ್ಚಾಸ್ತಿ ದ್ವಯೋರ್ಭಕ್ತ್ಯಾ ಕೃತಂ ವಿವರಣಂ ಮಯಾ॥*

*ಗೋಪಾಲದಾಸವರ್ಯಾಣಾಮಾಜ್ಞಾಮಾತ್ರೇಣ ತತ್ರ ವೈ।*
*ಪ್ರವೃತ್ತಿರ್ಹಿ ನ ಚಾನ್ಯಾ ಮೇ ಯೋಗ್ಯತಾಽಸ್ತಿ ಕಥಂಚನ॥*

*ಮಾಮಕಾನ್ ದೋಷನಿಚಯಾನ್ ಕ್ಷಾಮ್ಯಂತು ವಿಬುಧಾಸ್ಸದಾ।*
*ಗುಣೈರೇವಾನುಗೃಹ್ಣಂತು ಮಾಮನುಗ್ರಹಕಾಂಕ್ಷಿಣಮ್॥*

*ಮಮ ಸೇವಾಮಿಮಾಮಲ್ಪಾಮರ್ಪಯೇ ಚ ಹರೌ ಗುರೌ।*
*ತಥಾ ಶ್ರೀವಾದಿರಾಜೇಂದ್ರಪದಪದ್ಮೇ ಸುಭಕ್ತಿತಃ॥*

***'ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ'***
*ಇತ್ಯೇಕಂ ತು ವರಂ ತಾಂಸ್ತು ಯಾಚೇಽಹಂ ಸ್ಥಿರಬುದ್ಧಿತಃ*

**॥ ಶ್ರೀಕೃಷ್ಣಾರ್ಪಣಮಸ್ತು ॥**

ಗುರುಸಾರ್ವಭೌಮರು ಅನುಗ್ರಹಿಸಿರುವ ಮತ್ತೊಂದು ಮಹದುಪಕಾರ; ಆರ್ತರು ತಮ್ಮ ಸಂಕಷ್ಟಗಳನ್ನು ಪರಿಹಾರಮಾಡಿಕೊಳ್ಳುವ ಯತ್ನದಲ್ಲಿರುತ್ತಾರೆ. ಇಂಥವರಿಗೆ ಅನುಕೂಲವಾಗುವಂತೆ ಗುರುರಾಜರು ರಚಿಸಿ ಅನುಗ್ರಹಿಸಿರುವ ಸ್ತೋತ್ರಗಳ ಮಾಲಿಕೆಯನ್ನು ಒದಗಿಸಲಾಗಿದೆ. ಸ್ತೋತ್ರಸಾಹಿತ್ಯದಲ್ಲಿ ಅವುಗಳಿಗೆ ವಿಶಿಷ್ಟಸ್ಥಾನವಿದೆ. (ತೀರ್ಥಪ್ರಬಂಧದಲ್ಲಿ ಮತ್ತು ಇನ್ನಿತರ ಗ್ರಂಥಗಳಲ್ಲಿರುವ ಸ್ತೋತ್ರಗಳನ್ನು ಈ ಮಾಲಿಕೆಯಲ್ಲಿ ಅಳವಡಿಸಿರುವುದಿಲ್ಲ.)

೧. ಹಯಗ್ರೀವಸಂಪದಾಸ್ತೋತಮ್
೨. ಹಯಗ್ರೀವಪ್ರಾರ್ಥನಾದಶಕಸ್ತೋತ್ರಮ್
೩. ಶ್ರೀಹಯವದನಾಷ್ಟಕಮ್
೪. ಶ್ರೀರಘುನಾಥಕವಚಮ್
೫. ಶ್ರೀಕೇಶವಾದಿಸ್ತುತಿಃ
೬. ಶ್ರೀರಮೇಶಸ್ತುತಿಃ
೭. ಶ್ರೀರಾಮಪಂಚಕಮ್
೮. ಶ್ರೀರಾಮಕವಚಮ್
೯. ಶ್ರೀವೇಂಕಟೇಶಮಂಗಳಾಷ್ಟಕಮ್
೧೦. ಶ್ರೀರಾಮದಶಕಮ್
೧೧. ಶ್ರೀವೇಂಕಟೇಶಸ್ತುತಿಃ
೧೨. ದಶಾವತಾರಸ್ತುತಿಃ
೧೩. ಶ್ರೀವ್ಯಾಸವರ್ಣನಮ್
೧೪. ಶ್ರೀಕೃಷ್ಣಸ್ತುತಿಃ
೧೫. ಶ್ರೀಕೃಷ್ಣಾಷ್ಟಕಮ್
೧೬. ಕುರುಸ್ತೋತ್ರಮ್
೧೭. ತವ್ಯಸ್ತೋತ್ರಮ್
೧೮. ಶ್ರೀಕೃಷ್ಣಾವತಾರ ಚಿತ್ರಿತ ರತ್ನಸಂಗ್ರಹಃ
೧೯. ಚಿಂತಾಖಂಡನಸ್ತೋತ್ರಮ್
೨೦. ಧೀಶುದ್ಧಿಸ್ತೋತ್ರಮ್
೨೧. ಅಭಯಸಂಸ್ತವಃ
೨೨. ದಶಾವತಾರಸ್ತೋತ್ರಮ್
೨೩. ಸಪ್ತರಾತ್ರೋತ್ಸವಪ್ರಕಾರಃ
೨೪. ಋಣಮೋಚನಸ್ತೋತ್ರಮ್
೨೫. ಸ್ವಪ್ನಪದ್ಯಮ್
೨೬. ಶ್ರೀನರಹರ್ಯಷ್ಟಕಮ್
೨೭. ಅಕ್ಷಪಂಚಕವರಪ್ರದಸ್ತೋತ್ರಮ್
೨೮. ಶ್ರೀತ್ರಿವಿಕ್ರಮಸ್ತುತಿಃ
೨೯. ಶ್ರೀಶ್ರೀಶಗುಣದರ್ಪಣಮ್
೩೦. ದುರ್ಗಾಸ್ತವಃ
೩೧. ಶ್ರೀಮಧ್ವಾಷ್ಟಕಮ್
೩೨. ಶ್ರೀಮದ್ವಮುನಿಪ್ರತಾಪಾಷ್ಟಕಮ್
೩೩. ಶ್ರೀವಿಷ್ಣುಸ್ತುತಿಃ
೩೪. ಪರಮಸ್ತುತಿಃ
೩೫. ಚತುರ್ವಿಂಶತಿಮೂರ್ತಿಸ್ತೋತ್ರಮ್
೩೬. ನವಗ್ರಹಸ್ತೋತ್ರಮ್
೩೭. ಹರಿಭಕ್ತ್ಯಷ್ಟಕಮ್
೩೮. ಆಪಾದಸ್ತೋತ್ರಮ್
೩೯. ಉಕ್ತಿಪ್ರತ್ಯುಕ್ತಿಸ್ತೋತ್ರಮ್
೪೦. ಶ್ರೀವೇದವ್ಯಾಸಾಷ್ಟಕಮ್
೪೧. ಹಯಗ್ರೀವಧ್ಯಾನಪ್ರಕರಣಮ್
೪೨. ಪ್ರಾರ್ಥನಾದಶಕಮ್
೪೩. ಹಯಗ್ರೀವಸ್ತೋತ್ರಮ್
೪೪. ಹಯಾಸ್ಯ ಪಂಚಕಮ್
೪೫. ವರಾಹಪಂಚಕಮ್

ಈ ಸ್ತೋತ್ರಗಳನ್ನು ಅರ್ಥಸಹಿತವಾಗಿ ಭಕ್ತಿಯಿಂದ ಪಠಿಸುವವರಿಗೆ ಭಗವಂತನು ಅವರ ಸಂಕಷ್ಟಗಳನ್ನು ನಿವಾರಿಸಿ ಪ್ರಸನ್ನನಾಗುತ್ತಾನೆಂದು ಶ್ರೀಗುರುರಾಜರು ಅನೇಕ ಸ್ಥಳಗಳಲ್ಲಿ ಅಪ್ಪಣೆಕೊಡಿಸಿದ್ದಾರೆ.

# ಶ್ರೀಸರ್ವಜ್ಞಾಚಾರ್ಯ ಸೇವಾ ಸಂಘ

ಮಧ್ವರಾಜ ಮಂದಿರ, ಕುವೆಂಪು ರಸ್ತೆ, ಕಸ್ತೂರಿಬಾ ಬಡಾವಣೆ
ದಾವಣಗೆರೆ-577002 ದೂರವಾಣಿ: 08192-230340

## ಸಂಘದಿಂದ ಪ್ರಕಾಶಿತವಾದ ಗ್ರಂಥಗಳ ಪಟ್ಟಿ

| | | |
|---|---|---|
| 1. | ಶ್ರೀಸತ್ತತ್ತ್ವರತ್ನಮಾಲ | ರೂ. 210-00 |
| 2. | ಶ್ರೀವಿಷ್ಣುರಹಸ್ಯ | ರೂ. 450-00 |
| 3. | ಶ್ರೀಮದ್ಭಾಗವತ ಸಾರೋದ್ಧಾರ | ರೂ. 60-00 |
| 4. | ಪ್ರಾತಃ ಸಂಕಲ್ಪ ಗದ್ಯಂ | ಮರುಮುದ್ರಣಗೊಳ್ಳಬೇಕಿದೆ |
| 5. | ನಾರಾಯಣ ಶಬ್ದಾರ್ಥ | ರೂ. 30-00 |
| 6. | ಶ್ರೀಮದ್ ಬ್ರಹ್ಮಸೂತ್ರಾಣು ಭಾಷ್ಯಂ | ರೂ. 15-00 |
| 7. | ಶ್ರೀವೇದವ್ಯಾಸರು | ರೂ. 3-00 |
| 8. | ಶ್ರೀ ಮುಕುಂದ ಗುಣಮಾಲ | ರೂ. 4-00 |
| 9. | ಸಭಾಸಾರ ಸಂಗ್ರಹ (ಭಾಗ-1) | ರೂ. 10-00 |
| 10. | ಮಾಧ್ವಭೂಷಣ ಶ್ರೀ ಬಿ. ಭೀಮರಾಯರು ಮತ್ತು ಅವರ ಗ್ರಂಥಗಳ ಸಂಕ್ಷಿಪ್ತ ಪರಿಚಯ | ರೂ. 10-00 |
| 11. | ಶ್ರೀಮತ್ ಸುಂದರಕಾಂಡಮ್ | ರೂ. 5-00 |
| 12. | ಶ್ರೀಮತ್ ಭಾಗವತ ಪ್ರದೀಪಿತ ಸೂತ್ರಾರ್ಥಸಾರ (ಹಿಂದಿನ 4 ಸಂಪುಟಗಳನ್ನು ಒಂದೇ ಸಂಪುಟದಲ್ಲಿ) | ರೂ. 400-00 |
| 13. | ಶ್ರೀಕೃಷ್ಣಾರ್ಜುನ ಸಂವಾದ | ರೂ. 140-00 |
| 14. | ತತ್ವಸುವ್ವಾಲಿ-ವ್ಯಾಖ್ಯಾನ ಸಹಿತ | ರೂ. 120-00 |
| 15. | ಲಕ್ಷ್ಮೀಶೋಭನ ಹಾಡು-ವ್ಯಾಖ್ಯಾನ ಸಹಿತ | ರೂ. 70-00 |
| 16. | ವೈಕುಂಠವರ್ಣನೆ - ವ್ಯಾಖ್ಯಾನ ಸಹಿತ | ರೂ. 170-00 |

### ಸಂಘದಿಂದ ಪ್ರಕಟಿತ ಎಲ್ಲಾ ಗ್ರಂಥಗಳು ದೊರೆಯುವ ಸ್ಥಳ

ವೇದಾಂತ ಬುಕ್ ಹೌಸ್, ಚಾಮರಾಜಪೇಟೆ, ಬೆಂಗಳೂರು. ಫೋ: 080-26507590
ವಂದನಾ ಬುಕ್ ಹೌಸ್, ಎನ್.ಆರ್. ಕಾಲೋನಿ, ಬೆಂಗಳೂರು. ಫೋ: 080-26770826
ಪೂರ್ಣಪ್ರಜ್ಞ ವಿದ್ಯಾಪೀಠ-ಪುಸ್ತಕ ಮಳಿಗೆ, ಬೆಂಗಳೂರು.
ಉತ್ತರಾದಿಮಠ-ಪುಸ್ತಕ ಮಳಿಗೆ, ಬೆಂಗಳೂರು
ಬಿ. ಎ. ಪ್ರಹ್ಲಾದ, ರಾಜಾಜಿನಗರ, ಬೆಂಗಳೂರು. ಮೊ: 9448171859

"ಸಾಹಿತ್ಯ ಕ್ಷೇತ್ರಕ್ಕೆ ಭಾವಿಸಮೀರ ಶ್ರೀವಾದಿರಾಜರ ಕೊಡುಗೆ ಅಪಾರ. ಅದರಲ್ಲಿಯೂ 'ವೈಕುಂಠ ವರ್ಣನೆ'ಯಂತಹ ಕೃತಿಯನ್ನು ನೀಡಿ, ಮಾಧ್ವ ಸಮಾಜಕ್ಕೆ ಮಹದುಪಕಾರ ಮಾಡಿದ್ದಾರೆ." ಈ ರೀತಿ ಮುಖ್ಯಾಂಶವನ್ನು ಅರಹುತ್ತಾ ಮುನ್ನುಡಿಯನ್ನು ಅನುಗ್ರಹಿಸಿರುವವರು:

**-ಶ್ರೀ ೧೦೮ ಶ್ರೀ ವಿಶ್ವವಲ್ಲಭತೀರ್ಥರು**

ಪರ್ಯಾಯ ಶ್ರೀ ಸೋದೆ ವಾದಿರಾಜರ ಮಠ, ಉಡುಪಿ.

'ದಾರಿಯಾವುದಯ್ಯಾ–ವೈಕುಂಠಕೆ'–ಶ್ರೀಪುರಂದರದಾಸರ ಕೃತಿಯೊಂದಿದೆ. ಉತ್ತರ-ರೂಪದಲ್ಲಿರುವ 'ವೈಕುಂಠವರ್ಣನೆ' ಸಾಧಕರಿಗೆ ಜ್ಞಾನದ ಬೆಳಕನ್ನು ಪ್ರಸರಿಸುತ್ತಾ ವೈಕಂಠಪಥದಲ್ಲಿ ಕರೆದೊಯ್ದು ವೈಕುಂಠನಾಥನ ಅರಿವನ್ನುಂಟುಮಾಡಿಕೊಡುತ್ತದೆ.

ವೈಕುಂಠ ಎಂಬುದು ಶ್ರೀವಿಷ್ಣುವಿನ ನಾಮ.

'ವೈಕುಂಠವರ್ಣನೆ' ಎಂದರೆ–ಶ್ರೀಹರಿ ಮಹಿಮೆಗಳ ನಿರೂಪಣೆ–ಅದೇ 'ತತ್ವಸಾರ'.

ಕಾಲತ್ರಯದಲ್ಲಿ ನಾಶವಿಲ್ಲದ ಲಕ್ಷ್ಮೀಪತಿಯೇ 'ವಿಕುಂಠ'ನೆಂದೆನಿಸಿದ್ದಾನೆ. ಈ 'ವೈಕುಂಠ' ನಾಮಕ ಭಗವಂತನು ವಿಹರಿಸುವ ಧಾಮ–ವೈಕುಂಠ ಲೋಕ.

ವೈಕುಂಠಾದಿ ಮುಕ್ತಲೋಕಗಳು ಅಪ್ರಾಕೃತ ಮತ್ತು ಲಕ್ಷ್ಮ್ಯಾತ್ಮಕ – ಸಕಲ ವಸ್ತುಗಳು ಶುದ್ಧಸತ್ವಾತ್ಮಕಗಳು – ಸಕಲ ವೈಭವಪೂರ್ಣವಾದದ್ದು, ಚಿದ್ರೂಪವಾದದ್ದು, ಪ್ರಾಕೃತವಲ್ಲದ ಸುವರ್ಣಮಯವಾದದ್ದು.....

ಈ ಊರ್ಧ್ವಲೋಕಗಳನ್ನೊಳಗೊಂಡ ೧೪ ಲೋಕಗಳಿಗೂ ಒಡೆಯನಾದ ಶ್ರೀಹರಿಯ ಸರ್ವೋತ್ತಮತ್ವ, ಸ್ವಾತಂತ್ರ್ಯತ್ವ, ಸರ್ವಕರ್ತತ್ವ, ಇತ್ಯಾದಿ ಇತ್ಯಾದಿ ವಿಶಿಷ್ಟಗುಣಗಳನ್ನು ಪರಿಚಯಿಸುವ ಸಂಸ್ಕೃತ ಶ್ಲೋಕಗಳೊಂದಿಗಿರುವ ಕನ್ನಡನುಡಿಗಳಲ್ಲಿರುವ ಭಾವವನ್ನು ವಿಶದೀಕರಿಸಿ, ಸಾಧಕರಲ್ಲಿ ಜ್ಞಾನ-ಭಕ್ತಿಗಳನ್ನುಂಟುಮಾಡುವ ಪ್ರಯತ್ನವಾಗಿದೆ– ಎಂದಿದ್ದಾರೆ ವ್ಯಾಖ್ಯಾನಕಾರರು.

ವ್ಯಾಖ್ಯಾನದ ವೈಶಿಷ್ಟ್ಯವನ್ನು ದಿ|| ಹರಿದಾಸರತ್ನಂ ಗೋಪಾಲದಾಸರು ಹೃದಯತುಂಬಿ ದಾಖಲಿಸಿರುವ ವಾಕ್ಯ–"ಗ್ರಂಥಕರ್ತೃಗಳೇ ತಮ್ಮ ಗ್ರಂಥಾಭಿಪ್ರಾಯಗಳನ್ನು ವ್ಯಾಖ್ಯಾನ ಬರೆಯುವಾಗ ಏಕಾಂತದಲ್ಲಿ ಇವರಿಗೆ (ಭೀಮರಾಯರಿಗೆ) ತಿಳಿಸಿಕೊಟ್ಟಿದ್ದಾರೋ?" ಎಂದು ಆಶ್ಚರ್ಯವಾಗಿದೆ.

ಉಪಾಸನೆಯ ಮಾರ್ಗದಲ್ಲಿ ಆಸಕ್ತರಾಗಿರುವ ಭಕ್ತವೃಂದ 'ಶೀಗುರುರಾಜರ ಕೃಪೆಯಿಂದ ಅರಳಿರುವ ಈ ಕೃತಿಯನ್ನು' ಸಂಗ್ರಹಿಸಿ ಚಿಂತನೆಗೆ ಅಳವಡಿಸಿಕೊಳ್ಳುವುದಕ್ಕೆ ಯೋಗ್ಯವಾಗಿರುತ್ತದೆ.